# ಕರ್ನಾಟಕ ವಿಧಾನಮಂಡಲ

**ಕರ್ನಾಟಕ ಶಾಸಕಾಂಗ ಪತ್ರಿಕೆ**

**(ತ್ರೈಮಾಸಿಕ ಪತ್ರಿಕೆ)**

**ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ –2021**

**ಸಂಪುಟ–III ಸಂಖ್ಯೆ –4**

**ಪ್ರಕಟಣೆ:**

**ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,**
**ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ,**
**ಬೆಂಗಳೂರು – 560 233.**

## ವಿಶೇಷ ಸೂಚನೆ

ಕರ್ನಾಟಕ ಶಾಸಕಾಂಗ ಪತ್ರಿಕೆಯು ಕರ್ನಾಟಕ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರುಗಳ ಪರಾಮರ್ಶೆಗಾಗಿ ಪ್ರಕಟಿಸಲಾಗುತ್ತಿದ್ದು, ಇದು ಆಂತರಿಕ ಪ್ರಕಟಣೆಗೆ ಮಾತ್ರ ಸೀಮಿತವಾಗಿರುತ್ತದೆ.

ಈ ಪತ್ರಿಕೆಯಲ್ಲಿ ಅಳವಡಿಸಲಾಗಿರುವ ಮಾಹಿತಿಗಳು ವಿವಿಧ ದಿನ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಸುದ್ದಿಗಳ ಆಧಾರಿತವಾಗಿದ್ದು, ಇದರಲ್ಲಿ ನ್ಯೂನತೆ, ವ್ಯತ್ಯಾಸಗಳಿಂದ ಅಥವಾ ನಿಖರತೆಯ ಕೊರತೆಯಿಂದ ಯಾವುದೇ ವ್ಯಕ್ತಿಗೆ ಉಂಟಾಗಬಹುದಾದ ನಷ್ಟ/ಹಾನಿಗೆ ವಿಧಾನ ಸಭಾ ಸಚಿವಾಲಯವು ಯಾವುದೇ ರೀತಿ ಜವಾಬ್ದಾರವಾಗುವುದಿಲ್ಲ.

**ಸೂಚನೆ:–** ಪತ್ರಿಕೆಯು ವಿಧಾನ ಮಂಡಲದ ಅಂತರ್ಜಾಲ **http://kla.kar.nic.in** ನಲ್ಲೂ ಲಭ್ಯವಿದೆ

# ಮುನ್ನುಡಿ

ಕರ್ನಾಟಕ ವಿಧಾನಮಂಡಲದ ಸಂಶೋಧನಾ ಮತ್ತು ಉಲ್ಲೇಖನಾ ಶಾಖೆಯು ಉಭಯ ಸದನಗಳ ಮಾನ್ಯ ಸದಸ್ಯರುಗಳ ಉಪಯೋಗಕ್ಕಾಗಿ ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪುಟ – III ರ ನಾಲ್ಕನೇ ಸಂಚಿಕೆಯನ್ನು ಪ್ರಕಟಪಡಿಸುತ್ತಿದೆ.

ತ್ರೈಮಾಸಿಕ ಶಾಸಕಾಂಗ ಪತ್ರಿಕೆಯು ಮುಖ್ಯವಾಗಿ ಕರ್ನಾಟಕ ವಿಧಾನಮಂಡಲದ ಎರಡೂ ಸದನಗಳ ಶಾಸಕಾಂಗದ ಸುದ್ದಿಗಳು, ಲೋಕಸಭೆ, ರಾಜ್ಯಸಭೆಗಳ, ಸಂಸದೀಯ ವ್ಯವಹಾರಗಳಿಗೆ ಸಂಬಂಧಿಸಿದ ಪ್ರಮುಖ ಸುದ್ದಿಗಳು, ರಾಜ್ಯಗಳ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹಾಗೂ ಇತರೆ ವಿಷಯಗಳನ್ನೊಳಗೊಂಡಿರುತ್ತದೆ.

ಈ ಸಂಚಿಕೆಯಲ್ಲಿ 2021ನೇ ಸಾಲಿನ ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್–2021 ತಿಂಗಳ ಅವಧಿಯಲ್ಲಿನ ಪ್ರಮುಖ ಸುದ್ದಿ, ಮಾಧ್ಯಮಗಳಲ್ಲಿ ಪ್ರಕಟವಾದ ದೈನಂದಿನ ಸುದ್ದಿಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ.

ಸಂಶೋಧನಾ ಮತ್ತು ಉಲ್ಲೇಖನಾ ವಿಭಾಗವು ಸಿದ್ಧಪಡಿಸಿ ಹೊರತರುತ್ತಿರುವ ಈ ಪತ್ರಿಕೆಯ ಗುಣಮಟ್ಟವನ್ನು ಉನ್ನತೀಕರಿಸಲು ಹಾಗೂ ಹೆಚ್ಚು ವಿಷಯಾಸಕ್ತವಾಗಿಸಲು ಇದರ ಬೆಳವಣಿಗೆಯ ಸುಧಾರಣೆಗೆ ಮಾನ್ಯ ಸದಸ್ಯರುಗಳಿಂದ ಅಮೂಲ್ಯ ಸಲಹೆ ಮತ್ತು ಸೂಚನೆಗಳನ್ನು ಬರಹ ರೂಪದಲ್ಲಿ ಸ್ವೀಕರಿಸಲು ಸದಾ ಸ್ವಾಗತವಿರುತ್ತದೆ.

**ಎಂ.ಕೆ.ವಿಶಾಲಾಕ್ಷಿ**
ಕಾರ್ಯದರ್ಶಿ(ಪ್ರ),
ಕರ್ನಾಟಕ ವಿಧಾನ ಸಭೆ.

ಬೆಂಗಳೂರು
ದಿನಾಂಕ: 04–03–2022

## ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪಾದಕ ವರ್ಗ

### ಕರ್ನಾಟಕ ವಿಧಾನ ಸಭೆ ಸಚಿವಾಲಯ

1. ಶ್ರೀಮತಿ ಎಂ.ಕೆ. ವಿಶಾಲಾಕ್ಷಿ : ಕಾರ್ಯದರ್ಶಿ (ಪ್ರ)
2. ಶ್ರೀಮತಿ ಎಂ. ಮಂಜುಳ : ಜಂಟಿ ನಿರ್ದೇಶಕರು (ದಿನಾಂಕ:17.01.2022ರವರೆಗೆ)
3. ಶ್ರೀಮತಿ ಬಿ.ಎಸ್. ಮಂಜುಳ : ಜಂಟಿ ನಿರ್ದೇಶಕರು (ದಿನಾಂಕ:02.02.2022 ರಿಂದ)
4. ಶ್ರೀಮತಿ ಜಿ. ಮಮತ : ಸಹಾಯಕ ನಿರ್ದೇಶಕರು

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

1. ಶ್ರೀಮತಿ ಕೆ. ಆರ್. ಮಹಾಲಕ್ಷ್ಮಿ : ಕಾರ್ಯದರ್ಶಿ
2. ಶ್ರೀಮತಿ ಎಸ್. ನಿರ್ಮಲ : ಅಪರ ಕಾರ್ಯದರ್ಶಿ

# ಕರ್ನಾಟಕ ಶಾಸಕಾಂಗ ಪತ್ರಿಕೆ

## (ತ್ರೈಮಾಸಿಕ ಪತ್ರಿಕೆ)

## ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ – 2021

ಸಂಪುಟ–III ಸಂಖ್ಯೆ–4

## ಪರಿವಿಡಿ

## ಭಾಗ–1

## ವಿಧಾನ ಮಂಡಲದ ಸುದ್ದಿಗಳು

ಸೂಚನೆ: – ಇಲ್ಲಿ ಆಯ್ಕೆ ಮಾಡಿರುವ ಲೇಖನಗಳು ಪ್ರಮುಖ ದಿನಪತ್ರಿಕೆಗಳಿಂದ ಆಯ್ದು ಪ್ರಕಟಿಸಲಾಗಿದೆ. ಇಲ್ಲಿನ ಅಭಿಪ್ರಾಯಗಳು ಸಂಪೂರ್ಣ ಲೇಖಕರದ್ದಾಗಿರುತ್ತದೆ.

# ಭಾಗ – 1

# ವಿಧಾನಮಂಡಲದ ಸುದ್ದಿಗಳು

## 1. ಬೆಳಗಾವಿ ಅಧಿವೇಶನಕ್ಕೆ ಸಿದ್ಧತೆ: ಸ್ಪೀಕರ್ ಸೂಚನೆ

ಡಿಸೆಂಬರ್ ತಿಂಗಳಲ್ಲಿ ವಿಧಾನಮಂಡಲದ ಅಧಿವೇಶನವನ್ನು ಬೆಳಗಾವಿಯಲ್ಲಿ ನಡೆಸಬೇಕು ಎಂಬ ಅಭಿಪ್ರಾಯಗಳು ವ್ಯಕ್ತವಾಗಿದ್ದು, ಸರ್ಕಾರದಿಂದಲೂ ಸಹ ಅಲ್ಲೇ ಅಧಿವೇಶನ ನಡೆಸಲು ಚಿಂತನೆ ನಡೆಸಲಾಗಿದೆ ಎಂದು ಸಭಾಧ್ಯಕ್ಷರು ತಿಳಿಸಿದ್ದಾರೆ.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು ಬೆಳಗಾವಿಯಲ್ಲಿ ಚಳಿಗಾಲದ ಅಧಿವೇಶನ ನಡೆಸುವ ಸಂಬಂಧ ಅಗತ್ಯ ಸಿದ್ಧತೆಗಳನ್ನು ಮಾಡಿಕೊಳ್ಳಲು ಸರ್ಕಾರಕ್ಕೆ ತಾವೂ ಸೂಚನೆ ನೀಡಿರುವುದಾಗಿ ಮಾಹಿತಿ ನೀಡಿದರು.

**ಅತ್ಯುತ್ತಮ ಅಧಿವೇಶನ:** ಸೆಪ್ಟೆಂಬರ್ 13 ರಿಂದ 24ರವರೆಗೆ ನಡೆದ ಅಧಿವೇಶನ ಅತ್ಯುತ್ತಮವಾಗಿ ನಡೆಯಿತು. ಕಲಾಪದ ಗುಣಮಟ್ಟ ಹಾಜರಾತಿಯ ಚರ್ಚೆ ಈ ಬಾರಿ ಉತ್ತಮವಾಗಿತ್ತು. ಅಧಿವೇಶನದಲ್ಲಿ 150 ರಲ್ಲಿ 146 ಪ್ರಶ್ನೆಗಳಿಗೆ ಉತ್ತರ ನೀಡಲಾಗಿದೆ. ವಿಶೇಷವಾಗಿ ಈ ಬಾರಿ 19 ವಿಧೇಯಕ ಅಂಗೀಕರಿಸಿದ್ದೇವೆ ಎಂದು ವಿವರಿಸಿದರು.

ಆಧಾರ:ಕನ್ನಡಪ್ರಭ,ದಿನಾಂಕ:05.10.2021.

## 2. ಸಾಂವಿಧಾನಿಕ ಮುಖ್ಯಸ್ಥರ ಭಾಷಣ ತಪ್ಪಲ್ಲ

ಸಾಂವಿಧಾನಿಕ ಸಂಸ್ಥೆಯ ಮುಖ್ಯಸ್ಥರ ಭಾಷಣ ಮಾಡಿಸುವುದು ಯಾವುದೇ ರೀತಿಯಿಂದಲೂ ತಪ್ಪಲ್ಲ ಎನ್ನುವ ಮೂಲಕ ಲೋಕಸಭೆ ಸ್ಪೀಕರ್ ಓಂ ಬಿರ್ಲಾ ಅವರ ವಿಧಾನಸಭೆಯಲ್ಲಿನ ಭಾಷಣವನ್ನು ಸಭಾಧ್ಯಕ್ಷರು ಸಮರ್ಥನೆ ಮಾಡಿಕೊಂಡರು.

ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು, ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರು ಸಂಸತ್ ಸಭಾಧ್ಯಕ್ಷ ಓಂ ಬಿರ್ಲಾ ಅವರ ಕಾರ್ಯಕ್ರಮದಲ್ಲಿ ಭಾಗವಹಿಸದೇ ಗೈರಾದರು. ಅವರು ಭಾಗವಹಿಸಿದ್ದರೆ ಇನ್ನು ಚೆನ್ನಾಗಿರುತ್ತಿತ್ತು. ಯಡಿಯೂರಪ್ಪನವರಿಗೆ ಮೊದಲ ಬಾರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಿದ್ದು ಕೂಡ ವಿಶೇಷ. ಪ್ರಜಾಪ್ರಭುತ್ವ ಸಂಸದೀಯ ಮೌಲ್ಯಗಳ ರಕ್ಷಣೆ ವಿಷಯದ ಕುರಿತು ಓಂ ಬಿರ್ಲಾ ಆಹ್ವಾನ ಮಾಡಿದ್ದು ಕರ್ನಾಟಕದ ವಿಧಾನಸಭಾ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ಸಂಸದೀಯ ವ್ಯವಸ್ಥೆ ಬಗ್ಗೆ ಕಾಲಕಾಲಕ್ಕೆ ಸಿಂಹಾವಲೋಕನ ಮಾಡಬೇಕು ಎಂದು ತಿಳಿಸಿದರು.

**ಮುಕ್ತವಾಗಿ ಎಲ್ಲ ಅವಕಾಶ ಬಳಕೆ:** ಕ್ಷೇತ್ರದ ಜನರು ತಮ್ಮ ಸಮಸ್ಯೆಗಳನ್ನು, ಭಾವನೆಗಳನ್ನು ಸದನದಲ್ಲಿ ಶಾಸಕರು ವ್ಯಕ್ತಪಡಿಸಬೇಕೆಂದು ಚುನಾಯಿಸಿ ಕಳುಹಿಸಿದ್ದಾರೆ. ಕಾಂಗ್ರೆಸ್‌ನವರು ಮುಕ್ತವಾಗಿ ಎಲ್ಲ ಅವಕಾಶ ಬಳಸಿಕೊಂಡಿದ್ದಾರೆ. ಒಂದು ಬಾರಿಯೂ ಸದನವನ್ನು ಐದು ಹತ್ತು ನಿಮಿಷ ಮುಂದೂಡುವ ಪ್ರಸಂಗ ಬರಲಿಲ್ಲ. ಸದನದ ಸಮಯ ವ್ಯರ್ಥವಾಗುವುದಕ್ಕೆ ಯಾವ ಸದಸ್ಯರೂ ಬಿಡಲಿಲ್ಲ. ಇದು ಬಹಳ ಒಳ್ಳೆಯ ಬೆಳವಣಿಗೆ ಇಂತಹ ಬೆಳವಣಿಗೆ ಸಭಾಧ್ಯಕ್ಷನಾಗಿರುವುದಕ್ಕೆ ಸಂತೋಷವಾಗಿದೆ ಎಂದು ಸಭಾಧ್ಯಕ್ಷರು ಹೇಳಿದರು.

ದೋಷಗಳು, ದೌರ್ಬಲ್ಯಗಳು ಸಮಾಜದಲ್ಲಿ ಯಾವ ಯಾವ ಸ್ಥಿತಿಯಲ್ಲಿದೆ ಎನ್ನುವುದನ್ನು ನೋಡುತ್ತಿರುತ್ತೇವೆ. ವ್ಯವಸ್ಥೆಯನ್ನು ಇನ್ನಷ್ಟು ಉತ್ತಮಗೊಳಿಸಬೇಕಾಗಿದ್ದು ನಮ್ಮ ಜವಾಬ್ದಾರಿ. ಅಧಿವೇಶನ

ಸೆಪ್ಟೆಂಬರ್ 13 ರಿಂದ 24ರವರೆಗೆ ಉತ್ತಮವಾಗಿ ನಡೆಯಿತು. ಇದಕ್ಕೆ ಸಹಕರಿಸಿದ ಸದನದ ಎಲ್ಲ ಗೌರವಾನ್ವಿತ ಸದಸ್ಯರಿಗೆ ಅಭಿನಂದನೆ ಸಲ್ಲಿಸುತ್ತೇನೆ. ಎಲ್ಲ ಕಡೆಯೂ ಶ್ಲಾಘನೆಗೆ ಒಳಪಟ್ಟಿತ್ತು. ಕಲಾಪದ ಗುಣಮಟ್ಟ, ಹಾಜರಾತಿ, ಚರ್ಚೆ ಈ ಬಾರಿ ಅತ್ಯುತ್ತಮವಾಗಿತ್ತು.

10 ದಿನಗಳ ಅಧಿವೇಶನದಲ್ಲಿ ವರದಿ ಮಂಡಿಸಿದ್ದೇನೆ, 150 ಪ್ರಶ್ನೆಗಳಲ್ಲಿ 146 ಪ್ರಶ್ನೆಗಳಿಗೆ ಉತ್ತರ ನೀಡಲಾಗಿದೆ. ವಿಶೇಷವಾಗಿ ಈ ಬಾರಿ 19 ವಿಧೇಯಕ ಅಂಗೀಕರಿಸಿದ್ದೇವೆ. ಬಿಲ್ ಬಗ್ಗೆಯೂ ಪರ ವಿರೋಧದ ಅಭಿಪ್ರಾಯ ಇದ್ದೇ ಇತ್ತು. ಸರ್ಕಾರ ಸದನವನ್ನು ಗಂಭೀರವಾಗಿ ತೆಗೆದುಕೊಂಡಿದ್ದಕ್ಕೆ ಸಚಿವರೆಲ್ಲರೂ ಉಪಸ್ಥಿತರಿದ್ದರು. ಸದಸ್ಯರ ಎಲ್ಲ ಮಾತುಗಳಿಗೂ ಸರ್ಕಾರ ಸ್ಪಂದಿಸುವ ಕೆಲಸ ಮಾಡಿದೆ ಎಂದರು.

ಆಧಾರ:ವಿಶ್ವವಾಣಿ,ದಿನಾಂಕ:05.10.2021

## 3. ರಾಜ್ಯದಲ್ಲೂ ಕಾನ್ಸ್ಟಿಟ್ಯೂಷನ್ ಕ್ಲಬ್ : ವಿಶ್ವೇಶ್ವರ ಹೆಗಡೆ ಕಾಗೇರಿ

ದೆಹಲಿಯಲ್ಲಿರುವ ಮಾದರಿಯಲ್ಲಿ ರಾಜ್ಯದಲ್ಲೂ ಕಾನ್ಸ್ಟಿಟ್ಯೂಷನ್ ಕ್ಲಬ್ (ಶಾಸಕರ ಮತ್ತು ಮಾಜಿ ಶಾಸಕರ ಮನರಂಜನಾ ಕ್ಲಬ್) ಆರಂಭಿಸಲು ತೀರ್ಮಾನಿಸಲಾಗಿದೆ ಎಂದು ವಿಧಾನ ಸಭಾಧ್ಯಕ್ಷರು ತಿಳಿಸಿದರು.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು ಬಾಲಬ್ರೂಯಿ ಕಟ್ಟಡದ ಪಾರಂಪರಿಕ, ಐತಿಹಾಸಿಕ ವಿಶೇಷತೆಗೆ ಧಕ್ಕೆ ಬಾರದ ರೀತಿಯಲ್ಲಿ ಅಲ್ಲಿ ಅಗತ್ಯ ಸೌಲಭ್ಯ ಕಲ್ಪಿಸಿ ಕ್ಲಬ್ ಆರಂಭಿಸಲು ನಿರ್ಧರಿಸಲಾಗಿದೆ. ಕಳೆದ ವಿಧಾನಮಂಡಲ ಅಧಿವೇಶನ ಸಂದರ್ಭದಲ್ಲಿ ನಡೆದ ವಿಧಾನ ಮಂಡಲದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಕ್ಲಬ್ ಆರಂಭಿಸಲು ತೀರ್ಮಾನಿಸಲಾಗಿದೆ. ಈ ಸಭೆಯ ನಿರ್ಣಯದಂತೆ ಕ್ಲಬ್ ಆರಂಭಿಸಲು ಅಗತ್ಯ ಕ್ರಮ ವಹಿಸುವಂತೆ ಮುಖ್ಯ ಕಾರ್ಯದರ್ಶಿಗೆ ಸೂಚಿಸಲಾಗಿದೆ. ನಾನು ಒಮ್ಮೆ ದೆಹಲಿಗೆ ತೆರಳಿ ಅಲ್ಲಿನ ಕಾನ್ಸ್ಟಿಟ್ಯೂಷನ್ ಕ್ಲಬ್ ನೋಡಿ ಬರುತ್ತೇನೆ ಎಂದರು.

ಶಾಸಕರಿಗೆಂದೇ ಒಂದು ಕ್ಲಬ್ ಆರಂಭಿಸುವ ಬಗ್ಗೆ ಹಲವು ವರ್ಷಗಳಿಂದ ಚರ್ಚೆ ನಡೆಯುತ್ತಲೇ ಇತ್ತು. ಶಾಸಕರು ಒಂದೆಡೆ ಸೇರಿ ಚರ್ಚಿಸಲು ಒಂದು ಜಾಗಬೇಕು. ನೆನೆಗುದಿಗೆ ಬಿದ್ದಿದ್ದ ಕಾನ್ಸ್ಟಿಟ್ಯೂಷನ್ ಕ್ಲಬ್ ಆರಂಭಿಸಲು ನಿರ್ಧರಿಸಲಾಗಿದೆ ಎಂದು ಸಮರ್ಥನೆ ನೀಡಿದರು.

**ಒಳ್ಳೆಯ ಬೆಳವಣಿಗೆ:** ಇತ್ತೀಚೆಗೆ ನಡೆದ ವಿಧಾನಮಂಡಲ ಅಧಿವೇಶನದಲ್ಲಿ ಕಲಾಪ ಅತ್ಯುತ್ತಮವಾಗಿ ನಡೆದಿದೆ. ಮಸೂದೆಗಳು, ಸಾರ್ವಜನಿಕ ಮಹತ್ವದ ವಿಷಯಗಳ ಕುರಿತು ವಿಸ್ತೃತ ಚರ್ಚೆ ನಡೆದಿದೆ. ವಿರೋಧ ಪಕ್ಷ ಕಾಂಗ್ರೆಸ್ ಧರಣಿ ನಡೆಸದಿರಲು ನಿರ್ಣಯ ಕೈಗೊಂಡಿರುವುದಾಗಿ ಸದನದಲ್ಲೇ ತಿಳಿಸಿದ್ದು, ಒಳ್ಳೆಯ ಬೆಳವಣಿಗೆ, ಕಳೆದ ಅಧಿವೇಶನದಲ್ಲಿ ಕಲಾಪವನ್ನು ಒಂದು ಬಾರಿಯೂ ಮುಂದೂಡುವ ಸಂದರ್ಭ ಬರಲಿಲ್ಲ ಎಂಬುದು ಗಮನಾರ್ಹ ಎಂದರು.

ಆಧಾರ:ಪ್ರಜಾವಾಣಿ,ದಿನಾಂಕ:05.10.2021.

## 4. ಬೆಳಗಾವಿಯಲ್ಲಿ ಡಿಸೆಂಬರ್‌ಗೆ ಅಧಿವೇಶನ : ಹೊರಟ್ಟಿ

ಚಳಿಗಾಲದ ಅಧಿವೇಶನವನ್ನು ಈ ಸಲ ಡಿಸೆಂಬರ್‌ನಲ್ಲಿ ಬೆಳಗಾವಿಯಲ್ಲಿ ನಡೆಸಲು ಉದ್ದೇಶಿಸಲಾಗಿದೆ. ಈ ಸಂಬಂಧ ಮುಖ್ಯಮಂತ್ರಿ ಸ್ಪೀಕರ್ ಜೊತೆ ಮಾತನಾಡಿದ್ದೇನೆ ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದರು. ಉತ್ತರ ಕರ್ನಾಟಕ ಭಾಗದ ಸಮಸ್ಯೆಗಳನ್ನು ಇಟ್ಟುಕೊಂಡು ಎರಡು ವಾರಗಳ ಕಾಲ ಅಧಿವೇಶನ ನಡೆಸಲು ಚರ್ಚಿಸಲಾಗಿದೆ. ಬಹುಶ: ಡಿಸೆಂಬರ್

2ನೇ ವಾರದಿಂದ ಅಧಿವೇಶನ ನಡೆಯಲಿದೆ. ಬೆಳಗಾವಿಯಲ್ಲಿ ನಡೆಯಲಿರುವ ಅಧಿವೇಶನಕ್ಕೂ ವಿರೋಧ ಪಕ್ಷಗಳು ಸಹಕಾರ ನೀಡುತ್ತವೆ ಎಂಬ ವಿಶ್ವಾಸವಿದೆ ಎಂದು ನುಡಿದರು.

ಆಧಾರ: ಕನ್ನಡಪ್ರಭ, ದಿನಾಂಕ:07.10.2021

## 5. ನೂತನ ಪಿಂಚಣಿ ಯೋಜನೆ ರದ್ದು ಸಿ.ಎಂ.ಗೆ ಸಭಾಪತಿ ಹೊರಟ್ಟಿ ಪತ್ರ.

ರಾಜ್ಯ ಸರ್ಕಾರ ಜಾರಿಗೊಳಿಸಲು ಉದ್ದೇಶಿಸಿರುವ ನೂತನ ಪಿಂಚಣಿ ಯೋಜನೆಯನ್ನು ರದ್ದುಗೊಳಿಸಲು ನಿಶ್ಚಿತ ಪಿಂಚಣಿ ಯೋಜನೆಗೆ ಪರಿಷ್ಕೃತ ಆದೇಶ ಹೊರಡಿಸುವಂತೆ ಒತ್ತಾಯಿಸಿ ವಿಧಾನ ಪರಿಷತ್ ಸಭಾಪತಿಯವರು ಮುಖ್ಯಮಂತ್ರಿಯವರಿಗೆ ಪತ್ರ ಬರೆದಿದ್ದಾರೆ.

ನೂತನ ಪಿಂಚಣಿ ಯೋಜನೆ ಜಾರಿಗೆ ಹಲವು ಹೋರಾಟ ನಡೆದ ಬಳಿಕ ಸರ್ಕಾರ 2008ರಲ್ಲಿ ಯೋಜನೆ ಜಾರಿಗೊಳಿಸಲು ಮುಖ್ಯ ಕಾರ್ಯದರ್ಶಿ ಅಧ್ಯಕ್ಷತೆಯಲ್ಲಿ ಮಾರ್ಪಾಡು ಮತ್ತು ಬದಲಾವಣೆಗೆ ಸಮಿತಿ ರಚಿಸಿ ಆದೇಶಿಸಿದೆ. 2006ರ ಏಪ್ರಿಲ್ ಒಂದರಿಂದ ಹೊಸದಾಗಿ ಸೇವೆಗೆ ಸೇರಿದ 2 ಲಕ್ಷಕ್ಕೂ ಅಧಿಕ ನೌಕರರು ನಿಶ್ಚಿತ ಪಿಂಚಣಿಯಿಂದ ವಂಚಿತರಾಗುತ್ತಿದ್ದಾರೆ ಎಂದು ಹೊರಟ್ಟಿ ಮನವರಿಕೆ ಮಾಡಿಕೊಟ್ಟಿದ್ದಾರೆ.

ಸರ್ಕಾರ ಈ ಕೂಡಲೇ ನೂತನ ಪಿಂಚಣಿ ಯೋಜನೆ ರದ್ದುಗೊಳಿಸಿ, ನಿಶ್ಚಿತ ಪಿಂಚಣಿ ಕೊಡುವ ಬಗ್ಗೆ ಪರಿಷ್ಕೃತ ಆದೇಶ ಹೊರಡಿಸಿ, ಮೂರು ತಿಂಗಳ ಒಳಗಾಗಿ ಸಮಿತಿಯಿಂದ ವರದಿ ತರಿಸಿಕೊಂಡು 2022–23ನೇ ಸಾಲಿನ ಮುಂಗಡ ಪತ್ರದಲ್ಲಿ ಅಧಿಕೃತವಾಗಿ ಘೋಷಿಸುವಂತೆಯೂ ಮುಖ್ಯಮಂತ್ರಿಯವರಿಗೆ ಸಭಾಪತಿಯವರು ಮನವಿ ಮಾಡಿದ್ದಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:07.10.2021

## 6. ಬಾಲಬ್ರೂಯಿ : ಯಥಾಸ್ಥಿತಿ ಕಾಯ್ದುಕೊಳ್ಳಲು ಆದೇಶ

ಪಾರಂಪರಿಕ ಕಟ್ಟಡಗಳಲ್ಲಿ ಒಂದಾದ ಬಾಲಬ್ರೂಯಿ ಅತಿಥಿಗೃಹದ ಅವರಣದಲ್ಲಿ ಕಾನ್‌ಸ್ಟಿಟ್ಯೂಷನ್ ಕ್ಲಬ್ ನಿರ್ಮಾಣ ಕುರಿತಂತೆ ಮುಂದಿನ ಆದೇಶದವರೆಗೂ ಯಥಾಸ್ಥಿತಿ ಕಾಯ್ದುಕೊಳ್ಳಬೇಕು ಎಂದು ಸರ್ಕಾರಕ್ಕೆ ಹೈಕೋರ್ಟ್ ನಿರ್ದೇಶಿಸಿದೆ.

ಬಾಲಬ್ರೂಯಿ ಅತಿಥಿ ಗೃಹವನ್ನು ಕಾನ್‌ಸ್ಟಿಟ್ಯೂಷನ್ ಕ್ಲಬ್ ಆಗಿ ಪರಿವರ್ತಿಸುವ ನಿಟ್ಟಿನಲ್ಲಿ ಆವರಣದಲ್ಲಿನ ಹಳೆಯ ಮರಗಳನ್ನು ತೆರವುಗೊಳಿಸದಂತೆ ಸರ್ಕಾರಕ್ಕೆ ನಿರ್ದೇಶಿಸಬೇಕು ಎಂದು ಕೋರಿ ದತ್ತಾತ್ರೇಯ ಟಿ. ದೇವರೆ ಹಾಗೂ ಬೆಂಗಳೂರು ಎನ್ವಿರಾನ್ಮೆಂಟ್ ಟ್ರಸ್ಟ್ ಸಲ್ಲಿಸಿದ ಮಧ್ಯಂತರ ಅರ್ಜಿಯನ್ನು ಹಂಗಾಮಿ ಮುಖ್ಯ ನ್ಯಾಯಮೂರ್ತಿ ಸತೀಶ್‌ಚಂದ್ರ ಶರ್ಮಾ ನೇತೃತ್ವದ ವಿಭಾಗೀಯ ಪೀಠ ವಿಚಾರಣೆ ನಡೆಸಿತು.

ಬಾಲಬ್ರೂಯಿ ಅತಿಥಿಗೃಹದ ಸುತ್ತಲಿನ ಮರಗಳ ಗಣತಿ ನಡೆಸಿ, ಒಂದು ವಾರದೊಳಗೆ ವರದಿ ಸಲ್ಲಿಸಬೇಕು. ಅರ್ಜಿಯ ಮುಂದಿನ ವಿಚಾರಣೆವರೆಗೂ ಕ್ಲಬ್ ನಿರ್ಮಾಣ ವಿಚಾರದಲ್ಲಿ ಯಥಾಸ್ಥಿತಿ ಕಾಯ್ದುಕೊಳ್ಳಬೇಕು ಎಂದು ನ್ಯಾಯಪೀಠ ಆದೇಶಿಸಿದೆ. ನ್ಯಾಯಾಲಯದ ಅನುಮತಿ ಇಲ್ಲದೆ ಯಾವುದೇ ಕಾರಣಕ್ಕೂ ಕಟ್ಟಡ ಮತ್ತು ಮರಗಳಿಗೆ ಹಾನಿ ಉಂಟಾಗದಂತೆ ನೋಡಿಕೊಳ್ಳಬೇಕು. ಮರಗಳ ಬಗ್ಗೆ ತೋಟಗಾರಿಕಾ ಇಲಾಖೆ ಪರಿಶೀಲನೆ ನಡೆಸಿ ಮುಂದಿನ ವಿಚಾರಣೆ ವೇಳೆ ವರದಿ ನೀಡಬೇಕು ಎಂದು ತಾಕೀತು ಮಾಡಿದೆ.

ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯನ್ನು ಈ ಪ್ರಕರಣದಲ್ಲಿ ಪ್ರತಿವಾದಿಯನ್ನಾಗಿ ಮಾಡಬೇಕು. ಅವರು ಬಾಲಬ್ರೂಯಿ ಅತಿಥಿ ಗೃಹದ ಮೌಲ್ಯ ಮತ್ತು ಪರಂಪರೆಯನ್ನು ಮಾಪನ ಮಾಡಿ ನ್ಯಾಯಾಲಯಕ್ಕೆ ಸಲ್ಲಿಸಬೇಕು ಎಂದು ಸೂಚಿಸಿದೆ. ವಿಚಾರಣೆಯನ್ನು ನವೆಂಬರ್ 19ಕ್ಕೆ ಮುಂದೂಡಲಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ:08.10.2021

## 7. ಕ್ಷಮೆ ಕೇಳಿದ ರೋಹಿಣಿ

ಕೆಲ ತಿಂಗಳಿನಿಂದ ಭಾರಿ ವಿವಾದಕ್ಕೆ ಕಾರಣವಾಗಿದ್ದ ಶಾಸಕ ಸಾ.ರಾ. ಮಹೇಶ್ ಹಾಗೂ ಐಎಎಸ್ ಅಧಿಕಾರಿ ರೋಹಿಣಿ ಸಿಂಧೂರಿ ಅವರ ಬಹಿರಂಗ ಕಿತ್ತಾಟ ಬೇಷರತ್ ಕ್ಷಮೆಯ ಮೂಲಕ ಇತ್ಯರ್ಥವಾಗಿದೆ.

ರೋಹಿಣಿ ಸಿಂಧೂರಿ ಅವರು ಮೈಸೂರು ಜಿಲ್ಲಾಧಿಕಾರಿಯಾಗಿದ್ದ ವೇಳೆ ಶಾಸಕರಿಗೆ ನೀಡಬೇಕಿದ್ದ ಗೌರವ ನೀಡಿಲ್ಲ. ತಮ್ಮ ಹಕ್ಕನ್ನು ಮೊಟಕುಗೊಳಿಸಿ, ಸಿಂಧೂರಿ ಅವರು ನಿಯಮಬಾಹಿರವಾಗಿ ಅನುದಾನ ಹಂಚಿಕೆ ಮಾಡಿದ್ದಾರೆ ಎಂದು ಶಾಸಕ ಸಾ.ರಾ. ಮಹೇಶ್ ಅವರು ನಿರಂತರವಾಗಿ ಆರೋಪಿಸುತ್ತಾ ಬಂದಿದ್ದರು. ವಿಧಾನಸಭಾ ಅಧಿವೇಶನದಲ್ಲಿಯೂ ಈ ಬಗ್ಗೆ ಹಕ್ಕುಚ್ಯುತಿ ಮಂಡಿಸಿ, ರೋಹಿಣಿ ವಿರುದ್ಧ ಕ್ರಮಕ್ಕೆ ಆಗ್ರಹಿಸಿದ್ದರು.

ಸದನದಲ್ಲಿ ಈ ಹಕ್ಕುಚ್ಯುತಿ ವಿಷಯವನ್ನು ಶಿಷ್ಠಾಚಾರ ಉಲ್ಲಂಘನೆ ಎನ್ನುವ ವಿಶ್ಲೇಷಣೆಯನ್ನು ಕಾನೂನು ಸಚಿವ ಮಾಧುಸ್ವಾಮಿ ಹಾಗೂ ಮಾಜಿ ಸ್ಪೀಕರ್ ರಮೇಶ್ ಕುಮಾರ್ ಮಾಡಿದ್ದರೂ, ಪ್ರಕರಣವನ್ನು ಹಕ್ಕುಚ್ಯುತಿ ಸಮಿತಿಗೆ ವರ್ಗಾಯಿಸಲಾಗಿತ್ತು. ಇದೀಗ ರೋಹಿಣಿ ಸಿಂಧೂರಿ ಅವರು ಸಮಿತಿಯ ವಿಚಾರಣೆಗೆ ಹಾಜರಾಗಿ ಕ್ಷಮೆ ಕೋರಿದ್ದಾರೆ ಎಂದು ಮೂಲಗಳು ತಿಳಿಸಿವೆ.

ಸಮಿತಿ ಮುಂದೆ ಹಾಜರಾದ ರೋಹಿಣಿ ಅವರು ಯಾವುದೇ ಶಾಸಕ ಅಥವಾ ಸಮಿತಿಗಾಗಲಿ ಅಗೌರವ ತೋರುವ ಉದ್ದೇಶವಿಲ್ಲ. ಎಲ್ಲರೊಂದಿಗೆ ಗೌರವದೊಂದಿಗೆ ನಡೆದುಕೊಂಡು ಹೋಗುತ್ತೇನೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ನಿಯಮದಂತೆ ಶಿಷ್ಠಾಚಾರ ಪಾಲಿಸುತ್ತೇವೆ ಎಂದು ಹೇಳಿದ್ದಾರೆ.

**ಸಭೆಯಿಂದ ಹೊರ ನಡೆಯುವಾಗ ಒಪ್ಪಿಗೆ ಪಡೆದಿದ್ದೆ:** ಇನ್ನು ಜನವರಿ 12 ರಂದು ನಡೆದ ಕಾಗದ ಪತ್ರಗಳ ಸಮಿತಿ ಸಭೆಯಿಂದ ಹೊರನಡೆದ ವಿಷಯಕ್ಕೆ ಸಂಬಂಧಿಸಿದಂತೆ ಸಮರ್ಥನೆ ನೀಡಿರುವ ಅವರು ಇತರ ಕೆಲಸದ ನಿಮಿತ್ತ ಹೋಗುವುದು ಅನಿವಾರ್ಯವಾಗಿತ್ತು. ತೆರಳುವ ಮೊದಲು ಶಿಷ್ಠಾಚಾರ ಅಧಿಕಾರಿಯನ್ನು ನೇಮಿಸಿ, ಸಭೆಯಿಂದ ಅನುಮತಿ ಪಡೆದು ನಿರ್ಗಮಿಸಿರುವುದಾಗಿ ತಿಳಿಸಿದ್ದಾರೆ.

ಅಂದು ಹೊರಡಲು ಪ್ರಮುಖವಾಗಿ ನ್ಯಾಯಾಲಯದಲ್ಲಿ ಪ್ರಕರಣವಿತ್ತು ಹಾಗೂ ಮೂಡಾ ವಿಷಯಕ್ಕೆ ಸಂಬಂಧಿಸಿದ್ದಾದರಿಂದ ಸಭೆಯಲ್ಲಿ ಇರಲಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಆಧಾರ:ವಿಶ್ವವಾಣಿ,ದಿನಾಂಕ:09.10.2021

## 8. ವೇತನಾನುದಾನಕ್ಕಾಗಿ ಸಿಎಂಗೆ ಮೊರೆ : ಹೊರಟ್ಟಿ

ರಾಜ್ಯದ ಸರ್ಕಾರಿ ಅನುದಾನಿತ ಪ್ರಾಥಮಿಕ ಪ್ರೌಢಶಾಲಾ ಶಿಕ್ಷಕರು ಮತ್ತು ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರುಗಳನ್ನು ವೇತನಾನುಧಾನಕ್ಕೆ ಒಳಪಡಿಸುವ ಕುರಿತಂತೆ

ಮುಖ್ಯಮಂತ್ರಿಗಳೊಂದಿಗೆ ಶೀಘ್ರದಲ್ಲೇ ಸಭೆ ನಡೆಸಲಾಗುವುದು ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದರು.

ವಿಧಾನ ಸೌಧದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಶಿಕ್ಷಣ ಸಚಿವ ಬಿ.ಸಿ.ನಾಗೇಶ್ ನೇತೃತ್ವದಲ್ಲಿ ನಡೆದ ಸಭೆಯಲ್ಲಿ ಈ ವಿಷಯ ತಿಳಿಸಿದರು. 1995 ರಿಂದ 2014–15ನೇ ಸಾಲಿನವರೆಗೆ ಪ್ರಾರಂಭವಾಗಿರುವ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಮತ್ತು ಬಸವರಾಜ ಹೊರಟ್ಟಿ ಅವರ ನೇತೃತ್ವ ಕಾಲ್ಪನಿಕ ವೇತನ ಸಮಿತಿಯ ವರದಿಯ ಅನುಷ್ಠಾನ ಹಾಗೂ 1995ಕ್ಕೆ ಮೊದಲಿನ ಶಾಲಾ ಕಾಲೇಜುಗಳ ವೇತನಾನುದನಕ್ಕೆ ಸಂಬಂಧಿಸಿದಂತೆ ಬಾಕಿ ಉಳಿದ ಪ್ರಕರಣಗಳನ್ನು ಒಂದು ತಿಂಗಳೊಳಗಾಗಿ ಇತ್ಯರ್ಥಪಡಿಸುವಂತೆ ಸಭೆಯಲ್ಲಿ ಚರ್ಚಿಸಲಾಯಿತು.

ಅನುದಾನರಹಿತ ಆಂಗ್ಲ ಮಾಧ್ಯಮ ಪ್ರಾಥಮಿಕ ಮತ್ತು ಪ್ರೌಢಶಾಲಾ ಸಿಬ್ಬಂದಿಗೆ ಕನಿಷ್ಠ ವೇತನ ಹಾಗೂ ಸೇವಾ ಭದ್ರತೆ ಒದಗಿಸುವ ಕುರಿತಂತೆಯೂ ಸಹ ಮುಖ್ಯಮಂತ್ರಿಗೊಂದಿಗೆ ಚರ್ಚಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು.

ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ನೀಡಲಾಗುವ ಜಾಹಿರಾತುಗಳನ್ನು ವಾರ್ತ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯೊಂದಿಗೆ ಚರ್ಚಿಸಿ ನೀಡುವಂತೆ ಸಂಬಂಧಿಸಿದ ಅಧಿಕಾರಿಗಳಿಗೆ ಸೂಚಿಸಲಾಯಿತು. ಈ ರೀತಿ ಮಾಡಿದಲ್ಲಿ ರಾಜ್ಯ ಹಾಗೂ ಜಿಲ್ಲಾ ಮಟ್ಟದ ಪತ್ರಿಕೆ ಬಗೆಗಿನ ಗೊಂದಲ ನಿವಾರಿಸಬಹುದಾಗಿದೆ ಎಂದು ಅಭಿಪ್ರಾಯ ಪಡಲಾಯಿತು. ಉನ್ನತ ಮಟ್ಟದ ಸಭೆಯಲ್ಲಿ ಶಿಕ್ಷಣ ಮತ್ತು ಪದವೀಧರ ಕ್ಷೇತ್ರಗಳ ವಿಧಾನ ಪರಿಷತ್ ಸದಸ್ಯರು, ಶಿಕ್ಷಣ ಇಲಾಖೆ ಪ್ರಧಾನ ಕಾರ್ಯದರ್ಶಿ ಉಮಾಶಂಕರ್ ಹಾಗೂ ಹಿರಿಯ ಅಧಿಕಾರಿಗಳು ಪಾಲ್ಗೊಂಡಿದ್ದರು.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:12.10.2021

## 9. ಮತಾಂತರ : ಕ್ರೈಸ್ತ ಮಿಷನರಿ ಗಣತಿಗೆ ಸೂಚನೆ

ರಾಜ್ಯದಲ್ಲಿ ಮತಾಂತರ ಪ್ರಕರಣಗಳು ಹೆಚ್ಚಾಗುತ್ತಿರುವ ಕುರಿತು ತೀವ್ರ ಚರ್ಚೆಗಳು ನಡೆಯುತ್ತಿರುವ ಕಾರಣ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಸಮಿತಿ ರಾಜ್ಯದ ಅಧಿಕೃತ ಮತ್ತು ಅನಧಿಕೃತ ಕ್ರಿಶ್ಚಿಯನ್  ಮಿಷನರಿಗಳು ಎಷ್ಟಿವೆ ಎಂಬುದರ ಬಗ್ಗೆ ಮಾಹಿತಿ ನೀಡುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚಿಸಿದೆ.

ವಿಕಾಸಸೌಧದಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿ ಸಭೆ ನಡೆಸಿತು. ಶಾಸಕರಾದ ಗೂಳಿಹಟ್ಟಿ ಶೇಖರ್, ಪುಟ್ಟರಂಗ ಶೆಟ್ಟಿ, ಬಿ.ಎಂ. ಫಾರೂಕ್, ವಿರೂಪಾಕ್ಷಪ್ಪ ಬಳ್ಳಾರಿ, ಅಶೋಕ್ ನಾಯ್ಕ್ ಸೇರಿದಂತೆ ಇತರರು ಭಾಗವಹಿಸಿದ್ದರು. ಮಿಷನರಿಗಳು ಸರ್ಕಾರದಿಂದ ಪಡೆಯುತ್ತಿರುವ ಸೌಲಭ್ಯಗಳು ಮತ್ತು ಕ್ರಿಶ್ಚಿಯನ್ ಮಿಷನರಿಗಳ ನೋಂದಣಿ ಬಗ್ಗೆ ಚರ್ಚೆ ನಡೆಸಲಾಯಿತು. ಮತಾಂತರಗೊಳ್ಳುವ ಸಮುದಾಯದವರಿಗೆ ಕಲ್ಪಿಸಲಾಗುತ್ತಿರುವ ಸರ್ಕಾರದ ಸೌಲಭ್ಯಗಳನ್ನು ಹಿಂಪಡೆದುಕೊಳ್ಳಬೇಕು ಎಂಬ ಶಿಫಾರಸ್ಸನ್ನು ಸಮಿತಿ ಸದಸ್ಯರು ಮಾಡಿದ್ದಾರೆ.

ಸಭೆ ಬಳಿಕ ಮಾತನಾಡಿದ ಶಾಸಕ ಗೂಳಿಹಟ್ಟಿ ಶೇಖರ್, ಪ್ರಾಥಮಿಕ ಮಾಹಿತಿ ಪ್ರಕಾರ ಶೇ.40ರಷ್ಟು ಅನಧಿಕೃತ ಚರ್ಚ್‌ಗಳಿವೆ. ಈ ಬಗ್ಗೆ ಇನ್ನೂ ಅಂಕಿ–ಅಂಶಗಳನ್ನು ಕಲೆ ಹಾಕಲಾಗುತ್ತಿದೆ. ರಾಜ್ಯದಲ್ಲಿ ಮತಾಂತರ ಪ್ರಕರಣ ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ರಾಜ್ಯದಲ್ಲಿರುವ ಅಧಿಕೃತ ಮತ್ತು ಅನಧಿಕೃತ ಮಿಷನರಿಗಳ ಎಷ್ಟಿವೆ ಸೇರಿದಂತೆ ಇತರೆ ವಿಚಾರಗಳ ಕುರಿತು ಚರ್ಚೆ ನಡೆಸಲಾಗಿದೆ ಎಂದು ಹೇಳಿದರು.

ಆಧಾರ:ಕನ್ನಡ ಪ್ರಭ,ದಿನಾಂಕ:14.10.2021

## 10. ಅನಧಿಕೃತ ಚರ್ಚ್‌ಗಳ ಸಂಖ್ಯೆ ಶೇ.40 : ಗೂಳಿಹಟ್ಟಿ ಶೇಖರ್

ರಾಜ್ಯದಲ್ಲಿ ಅನಧಿಕೃತ ಚರ್ಚ್‌ಗಳ ಸಂಖ್ಯೆ:40 ರಷ್ಟು ಇದ್ದು, ಇವು ವ್ಯಾಪಕವಾಗಿ ಮತಾಂತರ ಕಾರ್ಯದಲ್ಲಿ ತೊಡಗಿವೆ ಎಂದು ಬಿಜೆಪಿ ಶಾಸಕ ಗೂಳಿಹಟ್ಟಿ ಶೇಖರ್ ಅವರು ತಿಳಿಸಿದ್ದಾರೆ.

ವಿಕಾಸಸೌಧದಲ್ಲಿ ನಡೆದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿ ಸಭೆಯ ಬಳಿಕ ಅವರು ಸುದ್ದಿಗಾರರ ಜೊತೆ ಮಾತನಾಡಿದರು.

ರಾಜ್ಯದಲ್ಲಿ ಅಧಿಕೃತ ಮತ್ತು ಅನಧಿಕೃತ ಮಿಷನರಿಗಳು ಕಾರ್ಯನಿರ್ವಹಿಸುತ್ತಿವೆ. ಇವು ಸರ್ಕಾರದಿಂದ ಪಡೆಯುತ್ತಿರುವ ಸೌಲಭ್ಯಗಳು, ಕ್ರೈಸ್ತ ಸಮುದಾಯಕ್ಕೆ ಸರ್ಕಾರ ನೀಡುತ್ತಿರುವ ಅನುದಾನ ಅಭಿವೃದ್ಧಿ ಮತ್ತು ಕ್ಷೇಮ ಸಮಾಚಾರದ ಬಗ್ಗೆ ಸಭೆಯಲ್ಲಿ ಚರ್ಚಿಸಲಾಯಿತು. ಅನಧಿಕೃತ ಚರ್ಚೆಗಳು ಮನೆಗಳಲ್ಲೂ ನಡೆಯುತ್ತಿವೆ. ಈ ಎಲ್ಲ ವಿಷಯಗಳ ಬಗ್ಗೆ ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾಹಿತಿಯನ್ನು ಕೇಳಲಾಗಿದೆ ಎಂದು ಅವರು ಹೇಳಿದರು.

ಶಿವಮೊಗ್ಗ ಗ್ರಾಮಾಂತರ ಶಾಸಕ ಅಶೋಕ್ ನಾಯ್ಕ್, ಮಾತನಾಡಿ ಲಂಬಾಣಿ ಜನಾಂಗದವರನ್ನು ಬಲವಂತವಾಗಿ ಮತಾಂತರ ಮಾಡಲಾಗುತ್ತಿದೆ. ಲಂಬಾಣಿ ಭಾಷೆಯಲ್ಲಿ ಬೈಬಲ್ ಮುದ್ರಿಸಿ ಹಂಚಲಾಗುತ್ತಿದೆ ಎಂದರು. ಸಭೆಯಲ್ಲಿ ಶಾಸಕರಾದ ಪುಟ್ಟರಂಗ ಶೆಟ್ಟಿ, ವಿರೂಪಾಕ್ಷಪ್ಪ ಬಳ್ಳಾರಿ, ರಾಜೇಶ್ ನಾಯ್ಕ್ ವಿಧಾನ ಪರಿಷತ್ ಸದಸ್ಯ ಬಿ.ಎಂ. ಫಾರೂಕ್ ಅವರು ಇದ್ದರು.

ಆಧಾರ:ಪ್ರಜಾವಾಣಿ,ದಿನಾಂಕ:14.10.2021

## 11. ರಾಜ್ಯದಲ್ಲಿನ ಚರ್ಚ್‌ಗಳ ಸಮೀಕ್ಷೆಗೆ ವಿಧಾನ ಮಂಡಲ ಸಮಿತಿ ಸೂಚನೆ

ರಾಜ್ಯದ ಕೆಲವಡೆ ಬಲವಂತದ ಮತಾಂತರ ದೂರುಗಳು ಕೇಳಿ ಬರುತ್ತಿರುವ ಬೆನ್ನಲ್ಲೇ ಚರ್ಚ್‌ಗಳ ಸಮೀಕ್ಷೆ ನಡೆಸುವ ಜೊತೆಗೆ ಅನಧಿಕೃತ ಚರ್ಚ್‌ಗಳನ್ನು ಪತ್ತೆ ಹಚ್ಚಿ ವರದಿ ನೀಡುವಂತೆ ಅಧಿಕಾರಿಗಳಿಗೆ ವಿಧಾನಮಂಡಲದ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಮಿತಿಯು ಸೂಚನೆ ನೀಡಿದೆ.

ಸಮಿತಿ ಅಧ್ಯಕ್ಷರಾದ ದಿನಕರ ಶೆಟ್ಟಿ ಅನುಪಸ್ಥಿತಿಯಲ್ಲಿ ಶಾಸಕ ಗೂಳಿಹಟ್ಟಿ ಶೇಖರ್ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಸೂಚನೆ ನೀಡಲಾಗಿದೆ. ಆ ಮೂಲಕ ಅನಧಿಕೃತ ಚರ್ಚ್‌ಗಳು, ಬಲವಂತದ ಮತಾಂತರಕ್ಕೆ ಕಡಿವಾಣ ಹಾಕುವ ನಿಟ್ಟಿನಲ್ಲಿನ ಪ್ರಯತ್ನಕ್ಕೆ ಚಾಲನೆ ನೀಡಿದಂತಾಗಿದೆ.

ಚಿತ್ರದುರ್ಗ ಸೇರಿದಂತೆ ರಾಜ್ಯದ ಕೆಲ ಪ್ರದೇಶಗಳಲ್ಲೂ ಬಲವಂತವಾಗಿ ಮತಾಂತರ ಕಾರ್ಯ ಹೆಚ್ಚಾಗಿದೆ. ಆ ಹಿನ್ನೆಲೆಯಲ್ಲಿ ಇತ್ತೀಚೆಗೆ ನಡೆದ ಸಭೆಯಲ್ಲಿ ಈ ಬಗ್ಗೆ ಚರ್ಚೆಯಾಯಿತು. ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರ, ವ್ಯವಹಾರ, ಗೃಹ, ಕಂದಾಯ ಮತ್ತು ಕಾನೂನು ಇಲಾಖೆಗಳ ಪ್ರತಿನಿಧಿಗಳು ಪಾಲ್ಗೊಂಡಿದ್ದ ಸಭೆಯಲ್ಲಿ ಈ ವಿಷಯದ ಬಗ್ಗೆ ಚರ್ಚೆಯಾಯಿತು. ಆಗ ರಾಜ್ಯದಲ್ಲಿ 1790 ಚರ್ಚ್‌ಗಳಿವೆ ಎಂಬ ಮಾಹಿತಿ ಲಭ್ಯವಾಯಿತು. ಇದರಲ್ಲಿ ಅನಧಿಕೃತವಾಗಿ ಸ್ಥಾಪನೆಯಾಗಿರುವ ಚರ್ಚ್‌ಗಳೆಷ್ಟು ಎಂಬುದನ್ನು ಪತ್ತೆ ಹಚ್ಚಿ ವರದಿ ನೀಡಲು ಸಮಿತಿಯಿಂದ ಸೂಚಿಸಲಾಗಿದೆ ಎಂದು ಸಮಿತಿ ಅಧ್ಯಕ್ಷ ಗೂಳಿಹಟ್ಟಿ ಶೇಖರ್ ಹೇಳಿದರು.

ಗೃಹ ಇಲಾಖೆ ಮಾಹಿತಿ ಪ್ರಕಾರ 36 ಬಲವಂತದ ಮತಾಂತರ ಪ್ರಕರಣಗಳು ದಾಖಲಾಗಿವೆ. ಈ ಹಾವಳಿ ವಸತಿ ಗೃಹಗಳನ್ನು ಸಹ ಚರ್ಚ್, ಬೈಬಲ್ ಸೊಸೈಟಿಗಳಾಗಿ ಪರಿವರ್ತಿಸಲಾಗುತ್ತಿದೆ. ಅನಧಿಕೃತವಾಗಿ ತಲೆ ಎತ್ತಿರುವ ಪರಿವರ್ತನೆಯಾಗಿರುವ ಚರ್ಚ್‌ಗಳು ಹಾಗೂ ಅನಧಿಕೃತ ಕ್ರೈಸ್ತ ಪಾದ್ರಿಗಳನ್ನು ಪತ್ತೆ ಹಚ್ಚಿ ಅವರ ವಿರುದ್ಧ ಕ್ರಮ ಕೈಗೊಳ್ಳಬೇಕಿದೆ ಎಂದು ತಿಳಿಸಿದರು.

**ನೋಂದಣಿಯಾಗದಿದ್ದರೆ ಅನಧಿಕೃತ:** ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ ಅಥವಾ ಅಲ್ಪಸಂಖ್ಯಾತರ ಆಯೋಗದಲ್ಲಿ ನೋಂದಣಿಯಾಗದ ಹಾಗೂ ಸೂಕ್ತ ಅನುಮತಿ ಪಡೆಯದ ಚರ್ಚ್, ಬೈಬಲ್ ಸೊಸೈಟಿಗಳನ್ನು ಅನಧಿಕೃತ ಎಂದು ಪರಿಗಣಿಸಲಾಗುತ್ತದೆ ಎಂದು ಹೇಳಿದರು.

ಆಧಾರ:ವಿಜಯ ಕರ್ನಾಟಕ,ದಿನಾಂಕ:17.10.2021

## 12.ಟೀಕೆಯ ಭರದಲ್ಲಿ ಕೀಳುಮಟ್ಟದ ಶಬ್ದ ಬಳಕೆ ಸರಿಯಲ್ಲ : ಹೊರಟ್ಟಿ

ರಾಜಕಾರಣದಲ್ಲಿ ಕೀಳು ಮಟ್ಟದ ಟೀಕೆ ಮಾಡುವುದು ಸರಿಯಲ್ಲ. ಟೀಕೆ–ಟಿಪ್ಪಣಿ ಏನೇ ಇರಲಿ ಕೀಳುಮಟ್ಟದ ಶಬ್ಬಗಳನ್ನು ಎಂದಿಗೂ ಬಳಸಬಾರದು ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಹೇಳಿದರು. ನಗರದಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿ ರಾಜಕಾರಣಿಗಳನ್ನು ಸಾರ್ವಜನಿಕರು ನೋಡುತ್ತಾ ಇರುತ್ತಾರೆ. ಗೌರವದಿಂದ ನಡೆದುಕೊಳ್ಳುವ ಮೂಲಕ ಮಾದರಿಯಾಗಿರಬೇಕು. ಈಗ ಬಳಸುತ್ತಿರುವ ಶಬ್ದಗಳು ಯಾರಿಗೂ ಸರಿ ಅನಿಸಿಲ್ಲ. ಅವರವರ ವೈಯಕ್ತಿಕ ವಿಚಾರಗಳಿಗೆ ಹೋಗಬಾರದು. ಇದು ಒಳ್ಳೆಯದಲ್ಲ. ಮೌಲ್ಯಾಧಾರಿತ ರಾಜಕಾರಣ ಮಾಡುವುದು ಪ್ರತಿಯೊಬ್ಬರ ಕರ್ತವ್ಯ. ಇಂದಿನ ರಾಜಕಾರಣ ಬಗ್ಗೆ ಜನ ಬೈಯುತ್ತಿದ್ದಾರೆ. ಹೀಗಾಗಿ ರಾಜಕಾರಣಿಗಳು ಸರಿಪಡಿಸಿಕೊಳ್ಳಬೇಕೆಂದು ಸಲಹೆ ನೀಡಿದರು. ಇಂಧನ ಬೆಲೆ ಏರಿಕೆಗೆ, ಕೋವಿಡ್ ಕಾರಣ ಎಂದು ಸಚಿವ ಉಮೇಶ ಕತ್ತಿ ಹೇಳಿಕೆ ವಿಚಾರಕ್ಕೆ ಪ್ರತಿಕ್ರಿಯಿಸಿದ ಹೊರಟ್ಟಿ ಸಚಿವರು ಹೇಳುವ ಮಾತು ಸರ್ಕಾರದ್ದೇ ಮಾತು ಇದ್ದಂತೆ. ಆ ರೀತಿ ಹೇಳಬಾರದು ಯಾವುದೇ ಮಂತ್ರಿಯಾಗಿರಲಿ ಜವಾಬ್ದಾರಿಯಿಂದ ಮಾತನಾಡಬೇಕು. ಮಂತ್ರಿ ಮಾತನಾಡುವುದಕ್ಕೂ ಜನ ಮಾತನಾಡುವುಕ್ಕೂ ವ್ಯತ್ಯಾಸ ಇದೆ ಎಂದರು.

ಆಧಾರ:ಉದಯವಾಣಿ,ದಿನಾಂಕ:21.10.2021

## 13.ಅಧಿವೇಶನದಲ್ಲಿ ಮಕ್ಕಳ ಕುರಿತು ಚರ್ಚೆ

ಮುಂದಿನ ವಿಧಾನಪರಿಷತ್ ಅಧಿವೇಶನದಲ್ಲಿ ಮಕ್ಕಳ ಕುರಿತು ಚರ್ಚಿಸಲು ಒಂದು ದಿನ ಮೀಸಲು ಇಡಲಾಗುವುದು ಎಂದು ಸಭಾಪತಿ ಬಸವರಾಜ ಹೊರಟ್ಟಿ ಹೇಳಿದ್ದಾರೆ. ವಿದ್ಯಾರ್ಥಿನಿಯೊಬ್ಬಳು ಬರೆದ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಮಾತನಾಡಿ ಬದಲಾದ ಕಾಲಘಟ್ಟದಲ್ಲಿ ಮಕ್ಕಳ ವಿದ್ಯಾಭ್ಯಾಸ, ಆರೋಗ್ಯ ಪರಿಸರ ಮತ್ತಿತರ ವಿಷಯಗಳ ಕುರಿತು ಸಮಗ್ರವಾಗಿ ಚರ್ಚಿಸಲಾಗುವುದು. ಈ ಬಗ್ಗೆ ಮಕ್ಕಳ ಹಕ್ಕುಗಳ ವೇದಿಕೆ ಜೊತೆ ಚರ್ಚಿಸಿ ತೀರ್ಮಾನಿಸಲಾಗಿದೆ ಎಂದು ತಿಳಿಸಿದರು.

ಆಧಾರ:ವಿಜಯವಾಣಿ,ದಿನಾಂಕ:21.10.2021

## 14.25 ವರ್ಷಗಳಿಂದಾದ ಮತಾಂತರ ಬಗ್ಗೆ ಅಸೆಂಬ್ಲಿ ಮಾಹಿತಿ ಸಂಗ್ರಹ

ಕಳೆದ 25 ವರ್ಷಗಳಲ್ಲಿ ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಮತಾಂತರಗೊಂಡಿರುವವರ ಮಾಹಿತಿ ಒದಗಿಸುವಂತೆ ರಾಜ್ಯ ವಿಧಾನಸಭಾ ಕಾರ್ಯಾಲಯವು ಅಲ್ಪಸಂಖ್ಯಾತ ಕಲ್ಯಾಣ ಇಲಾಖೆಯನ್ನು ಕೋರಿದೆ. ಈ ಸಂಬಂಧ ರಾಜ್ಯ ವಿಧಾನಸಭೆ ಕಾರ್ಯದರ್ಶಿ ಅವರು ಅಲ್ಪಸಂಖ್ಯಾತ ಕಲ್ಯಾಣ ಇಲಾಖೆ ಕಾರ್ಯದರ್ಶಿ ಅವರಿಗೆ ಪತ್ರ ಬರೆದಿದ್ದಾರೆ ಅಕ್ಟೋಬರ್ 13 ರಂದು ನಡೆದ ಕರ್ನಾಟಕ ವಿಧಾನಮಂಡಲದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತ ಕಲ್ಯಾಣ ಸಮಿತಿ ಸಭೆಗೆ ಸಂಬಂಧಿಸಿದಂತೆ ಹೆಚ್ಚುವರಿ ಮಾಹಿತಿಗಳನ್ನು ಒದಗಿಸುವಂತೆ ಸೂಚಿಸಿದ್ದಾರೆ. ರಾಜ್ಯದಲ್ಲಿ ಬಲವಂತವಾಗಿ ಬೇರೆ ಧರ್ಮಕ್ಕೆ ಮತಾಂತರವಾಗಿರುವ ವಿಚಾರವಾಗಿ ಬಂದಿರುವ ದೂರುಗಳ ಬಗ್ಗೆ ಎಫ್ಐಆರ್ ದಾಖಲಿಸಿಕೊಂಡು ಕ್ರಮ ಕೈಗೊಂಡಿರುವ ಬಗ್ಗೆ ಗೃಹ ಇಲಾಖೆಯಿಂದ ಮಾಹಿತಿ

ಒದಗಿಸಬೇಕು. ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದಲ್ಲಿರುವ ಬೆಥೆಲ್ ಪಾಪ್ಟಿಸ್ಟ್ ಚರ್ಚ್‌ನ ಕುರಿತು ಮಾಹಿತಿಯನ್ನು ಒದಗಿಸಲು ಸೂಚಿಸಲಾಗಿದೆ.

ಆಧಾರ:ಕನ್ನಡಪ್ರಭ,ದಿನಾಂಕ:29.10.2021

## 15. ಎಲ್ಲೆಲ್ಲೂ ಕನ್ನಡ ಡಿಂಡಿಮ

**ಇತಿಹಾಸ ನಿರ್ಮಿಸಿದ ಶಕ್ತಿ ಕೇಂದ್ರ:** ಬೆಂಗಳೂರಿನಲ್ಲಿ ವಿಧಾನಸೌಧದ ಮುಂಭಾಗದ ಮೆಟ್ಟಿಲುಗಳ ಮೇಲೆ ನೆರೆದಿದ್ದ ಸಾವಿರಾರು ಮಂದಿ ಕನ್ನಡ ಗೀತೆಗಳಿಗೆ ಧ್ವನಿಯಾದರು. ಅಧಿಕಾರಿಗಳು, ಸಿಬ್ಬಂದಿ, ಆರಕ್ಷಕರು ಸೇರಿದಂತೆ ಎಲ್ಲಾ ವಲಯಗಳಲ್ಲಿ ಕಾರ್ಯನಿರ್ವಹಿಸುವವರು ಒಂದೇ ವೇದಿಕೆಯಲ್ಲಿ ಒಟ್ಟಾಗಿ ನಿಂತು ಹಾಡುವ ಮೂಲಕ ಇತಿಹಾಸ ನಿರ್ಮಿಸಿದರು. ಆ ಮೂಲಕ ಕನ್ನಡಕ್ಕಾಗಿ ನಾವು ಅಭಿಯಾನ ಚರಿತ್ರಾರ್ಹ ದಾಖಲೆ ನಿರ್ಮಿಸಿತು. ವಿಧಾನಸಭಾಧ್ಯಕ್ಷರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರು, ಭಾರತೀಯ ಆಡಳಿತ ಸೇವೆ, ಕರ್ನಾಟಕ ಆಡಳಿತ ಸೇವೆ, ಅಧಿಕಾರಿಗಳು ಗೀತೆಗಳಿಗೆ ಧ್ವನಿ ನೀಡಿದರು. ಇದೇ ರೀತಿ ರಾಜ್ಯದ ಎಲ್ಲ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳು ಹಾಗೂ ಸರ್ಕಾರಿ ಕಛೇರಿಗಳಲ್ಲಿ ಕಾರ್ಯಕ್ರಮ ಸಂಭ್ರಮದಿಂದ ನಡೆಯಿತು.

**ಎಲ್ಲೆಲ್ಲಿ ಅನುರಣನ:**ಬೆಂಗಳೂರಿನ ವಿಧಾನಸೌಧದ ಜೊತೆಗೆ ಬೆಳಗಾವಿಯ ಸುವರ್ಣಸೌಧ, ಹೈಕೋರ್ಟ್, ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ಮೆಟ್ರೋ ನಿಲ್ದಾಣಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಕೇಂದ್ರ ಕಛೇರಿ, ಎಲ್ಲಾ ಜಿಲ್ಲಾಧಿಕಾರಿಗಳ ಕಛೇರಿ, ರವೀಂದ್ರ ಕಲಾಕ್ಷೇತ್ರ, ಪುರಭವನ, ಬೆಂಗಳೂರಿನ ಬನಶಂಕರಿ ದೇವಾಲಯ, ಬೆಂಗಳೂರು ಕೆಂಪೇಗೌಡ ಬಸ್ ನಿಲ್ದಾಣ ಸೇರಿದಂತೆ ಬಿಎಂಟಿಸಿ ಮತ್ತು ಕೆಎಸ್‌ಆರ್‌ಟಿಸಿ ಬಸ್ ಡಿಪೋಗಳಲ್ಲಿ, ಶಾಲಾ ಕಾಲೇಜುಗಳು, ಪೊಲೀಸ್ ಠಾಣೆಗಳಲ್ಲಿ, ದೇವಾಲಯಗಳು, ರಂಗಮಂದಿರಗಳಲ್ಲಿ, ಸರ್ಕಾರಿ ವೈದ್ಯಕೀಯ ಕಾಲೇಜುಗಳು, ಬಿಇಎಲ್, ಹೆಚ್‌ಎಎಲ್, ಬಿಎಸ್‌ಎನ್‌ಎಲ್, ಐಟಿಐ ಸೇರಿದಂತೆ ಬೃಹತ್ ಖಾಸಗಿ ಕಂಪನಿಗಳು ಸೇರಿದಂತೆ ರಾಜಧಾನಿ ಬೆಂಗಳೂರಿನಿಂದ ಹಿಡಿದು ಗ್ರಾಮಮಟ್ಟದವರೆಗೂ ಸಾವಿರಾರು ಕೇಂದ್ರಗಳಿಂದ ಲಕ್ಷಾಂತರ ಮಂದಿ ಭಾಗವಹಿಸಿದರು.

ಕನ್ನಡಕ್ಕಾಗಿ ನಾವು ಅಭಿಯಾನದ ಅಂಗವಾಗಿ ನಗರದ ಕನ್ನಡ ಭವನದಲ್ಲಿ ಆಯೋಜಿಸಿದ ಲಕ್ಷ ಕಂಠಗಳ ಗೀತ ಗಾಯನ ಕಾರ್ಯಕ್ರಮದಲ್ಲಿ ಕನ್ನಡ ಭಾಷೆಯ ಮೇಲಿನ ಪ್ರೀತಿ, ಅಭಿಮಾನ ಕಾಣಸಿಕ್ಕಿತು. ಸಿಎಂ ಉಪಸ್ಥಿತಿಯಲ್ಲಿ ಕನ್ನಡಿಗರು ಸಂಭ್ರಮಿಸಿದರು. ಬೊಮ್ಮಾಯಿ ಅವರ ಕೈಯಲ್ಲಿ ಕೆಂಪು ಮತ್ತು ಹಳದಿ ವರ್ಣದ ಕನ್ನಡ ಬಾವುಟ ಹಿಡಿದು ಹಾಡಿಗೆ ಧ್ವನಿಗೂಡಿಸಿದರು. ಅವರ ಕೋರಿಕೆ ಮೇರೆಗೆ 2ನೇ ಬಾರಿ ಹುಟ್ಟಿದರೆ ಕನ್ನಡ ನಾಡಿನಲ್ಲಿ ಹುಟ್ಟಬೇಕು ಹಾಡನ್ನು ಹೇಳಲಾಯಿತು. ಹಲವು ಸವಾಲುಗಳ ನಡುವೆಯೂ ಕನ್ನಡ ಭಾಷೆಯ ಬೆಳವಣಿಗೆಗೆ ಏನೆಲ್ಲ ಮಾಡಲು ಸಾಧ್ಯವೋ ಅವೆಲ್ಲವನ್ನೂ ಮಾಡಲು ಸರ್ಕಾರ ಬದ್ಧವಾಗಿದೆ ಎಂದು ಬೊಮ್ಮಾಯಿ ಅವರು ಹೇಳಿದರು. ಯಾವ ಭಾಷೆಯ ಬೇರು ಗಟ್ಟಿಯಾಗಿರುತ್ತದೋ ಆ ಭಾಷೆಯ ಹತ್ತಿಕ್ಕಲು ಸಾಧ್ಯವಿಲ್ಲ. ಕನ್ನಡ ಅತ್ಯಂತ ಪುರಾತನ ಹಾಗೂ ಶ್ರೀಮಂತ ಭಾಷೆಯಾಗಿದೆ. ಇದನ್ನು ಮುಂದಿನ ಪೀಳಿಗೆಗೆ ಬಿಟ್ಟು ಹೋಗಲು ಸರ್ಕಾರ ಸದಾ ಪ್ರಯತ್ನಿಸಲಿದೆ ಎಂದರು.

ಆಧಾರ:ವಿಜಯವಾಣಿ, ದಿನಾಂಕ:29.10.2021

**ದಿನಾಂಕ: 28.10.2021 ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವತಿಯಿಂದ ಆಯೋಜಿಸಲಾಗಿದ್ದ ಕರ್ನಾಟಕ ರಾಜ್ಯೋತ್ಸವ ಅಭಿಯಾನ ನಿಮಿತ್ತ ವಿಶ್ವದಾದ್ಯಂತ ಏಕ ಕಾಲದಲ್ಲಿ ಲಕ್ಷಲಕ್ಷ ಕಂಠಗಳಲ್ಲಿ ಕನ್ನಡ ಗೀತೆ ಗಾಯನ ಕಾರ್ಯಕ್ರಮದ ಅಂಗವಾಗಿ ವಿಧಾನಸೌಧ ಮುಂಭಾಗದಲ್ಲಿ ನಡೆದ ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು, ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಶ್ರೀ ವಿ. ಸುನೀಲ್ ಕುಮಾರ್‌ರವರು ಹಾಗೂ ಇಲಾಖೆ ಮುಖ್ಯಸ್ಥರುಗಳು ಭಾಗವಹಿಸುತ್ತಿರುವ ಸಂದರ್ಭ**








**ದಿನಾಂಕ: 28.10.2021 ರಂದು ಧಾರವಾಡ ಜಿಲ್ಲಾಡಳಿತದ ವತಿಯಿಂದ ಆಯೋಜಿಸಿದ್ದ, 'ಮಾತಾಡ್ ಮಾತಾಡ್ ಕನ್ನಡ;' 'ಕನ್ನಡಕ್ಕಾಗಿ ನಾವು ಗೀತಗಾಯನ ಅಭಿಯಾನ' ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡಿದ್ದು, ನಾಡಗೀತೆ ಗಾಯನದಲ್ಲಿ ಧನಿಯಾದರು. ನಂತರ ಅಭಿಯಾನದಲ್ಲಿ ಭಾಗವಹಿಸಿದವರಿಗೆ 'ಕನ್ನಡದ ಸಂಕಲ್ಪ ಭೋಧನೆ ಮಾಡಿದರು.**





## 16. ಮರು ವಿನ್ಯಾಸದ ಲಾಂಛನ ವೆಬ್‌ಸೈಟ್ ಲೋಕಾರ್ಪಣೆ

ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ಮರು ವಿನ್ಯಾಸದ ಲಾಂಛನ ಹಾಗೂ ವೆಬ್‌ಸೈಟ್ ಅನ್ನು (ಜಾಲತಾಣ) ಸಚಿವರು ಹಾಗೂ ಸ್ಪೀಕರ್ ಅವರು ವಿಧಾನಸೌಧದಲ್ಲಿ ಲೋಕಾರ್ಪಣೆಗೊಳಿಸಿದರು.

ಈ ಸಂದರ್ಭದಲ್ಲಿ ಮಾತನಾಡಿದ ಜೆ.ಸಿ.ಮಾಧುಸ್ವಾಮಿಯವರು ಕಾನೂನು ಮತ್ತು ಸಂಸದೀಯ ವಿಚಾರಗಳಲ್ಲಿ ಸಕಾಲಿಕ ಸುಧಾರಣೆ ರೂಪಿಸುವ ಉದ್ದೇಶದಿಂದ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ ಸ್ಥಾಪನೆಯಾಗಿದೆ. ಇದು ಮಾದರಿ ಸಂಸತ್ ಅಧಿವೇಶನ, ಅಣಕು ನ್ಯಾಯಾಲ ಸ್ಪರ್ಧೆ, ಕಾನೂನು ಮತ್ತು ಸಂಸದೀಯ ವಿಷಯಗಳಲ್ಲಿ ಸಂಶೋಧನೆ ಮತ್ತು ಅವುಗಳ ವರದಿ, ಪ್ರಕಟಣೆಗಳ ಮೂಲಕ ಕ್ರಿಯಾಶೀಲವಾಗಿ ತೊಡಗಿಸಿಕೊಂಡು ಬಂದಿದೆ ಎಂದು ಹೇಳಿದರು.

ಸಂಸ್ಥೆಯ ಪರಿಚಯ, ಕಾರ್ಯಕ್ರಮಗಳು, ಸಂಶೋಧನೆಗಳ ಪ್ರಕಟಣೆಗಳು, ವಾರ್ಷಿಕ ವರದಿಗಳು, ಅಧ್ಯಯನ ವರದಿಗಳು, ಕ್ರಿಯಾಯೋಜನೆ ಇತ್ಯಾದಿ ಸಮಗ್ರ ಮಾಹಿತಿ ಒಳಗೊಂಡ ಕನ್ನಡ ಹಾಗೂ ಇಂಗ್ಲೀಷ್ ಜಾಲತಾಣವನ್ನು ಲೋಕಾರ್ಪಣೆಗೊಳಿಸಲಾಗಿದೆ. ಸಂಸ್ಥೆಯು 2005ರಿಂದ ಪ್ರಕಟಿಸಿರುವ 76 ಪುಸ್ತಕಗಳ ಪಿಡಿಎಫ್ ಮಾದರಿ, 200ಕ್ಕೂ ಹೆಚ್ಚು ವಿಚಾರ ಸಂಕಿರಣಗಳು, ಮಾದರಿ ಸಂಸತ್/ವಿಧಾನಸಭಾ ಅಧಿವೇಶನ ಸ್ಪರ್ಧೆಗಳ ವಿವರ ವೆಬ್‌ಸೈಟ್‌ನಲ್ಲಿ ಸಿಗಲಿದೆ ಎಂದು ಹೇಳಿದರು.

ಸಂಸ್ಥೆಗೆ ಮುಖ್ಯಮಂತ್ರಿಗಳು ಅಧ್ಯಕ್ಷರಾಗಿದ್ದು, ನಾನು ಉಪಾಧ್ಯಕ್ಷನಾಗಿದ್ದೇನೆ. ಮುಖ್ಯಮಂತ್ರಿಗಳ ಸೂಚನೆಯಂತೆ ಸಭೆ ನಡೆಸಿ ಲೋಕಾರ್ಪಣೆಗೊಳಿಸಲಾಗಿದೆ. ಇನ್ನು ಮುಂದೆ ಹೆಚ್ಚಿನ ಪ್ರಮಾಣದಲ್ಲಿ ವಿಚಾರ ಸಂಕಿರಣ ಆಯೋಜಿಸಲು ಸಂಸ್ಥೆ ಪ್ರಯತ್ನಿಸಬೇಕಿದೆ ಎಂದು ಮಾಹಿತಿ ನೀಡಿದರು.

ಖಾಸಗಿತನದ ಹಕ್ಕು, ನ್ಯಾಯಾಂಗ ವ್ಯವಸ್ಥೆಯ ಅಧ್ಯಯನ, ಸಾಕ್ಷಿಗಳ/ಸಾಕ್ಷ್ಯದ ಸಂರಕ್ಷಣೆ, ಆನ್‌ಲೈನ್ ಗೇಮಿಂಗ್ ನಿಯಂತ್ರಣ, ಸದನದಲ್ಲಿ ಶಾಸಕರ ಕಡ್ಡಾಯ ಹಾಜರಾತಿ ಹಾಗೂ ಶಾಸಕರ ಕರ್ತವ್ಯ ಪುಸ್ತಕ ಸಾಲಿನಲ್ಲಿ ಸಂಶೋಧನಾ ವಿಷಯಗಳಾಗಿವೆ. ಈ ವಿಷಯಗಳ ಬಗ್ಗೆ ಅಧ್ಯಯನ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಲಾಗುವುದು ಎಂದು ಅಧಿಕಾರಿಗಳು ತಿಳಿಸಿದ್ದಾರೆ.

ಸಂಸ್ಥೆಯ ನಿರ್ದೇಶಕ ಕೆ.ದ್ವಾರಕಾನಾಥ್ ಬಾಬು ಪಾಲ್ಗೊಂಡಿದ್ದರು.

ಆಧಾರ:ವಿಜಯಕರ್ನಾಟಕ, ದಿನಾಂಕ:30.10.2021

**ದಿನಾಂಕ: 29.10.2021 ರಂದು ವಿಧಾನಸೌಧದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಹಾಗೂ ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿರವರು ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯ ವಾರ್ಷಿಕ ಮಹಾಸಭೆಯಲ್ಲಿ ಭಾಗವಹಿಸಿ ಸದರಿ ಸಂಸ್ಥೆಯ ಜಾಲತಾಣವನ್ನು ಲೋಕಾರ್ಪಣೆ ಮಾಡುತ್ತಿರುವ ಸಂದರ್ಭ;**





## 17. ಡಿಸೆಂಬರ್‌ನಲ್ಲಿ ಬೆಳಗಾವಿ ಅಧಿವೇಶನ

ವಿಧಾನಮಂಡಲ ಚಳಿಗಾಲದ ಅಧಿವೇಶನ ಡಿಸೆಂಬರ್‌ನಲ್ಲಿ ನಡೆಸುವ ಕುರಿತು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ವಿಧಾನ ಸಭೆ ಸಭಾಧ್ಯಕ್ಷರು, ಪರಿಷತ್ ಸಭಾಪತಿ ಹಾಗೂ ಗೃಹ ಸಚಿವ ಆರಗ ಜ್ಞಾನೇಂದ್ರ ಜೊತೆ ಅನೌಪಚಾರಿಕ ಸಭೆ ನಡೆಸಿದ್ದಾರೆ. ವಿಧಾನಸೌಧದ ಸ್ಪೀಕರ್ ಕೊಠಡಿಯಲ್ಲಿ ಚರ್ಚೆ ನಡೆಸಿದ ಪ್ರಮುಖರು, ಡಿಸೆಂಬರ್ 2ನೇ ವಾರ (ಡಿಸೆಂಬರ್ 6 ರಿಂದ) ಅಧಿವೇಶನ ನಡೆಸುವ ಕುರಿತಂತೆ ವಿಚಾರ ವಿನಿಮಯ ನಡೆಸಿದ್ದಾರೆ. 10 ದಿನಗಳ (ಡಿಸೆಂಬರ್ 17ರವರೆಗೆ) ಅಧಿವೇಶನ ನಡೆಸುವ ಸಾಧ್ಯತೆ ಇದ್ದು, ಸಂಪುಟ ಸಭೆಯಲ್ಲಿ ಈ ಸಂಬಂಧ ನಿರ್ಣಯ ಆಗಬೇಕಾಗಿದೆ. ಮುಖ್ಯ ಕಾರ್ಯದರ್ಶಿ ಮತ್ತು ಹಿರಿಯ ಅಧಿಕಾರಿಗಳೊಂದಿಗೆ ಸಿಎಂ ಸಮಾಲೋಚನೆ ನಡೆಸಿ ಸಂಪುಟದಲ್ಲಿ ದಿನಾಂಕದ ಬಗ್ಗೆ ಅಂತಿಮ ನಿರ್ಧಾರ ಕೈಗೊಳ್ಳಲಿದ್ದಾರೆ. ಅತಿವೃಷ್ಟಿ ಮತ್ತು ಕೊರೋನಾ ಕಾರಣದಿಂದ ಬೆಳಗಾವಿಯಲ್ಲಿ ಈ ಹಿಂದೆ ಅಧಿವೇಶನ ನಡೆಸಲು ಸಾಧ್ಯವಾಗಿಲ್ಲ. ಈಗ ಪರಿಸ್ಥಿತಿ ಸಹಜ ಸ್ಥಿತಿಗೆ

ಮರಳುತ್ತಿವೆ. ಈ ಹಿನ್ನೆಲೆಯಲ್ಲಿ ಅಲ್ಲಿ ಅಧಿವೇಶನ ನಡೆಸುವುದು ಸೂಕ್ತ ಎಂಬ ಅಭಿಪ್ರಾಯ ಸಭೆಯಲ್ಲಿ ಪ್ರಸ್ತಾಪವಾಗಿದೆ. ಒಂದು ವೇಳೆ ಅಧಿಕಾರಿಗಳು ಡಿಸೆಂಬರ್ 6ಕ್ಕೆ ಬದಲು ಬೇರೆ ದಿನಾಂಕ ಪ್ರಸ್ತಾಪಿಸಿದರೂ ಆ ದಿನಾಂಕಕ್ಕೆ ತಕ್ಕಂತೆ ಪೂರ್ವ ತಯಾರಿ ಮಾಡಿಕೊಳ್ಳುವ ಉದ್ದೇಶದಿಂದ ಸಂಪುಟದಲ್ಲಿ ನಿರ್ಣಯ ಕೈಗೊಳ್ಳುವ ಬಗ್ಗೆ ಸಭೆಯಲ್ಲಿ ಸಿಎಂಗೆ ಸಲಹೆ ನೀಡಲಾಗಿದೆ ಎಂದು ಮೂಲಗಳು ತಿಳಿಸಿವೆ.

ಆಧಾರ: ವಿಜಯವಾಣಿ,ದಿನಾಂಕ:01.11.2021

## 18. ಸರ್ದಾರ್ ಪಟೇಲ್ ಆದರ್ಶ ವ್ಯಕ್ತಿತ್ವ ಪಾಲಿಸಿ : ಹೊರಟ್ಟಿ

ಸರ್ದಾರ್ ವಲ್ಲಭಬಾಯ್ ಪಟೇಲ್ ಅವರ ಆದರ್ಶ, ವ್ಯಕ್ತಿತ್ವ, ಗಟ್ಟಿ ನಿರ್ಧಾರ ಹಾಗೂ ಅವರ ಆಡಳಿತಾತ್ಮಕ ಗುಣಗಳನ್ನು ಯುವಜನತೆ ಪಾಲಿಸಬೇಕು ಎಂದು  ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಹೇಳಿದರು. ವಿಧಾನಸೌಧದಲ್ಲಿ ವಿಧಾನಸಭಾ ಸಚಿವಾಲಯ ಆಯೋಜಿಸಿದ್ದ ರಾಷ್ಟ್ರೀಯ ಏಕತಾ ದಿವಸ ಕಾರ್ಯ ಕ್ರಮದಲ್ಲಿ ಸರ್ದಾರ್ ವಲ್ಲಭಬಾಯಿ ಪಟೇಲ್ ಅವರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡಿ, ಪ್ರತಿಜ್ಞಾ ವಿಧಿ ಸ್ವೀಕರಿಸಿ ಅವರು ಮಾತನಾಡಿದರು. ಅಂದು ಪಟೇಲ್ ಅವರು ಪ್ರಧಾನಮಂತ್ರಿಗಳಾಗಿದ್ದರೆ ದೇಶದ ಪರಿಸ್ಥಿತಿ ಇನ್ನಷ್ಟು ಬದಲಾಗುತ್ತಿತ್ತು. ಅತ್ಯಂತ ನಿಷ್ಠೂರವಾದ ಇಡೀ ಜಗತ್ತಿಗೆ ಮಾದರಿಯಾದ ರಾಷ್ಟ್ರ ನಿರ್ಮಾಣದ ಹಂಬಲ ಅವರಿಗಿತ್ತು. ಎಷ್ಟೇ ಅಡೆತಡೆ ಬಂದರೂ ದೇಶದ ನಿರ್ಮಾಣಕ್ಕೆ ಅವರು ನೀಡಿದ ಕೊಡುಗೆ ಅಮೂಲ್ಯ. ಕೆಲವರು ನಿಧನರಾದರು ಸದಾ ನಮ್ಮ ಎದುರಿಗೆ ಜೀವಂತವಾಗಿರುತ್ತಾರೆ. ಅಂಥವರಲ್ಲಿ ಸರ್ದಾರ್ ವಲ್ಲಭಬಾಯಿ ಪಟೇಲ್ ಒಬ್ಬರು ಎಂದರು. ವಿಧಾನಸಭಾ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ, ವಿಧಾನ ಪರಿಷತ್ ಕಾರ್ಯದರ್ಶಿ ಕೆ.ಆರ್. ಮಹಾಲಕ್ಷ್ಮಿ, ವಿಧಾನಸಭೆ ಕಾರ್ಯದರ್ಶಿ ಎಂ.ಕೆ. ವಿಶಾಲಾಕ್ಷಿ ಸೇರಿದಂತೆ ಅಧಿಕಾರಿಗಳು ಸಿಬ್ಬಂದಿ ಇದ್ದರು.

ಆಧಾರ:ಕನ್ನಡಪ್ರಭ,ದಿನಾಂಕ:01.11.2021



**ದಿನಾಂಕ: 31.10.2021 ರಂದು ವಿಧಾನಮಂಡಲದ ವತಿಯಿಂದ ಆಯೋಜಿಸಿದ್ದ, ರಾಷ್ಟ್ರೀಯ ಏಕತಾ ದಿನಾಚರಣೆ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಸರ್ದಾರ್ ವಲ್ಲಭಭಾಯಿ ಪಟೇಲ್ ರವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು. ನಂತರ ವಿಧಾನಮಂಡಲದ ಸಚಿವಾಲಯದ ಸಿಬ್ಬಂದಿಗಳಿಗೆ ರಾಷ್ಟ್ರೀಯ ಏಕತೆಯ ಬಗ್ಗೆ ವಿಧಾನಸಭೆಯ ಅಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರೊಂದಿಗೆ ಜಂಟಿ ಸಂವಾದ ಕಾರ್ಯಕ್ರಮವನ್ನು ನೇರವೇರಿಸಿರು.**



## 19. ಪಟೇಲ್ ಪ್ರಧಾನಿಯಾಗಿದ್ರೆ ಪರಿಸ್ಥಿತಿ ಬದಲಾಗುತ್ತಿತ್ತು

ಸರ್ದಾರ ವಲ್ಲಭಭಾಯ್ ಪಟೇಲ್ ಅವರು ದೇಶದ ಮೊದಲ ಪ್ರಧಾನಿಯಾಗಿದ್ದರೆ ದೇಶದ ಪರಿಸ್ಥಿತಿ ಸುಧಾರಿಸುತ್ತಿತ್ತು ಎಂದು ವಿಧಾನ ಪರಿಷತ್ತಿನ ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದರು.

ವಿಧಾನಸೌಧದಲ್ಲಿ ಕರ್ನಾಟಕ ವಿಧಾನಸಭೆ ಸಚಿವಾಲಯದ ವತಿಯಿಂದ ಏರ್ಪಡಿಸಲಾದ ರಾಷ್ಟ್ರೀಯ ಏಕತಾ ದಿವಸ ಆಚರಣೆ ಕಾರ್ಯಕ್ರಮದಲ್ಲಿ ಸರ್ಧಾರ್ ವಲ್ಲಭಭಾಯಿ ಪಟೇಲ್ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿ, ಪ್ರತಿಜ್ಞಾ ವಿಧಿ ಸ್ವೀಕರಿಸಿ ಮಾತನಾಡಿದರು.

ಅಂದಿನ ಪರಿಸ್ಥಿತಿಯಲ್ಲಿ ಸರ್ದಾರ ವಲ್ಲಭಭಾಯಿ ಪಟೇಲ್ ಅವರು ಪ್ರಧಾನಮಂತ್ರಿಗಳಾಗಿದ್ದರೆ ದೇಶದ ಪರಿಸ್ಥಿತಿ ಇನ್ನಷ್ಟು ಬದಲಾವಣೆಯಾಗುತ್ತಿತ್ತು. ಅವರಿಗೆ ಅತ್ಯಂತ ನಿಷ್ಠುರವಾದ, ಇಡೀ ಜಗತ್ತಿಗೆ ಮಾದರಿ ಆದಂತಹ ರಾಷ್ಟ್ರ ನಿರ್ಮಾಣದ ಹಂಬಲವಿತ್ತು. ಕೆಲವೊಬ್ಬರು ನಿಧನರಾದರೂ ನಮ್ಮೆದುರಿಗೆ ಜೀವಂತವಾಗಿರುತ್ತಾರೆ. ಅಂಥವರಲ್ಲಿ ಸರ್ದಾರ ವಲ್ಲಭಭಾಯ್ ಪಟೇಲ್ ಅವರು ಒಬ್ಬರು ಎಂದರು.

ರಾಷ್ಟ್ರೀಯ ಏಕತಾ ದಿವಸದ ಪ್ರತಿಜ್ಞಾ ವಿಧಿ ಭೋದಿಸಿದ ನಂತರ ಮಾತನಾಡಿದ ವಿಧಾನಸಭೆಯ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ, ನಮ್ಮ ದೇಶ ಮೊದಲು ಎಂಬ ಭಾವನೆ ನಮ್ಮಲ್ಲಿ ನಿರ್ಮಾಣವಾಗಬೇಕು. ಸ್ವಾತಂತ್ರ್ಯ ಪೂರ್ವದಲ್ಲಿ ಹೋರಾಟ ಮಾಡಿದ ನಮ್ಮೆಲ್ಲರ ಹಿರಿಯ ನಾಯಕರುಗಳ ದೇಶಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡರು ಹಾಗೂ ಅವರ ತ್ಯಾಗ ಬಲಿದಾನ ಇತಿಹಾಸದ ಸ್ಫೂರ್ತಿಯ ಪುಟಗಳು ಸದಾ ಪ್ರೇರಣೆಗೊಳ್ಳುವಂತಹದು. ಸ್ವಾತಂತ್ರ್ಯ ಹೋರಾಟದಲ್ಲಿ ಸ್ವಾತಂತ್ರ್ಯ ನಂತರದ ಭಾರತ ಸರ್ಕಾರದಲ್ಲಿ ಅನೇಕ ಹಿರಿಯರು ಅತ್ಯುತ್ತಮವಾದಂತಹ ಕೆಲಸಗಳನ್ನು ಮಾಡಿದ್ದರು. ಅವರ ಸಾಲಿನಲ್ಲಿ ಅಗ್ರಗಣ್ಯನಾಗಿ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರು ನಿಲ್ಲುತ್ತಾರೆ ಎಂದು ಹೇಳಿದರು.

ಆಧಾರ:ಉದಯವಾಣಿ,ದಿನಾಂಕ:01.11.2021

**ಸನ್ಮಾನ್ಯ ದಿನಾಂಕ: 31.10.2021ರಂದು ಸನ್ಮಾನ್ಯ ಸಭಾಪತಿಗಳು ಹಾಗೂ ಸನ್ಮಾನ್ಯ ಸಭಾಧ್ಯಕ್ಷರು ಉಕ್ಕಿನ ಮನುಷ್ಯ ದೇಶದ ಪ್ರಥಮ ಗೃಹ ಸಚಿವರಾದ ಶ್ರೀ ಸರ್ದಾರ್ ವಲ್ಲಭಾಯಿ ಪಟೇಲ್ ಅವರ ಜನ್ಮದಿನದ ಪ್ರಯುಕ್ತ ವಿಧಾನಸೌಧದಲ್ಲಿ ಹಮ್ಮಿಕೊಂಡ "ರಾಷ್ಟ್ರೀಯ ಏಕತಾ ದಿವಸ" ಕಾರ್ಯಕ್ರಮದಲ್ಲಿ ಭಾಗವಹಿಸಿ, ಸರ್ದಾರ್ ವಲ್ಲಭಾಯಿ ಪಾಟೇಲ್ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿ, ಪ್ರತಿಜ್ಞಾ ವಿಧಿ ಬೋಧಿಸಿದ ಸಂದರ್ಭ:**





## 20. ಸಹಾಯಕ ಪ್ರಾಧ್ಯಾಪಕರ ನೇಮಕ ವಯೋಮಿತಿ ಹೆಚ್ಚಳಕ್ಕೆ ಆಗ್ರಹ

ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಸಹಾಯಕ ಪ್ರಾಧ್ಯಾಪಕರ ನೇಮಕಾತಿ ವಯೋಮಿತಿಯನ್ನು ಎರಡು ವರ್ಷ ಹೆಚ್ಚಿಸುವಂತೆ ವಿಧಾನ ಪರಿಷತ್ತಿನ ಸಭಾಪತಿ ಬಸವರಾಜ ಹೊರಟ್ಟಿ ಮುಖ್ಯಮಂತ್ರಿಯವರನ್ನು ಒತ್ತಾಯಿಸಿದ್ದಾರೆ.

ಈ ಕುರಿತು ಮುಖ್ಯಮಂತ್ರಿಗಳಿಗೆ ಪತ್ರವೊಂದನ್ನು ಬರೆದಿರುವ ಅವರು ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಸರ್ಕಾರ ನೇಮಕಾತಿಗೆ ಅಧಿಸೂಚನೆ ಹೊರಡಿಸಿದೆ. ಅಧಿಸೂಚನೆಯಲ್ಲಿ ಅರ್ಜಿ ಸಲ್ಲಿಸಲು ಇರುವ ಕೊನೆಯ ದಿನಾಂಕದೊಳಗಾಗಿ ಈ ಹಿಂದೆ ಸರ್ಕಾರ ನಿಗದಿಪಡಿಸಿದ್ದ ಸಾಮಾನ್ಯ ವರ್ಗ–40 ವರ್ಷ, ಇತರೆ ಹಿಂದುಳಿದ ವರ್ಗ–43 ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ 45 ವರ್ಷದ ವಯೋಮಿತಿಯೊಳಗೆ ಇರಬೇಕು ಎಂದು ಪ್ರಕಟಣೆಯಲ್ಲಿ ತಿಳಿಸಿದೆ.

ಕಳೆದ ಎರಡು ವರ್ಷಗಳಿಂದ ಇಡೀ ಜಗತ್ತನ್ನು ಆವರಿಸಿರುವ ಮಹಾಮಾರಿ ಕೊರೋನಾ ನಾಗರಿಕರ ಜನಜೀವನ ಅಸ್ತವ್ಯಸ್ತಗೊಳಿಸಿದೆ. ಕಳೆದ ಎರಡು ವರ್ಷಗಳಿಂದ ಕೋವಿಡ್ ಮಹಾಮಾರಿ ಕಾರಣದಿಂದ ಸರ್ಕಾರ ಯಾವುದೇ ನೇಮಕಾತಿಗಳು ಮಾಡಿರುವುದಿಲ್ಲ. ಇದರಿಂದ ಹಲವಾರು ಜನ ಪ್ರಾಧ್ಯಾಪಕರ ಹುದ್ದೆಯ ವಯೋಮಿತಿ ಮೀರಿದ್ದಾರೆ. ಆದ್ದರಿಂದ ಪೋಲೀಸ್ ಇಲಾಖೆ ಸೇರಿದಂತೆ ವಿವಿಧ ಇಲಾಖೆಗಳಲ್ಲಿ ನೇಮಕಾತಿ ವಯೋಮಿತಿಯನ್ನು ಹೆಚ್ಚಿಸಿದಂತೆ ಸಹಾಯಕ ಪ್ರಾಧ್ಯಾಪಕರ ನೇಮಕಾತಿ ವಯೋಮಿತಿಯನ್ನು ಸಹ ಹೆಚ್ಚಿಸುವಂತೆ ಸಭಾಪತಿ ಬಸವರಾಜ ಹೊರಟ್ಟಿ ಮುಖ್ಯಮಂತ್ರಿಗಳಿಗೆ ವಿಶೇಷ ಮನವಿ ಮಾಡಿದ್ದಾರೆ.

ಕೋವಿಡ್ ಮಹಾಮಾರಿ ರೋಗದ ಕಾರಣ ವಿಶ್ವವಿದ್ಯಾಲಯ ಧನ ಸಹಾಯ ಆಯೋಗದವರು (ಯು.ಜಿ.ಸಿ) ಸಹ ಪ್ರಾಧ್ಯಾಪಕರ ಹುದ್ದೆಗೆ ಇರುವ ಡಾಕ್ಟರೇಟ್ ಪದವಿಯನ್ನು ಪಡೆಯಬೇಕೆಂಬ ಷರತ್ತನ್ನು ಎರಡು ವರ್ಷಗಳ ಮಟ್ಟಿಗೆ ರಿಯಾಯಿತಿ ನೀಡಿ ಆದೇಶಿಸಿದ್ದಾರೆ. ಈಗ ಸಹಾಯಕ ಪ್ರಾಧ್ಯಾಪಕರ ಹುದ್ದೆಯ ವಯೋಮಿತಿ ಸಡಿಲಿಕೆ ಅರ್ಜಿ ಸಲ್ಲಿಸಲು ವಯೋಮಿತಿ ಮೀರುತ್ತಿರುವ ಹಲವಾರು ಅಭ್ಯರ್ಥಿಗಳು ವಂಚಿತರಾಗುತ್ತಿದ್ದಾರೆ. ಅದ್ದರಿಂದ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನಿಗದಿಪಡಿಸಿರುವ ವಯೋಮಿತಿಯನ್ನು ಎರಡು ವರ್ಷಗಳ ಸಡಿಲಿಕೆ ಮಾಡಬೇಕೆಂದು ಸಭಾಪತಿ ಬಸವರಾಜ ಹೊರಟ್ಟಿಯವರು ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ಉನ್ನತ ಶಿಕ್ಷಣ ಸಚಿವರಿಗೆ ಪತ್ರ ಬರೆದು ಒತ್ತಾಯಿಸಿದ್ದಾರೆ ಕೂಡಲೇ ವಯೋಮಿತಿ ಸಡಿಲಿಕೆಯ ಕುರಿತು ಅಧಿಸೂಚನೆಯನ್ನು ಶೀಘ್ರವೇ ಹೊರಡಿಸಿ ಸಹಸ್ರಾರು ನಿರುದ್ಯೋಗಿ ಯುವಜನರಿಗೆ ನ್ಯಾಯ ಒದಗಿಸುವಂತೆ ಕೋರಿದ್ದಾರೆ.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:05.11.2021

## 21. ಸಮಾವೇಶ : ಸ್ಪೀಕರ್, ಸಭಾಪತಿ ಭಾಗಿ

ಶಿಮ್ಲಾದಲ್ಲಿ ಇಂದಿನಿಂದ ಎರಡು ದಿನಗಳ ಕಾಲ ನಡೆಯಲಿರುವ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮಾವೇಶ ಹಾಗೂ ಶತಮಾನೋತ್ಸವ ಸಮಾರಂಭದಲ್ಲಿ ಸ್ಪೀಕರ್ ವಿಶ್ವೇಶ್ವರ ಹೆಗಡೆ ಕಾಗೇರಿ, ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರು ಪಾಲ್ಗೊಂಡು ವಿಚಾರ ಧಾರೆಯನ್ನು ಮಂಡಿಸಲಿದ್ದಾರೆ. ಸಮ್ಮೇಳನವನ್ನು ಲೋಕಸಭಾಧ್ಯಕ್ಷರಾದ ಓಂ ಬಿರ್ಲಾ ಉದ್ಘಾಟಿಸಲಿದ್ದಾರೆ. ಪ್ರಧಾನಿ ನರೇಂದ್ರ ಮೋದಿ ಸಮಾವೇಶ ಉದ್ದೇಶಿಸಿ ಮಾತನಾಡಲಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

ಆಧಾರ:ಉದಯವಾಣಿ,ದಿನಾಂಕ:07.11.2021

## 22. ಚಳಿಗಾಲ ಅಧಿವೇಶನ ಕಲಾಪ ನೇರ ಪ್ರಸಾರ

ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ಇದೇ ಡಿಸೆಂಬರ್‌ನಲ್ಲಿ ನಡೆಯಲಿರುವ ಚಳಿಗಾಲ ಅಧಿವೇಶನದ ಕಲಾಪವನ್ನು ಸಾರ್ವಜನಿಕರು ವೀಕ್ಷಿಸಲು ಅನುಕೂಲವಾಗುವಂತೆ ಮೊದಲ ಬಾರಿ ವೆಬ್ ಕ್ಯಾಸ್ಟಿಂಗ್ ಮೂಲಕ ನೇರ ಪ್ರಸಾರ ವ್ಯವಸ್ಥೆ ಮಾಡಲಾಗುವುದು.

ಚಳಿಗಾಲದ ಅಧಿವೇಶನ ಹಿನ್ನೆಲೆಯಲ್ಲಿ ವೆಬ್ ಕ್ಯಾಸ್ಟಿಂಗ್ ಮೂಲಕ ನೇರ ಪ್ರಸಾರ ಮಾಡುವ ಕುರಿತು ಸುವರ್ಣ ವಿಧಾನಸೌಧದಲ್ಲಿ ನಡೆದ ಅಧಿಕಾರಿಗಳ ಸಭೆಯಲ್ಲಿ ಸಭಾಪತಿಗಳು ಈ ವಿಷಯ ತಿಳಿಸಿದರು. ವೆಬ್ ಕ್ಯಾಸ್ಟಿಂಗ್‌ಗೆ ಅಗತ್ಯವಾದ ಎಲ್ಲ ಸೌಕರ್ಯಗಳನ್ನು ಒದಗಿಸುವಂತೆ ಅಧಿಕಾರಿಗಳಿಗೆ ಸೂಚನೆ ನೀಡಿದರು. ಪ್ರತಿಯೊಂದು ಇಲಾಖೆಯ ಕಛೇರಿಯಲ್ಲಿ ಇ–ಆಫೀಸ್ ಬಳಕೆ ಮಾಡುತ್ತಿರುವುದರಿಂದ ಇಂಟರ್ನೆಟ್ ಸೇರಿದಂತೆ ಎಲ್ಲ ಸಮರ್ಪಕ ಸೌಲಭ್ಯಗಳನ್ನು ಒಂದು ವಾರದೊಳಗೆ ಒದಗಿಸುವಂತೆ ತಿಳಿಸಿದರು. ಸುವರ್ಣ ವಿಧಾನಸೌಧದ ಸಭಾಂಗಣದಲ್ಲಿ ವಿಡಿಯೋ ಕಾನ್ಫರೆನ್ಸ್ ಮಾಡಲು ವ್ಯವಸ್ಥೆ ಕಲ್ಪಿಸಬೇಕು. ಸಾರ್ವಜನಿಕರು ವಿಧಾನಮಂಡಲ ಅಧಿವೇಶನದ ಕಲಾಪವನ್ನು ನೇರವಾಗಿ ವೀಕ್ಷಿಸಲು ಎಲ್ಲ ಸೌಕರ್ಯಗಳನ್ನು ಒದಗಿಸಬೇಕು ಎಂದು ಅಧಿಕಾರಿಗಳಿಗೆ ಸೂಚಿಸಿದರು.

ಅಧಿವೇಶನ ಎಲ್ಲ ರೀತಿಯಿಂದ ಸುಗಮವಾಗಿ ನಡೆಯಬೇಕು. ಈ ನಿಟ್ಟಿನಲ್ಲಿ ಕೆಲಸಕಾರ್ಯಗಳನ್ನು ತ್ವರಿತವಾಗಿ ಆರಂಭಿಸಬೇಕು ಎಂದರು. ಇದಕ್ಕೂ ಮುಂಚೆ ಪರಿಷತ್ತಿನ ಸಭಾಂಗಣವನ್ನು ಪರಿಶೀಲಿಸಿದ ಸಭಾಪತಿಯವರು ಬೆಳಗಾವಿಯಲ್ಲಿ ಮೊದಲ ಅಧಿವೇಶನ ಆರಂಭಗೊಂಡ ಹಿನ್ನೆಲೆಯನ್ನು ವಿವರಿಸಿದರು.

ಅಧಿವೇಶನದ ಸಿದ್ಧತೆ ಕುರಿತು ಪೂರ್ವಭಾವಿ ಸಭೆಗಳನ್ನು ನಡೆಸಿ ಸೂಕ್ತ ನಿರ್ದೇಶನಗಳನ್ನು ನೀಡಲಾಗುವುದು ಎಂದು ಜಿಲ್ಲಾಧಿಕಾರಿ, ಎಂ.ಜಿ.ಹಿರೇಮಠ ತಿಳಿಸಿದರು.

ವಿಧಾನಪರಿಷತ್ ಕಾರ್ಯದರ್ಶಿ ಮಹಾಲಕ್ಷ್ಮಿ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಲಕ್ಷ್ಮಣ ನಿಂಬರಗಿ, ಲೋಕೋಪಯೋಗಿ ಇಇ ಸಂಜೀವ ಕುಮಾರ್, ಕ್ಷೀರಸಾಗರ, ವಾರ್ತಾ ಇಲಾಖೆಯ ಗುರುನಾಥ ಕಡಬೂರ ಸೇರಿದಂತೆ ಇ–ಗವರ್ನನ್ಸ್, ಎನ್‌ಐಸಿ, ಹೆಸ್ಕಾಂ ಸೇರಿದಂತೆ ವಿವಿಧ ಇಲಾಖೆಗಳ ಅಧಿಕಾರಿಗಳು ಪಾಲ್ಗೊಂಡಿದ್ದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:09.11.2021

## 23. ಭೂಸನೂರಗೆ ಪ್ರಮಾಣ, ಮಾನೆಗಿಲ್ಲ

ಹಾನಗಲ್ ಹಾಗೂ ಸಿಂದಗಿ ಉಪಚುನಾವಣೆಯಲ್ಲಿ ಗೆಲುವು ಸಾಧಿಸಿದ ಇಬ್ಬರು ನೂತನ ಶಾಸಕರ ಪೈಕಿ ಒಬ್ಬರಿಗೆ ಪ್ರಮಾಣವಚನ ಬೋಧಿಸಿದ ಸ್ಪೀಕರ್ ಕಾಗೇರಿ ಅವರು ಇನ್ನೊಬ್ಬರಿಗೆ ಪ್ರಮಾಣವಚನ ಬೋಧಿಸದೇ ತಮ್ಮ ಸ್ವಕ್ಷೇತ್ರಕ್ಕೆ ತೆರಳಿದರು.

ವಿಧಾನಸೌಧದ ಸಮ್ಮೇಳನ ಸಭಾಂಗಣದಲ್ಲಿ ಹಾನಗಲ್ ಶಾಸಕ ಶ್ರೀನಿವಾಸ್ ಮಾನೆ ಮತ್ತು ಸಿಂದಗಿ ಶಾಸಕ ರಮೇಶ್ ಭೂಸನೂರ ಅವರುಗಳ ಪ್ರಮಾಣ ವಚನ ಸ್ವೀಕಾರ ಕಾರ್ಯಕ್ರಮ ಆಯೋಜಿಸಲಾಗಿತ್ತು. ನೂತನ ಶಾಸಕರಿಬ್ಬರೂ ಪ್ರಮಾಣವಚನ ಸ್ವೀಕರಿಸಲು ಸಿದ್ಧವಾಗಿಯೇ ಬಂದಿದ್ದರು. ಪ್ರಮಾಣವಚನ ಬೋಧಿಸಲು ಬಂದಿದ್ದರು. ಆದರೆ, ಕಾರ್ಯಕ್ರಮದಲ್ಲಿ ಗೈರಾಗಿದ್ದ ಡಿ.ಕೆ. ಶಿವಕುಮಾರ್ ಅವರಿಂದ ಶ್ರೀನಿವಾಸ್ ಮಾನೆ ಅವರು ಪ್ರಮಾಣ ವಚನ ಸ್ವೀಕರಿಸದೇ ವಾಪಸ್ಸ್ ಆಗುವಂತಾಗಿದೆ.

ಪ್ರಮಾಣವಚನ ಸ್ವೀಕಾರಕ್ಕೆ ಇನ್ನೇನು ಕೆಲವೇ ಕ್ಷಣ ಇದೆ ಎನ್ನುವಾಗ ಕಾರ್ಯಕ್ರಮಕ್ಕೆ ಡಿ.ಕೆ. ಶಿವಕುಮಾರ್ ಅವರನ್ನು ಕರೆದುಕೊಂಡು ಬರುತ್ತೇನೆ ಎಂದು ಶ್ರೀನಿವಾಸ ಮಾನೆ ವಾಪಸಾಗದೇ ಇದ್ದಾಗ ಅಸಮಾಧಾನಗೊಂಡ ಸ್ಪೀಕರ್, ರಮೇಶ್ ಭೂಸನೂರ ಅವರಿಗೆ ಪ್ರಮಾಣವಚನ ಭೋಧಿಸಿ ಮತ್ತೆ 10 ನಿಮಿಷ ಕಾದರೂ ಮಾನೆ ಬಾರದ ಕಾರಣ ಸ್ಪೀಕರ್ ಕಾರ್ಯಕ್ರಮ ಮುಕ್ತಾಯಗೊಳಿಸುವಂತೆ ಅಧಿಕಾರಿಗಳಿಗೆ ಹೇಳಿ ಅಲ್ಲಿಂದ ಹೊರನಡೆದರು.

ಸ್ವಲ್ಪ ಹೊತ್ತಿನ ಬಳಿಕ ಡಿ.ಕೆ. ಶಿವಕುಮಾರ್ ಅವರೊಂದಿಗೆ ಬಂದ ಶ್ರೀನಿವಾಸ್ ಮಾನೆ, ಸ್ವಲ್ಪ ಹೊತ್ತು ಅಲ್ಲೇ ಕುಳಿತು ಸ್ಪೀಕರ್ ಅವರಿಗಾಗಿ ಕಾದರು. ಆದರೆ, ಸ್ಪೀಕರ್ ಶಿರಸಿ ಕಡೆ ಹೊರಟಿದ್ದಾರೆ ಎಂಬ ಮಾಹಿತಿಯನ್ನು ನೀಡಿದ ಅಧಿಕಾರಿಗಳು, ಪ್ರಮಾಣ ವಚನಕ್ಕೆ ಬೇರೆ ಸಮಯ ನಿಗದಿಪಡಿಸಿಕೊಳ್ಳುವಂತೆ ಮನವಿ ಮಾಡಿದರು. ಹೀಗಾಗಿ ಶ್ರೀನಿವಾಸ ಮಾನೆ, ಪ್ರಮಾಣವಚನ ಸ್ವೀಕರಿಸಲು ಸಾಧ್ಯವಾಗದೇ ವಾಪಸ್ಸಾಗಬೇಕಾಯಿತು.

ಆಧಾರ:ವಿಶ್ವವಾಣಿ,ದಿನಾಂಕ:12.11.2021





**ದಿನಾಂಕ: 11.11.2021 ರಂದು ವಿಧಾನಸೌಧದ ಸಮ್ಮೇಳನ ಸಭಾಂಗಣದಲ್ಲಿ ಸನ್ಮಾನ್ಯ ಸಭಾಧ್ಯಕ್ಷರ ಉಪಸ್ಥಿತಿಯಲ್ಲಿ ಸಿಂದಗಿ ವಿಧಾನ ಸಭಾ ಕ್ಷೇತ್ರದಿಂದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಶ್ರೀ ರಮೇಶ್ ಬೂಸನೂರು ಅವರು ಪ್ರಮಾಣ ವಚನ ಸ್ವೀಕರಿಸುತ್ತಿರುವುದು ಹಾಗೂ ಸನ್ಮಾನ್ಯ ಸಭಾಧ್ಯಕ್ಷರು ಮಾನ್ಯ ಸದಸ್ಯರಿಗೆ ಶುಭ ಕೋರುತ್ತಿರುವ ಸಂದರ್ಭ.**

## 24. ವಚನ ಸಾಹಿತ್ಯ ಮೌಲ್ಯಗಳೆ ಪ್ರಜಾಪ್ರಭುತ್ವದ ಯಶಸ್ಸು

12ನೇ ಶತಮಾನದಲ್ಲಿ ವಿಶ್ವಗುರು ಬಸವಣ್ಣನವರು ನಿರ್ಮಿಸಿದ ಅನುಭವ ಮಂಟಪ ಇಡೀ ವಿಶ್ವದ ಪ್ರಪ್ರಥಮ ಶಾಸನ ಸಭೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದರೆ, ವಚನ ಸಾಹಿತ್ಯದ ಮೌಲ್ಯಗಳೇ ಪ್ರಜಾಪ್ರಭುತ್ವದ ಯಶಸ್ವಿನ ಮೂಲಸೂತ್ರಗಳು ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಪ್ರತಿಪಾದಿಸಿದ್ದಾರೆ. ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆಯುತ್ತಿರುವ 82ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನ ಮತ್ತು ಶತಮಾನೊತ್ಸವ ಸಮಾರಂಭದಲ್ಲಿ ಸದನ ಮತ್ತು ನಾಗರಿಕರ ಬಗ್ಗೆ ಪೀಠಾಸೀನಾಧಿಕಾರಿಗಳ ಜವಾಬ್ದಾರಿ ಕುರಿತು ವಿಚಾರ ಮಂಡಿಸಿದ ಅವರು ಪ್ರಜಾಪ್ರಭುತ್ವ ನೆಲಗಟ್ಟಿನಲ್ಲಿ ರೂಪುಗೊಂಡಿದ್ದ ಅಂದಿನ ಅನುಭವಮಂಟಪ, ಸರ್ವ ಜಾತಿ, ಸಮುದಾಯ ಹಾಗೂ ಲಿಂಗಗಳಿಗೆ ಪ್ರಾತಿನಿದ್ಯ ನೀಡಿ ಪ್ರಜಾಸತ್ತಾತ್ಮಕ ಮೌಲ್ಯಗಳ ವರ್ಧನೆಗೆ ನೆರವಾಗಿತ್ತು ಎಂದರು.

ಆಧಾರ:ವಿಶ್ವವಾಣಿ, ದಿನಾಂಕ:18.11.2021








**ದಿನಾಂಕ: 17.11.2021 ರಿಂದ 19.11.2021 ರವರೆಗೆ ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ 3 ದಿನ ನಡೆದ 82ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿರುವುದು. ಈ ಸಂದರ್ಭದಲ್ಲಿ ಲೋಕಸಭಾಧ್ಯಕ್ಷರಾದ ಶ್ರೀ ಓಂ ಬಿರ್ಲಾ ರವರು ಮತ್ತು ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ಹಾಗೂ ಹಲವು ರಾಜ್ಯಗಳ ಪೀಠಾಸೀನಾಧಿಕಾರಿಗಳು ಉಪಸ್ಥಿತರಿರುವುದು.**

## 25. ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆದ 82ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಮಾನ್ಯ ಸಭಾಪತಿಗಳು ಮಾತನಾಡಿರುವ ಕುರಿತು

### "Responsibility of Presiding Officers towards- the Constitution, the House and the People"

****

I, Basavaraj Shivalingappa Horatti, the Chairman of Karnataka Legislative Council is glad to address the august gathering of "**All India Presiding Officers**". At the outset I would like to express my heartfelt gratitude for providing this opportunity and to express few of my thoughtson this great occasion.

As we all aware of Presiding Officer's role is to facilitate smooth and effective way of conducting house business. Parliamentary or State Assemblies or Councils, as the main forum for politicaldebate and the expression views among the people's representatives. In this connection speaker/chairman play vital role in smooth functioning of houses concerned. Issues and discussions should be weighed based on the public interest and pro-development but not be measured by the majority, seldom important issues masked and not arrayed because of lack of majority. Therefore, the Presiding Officer has a key role to play and to differentiate between important issues with public interest and such issues has to be given scope for detailed discussion irrespective of party to which such member relates, and then only, the spirit of the constitution will sustain.

Assembly or Council being collective governing body, it is always filled by "political leaders", who elects Chairperson/Speaker and he shallstrive to be impartial and politically neutral."If a Presiding Officer goes down into the political arena, he alsobrings the Assembly and the parliamentary regime down into the arena. Presiding Officer become the instrumentof the House, and he should not become a pawn in political arguments, rather uphold the spirit of democracy in all walks of house proceedings without giving much of scope to exchange of political arguments.

The Constitution of India is the supreme soul of India. The document lays down the framework that demarcates fundamental political code, structure, procedures, powers, and duties of government institutions and sets out fundamental rights, directive principles, and the duties of citizens. It imparts constitutional supremacy but not parliamentary supremacy, since it was created by a constituent assembly rather than Parliamentand was adopted by its people with a declaration in its preamble. Therefore, Parliament cannot override the constitution. Eventually, the primary role of Presiding Officer is to manage the house business which should no way cross the boundary line of overriding of constitutional values.

The Presiding Officer shall always choose to facilitate smooth and diplomatic avenues which enable each and every member to utilize the opportunitiesin the house through important devices like Question Hour, Zero Hour, Half-an-Hour Discussion, Short Notice Questions and Questions to Private Members, Calling Attentionetc., so as to ensure the productivity of the House Business.

As we are all witnessing that, now-a-days it is almost a trend that most of the legislators indulged inunnecessary arguments and heated discussions on futile issues between the members of ruling and opposition parties, whichswallowsmuch of the business hourswhichindeed waste of precious house business. Recurrence of such incidents, without giving much scope for healthy discussion often led to house disorder. Here comes the crucial role of the Presiding Officer to covert the chaos to healthy discussion.

To win over such situations, the Presiding Officer may resort to call Business Advisory Committee (BAC) meetings frequently to ease out such deadlocks and strive for situation back to track.

Lastly, out of my experience gained over a period of 42 years of my participation in the Legislature House Business, I have shortlisted few measures/strategies to be adopted for **effective** and **productive** house business proceedingswhich are listed as follows;

1) Appraising expected etiquettes in the house to the members through Business Advisory Committee (BAC) in turn to their respective party members
2) Proper training/orientation sessions to be provided to new legislatorsso as to empowering them to participate in house business proactively
3) Periodically rewarding/awarding the members for productive and quality discussion in the house
4) Strict adherence to complete the scheduled business in the same day without giving any scope for carry forward the same for next day

5) Regular announcement by the presiding officer at the end of the day's business about (i) **names of member** who are responsible for unexpected behavior and (ii) **total unproductive business hours** thereof in the house

6) Citizen Friendly Sessions(CFS) -by way of accepting question/issues which are of larger public interest directly from Citizen to Session (C2S) which are not raised by any of the members through Mobile App/What's app/e-mail etc., specifically designed for that purpose

Precisely, Presiding Officer should take all possible measure to ensure both quality and productivity out of each and every day house business to ensure the constitutional obligation in general and uphold the dignity of the house in particular.

**Jai Hind, Jai Karnataka**

## ಶಿಮ್ಲಾದಲ್ಲಿ 82 ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನ ಮತ್ತು ಶತಮಾನೋತ್ಸವ ಪ್ರಜಾಪ್ರಭುತ್ವದ ಮೌಲ್ಯಗಳ ಉಳಿವಿಗೆ ಬಸವಣ್ಣನವರ ಅನುಭವ ಮಂಟಪವೇ ಅಡಿಪಾಯ:

### ವಿಧಾನಪರಿಷತ್ ಸಭಾಪತಿ ಮಾನ್ಯ ಶ್ರೀ ಬಸವರಾಜ ಹೊರಟ್ಟಿ.

12 ನೇ ಶತಮಾನದಲ್ಲಿ ವಿಶ್ವಗುರು ಬಸವಣನವರು ನಿರ್ಮಿಸಿದ ಅನುಭವ ಮಂಟಪ ಇಡೀ ವಿಶ್ವದ ಪ್ರಪ್ರಥಮ ಶಾಸನ ಸಭೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದು, ವಚನ ಸಾಹಿತ್ಯದ ಮೌಲ್ಯಗಳೇ ಪ್ರಜಾಪ್ರಭುತ್ವದ ಯಶಸ್ಸಿನ ಮೂಲ ಸೂತ್ರಗಳಾಗಿವೆ ಎಂದು ವಿಧಾನಪರಿಷತ್ ಸಭಾಪತಿ ಮಾನ್ಯಶ್ರೀ ಬಸವರಾಜ ಹೊರಟ್ಟಿ ಪ್ರತಿಪಾದಿಸಿದ್ದಾರೆ.

ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆಯುತ್ತಿರುವ 82ನೇ ಅಖಿಲ ಭಾರತ ಪೀಠಾಸಿನಾಧಿಕಾರಿಗಳ ಸಮ್ಮೇಳನ ಮತ್ತು ಶತಮಾನೋತ್ಸವ ಸಮಾರಂಭದ ಉದ್ಘಾಟನಾ ಸಮಾರಂಭದ ಬಳಿಕ "ಸಂವಿಧಾನ, ಸದನ ಮತ್ತು ನಾಗರೀಕರ ಬಗೆಗೆ ಪೀಠಾಸಿನಾಧಿಕಾರಿಗಳ ಜವಾಬ್ದಾರಿ" ಕುರಿತು ವಿಚಾರ ಮಂಡಿಸಿದ ಮಾನ್ಯಶ್ರೀ ಬಸವರಾಜ ಹೊರಟ್ಟಿ, "ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು" ಎಂಬ ಸಂದೇಶ ಸಾರುವ ಸಾರ್ವಕಾಲಿಕ ವಿಚಾರಧಾರೆ ಅಡಿಯಲ್ಲಿ ನಿರ್ಮಾಣ ಗೊಂಡಿದ್ದ ಬಸವಣ್ಣನವರ ಅನುಭವ ಮಂಟಪ, ಪ್ರಜಾಪ್ರಭುತ್ವ ಪರಿಕಲ್ಪನೆಗೆ ಮೂಲ ಅಡಿಪಾಯವಾಗಿದೆ. ತಮ್ಮ ವಚನಗಳ ಮೂಲಕ ಸಾಮಾಜಿಕ ಸಬಲೀಕರಣ, ಸಮಾನತೆ, ಸೌಹಾರ್ದತೆ, ಸಹೋದರತ್ವ ಕುರಿತು ಇಡೀ ಸಮಾಜಕ್ಕೆ ಸಂದೇಶ ಸಾರಿರುವ ಅವರ ಸಂದೇಶಗಳು ಇಂದಿನ ಪ್ರಜಾಪ್ರಭುತ್ವದ ಮೂಲ ಆಶಯಗಳಾಗಿ ರೂಪಗೊಂಡಿವೆ. ಕ್ರಾಂತಿಕಾರಿ ಬಸವಣ್ಣನವರು ಕರ್ನಾಟಕದವರು ಎಂಬುದು ಹೆಮ್ಮೆಯ ವಿಷಯವೆಂದು ಸಂತಸ ವ್ಯಕ್ತಪಡಿಸಿದರು.

ಪ್ರಜಾಪ್ರಭುತ್ವ ನೆಲಗಟ್ಟಿನಲ್ಲಿ ರೂಪುಗೊಂಡಿದ್ದ ಅಂದಿನ ಅನುಭವಮಂಟಪ, ಸರ್ವ ಜಾತಿ, ಸಮುದಾಯ ಹಾಗೂ ಲಿಂಗಗಳಿಗೆ ಪ್ರಾತಿನಿಧ್ಯ ನೀಡಿ ಪ್ರಜಾಸತ್ತಾತ್ಮಕ ಮೌಲ್ಯಗಳ ವರ್ಧನೆಗೆ ಬೀಜಾಂಕುರ ನೀಡಿದ್ದು, ಇಂದಿನ 21 ನೇ ಶತಮಾನದಲ್ಲಿ ಅದು ಹೆಮ್ಮರವಾಗಿ ಬೆಳೆದಿದೆ. ಬಸವಣ್ಣನವರ ಅರಿವು, ಆಚಾರ ಮತ್ತು ಅನುಭವದ ತತ್ವಗಳ ಆಧಾರದಲ್ಲಿ ನಿರ್ಮಾಣಗೊಂಡಿರುವ ಪ್ರಜಾಪ್ರಭುತ್ವ ವ್ಯವಸ್ಥೆ, ಭಾರತವು ಸೇರಿದಂತೆ ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಯಶಸ್ವಿಯಾಗಿರುವುದು ಸಂತಸದ ಸಂಗತಿ ಎಂದು ಹೊರಟ್ಟಿ ತಿಳಿಸಿದರು.

ತಮ್ಮ 4 ದಶಕಗಳ ಶಾಸಕಾಂಗ ಅನುಭವ ಕುರಿತು ಮಾಹಿತಿ ಹಂಚಿಕೊಂಡ ಸಭಾಪತಿ ಮಾನ್ಯ ಬಸವರಾಜ ಹೊರಟ್ಟಿ, ಸದನಗಳ ಯಶಸ್ಸು ಮತ್ತು ಸಾರ್ಥಕತೆ ಬಗ್ಗೆ  ಹಲವು ಸಲಹೆ ನೀಡಿದರು. ಸದನದ ಕಾರ್ಯಕಲಾಪಗಳ ಗುಣಮಟ್ಟ ಹಾಗೂ ನಿಗದಿತ ಕಾರ್ಯಸೂಚಿ ಕುರಿತಂತೆ ಸಲಹೆ ನೀಡಿದ ಅವರು, ಕಲಾಪ ಸಲಹಾ ಸಮಿತಿಯಲ್ಲಿ ಎಲ್ಲಾ ನಿರ್ದಿಷ್ಟ ವಿಷಯಗಳ ಕುರಿತಾಗಿ ಸದನದ ಘನತೆ ಹೆಚ್ಚಿಸುವ ನಿಟ್ಟಿನಲ್ಲಿ ನಿರ್ಣಯ ತೆಗೆದುಕೊಳ್ಳುವ ಅವಶ್ಯಕತೆ ಇದೆ. ಕಲಾಪಗಳಲ್ಲಿ ಸದಸ್ಯರ ವರ್ತನೆ, ವಿಷಯ ಮಂಡನೆ ಹಾಗೂ ಸಹಭಾಗಿತ್ವ

ಕುರಿತು ಕಾಲಕಾಲಕ್ಕೆ ಸೂಕ್ತ ತರಬೇತಿಯ ಅವಶ್ಯಕತೆಯಿದೆ. ಸದನದಲ್ಲಿ ಸಮರ್ಥವಾಗಿ ವಿಷಯ ಮಂಡಿಸಿ ಸಕ್ರಿಯವಾಗಿ ಪಾಲ್ಗೊಳ್ಳುವ ಸದಸ್ಯರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಿ ಕಲಾಪದ ಘನತೆ ಹೆಚ್ಚಿಸಲು ಕ್ರಮ ಕೈಗೊಳ್ಳಬೇಕಿದೆ. ಕಾರ್ಯ ಸೂಚಿಯ ಪ್ರಕಾರ ಅಂದಿನ ವಿಷಯ ಕುರಿತು ಅಂದೇ ಚರ್ಚೆ ನಡೆಸಿ ಮುಕ್ತಾಯಗೊಳಿಸಬೇಕು. ಹಾಗೂ ಸದನದ ಕಲಾಪಗಳ ಸಂಧರ್ಭದಲ್ಲಿ ಅನಗತ್ಯವಾಗಿ ಗೊಂದಲ, ಗದ್ದಲ ಉಂಟುಮಾಡುವುದು, ಅನಾವಶ್ಯಕವಾಗಿ ಸದನದ ಬಾವಿಗೆ ಇಳಿದು ಕಲಾಪಕ್ಕೆ ತೊಂದರೆ ಉಂಟುಮಾಡುವುದು. ಪ್ರಚಾರಕ್ಕಾಗಿ ಧರಣಿ, ಪ್ರತಿಭಟನೆ, ಸದನ ಬಹಿಷ್ಕಾರ ಮುಂತಾದ ಅಸಂವಿಧಾನಿಕ ಕಾರ್ಯಗಳನ್ನು ನಡೆಸಬಾರದು. ಹಾಗೂ ಸದನದ ಒಳಗಡೆ ಬಿತ್ತಿ ಚಿತ್ರಗಳನ್ನು ಪ್ರದರ್ಶಿಸಿ ಘೋಷಣೆಗಳನ್ನು ಕೂಗುವ ಪರಿಪಾಠಕ್ಕೆ ಇತೀಶ್ರಿ ಹಾಡುವುದು ಸೇರಿದಂತೆ ಹಲವು ರೀತಿಯ ಸಲಹೆಗಳನ್ನು ಬಸವರಾಜ ಹೊರಟ್ಟಿ ಸಭೆಯಲ್ಲಿ ನೀಡಿ, ಅವುಗಳ ಪಾಲನೆ ಕುರಿತಂತೆ ಪೀಠಾಸೀನಾಧಿಕಾರಿಗಳ ಸಭೆ, ನಿರ್ಣಯ ಸ್ವೀಕರಿಸಿ, ಪ್ರಜಾಪ್ರಭುತ್ವದ ಸಾರ್ಥಕತೆಗೆ ಮುಂದಡಿ ಇಡಬೇಕೆಂದು ಮನವಿ ಮಾಡಿದರು.

ಇದಕ್ಕೂ ಮೊದಲು 2 ದಿನಗಳ 82 ನೇ ಅಖಿಲ ಭಾರತ ಪೀಠಾಸಿನಾಧಿಕಾರಿಗಳ ಸಮ್ಮೇಳನವನ್ನು ಉದ್ದೇಶಿಸಿ ಪ್ರಧಾನಿ ನರೇಂದ್ರ ಮೋದಿ ಮಾತನಾಡಿದರು. ಲೋಕಸಭಾಧ್ಯಕ್ಷ ಓಂ ಬಿರ್ಲಾ ಹಿಮಾಚಲ ವಿಧಾನ ಸಭಾಧ್ಯಕ್ಷ, ವಿಪಿನ್ ಸಿಂಗ್ ಪರ್ಮಾರ್, ಹಿಮಾಚಲ ಪ್ರದೇಶದ ಮುಖ್ಯಮಂತ್ರಿ ಜಯರಾಮ ಠಾಕೂರ್, ರಾಜ್ಯಸಭೆಯ ಉಪಸಭಾಪತಿ ಹರಿವಂಶ್ ನಾರಾಯಣ ಸಿಂಗ್, ಕರ್ನಾಟಕ ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ ಕಾಗೇರಿ ಸೇರಿದಂತೆ ದೇಶದ ಎಲ್ಲಾ ರಾಜ್ಯಗಳ ವಿಧಾನಸಭಾಧ್ಯಕ್ಷರು, ಎಲ್ಲಾ ರಾಜ್ಯಗಳ ಸಭಾಪತಿಗಳು ಪಾಲ್ಗೊಂಡಿದ್ದರು.

## 26. ಕಲಾಪದಲ್ಲಿ ದುರ್ವರ್ತನೆ ತಡೆಗೆ ನೀತಿ ಸಂಹಿತೆ ರೂಪಿಸಲು ಸಕಾಲ

ಸಂಸತ್ತು ಮತ್ತು ಶಾಸನ ಸಭೆಗಳಲ್ಲಿ ಸುಗಮ ಕಲಾಪ ನಡೆಸಲು ಸದಸ್ಯರಿಗೆ ನೀತಿ ಸಂಹಿತೆ ರೂಪಿಸಲು ಇದು ಸಕಾಲ ಎಂದು ಸ್ಪೀಕರ್ ವಿಶ್ವೇಶ್ವರ ಹೆಗಡೆ; ಕಾಗೇರಿ ಪ್ರತಿಪಾದಿಸಿದ್ದಾರೆ.

ಹಿಮಾಚಲದ ಶಿಮ್ಲಾದಲ್ಲಿ ನಡೆಯುತ್ತಿರುವ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಸಂಸದೀಯ ವ್ಯವಸ್ಥೆ ಕುರಿತು ಮಾತನಾಡಿ ಅಶಿಸ್ತು ಮತ್ತು ಸದಸ್ಯರ ಅಡ್ಡಿಪಡಿಸುವ ವರ್ತನೆಯ ಸದನದ ನೈಜ ಉದ್ದೇಶದ ಅಪಹರಣ ಮಾಡಿದಂತೆ ಎಂದರು.

ಕಲಾಪದಲ್ಲಿನ ಕೋಲಾಹಲ ಮತ್ತು ಅಹಿತಕರ ಘಟನೆ ಕೊನೆಗಾಣಿಸದಿದ್ದರೆ ಪ್ರಜಾಸತ್ತತ್ಮಕ ಸಂಸ್ಥೆಗಳ ವಿಶ್ವಾಸಾರ್ಹತೆ, ಘನತೆ ಸಂಸದೀಯ ಗುಣಮಟ್ಟದ ಅಧ:ಪತನಗೊಳ್ಳುತ್ತದ ಎಂದು ಎಚ್ಚರಿಸಿದರು.

ಶಾಸನಸಭೆಗಳಲ್ಲಿನ ಶಿಸ್ತು ಮತ್ತು ಸದನದ ಗೌರವ ಕಾಪಾಡುವ ಜವಾಬ್ದಾರಿ ಸದನದ ನಾಯಕ ಮತ್ತು ಮುಖ್ಯ ಸಚೇತಕರು ಹೊರಬೇಕು. ಹಾಲಿ ಇರುವ ಸದನ ಸಮಿತಿಗಳ ಕಾರ್ಯನಿರ್ವಹಣೆಯಲ್ಲಿ ಸುಧಾರಣೆಗಳನ್ನು ತರುವ ಕುರಿತು ಮರು ಚಿಂತನೆ ನಡೆಸುವ ಅಗತ್ಯವಿದೆ ಎಂದು ಹೇಳಿದರು. ಪಕ್ಷಾಂತರ ನಿಷೇಧ ಕಾಯಿದೆ ತಿದ್ದುಪಡಿ ವಿಚಾರದಲ್ಲಿ ರಚಿತವಾದ ರಾಜಸ್ಥಾನ ವಿಧಾನಸಭಾಧ್ಯಕ್ಷರಾದ ಸಿ.ಪಿ. ಜೋಷಿ ನೇತೃತ್ವ. ಸಹಿತ ನಾಲ್ವರು ಸದಸ್ಯರ ಸಮಿತಿಯ ಶಿಫಾರಸ್ಸನ್ನು ಸಮ್ಮೇಳನದ ಅಧ್ಯಕ್ಷರು ಪರಿಗಣಿಸಬೇಕು ಎಂದು ಮನವಿ ಮಾಡಿದರು.

ಆಧಾರ:ವಿಜಯ ಕರ್ನಾಟಕ,ದಿನಾಂಕ:18.11.2021

**ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿರವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: 17.11.2021 ರಿಂದ 19.11.2021ರವರೆಗೆ ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆದ 82ನೇ ಅಖಿಲ ಭಾರತೀಯ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಸನ್ಮಾನ್ಯ ಲೋಕಸಭಾ ಅಧ್ಯಕ್ಷರು ಹಾಗೂ ಇತರೆ ಪೀಠಾಸೀನಾಧಿಕಾರಿಗಳೊಂದಿಗೆ.**






**27. ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆದ 82ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಮಾನ್ಯ ಸಭಾಧ್ಯಕ್ಷರು ಮಾತನಾಡಿರುವ ಕುರಿತು**

**Subject:- "Responsibility of Presiding Officers towards the Constitution, the House and the People**".

******

Our esteemed Chairman of this **august** body of Presiding Officers Conference, Hon'ble Speaker, Lok Sabha Sri Ombirlaji, Sri Vipin Singh Parmar, Hon'ble Speaker, Himachal Pradesh Legislative Assembly, Hon'ble Presiding Officers and one and all present here and it is a matter of prestige and immense pleasure on my part to participate in this memorable Conference of **the Galaxy of** Presiding Officers on the eve of Centenary

celebrations of All India Presiding Officers Conference here in Shimla, the Capital City of Himachal Pradesh, the **“Dev Bhoomi”** and I thank the Hon’ble Chairman for giving me **this** opportunity to **express my views** on the subject **“Responsibility of Presiding Officers towards the Constitution, the House and the People**”.

India being the World’s Largest Democracy, the Central and State/Union Territory Legislatures occupy a pivotal Constitutional position in the Federal political system. Hence our Legislatures possess such powers under the constitution are immense and discharge the role which a sovereign legislature does in any other country. Such a supreme body is being presided by the Speaker/the Presiding Officer who is popularly known as “the Representative of the Elected Representative of the House”. The incumbent of the office of the Speaker performs several functions including the following **three** primary functions:

1. **First,** the Speaker presides over the sessions in the House and is constitutionally responsible for enforcing and interpreting all rules and practices for maintaining order, decency, dignity and decorum in conducting the proceedings of the House. .
2. **Second,** the Speaker is Chief Administrative Officer of the Secretariat.
3. **Third,** the Speaker is the Spokesperson of the House in its relations with authorities or persons outside Parliament / Legislature. As a presiding officer he has to do a tight rope-walking and has to use great discretion for developing the healthy democratic traditions by maintaining the neutrality and sanctity of the office of the Speaker during the sessions.

We are all aware that we the presiding officers are the custodians and guardians of the rights and privileges of the House and its members, but, we as Presiding Officers have to find a permanent solution to overcome many obstacles including disruptions, indecent behaviour by members, etc and conduct the proceedings of the House as per the Constitution and in accordance with the rules of procedure, practices, conventions so as to uphold the Parliamentary system of Democracy. In this direction I feel, as Presiding Officers, we have to responsibly perform the following duties towards Legislature / Parliament:

1. To uphold the Spirit of the Constitution of India.
2. To ensure Accountability of the Executive.
3. Control over the Budget.
4. Law Making Procedure& Committee System:
5. To self regulate itself for Good Governance.
6. To regulate and control the Role of the Legislators.
7. Advisory Role in Policy Making Process.
8. Constitutional Amendments & its Ratification.

Even though we have the above well defined Roles & Responsibilities of the Legislature, with the recent decline in the Parliamentary Values and more often with the

Elected Representatives playing to the galleries, the people of India have started feeling that "INDIA IS A PARLIAMENTARY DEMOCRACY WITHOUT A FUNCTIONING PARLIAMENT". This public opinion is caused due to the following problems which are a hurdle to the Constructive working of our Parliamentary Democracy:

1. Lack of interest and attendance of Members to Orientation Sessions on Parliamentary/Legislative Practice and Procedure"
2. Members of the Opposition Opposing for the sake of being seated in the Opposition.
3. Members entering Well of the House and Protesting/displaying Placards/ Shouting slogans, destruction of House Property, etc.,.
4. Members participating on various discussions including on Bills without proper preparation on the subject matter.
5. Members using the House as a Political Battleground to score Political mileage.
6. Members casting aspersions against each other and also against the Chair, etc.
7. Members following the Rules of the House in its Breach than its Adherence/Compliance.
8. Members deviating from the subject matter discussion and using dilatory tactics and causing waste of precious time of the House.
9. Ministers coming unprepared during Question Hour Sessions and giving either evasive replies or answering without properly ascertaining the current/latest status on the issue raised and without updating facts and figures/statistics.
10. Govt's Hasty introduction, consideration and passing of Bills without giving qualitative time for debate/ deliberations.

In the backdrop of the above mentioned problems faced by the Legislature and the recent Sessions of the Legislature being eclipsed by disruptions, pandemonium, chaos, political vendetta, members trying to convert legislature into a Political Parties Battleground, etc., are the problems faced by the presiding officers to deliver their duties and responsibilities enshrined in the constitution and the rules there under.

I wish to record the role of the Speaker of the House with the statement of Father of the Parliament Dada Saheb GV Mavalankar. **".... It is clear that democracy is a mirage if parliamentary practice is not limited to counting heads or hands. If we give importance to the majority alone, the germs of totalitarian and rebellious germs will become waterless. If we do not, we will help to develop tolerance, patience, freedom of speech and rational temperament and nurture democratic sovereignty."** The role of the Presiding Officer to ensure that Parliamentary and State Legislatures Constitutionally function in a peaceful and effective manner for which constructive co-operation of both the ruling and opposition parties is very essential. Presiding Officers are the Custodians/Guardians and Guides of the Rules and Procedures and not the violators of the rules. The Speaker of the Legislature is regarded as the true defender of Indian parliamentary democracy. Although they are usually elected under the banner of a political party, they have

to discharge their duties impartially and without any fear or favour or ill-will since they are a Quasi-Judicial Constitutional Authority.

As a Presiding Officer I suggest following points for peaceful conduct of the business of the House without any kind of disruption, unnecessary protests/ walkouts and to put an end to the unsavory saga of disruptions in the Legislatures so as to enhance the quality and dignity of our parliamentary democracy by restoring credibility of its Institutions.

1. Extending the time limit of the session of legislative Assemblies.
2. Conducting four sessions in a year (January to March: Budget session, April to June: summer session, July to September; Monsoon session, and October to December: winter session) instead of three sessions at present so as to provide enough opportunity to the members to participate in the business of the House.
3. By bringing suitable amendment to the Rules of Procedure and Conduct of Business for taking stringent action against the members who disrupt the proceedings of the House. (like automatic suspension, deduction of allowances etc.,)
4. Strict enforcement of Rules of Procedure and Conduct of Business in the House to prevent pandemonium and disruptions of the proceeding of the House.
5. To fix a separate day and time in the House for debating on issues proposed by the opposition parties. (Opposition Parties Business Day)
6. The leaders/ chief whips of respective parties have to bear the responsibility of maintaining the discipline, modesty and dignity and honour of the House in Legislature/ Parliament.
7. To guarantee Copies of Bills are circulated to all Members in advance and also to guide and guard the Legislative Business of the House by ensuring that Members allow Discussions to replace Disruptions in the House.
8. In addition to the above I am of the opinion that a rethink should be made in the working of the existing committee system in order to bring effective reforms in the administration viz., in the policy of the Government, Utilization of public money etc., in the cause of public at large and to the effect that the recommendations of the committees should be implemented within a specific period.

With these words I conclude. I once again thank the chairman, Hon’ble Speaker, Lok Sabha for giving me an opportunity to place my views and I myself and on behalf of Karnataka Legislature thank the Hon’ble Speaker, Himachal Pradesh Legislative Assembly, Secretary, Himachal Pradesh Legislative Assembly and one and all who have involved in hosting this conference.

**Jai Hind,**

**Jai Karnataka.**

**Subject:- "Journey of a century – Evaluation and the way forward**".

******

Our esteemed Chairman of this **august** body of Presiding Officers Conference, Hon'ble Speaker, Lok Sabha Sri Om Birla ji,Sri Vipin Singh Parmar, Hon'ble Speaker, Himachal Pradesh Legislative Assembly, Hon'ble Presiding Officers and one and all present here and it is a matter of prestige and immense pleasure on my part to participate in this memorable Conference of **the** Presiding Officers on the eve of Centenary celebrations of All India Presiding Officers Conference here in Shimla, the Capital City of Himachal Pradesh, the **"Dev Bhoomi"** and I thank the Hon'ble Chairman for giving me **this** opportunity to **express my views** on the **"Journey of a Century – Evaluation and the Way Forward**".

In a Parliamentary Democracy like ours the role of Presiding Officers is the most important one. We are all aware that the Presiding Officers are regarded as the "Guardian" of the Rights and Privileges of the Members as well as the very fundamentals of our Federal Parliamentary Polity. On this occasion let's all remember the name of **Hon'ble Sir Frederick Whyte** under whose Chairmanship the First meeting of the Conference of Presiding Officers of the Provincial Legislatures was held in September 1921 in Shimla and the name of free India's First Speaker, the Late Sri Ganesh Vasudev Mavalankar, the father of Lok Sabha. The object of these conferences was well described in resolution of December 1923, was to secure "The appropriate Co-ordination of parliamentary procedure throughout India". During these 100 years of the Conference, the Presiding Officers have discussed matters of crucial importance which are very well relevant and necessary in the functioning of our representative Institutions Parliament / Legislatures. The importance of these conferences well said by Vithalbhai J Patel first elected Speaker of the Central Legislative Assembly in his opening Speech at the Conference on 6th January 1926 said

> "We must remember that we have to create sound traditions of our own, and in doing so, we should always be willing to follow the House of Commons whenever possible and desirable, taking care at the same time not to slavishly imitate British Parliamentary traditions whenever they do not conform to Indian needs and Indian conditions. Such a task is well worth our earnest efforts and I trust that we shall all succeed in reconciling the desire for freedom of expression and action which we felt and which our fellow-members feel, with that sense of responsibility which should characterize all activities of country's Legislature."

It is very high time for all of us to remember that, it was only with the attainment of Independence and establishment of Parliamentary form of Government at the center as well as in the States, the Presiding Officers acquired greater significance. The late Sri G.V.Mavalankar, was elected as the Speaker of the Central Legislative Assembly in 1946 and later went on to became the first Speaker of the Lok Sabha and guided destiny of these conferences from 1946 to 1956 and he became the instrumental in strengthening the foundations of parliamentary democracy in India.

Recognizing the importance of these conferences Speaker Mavalankar favored the holding of the Conference Annually and he made his intentions clear while addressing the Conference held at Shillong in November 1955, observed:

> "It is necessary for Presiding Officers of Legislatures to meet annually to compare notes, take stock and discuss particular difficulties that arise from time to time in the working of democracy and gain from mutual experience and also to strengthen the conviction that the precedents that we are setting from time-to-time are sound ones. Such meetings are also necessary for personal contacts which inspire us to stand together and work with collective thought and strength for the advancement of democracy not merely in form but in substance."

Since then**,** the conferences are being held and in this journey of a century, the conferences have played a significant role in the evolution of parliamentary democracy in India, i.e. by discussing the functioning of its Institutions / its Conventions and Rules of Practice &Procedure, covering a wide spectrum of subjects like:

1. Independent Legislature Secretariats.
2. Discipline and Decorum in the House.
3. Harmonious relationship between the Legislature and Judiciary.
4. Executive accountability to Legislature.
5. The search for corrective measures to make Anti-Defection law more effective, etc.

Here I would like to mention that the recommendations made and the resolutions passed/ decisions taken/ conclusions arrived in these conferences some are implemented, some are in practice and some are pending implementation. I intend to bring to the kind notice of this august body of Presiding Officers by quoting following instances where the important decisions are still pending.

1. **The Independence of the Legislature Secretariat**: The Subject of granting Independence Status and Functional Financial Autonomy to the Legislature Secretariat has been discussed several times since 1921 and resolutions were passed, but still the full independent status has not been achieved so far as the Karnataka Legislature is concerned. Now, for each and every proposal we have to take the opinion / consent of the finance department. I am very much thankful to the Hon'ble Speaker Lok Sabha for having constituted the committee regarding financial autonomy of the Legislature Secretariats under the chairmanship of Dr.C.P.Joshi, Hon'ble Speaker, Rajasthan Legislative Assembly and in which I am also a member. I urge the Hon'ble Chairman of the conference and the Presiding Officers present here to accept the said report and to see that the recommendations of the committee is accepted in toto and implemented at the earliest.

2. **Discipline and Decorum in Parliament / Legislature**: This subject has also been discussed in the conferences with different headings and resolutions were passed, decisions were taken. I intend to quote the resolution passed in the conference of **2008** in which the conference has urged to formulate a **CODE OF CONDUCT** based on a wide consensus to ensure that the Legislators adhere to the prescribed norms of **Code OF Conduct** of the House. But the result is that the Code of Conduct is yet to be formulated and hence disruptions and unruly behaviour of the Members have hijacked the Sessions many a times thus resulting in forced adjournments of the House which seem to have become the norm/order of the day.

   Therefore, I urge that whatever resolutions / decisions that may emerge out of such conferences should and must be implemented both in letter and spirit without delay thus putting an end to the unsavory saga of Disruptions& Pandemonium in the Legislatures so as to enhance the quality and dignity of our parliamentary democracy by restoring the credibility of Democratic Institutions.

   In the light of the above mentioned prevailing scenario, I hereby suggest that the decisions / resolutions / conclusions of the collective wisdom of this august body of presiding officers should be implemented at the earliestand in order to oversee the implementations of the same within a specific period a Monitoring Committee of Presiding Officers may be constituted and it is expedient that a decision is taken in this regard at this conference itself. By taking such a decision I am sure that we are giving justice to our participation in this conference. With these words I conclude. I once again thank the chairman, Hon'ble Speaker Lok Sabha for giving me an opportunity to place my views and I myself and on behalf of Karnataka Legislature thank the Hon'ble Speaker, Himachal Pradesh Legislative Assembly, Secretary, Himachal Pradesh Legislative Assembly and one and all who have involved in hosting this conference.

**Jai Hind,**

**Jai Karnataka.**

## 28. ಡಿಸೆಂಬರ್ 13 ರಿಂದ ಬೆಳಗಾವಿಯಲ್ಲಿ ವಿಧಾನಮಂಡಲ ಅಧಿವೇಶನ

ರಾಜ್ಯ ವಿಧಾನಮಂಡಲದ ಚಳಿಗಾಲದ ಅಧಿವೇಶನ ಡಿಸೆಂಬರ್ 13 ರಿಂದ ಗಡಿ ಜಿಲ್ಲೆ ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ನಡೆಸುವ ಬಗ್ಗೆ ರಾಜ್ಯ ಸರ್ಕಾರ ಅಧಿಸೂಚನೆ ಹೊರಡಿಸಿದೆ.

ಅಧಿವೇಶನವನ್ನು ಡಿಸೆಂಬರ್ 13 ರಿಂದ ಆರಂಭಿಸುವ ಕುರಿತು ರಾಜ್ಯಪಾಲರು ಅನುಮೋದನೆ ನೀಡಿದ ಹಿನ್ನೆಲೆಯಲ್ಲಿ ಈ ಅಧಿಸೂಚನೆ ಹೊರಬಿದ್ದಿದೆ. ಕಳೆದ ಸಚಿವ ಸಂಪುಟ ಸಭೆಯಲ್ಲಿ ಡಿಸೆಂಬರ್ 13 ರಿಂದ 24ರವರೆಗೆ 10 ದಿನಗಳ ಕಾಲ ಚಳಿಗಾಲದ ಅಧಿವೇಶನ ನಡೆಸಲು ತೀರ್ಮಾನಿಸಲಾಗಿತ್ತು.

2019ರಲ್ಲಿ ಬಿಜೆಪಿ ಅಧಿಕಾರಕ್ಕೆ ಬಂದ ನಂತರ ಬೆಳಗಾವಿಯಲ್ಲಿ ನಡೆಯಲಿರುವ ಮೊದಲ ವಿಧಾನಮಂಡಲ ಅಧಿವೇಶನ ಇದಾಗಿದೆ. ಬೆಳಗಾವಿಯಲ್ಲಿ 2006 ರಿಂದ ವರ್ಷಕ್ಕೊಮ್ಮೆ ವಿಧಾನಮಂಡಲದ ಅಧಿವೇಶನವನ್ನು ಸರ್ಕಾರ ನಡೆಸುತ್ತಾ ಬಂದಿತ್ತು. ಆದರೆ, ಪ್ರವಾಹ ಮತ್ತು ಕೊರೋನಾದಿಂದಾಗಿ ಕಳೆದ ಎರಡು ವರ್ಷಗಳಲ್ಲಿ ಬೆಳಗಾವಿಯಲ್ಲಿ ಅಧಿವೇಶನಗಳನ್ನು ನಡೆಸಲಾಗಿಲ್ಲ. ಅದರ ಬದಲಿಗೆ ಬೆಂಗಳೂರಿನಲ್ಲಿ ಅಧಿವೇಶನವನ್ನು ನಡೆಸಲಾಗಿತ್ತು. ಈ ಬಾರಿಯ ಚಳಿಗಾಲದ ಅಧಿವೇಶನವನ್ನು ಬೆಳಗಾವಿಯಲ್ಲಿ ನಡೆಸಬೇಕೆಂದು ವಿಧಾನ ಪರಿಷತ್ ಸಭಾಪತಿ ಬಸವರಾಜ್ ಹೊರಟ್ಟಿ ಪತ್ರ ಬರೆದಿದ್ದರು.

ಆಧಾರ:ಕನ್ನಡ ಪ್ರಭ,ದಿನಾಂಕ:20.11.2021

## 29. ವಿಧಾನಮಂಡಲ ಸಚಿವಾಲಯಕ್ಕೆ ಸ್ವಾಯತ್ತತೆ : ಸ್ಪೀಕರ್ ಇಂಗಿತ

ರಾಜ್ಯ ವಿಧಾನಮಂಡಲದ ಸಚಿವಾಲಯಕ್ಕೆ ಆರ್ಥಿಕ ಸ್ವಾಯತ್ತತೆ ನೀಡಲು ಕ್ರಮ ಕೈಗೊಳ್ಳುವಂತೆ ಮುಖ್ಯಮಂತ್ರಿಯವರೊಂದಿಗೆ ಚರ್ಚೆ ನಡೆಸುವುದಾಗಿ ಸಭಾಧ್ಯಕ್ಷರು ತಿಳಿಸಿದರು. ವಿಧಾನಸೌಧದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು ಲೋಕಸಭೆ ಮತ್ತು ರಾಜ್ಯಸಭೆ ಸಚಿವಾಲಯಗಳಿಗೆ ಈಗಾಗಲೇ ಆರ್ಥಿಕ ಸ್ವಾಯತ್ತತೆ ಇದೆ. ದೇಶದಲ್ಲೇ ಪ್ರಥಮ ಬಾರಿಗೆ ಹಿಮಾಚಲ ಪ್ರದೇಶದ ರಾಜ್ಯಕ್ಕೂ ಆರ್ಥಿಕ ಸ್ವಾಯತ್ತತೆ ನೀಡಲಾಗಿದೆ. ಅದೇ ರೀತಿ ಕರ್ನಾಟಕದ ಶಾಸಕಾಂಗಕ್ಕೂ ಸ್ವಾಯತ್ತತೆ ನೀಡುವ ಅಗತ್ಯವಿದೆ. ಈ ನಿಟ್ಟಿನಲ್ಲಿ ಮುಖ್ಯಮಂತ್ರಿ ಮತ್ತು ವಿರೋಧ ಪಕ್ಷಗಳ ನಾಯಕರ ಜೊತೆ ಸಮಾಲೋಚಿಸಿ ನಿರ್ಧಾರ ತಗೆದುಕೊಳ್ಳಲಾಗುವುದು. ಪ್ರತಿಯೊಂದು ವಿಷಯಕ್ಕೂ ಆರ್ಥಿಕ ಇಲಾಖೆಗೆ ಕಡತ ರವಾನಿಸಿ ಅನುಮತಿ ಪಡೆದುಕೊಳ್ಳುವ ಅಗತ್ಯವಿದೆ. ಶಾಸಕಾಂಗಕ್ಕೆ ಇದು ಸೂಕ್ತ ಎನಿಸುವುದಿಲ್ಲ. ಆರ್ಥಿಕ ಸ್ವಾಯತ್ತತೆ ಇದ್ದರೆ ಮತ್ತಷ್ಟು ಪರಿಣಾಮಕಾರಿಯಾಗಿ ಕೆಲಸ ಮಾಡಲು ಸಾಧ್ಯವಿದೆ ಎಂದು ಹೇಳಿದರು.

82ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನ ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನವೆಂಬರ್ 16 ರಿಂದ 19ರವರೆಗೆ ನಡೆಯಿತು. ಶತಮಾನದ ಪಯಣ–ಮೌಲ್ಯಮಾಪನ ಮತ್ತು ಸಾಗಬೇಕಾದ ಮಾರ್ಗ ಹಾಗೂ ಸಂವಿಧಾನ, ಸದನ ಮತ್ತು ಜನತೆಯ ಅಭಿಮುಖವಾಗಿ ಪೀಠಾಸೀನಾಧಿಕಾರಿಗಳ ಹೊಣೆಗಾರಿಕೆ ಕುರಿತು ಎರಡು ವಿಷಯಗಳ ಬಗ್ಗೆ ಅಭಿಪ್ರಾಯವನ್ನು ಮಂಡಿಸಲಾಯಿತು. ವರ್ಷಕ್ಕೆ ಒಂದು ಬಾರಿ ಏರ್ಪಡಿಸುತ್ತಿದ್ದ ಸಮ್ಮೇಳನವನ್ನು ಇನ್ನು ಮುಂದೆ ವರ್ಷದಲ್ಲಿ ಮೊದಲ ಸಮ್ಮೇಳನವನ್ನು ದೆಹಲಿಯಲ್ಲಿ, ಎರಡನೇ ಸಮ್ಮೇಳನವನ್ನು ಹೊರ ರಾಜ್ಯಗಳಲ್ಲಿ ನಡೆಸಲು ಹಾಗೂ ಆಯ್ಕೆಯಾದ ಶಾಸಕರಿಗೆ ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳಬೇಕೆಂದು ನಿರ್ಣಯಿಸಲಾಗಿದೆ ಎಂದು ಹೇಳಿದರು.

ವಿಧಾನಪರಿಷತ್ತು ಮತ್ತು ವಿಧಾನಸಭೆಗೆ ಅತ್ಯುತ್ತಮ ಪ್ರಶಸ್ತಿ ನೀಡಲು ಚರ್ಚಿಸಲಾಗಿದ್ದು, ಇದಕ್ಕೆ ಮಾನದಂಡಗಳನ್ನು ರೂಪಿಸಲು ಸಮಿತಿ ರಚಿಸಲು ಅಂಗೀಕರಿಸಲಾಯಿತು. ಸದನ ನಡೆಸುವ

ಸಂದರ್ಭದಲ್ಲಿ ರಾಷ್ಟ್ರಪತಿಗಳು ಮತ್ತು ರಾಜ್ಯಪಾಲರ ಭಾಷಣ ಮತ್ತು ಪ್ರಶ್ನೋತ್ತರ ವೇಳೆಯಲ್ಲಿ ಸದನದಲ್ಲಿ ಗದ್ದಲ ಉಂಟಾಗದಂತೆ ಸರ್ವ ಪಕ್ಷಗಳ ಮುಖಂಡರ ಜೊತೆ ಚರ್ಚಿಸಿ ಸದನವನ್ನು ಸುಗಮವಾಗಿ ನಡೆಸಲು ನಿರ್ಣಯಿಸಲಾಯಿತು. ಲೋಕಸಭಾ ಮಾದರಿಯಲ್ಲಿ ಎಲ್ಲಾ ರಾಜ್ಯಗಳಲ್ಲಿ ಆರ್ಥಿಕ ಸ್ವಾಯತ್ತತೆ ನೀಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಆರ್ಥಿಕ ಸ್ವಾಯತ್ತತೆಯನ್ನು ಪಡೆದ ಮೊದಲ ರಾಜ್ಯ ಶಿಮ್ಲಾವಾಗಿದ್ದು, ಇದನ್ನು ರಾಜ್ಯಗಳಲ್ಲಿ ಅಳವಡಿಸುವಂತೆ ಸಭೆಯಲ್ಲಿ ತೀರ್ಮಾನಿಸಲಾಯಿತು ಎಂದರು.

ಭಾರತೀಯ ಶಾಸಕಾಂಗ , ಕಾರ್ಯಾಂಗ ಚಟುವಟಿಕೆಯಲ್ಲಿ ಸಂವಿಧಾನದ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಸಮರ್ಪಕವಾಗಿ ನಿರ್ವಹಿಸಲು ಮಹತ್ವ ನೀಡಲಾಗಿದ್ದು, ಹೊಸ ಶತಮಾನದ ಆರಂಭದಲ್ಲಿ ಸೂಕ್ತ ತೀರ್ಮಾನಗಳನ್ನು ಕೈಗೊಳ್ಳಲು ವ್ಯವಸ್ಥಿತವಾಗಿ ಚರ್ಚೆ ನಡೆಸಲಾಗುವುದು. 1921 ರಿಂದ 2021ರವರೆಗೆ ಕೈಗೊಂಡ ಎಲ್ಲಾ ನಿರ್ಣಯ, ನಿರ್ಧಾರಗಳನ್ನು ಹೊಸ ಶತಮಾನದ 10ನೇ ಶೆಡ್ಯೂಲ್‌ನಲ್ಲಿ ಅಂತಿಮ ವರದಿ ಸಿದ್ಧವಾಗಿದೆ. ಮಾಹಿತಿ ಮತ್ತು ತಂತ್ರಜ್ಞಾನದ ಬಳಕೆಯನ್ನು ಹೆಚ್ಚಿಸಿಕೊಂಡು ಸಂಸತ್‌ನಲ್ಲಿ ನಡೆದ ಚರ್ಚೆಗಳನ್ನು ಸಾರ್ವಜನಿಕರಿಗೆ ಆ್ಯಪ್ ಮೂಲಕ ತಲುಪಿಸಲು ಕ್ರಮ ಕೈಗೊಳ್ಳಬೇಕು. ಸ್ವಾತಂತ್ರ್ಯ ಅಮೃತ ಮಹೋತ್ಸವ ಕುರಿತು ಶತಮಾನೋತ್ಸವದಲ್ಲಿ ಪಂಚಾಯತ್ ರಾಜ್ ಇಲಾಖೆಗಳು, ಗ್ರಾಮ ಪಂಚಾಯತಿಗಳು ಸಾರ್ವಜನಿಕರಿಗೆ ಜನಜಾಗೃತಿ ಮೂಡಿಸಲು ಮನ್ನಣೆ ನೀಡಬೇಕೆಂದು ತೀರ್ಮಾನಿಸಲಾಯಿತು. ಸಮ್ಮೇಳನದಲ್ಲಿ ಒಟ್ಟು 12 ನಿರ್ಣಯಗಳನ್ನು ಕೈಗೊಳ್ಳಲಾಯಿತಿ ಎಂದು ತಿಳಿಸಿದರು.

ಸಮ್ಮೇಳನದಲ್ಲಿ ಲೋಕಸಭೆಯ ಸ್ಪೀಕರ್ ಓಂ ಬಿರ್ಲಾ ಅಧ್ಯಕ್ಷತೆ ವಹಿಸಿದ್ದರು. ಸಮ್ಮೇಳನದಲ್ಲಿ ಪೀಠಾಧ್ಯಕ್ಷರು, ನಾನು ಸೇರಿದಂತೆ ವಿಧಾನ ಪರಿಷತ್ ಸಭಾಪತಿಗಳಾದ ಬಸವರಾಜ ಹೊರಟ್ಟಿ, ಕಾರ್ಯದರ್ಶಿಗಳು ಹಾಗೂ ದೇಶದ ಸುಮಾರು 20ಕ್ಕೂ ಹೆಚ್ಚು ರಾಜ್ಯಗಳ ವಿಧಾನಸಭೆ, ವಿಧಾನ ಪರಿಷತ್‌ನ ಅಧ್ಯಕ್ಷರುಗಳು ಸದಸ್ಯರುಗಳು ಕಾರ್ಯದರ್ಶಿಗಳು ಭಾಗವಹಿಸಿದ್ದರು ಎಂದು ಮಾಹಿತಿ ನೀಡಿದರು. ವಿಧಾನಸಭೆಯ ಕಾರ್ಯದರ್ಶಿ ಎಂ.ಕೆ. ವಿಶಾಲಾಕ್ಷಿ ಹಾಜರಿದ್ದರು.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:22.11.2021

## 30. ವಿಧಾನಮಂಡಲ ಸಚಿವಾಲಯಕ್ಕೆ ಆರ್ಥಿಕ ಸ್ವಾಯತ್ತೆಗೆ ಸಮಿತಿ : ಕಾಗೇರಿ

ವಿಧಾನಮಂಡಲ ಸಚಿವಾಲಯ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವ ಉದ್ದೇಶದಿಂದ ಆರ್ಥಿಕ ಸ್ವಾಯತ್ತೆ ನೀಡುವ ಕುರಿತು ಸಾಧಕ–ಭಾದಕ ಪರಿಶೀಲಿಸಲು ಸಮಿತಿ ರಚಿಸಲು ನಿರ್ಧರಿಸಲಾಗಿದೆ ಎಂದು ವಿಧಾನಸಭಾ ಸಭಾಧ್ಯಕ್ಷರು ತಿಳಿಸಿದ್ದಾರೆ.

ವಿಧಾನಸೌಧದಲ್ಲಿ ಪತ್ರಿಕಾಗೋಷ್ಠಿ ನಡೆಸಿ ಮಾತನಾಡಿದ ಅವರು, ಪ್ರತಿ ವಿಷಯಕ್ಕೂ ಆರ್ಥಿಕ ಇಲಾಖೆಗೆ ಕಡತ ರವಾನಿಸಿ ಅನುಮತಿ ಪಡೆಯಬೇಕಿರುವುದರಿಂದ ವಿಧಾನಮಂಡಲ ಸಚಿವಾಲಯ ಪರಿಣಮಕಾರಿಯಾಗಿ ಕಾರ್ಯನಿರ್ವಹಿಸಲು ಆಗುತ್ತಿಲ್ಲ. ಲೋಕಸಭೆ ಮತ್ತು ರಾಜ್ಯಸಭೆ ಸಚಿವಾಲಯಗಳಿಗೆ ಆರ್ಥಿಕ ಸ್ವಾಯತ್ತತೆ ಇದೆ ಎಂದರು.

ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ಇದೇ ತಿಂಗಳ 16 ರಿಂದ 19ರವರೆಗೆ ನಡೆದ 82ನೇ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ನಾನು ಮತ್ತು ಸಭಾಪತಿ ಹೊರಟ್ಟಿ ಪಾಲ್ಗೊಂಡಿದ್ದೆವು. ಅಲ್ಲಿನ ವಿಧಾನಸಭಾ ಸಮ್ಮೇಳನ ಸಭಾಂಗಣದಲ್ಲಿ ಲೋಕಸಭೆ ಸ್ಪೀಕರ್ ಓಂ ಬಿರ್ಲಾ ಅವರು ಉಭಯ ಸದನ ಉದ್ದೇಶಿಸಿ ಮಾತನಾಡಿದರು. ಇಲ್ಲಿ ಮಾಡಿದಂತೆ ಯಾರೂ ಅಲ್ಲಿ ವಿವಾದ ಮಾಡದೆ ಪ್ರಬುದ್ಧವಾಗಿ ನಡೆದುಕೊಂಡರು ಎಂದು ಕಾಂಗ್ರೆಸ್ ವಿರುದ್ಧ ಅಸಮಾಧಾನ ವ್ಯಕ್ತಪಡಿಸಿದರು.

ಆಧಾರ:ಕನ್ನಡಪ್ರಭ,ದಿನಾಂಕ:22.11.2021

## 31. ಶಾಸನ ಸಭೆಗೆ ಆರ್ಥಿಕ ಸ್ವಾತಂತ್ರ್ಯ ಅಗತ್ಯ.

ರಾಜ್ಯ ವಿಧಾನಮಂಡಲದ ಬಹುತೇಕ ಪ್ರಸ್ತಾವನೆಗಳಿಗೆ ಹಣಕಾಸು ಇಲಾಖೆಯ ಕೊಕ್ಕೆ ಕಟ್ಟಿಟ್ಟ ಬುತ್ತಿ ಕೆಲವೊಮ್ಮೆ ತುರ್ತು ವೆಚ್ಚಕ್ಕೂ ಸಭಾಧ್ಯಕ್ಷರು ಹಾಗೂ ಸಭಾಪತಿಗಳು ಕೈ ಚಾಚುವ ದಯನೀಯ ಸ್ಥಿತಿ. ಇಂತಹ ವ್ಯವಸ್ಥೆಯಿಂದ ವಿಧಾನ ಮಂಡಲದ ಸಚಿವಾಲಯ ಹೊರತಾಗಿರಲಿ ಎಂಬ ಹಿನ್ನೆಲೆಯಿಂದಲೇ ಸಚಿವಾಲಯಕ್ಕೆ ಪ್ರತ್ಯೇಕ ಆರ್ಥಿಕ ಸ್ವಾಯತ್ತತೆಯ ಅಗತ್ಯ ಕೇಳಿ ಬಂದಿದೆ. ಈ ಪ್ರಸ್ತಾವನೆಗೆ ಮಾಜಿ ಸ್ಪೀಕರ್‌ಗಳಿಂದ ಸಾಮೂಹಿಕ ಬೆಂಬಲ ವ್ಯಕ್ತವಾಗಿರುವುದು ವಿಶೇಷವಾಗಿದೆ.

ಇತ್ತೀಚೆಗೆ ಹಿಮಾಚಲಪ್ರದೇಶದ ಶಿಮ್ಲಾದಲ್ಲಿ ನಡೆದ ಅಖಿಲ ಭಾರತ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಈ ವಿಷಯ ಪ್ರಮುಖವಾಗಿ ಪ್ರಸ್ತಾಪವಾಗಿತ್ತು. ಈ ಬಗ್ಗೆ ವಿಧಾನ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಹಾಗೂ ಮೇಲ್ಮನೆ ಸಭಾಪತಿ ಬಸವರಾಜ ಹೊರಟ್ಟಿ ವಿಶೇಷವಾಗಿ ಪ್ರಸ್ತಾಪಿಸಿ ಆರ್ಥಿಕ ಸ್ವಾಯತ್ತತೆಯ ಹಕ್ಕು ಮಂಡಿಸಿದರು. ಇದಕ್ಕೆ ವ್ಯಾಪಕ ಬೆಂಬಲವು ವ್ಯಕ್ತಗೊಂಡಿತ್ತು.

ಈ ಸ್ವಾಯತ್ತತೆ ವಿಷಯದ ಬಗ್ಗೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲುವ ನಿಟ್ಟಿನಲ್ಲಿ ಶಾಸನಸಭೆ ಪರಿಣಿತರನ್ನು ಮಾತನಾಡಿಸಿತು. ಪಕ್ಷಾತೀತವಾಗಿ ಈ ಪ್ರಸ್ತಾವನೆಗೆ ಬೆಂಬಲ ವ್ಯಕ್ತವಾಗಿದೆ. ಆರ್ಥಿಕ ಸ್ವಾಯತ್ತತೆ ಯಾವತ್ತೋ ಆಗಬೇಕಿತ್ತು. ಹಲವು ಬಾರಿ ಪ್ರಸ್ತಾವನೆಗಳು ಮಂಡಿಸಲ್ಪಟಿದ್ದರೂ ಕಾರ್ಯಗತವಾಗುವಲ್ಲಿ ವಿಫಲವಾಗಿವೆ. ಇದಕ್ಕೆ ಅನೇಕ ಕಾರಣಗಳು ಇವೆ. ಆದರೆ, ವಿಧಾನಮಂಡಲ ಇಲ್ಲವೇ ಸಭಾಧ್ಯಕ್ಷರು–ಸಭಾಪತಿ ಅಂದರೆ ರಾಜ್ಯಪಾಲರನ್ನು ಬಿಟ್ಟರೆ ಅತ್ಯಂತ ಗೌರವಯುತ ಮತ್ತು ಶಿಷ್ಠಾಚಾರದ ಹುದ್ದೆ. ಆದರೆ ಆರ್ಥಿಕ ನಿರ್ಣಯದ ವಿಷಯ ಬಂದಾಗ ಮಾತ್ರ ಒಂದು ರೀತಿಯಲ್ಲಿ ಅಸಹಾಯಕರಾಗುವ ಸ್ಥಿತಿ ಎದುರಿಸಿದ್ದೇವೆ ಎಂಬುದು ಮಾಜಿ ಸಭಾಧ್ಯಕ್ಷರುಗಳ ತುಸು ಕೋಪದ ಮಾತು.

ಪ್ರತಿಯೊಂದು ಪ್ರಸ್ತಾವನೆಗೂ ಹಣಕಾಸು ಇಲಾಖೆ ಮುಂದೆ ಕೈಕಟ್ಟಿ ನಿಲ್ಲುವುದು ಸರಿಯಲ್ಲ ಆರ್ಥಿಕ ಸ್ವಾತಂತ್ರ್ಯದ ಅಗತ್ಯವಿದೆ. ಇದನ್ನು ಸರ್ಕಾರಗಳು ಗಂಭೀರವಾಗಿ ಪರಿಗಣಿಸಬೇಕು. ಸಭಾಧ್ಯಕ್ಷರು ಕಳುಹಿಸಿದ ಅನೇಕ ಪ್ರಮುಖ ಪ್ರಸ್ತಾವನೆಗಳು ಹಣಕಾಸು ಇಲಾಖೆಯಿಂದ ತಿರಸ್ಕರಿಸಲ್ಪಟ್ಟಿರುವ ನಿದರ್ಶನಗಳು ಸಾಕಷ್ಟಿವೆ. ಇದು ಸಹಜವಾಗಿಯೇ ಸ್ಪೀಕರ್ ಹುದ್ದೆಯ ಘನತೆಗೆ ಗೌರವ ತರುವಂತದ್ದಲ್ಲ. ಹಾಗಾಗಿ ಸ್ವಯತ್ತತೆ ವಿಷಯ ಅತ್ಯಂತ ಸಮರ್ಥನೀಯ ಮತ್ತು ಒಳ್ಳೆಯ ಪ್ರಸ್ತಾವನೆ ಆಗಿದ್ದು ಅದಷ್ಟು ತ್ವರಿತವಾಗಿ ಅನುಷ್ಠಾನಕ್ಕೆ ತರಲು ಸರ್ಕಾರ ಮುಂದಾಗಬೇಕೆಂಬ ಆಗ್ರಹಪೂರ್ವಕ ಒತ್ತಾಯವು ಕೇಳು ಬಂದಿದೆ.

ಸಚಿವಾಲಯ ನಿರ್ಭೀತಿ ಮತ್ತು ಮುಲಾಜಿಗೊಳಗಾಗದೆ ಕಾರ್ಯನಿರ್ವಹಿಸಲು ಹಣಕಾಸು ಸ್ವಾಯತ್ತತೆ ಅತ್ಯಗತ್ಯವಾಗಿದೆ. ಅಷ್ಟಕ್ಕೂ ವಿಧಾನಮಂಡಲದ ಕೆಲಮನೆ ಮೇಲ್ಮನೆಗಳೆರಡು ಸ್ವಾತಂತ್ರ ಸಂಸ್ಥೆಗಳಾಗಿದೆ. ಕಾರ್ಯಾಂಗದ ಕಪಿಮುಷ್ಠಿಯಲ್ಲಿ ಇರಬಾರದು. ತನ್ನದೇ ಆದ ಆರ್ಥಿಕ ಸ್ವಾಯತ್ತತೆ ಹೊಂದಿದ್ದರೆ ಶಾಸಕಾಂಗದ ಗೌರವ ಇಮ್ಮಡಿಯಾಗುತ್ತದೆ. ಪರೋಕ್ಷವಾಗಿ ಸರ್ಕಾರಕ್ಕೂ ಇದು ಉತ್ತಮ ಹೆಸರು ತಂದು ಕೊಡಲಿದೆ ಎಂಬ ಅಭಿಪ್ರಾಯವು ವ್ಯಕ್ತಗೊಂಡಿರುವುದು ಗಮನೀಯ ಸಂಗತಿ.

ಆರ್ಥಿಕ ಸ್ವಾಯತ್ತತೆ ಎಂದರೆ ಸ್ವೇಚ್ಛಾಚಾರ ಅಲ್ಲ. ವಿಧಾನಮಂಡಲ ಸಚಿವಾಲಯಕ್ಕೆ ಪ್ರತಿವರ್ಷ ಬಜೆಟ್‌ನಲ್ಲಿ ಇಂತಿಷ್ಟು ಎಂದು ಅನುದಾನ ನಿಗದಿ ಮಾಡುವುದು. ಇದನ್ನು ಅಗತ್ಯ ಪ್ರಸ್ತಾವನೆಗಳಿಗೆ ಹಣಕಾಸು ಇಲಾಖೆಯ ಮರ್ಜಿ ಇಲ್ಲದೆ ಬಳಸಬಹುದು.

ಅನುದಾನ ಕಾರ್ಯದರ್ಶಿ ಇಲ್ಲವೇ ಸಭಾಧ್ಯಕ್ಷರ ಖಾತೆಯಲ್ಲಿರಲಿ, ವರ್ಷಾಂತ್ಯಕ್ಕೆ ಎಂದಿನಂತೆ ಲೆಕ್ಕಪರಿಶೋಧನೆ ನಡೆಯಲಿದೆ. ಅದಕ್ಕೇನು ನಮ್ಮ ಅಭ್ಯಂತರವಿಲ್ಲ. ಹೀಗಾದಲ್ಲಿ ಸಚಿವಾಲಯದ ಪ್ರತಿಯೊಂದು ಪ್ರಸ್ತಾವನೆಗಳಿಗೂ ಆರ್ಥಿಕ ಇಲಾಖೆ ಮುಂದೆ ಬೇಡುವ ಸ್ಥಿತಿ ತಪ್ಪಲಿದೆ. ಕೊಕ್ಕೆ ಸಂಸ್ಕೃತಿಗೆ

ತಿಲಾಂಜಲಿ ಬೀಳಲಿದೆ ಎಂಬ ಗಂಭೀರ ಸಲಹೆಗಳು ಸಂಯುಕ್ತ ಕರ್ನಾಟಕದ ಮೂಲಕ ಸರ್ಕಾರದ ಮುಂದೆ ಮಂಡಿಸಲ್ಪಟ್ಟಿವೆ.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:23.11.2021

## 32. ಅಧಿವೇಶನದಲ್ಲಿ ದುಂದುವೆಚ್ಚಕ್ಕೆ ಕಡಿವಾಣ

ಚಳಿಗಾಲ ಅಧಿವೇಶನದ ಸಂದರ್ಭದಲ್ಲಿ ದುಂದು ವೆಚ್ಚಕ್ಕೆ ಕಡಿವಾಣ ಹಾಕಲು ಹಿರಿಯ ಕೆ.ಎ.ಎಸ್ ಅಧಿಕಾರಿಗಳ ಅಧ್ಯಕ್ಷತೆಯ ಸಮಿತಿ ರಚನೆಗೆ ಜಿಲ್ಲಾಡಳಿತ ಕ್ರಮವಹಿಸಿದೆ. ಅಧಿವೇಶನದಲ್ಲಿ ಪಾಲ್ಗೊಳ್ಳುವವರ ಖರ್ಚು–ವೆಚ್ಚ ಮೇಲೆಯು ನಿಗಾವಹಿಸಲು ನಿರ್ಧರಿಸಿದೆ. ಬೆಳಗಾವಿಯ ಸುವರ್ಣ ವಿಧಾನಸೌಧದದಲ್ಲಿ ಡಿಸೆಂಬರ್ 13 ರಿಂದ 24ರವರೆಗೆ ಚಳಿಗಾಲದ ಅಧಿವೇಶನ ಜರುಗಲಿದೆ. ಈ ವೇಳೆ ಇಲ್ಲಿಗೆ ಬರುವ ಸಚಿವರು, ಶಾಸಕರು ಅಧಿಕಾರಿಗಳು ಹಾಗೂ ಇನ್ನಿತರರಿಗಾಗಿ ಸಾರಿಗೆ, ವಸತಿ ಊಟಕ್ಕೆಂದು ಅನಗತ್ಯವಾಗಿ ಕೋಟ್ಯಂತರ ರೂಪಾಯಿ ವ್ಯಯಿಸುತ್ತಿರುವುದಕ್ಕೆ ಕಡಿವಾಣ ಹಾಕಲು ಜಿಲ್ಲಾಧಿಕಾರಿ ಆರ್. ವೆಂಕಟೇಶಕುಮಾರ್ ಮುಂದಾಗಿದ್ದಾರೆ. ಆಯಾ ಇಲಾಖೆಯ ಸಚಿವರು, ಅಧಿಕಾರಿಗಳ ಹೆಸರಿನಲ್ಲಿ ಮತ್ತೆ ಪ್ರತ್ಯೇಕವಾಗಿ ಲಕ್ಷಾಂತರ ರೂಪಾಯಿ ಖರ್ಚು ಮಾಡುವುದನ್ನು ತಡೆಗಟ್ಟಲು ಜಿಲ್ಲಾಡಳಿತ ಕಟ್ಟುನಿಟ್ಟಿನ ಕ್ರಮಕ್ಕೆ ಮುಂದಾಗಿದೆ.

ಆಧಾರ:ವಿಜಯವಾಣಿ,ದಿನಾಂಕ:25.11.2021

## 33. ಜನಹಿತಕ್ಕೆ ದುಡಿದರೆ ಸಂವಿಧಾನ ಸಾರ್ಥಕ

ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠ ಸಂವಿಧಾನ ನಮ್ಮದಾಗಿದ್ದು, ಜನರ ಹಿತಕ್ಕಾಗಿ ಕರ್ತವ್ಯ ನಿರ್ವಹಿಸುವುದರೊಂದಿಗೆ ಸಂವಿಧಾನದ ಆಶಯ ಈಡೇರಿಸಬೇಕು ಎಂದು ಸಭಾಪತಿ ಬಸವರಾಜ ಹೊರಟ್ಟಿ ಹಾಗೂ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಪ್ರತಿಪಾದಿಸಿದ್ದಾರೆ.

ಸಂವಿಧಾನ ದಿವಸ ಆಚರಣೆ ಅಂಗವಾಗಿ ವಿಧಾನಸೌಧದ ಮುಂಭಾಗದಲ್ಲಿರುವ ಸಂವಿಧಾನ ಶಿಲ್ಪಿ ಡಾ: ಬಿ.ಆರ್.ಅಂಬೇಡ್ಕರ್ ಅವರ ಪ್ರತಿಮೆಗೆ ಪುಷ್ಪ ನಮನ ಸಲ್ಲಿಸಿ ಮಾತನಾಡಿದ ಅವರು, ಬಾಬಾ ಸಾಹೇಬ್ ಅಂಬೇಡ್ಕರ್ ಅತ್ಯಂತ ಶ್ರೇಷ್ಠ ಸಂವಿಧಾನ ರಚನೆ ಮಾಡಿದ್ದಾರೆ. ಶಾಸಕಾಂಗದವರು ಸಂವಿಧಾನದ ಅನುಷ್ಠಾನ ಮತ್ತು ಪರಿಣಾಮದ ಆತ್ಮಾವಲೋಕನ ಮಾಡಿಕೊಂಡು ಕೆಲಸ ಮಾಡಬೇಕು ಎಂದರು.

ಬಸವರಾಜ ಹೊರಟ್ಟಿ ಮಾತನಾಡಿ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ಹಾಗೂ ಲಿಖಿತ ಸಂವಿಧಾನ ನಮ್ಮದಾಗಿದ್ದು, ಸಂವಿಧಾನ ಶಿಲ್ಪಿ ಡಾ: ಬಾಬಾ ಸಾಹೇಬ ಅಂಬೇಡ್ಕರ್ ಅವರಿಂದ ರಚಿತವಾಗಿರುವ ನಮ್ಮ ಹೆಮ್ಮೆಯ ಸಂವಿಧಾನದಲ್ಲಿ ಎಲ್ಲ ಜಾತಿ, ಮತ, ಪಂಥ ಹಾಗೂ ಎಲ್ಲ ವರ್ಗಗಳ ಜನರ ಹಿತವಿದೆ ಎಂದು ತಿಳಿಸಿದರು.

ದೇಶದ ಪ್ರಜಾಪ್ರಭುತ್ವದ ಭದ್ರ ಬುನಾದಿಯೇ ನಮ್ಮ ಸಂವಿಧಾನ ಎಂಬುದು ಅತ್ಯಂತ ಗೌರವ ಮತ್ತು ಹೆಮ್ಮೆಯ ಸಂಗತಿಯಾಗಿದ್ದು ಹಲವು ವೈಶಿಷ್ಟ್ಯತೆಯನ್ನು ಹೊಂದಿರುವ ನಮ್ಮ ಸಂವಿಧಾನ ನಮ್ಮೆಲ್ಲಾ ನಾಗರಿಕರನ್ನು ಸಶಕ್ತಗೊಳಿಸಿ, ಸರ್ವರಿಗೂ ಸಮಾನತೆಯ ಅವಕಾಶ ನೀಡಿ, ಮೂಲಭೂತ ಹಕ್ಕು ಹಾಗೂ ಕರ್ತವ್ಯಗಳನ್ನು ನೀಡಿದೆ. ಇಂತಹ ಸಂವಿಧಾನದ ಮಹತ್ವದ ಬಗ್ಗೆ ದೇಶದ ಎಲ್ಲ ನಾಗರಿಕರಲ್ಲಿ ಅರಿವು ಮೂಡಿಸಿ ಸಂವಿಧಾನದ ಬಗ್ಗೆ ಗೌರವ ಮೂಡಿಸುವುದರ ಜೊತೆಗೆ ಸಂವಿಧಾನ ಶಿಲ್ಪಿ ಅಂಬೇಡ್ಕರ್ ಅವರ ಬಗ್ಗೆ ಜಾಗೃತಿ ಮೂಡಿಸುವುದು ಇಂದಿನ ಸಂವಿಧಾನ ದಿನಾಚರಣೆಯ ಮೂಲ ಉದ್ದೇಶವಾಗಿದೆ ಎಂದು ಹೇಳಿದರು.

ವಿಶ್ವೇಶ್ವರ ಹೆಗಡೆ, ಕಾಗೇರಿ ಮಾತನಾಡಿ, ಈ ಹಿಂದೆ ಸಂವಿಧಾನ ರಚನಾ ದಿನವನ್ನು ರಾಷ್ಟ್ರೀಯ ಕಾನೂನು ದಿವಸ ಎಂದು ಆಚರಿಸಲಾಗುತ್ತಿತ್ತು. 2021ರ ಅಕ್ಟೋಬರ್ 11 ರಂದು ಸಂವಿಧಾನ ಶಿಲ್ಪಿ ಡಾ.ಬಿ.ಆರ್. ಅಂಬೇಡ್ಕರ್ ಸ್ಮಾರಕಕ್ಕೆ ಮುಂಬೈನಲ್ಲಿ ಅಡಿಗಲ್ಲು ಹಾಕುವ ಸಂದರ್ಭದಲ್ಲಿ ಪ್ರಧಾನಮಂತ್ರಿ ನರೇಂದ್ರ ಮೋದಿಯವರು ನವೆಂಬರ್ 26 ರಂದು ಪ್ರತಿ ವರ್ಷ ಸಂವಿಧಾನ ದಿವಸವನ್ನಾಗಿ ಆಚರಿಸಲು ಘೋಷಣೆ ಮಾಡಿದರು ಎಂದು ತಿಳಿಸಿದರು.

ಗೃಹ ಸಚಿವ ಅರಗ ಜ್ಞಾನೇಂದ್ರ, ವಿಧಾನ ಪರಿಷತ್ ಕಾರ್ಯದರ್ಶಿ ಕೆ.ಆರ್. ಮಹಾಲಕ್ಷ್ಮಿ, ವಿಧಾನ ಸಭೆ ಕಾರ್ಯದರ್ಶಿ, ಎಂ.ಕೆ. ವಿಶಾಲಾಕ್ಷಿ ಇದ್ದರು.

ಆಧಾರ:ಉದಯವಾಣಿ, ದಿನಾಂಕ:27.11.2021

**ಭಾರತ ಸಂವಿಧಾನ ದಿನದ ಅಂಗವಾಗಿ ದಿನಾಂಕ: 26.11.2021ರಂದು ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿರವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ, ಕಾಗೇರಿಯವರು ವಿಧಾನಸೌಧದ ಮುಂಭಾಗದಲ್ಲಿರುವ ಸಂವಿಧಾನ ಶಿಲ್ಪಿ ಡಾ: ಬಾಬಾ ಸಾಹೇಬ್ ಅಂಬೇಡ್ಕರ್ ರವರ ಪುತ್ಥಳಿಗೆ ಪುಷ್ಪಾರ್ಚನೆ ಮಾಡಿ, ಬ್ಯಾಂಕ್ವೆಟ್ ಹಾಲ್‌ನಲ್ಲಿ ನಡೆದ ಕಾರ್ಯಕ್ರಮದಲ್ಲಿ ನಿವೃತ್ತ ನ್ಯಾಯಮೂರ್ತಿ ಶ್ರೀ ಸುಭಾಷ್ ಆಡಿ ಹಾಗೂ ಗೃಹ ಸಚಿವರಾದ ಶ್ರೀ ಆರಗ ಜ್ಞಾನೇಂದ್ರ ರವರುಗಳು ಭಾಗವಹಿಸಿದ ಸಂದರ್ಭ**






**ದಿನಾಂಕ: 26.11.2021 ರಂದು ವಿಧಾನಮಂಡಲದ ವತಿಯಿಂದ ಆಚರಿಸಿದ ಸಂವಿಧಾನದ ದಿವಸದ ಆಚ,ರಣೆಯಲ್ಲಿ ಸಚಿವಾಲಯದ ನೌಕರರು ಮತ್ತು ಸಿಬ್ಬಂದಿ ವರ್ಗದವರಿಗೆ ವಿಧಾನಸಭಾಧ್ಯಕ್ಷರಾಧ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ರವರು ಪ್ರತಿಜ್ಞಾವಿಧಿ ಭೋಧಿಸಿದರು. ಈ ಕಾರ್ಯಕ್ರಮಕ್ಕೆ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಸಾಕ್ಷಿಯಾದರು. ನಂತರ ನಿವೃತ್ತ ನ್ಯಾಯಮೂರ್ತಿ ಶ್ರೀ ಸುಭಾಷ್ ಆಡಿ ರವರಿಗೆ ವಿಧಾನಮಂಡಲದ ವತಿಯಿಂದ ಅಭಿನಂದಿಸಲಾಯಿತು.**

## 34. ತೆರಿಗೆ ಪದಕೋಶದಿಂದ ಕನ್ನಡಕ್ಕೆ ಮೆರುಗು : ಕಾಗೇರಿ

ಭಾರತೀಯರಲ್ಲಿ ಏಕತೆ, ಸಮಾನತೆ ಮತ್ತು ಸಹಭಾಗಿತ್ವ ಮನೋಭಾವನೆಯನ್ನುಂಟು ಮಾಡುವ ಸಂವಿಧಾನದ ಆಶಯಗಳನ್ನು ಈಡೇರಿಸುವಲ್ಲಿ ದೇಶದ ಎಲ್ಲ ನಾಗರಿಕರು ಶ್ರಮಿಸಬೇಕು ಎಂದು ವಿಧಾನ ಸಭಾಧ್ಯಕ್ಷರು ಹೇಳಿದ್ದಾರೆ.

ಆಘನಾಶಿನಿ ಪ್ರಕಾಶನದಿಂದ ನಗರದ ಭಾರತೀಯ ವಿದ್ಯಾಭವನದಲ್ಲಿ ಹಮ್ಮಿಕೊಂಡಿದ್ದ ವಾಣಿಜ್ಯ ತೆರಿಗೆ ಇಲಾಖೆ ನಿವೃತ್ತ ಜಂಟಿ ಆಯುಕ್ತ ಸುಬ್ರಾಯ ಎಂ. ಹೆಗಡೆ ಗೌರಿಬಣ್ಣಿಗೆ ಹಾಗೂ ಮತ್ತೊಬ್ಬ ನಿವೃತ್ತ ಅಧಿಕಾರಿ ಡಿ.ಶಿವಣ್ಣ ಸಂಕಲನ ಮಾಡಿರುವ ತೆರಿಗೆ ಪದಕೋಶವನ್ನು ಲೋಕಾರ್ಪಣೆ ಮಾಡಿದರು.

ಜಗತ್ತಿನಲ್ಲಿ ಅತ್ಯಂತ ದೊಡ್ಡ ಸಂವಿಧಾನವನ್ನು ಡಾ: ಬಿ.ಆರ್. ಅಂಬೇಡ್ಕರ್ ಅವರು ದೇಶಕ್ಕೆ ಅರ್ಪಿಸಿದ್ದಾರೆ. ಇದರ ಪ್ರಾಮುಖ್ಯತೆಯನ್ನು ಭಾರತೀಯರಾದ ನಾವೆಲ್ಲರೂ ಅರಿತುಕೊಂಡು ಇತರರಿಗೂ ವಿವರಿಸಬೇಕು. ಕನ್ನಡ ಭಾಷೆಯಲ್ಲಿ ತೆರಿಗೆ ಇಲಾಖೆಗೆ ಸಂಬಂಧಿಸಿದಂತೆ ಪದಕೋಶ ಅತ್ಯಂತ ಅಪರೂಪವಾಗಿದೆ. ಇಂದು ಬಿಡುಗಡೆಯಾಗಿರುವ ಈ ಪುಸ್ತಕ ಕನ್ನಡ ಭಾಷೆಗೆ ಮತ್ತಷ್ಟು ಮೆರುಗು ತರುವಂತಾಗಬೇಕು. ಈ ಪುಸ್ತಕ ಸರ್ಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಮತ್ತು ಸಾರ್ವಜನಿಕರಿಗೆ ಸಹಕಾರಿಯಾಗಲಿದೆ ಎಂದು ಹೇಳಿದರು.

ಪ್ರಜಾವಾಣಿ ಸಂಪಾದಕರಾದ ರವೀಂದ್ರ ಭಟ್ಟ ಮಾತನಾಡಿ ಪತ್ರಕರ್ತರಾದ ನಮ್ಮನ್ನು ಸಾರ್ವಜನಿಕರು ನಂಬುತ್ತಾರೆ. ಅದ್ದರಿಂದ ಭಾಷಾ ವಿಚಾರಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ತಪ್ಪುಗಳನ್ನು ಮಾಡಲು ಸಾಧ್ಯವಿಲ್ಲ. ಈ ಪುಸ್ತಕ ರಾಜ್ಯದ ಆಯವ್ಯಯದ ವರದಿ ಮಾಡುವ ಸಂದರ್ಭದಲ್ಲಿ ಹೆಚ್ಚು ಅನುಕೂಲಕರವಾಗಲಿದೆ. ತೆರಿಗೆ ಪದಕೋಶ ಪುಸ್ತಕದಲ್ಲಿ ಕನ್ನಡ ಭಾಷೆಗಿಂತ ಸಂಸ್ಕೃತ ಪದಗಳ ಬಳಕೆ ಹೆಚ್ಚಾಗಿದೆ. ಇದನ್ನು ಮತ್ತಷ್ಟು ಸರಳ ಮಾಡಿದಲ್ಲಿ ಸಾಮಾನ್ಯ ಜನ ಸರಳವಾಗಿ ಅರ್ಥೈಸಿಕೊಳ್ಳಬಹುದಾಗಿತ್ತು ಎಂದು ಅಭಿಪ್ರಾಯಪಟ್ಟರು.

ವಾಣಿಜ್ಯ ತೆರಿಗೆ ಇಲಾಖೆ ನಿವೃತ್ತ ಅಧಿಕಾರಿಗಳಾದ ಸುಬ್ರಾಯ ಎಂ. ಹೆಗಡೆ ಗೌರಿಬಣ್ಣಿಗೆ, ಡಿ. ಶಿವಣ್ಣ ಮತ್ತಿತರಿದ್ದರು.

ಆಧಾರ:ಕನ್ನಡಪ್ರಭ,ದಿನಾಂಕ:27.11.2021

**ದಿನಾಂಕ: 27.11.2021ರಂದು ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿರವರು ಭಾರತೀಯ ವಿದ್ಯಾ ಭವನದಲ್ಲಿ ಆಯೋಜಿಸಿದ್ದ "ತೆರಿಗೆ ಪದಕೋಶ" ಪುಸ್ತಕವನ್ನು ಲೋಕಾರ್ಪಣೆಗೊಳಿಸಿದ ಸಂದರ್ಭ**



## 35. ಬೆಳಗಾವಿ ಅಧಿವೇಶನ : ಹೆಚ್ಚಿದ ಕಳವಳ

ರಾಜ್ಯದ ವಿವಿಧೆಡೆ ಕೋವಿಡ್ ಸೋಂಕಿನ ಹೊಸ ಪ್ರಕರಣಗಳ ಸಂಖ್ಯೆ ಹೆಚ್ಚುತ್ತಿರುವಾಗಲೇ ಡಿಸೆಂಬರ್ 13 ರಿಂದ 24ರವರೆಗೆ ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ವಿಧಾನ ಮಂಡಲದ ಚಳಿಗಾಲದ ಅಧಿವೇಶನ ನಿಗದಿಯಾಗಿರುವುದು ಶಾಸಕರು, ಅಧಿಕಾರಿಗಳು ಮತ್ತು ಸಿಬ್ಬಂದಿಯಲ್ಲಿ ಕಳವಳಕ್ಕೆ ಕಾರಣವಾಗಿದೆ.

ಅಧಿವೇಶನಕ್ಕಾಗಿ ಶಾಸಕರು, ಸರ್ಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಸಿಬ್ಬಂದಿ ಮತ್ತು ಮಾಧ್ಯಮ ಪ್ರತಿನಿಧಿಗಳು ಸೇರಿದಂತೆ ಬೃಹತ್ ಸಂಖ್ಯೆಯ ಜನರು ವಿಧಾನಮಂಡಲ ಅಧಿವೇಶನದಲ್ಲಿ ಪಾಲ್ಗೊಳ್ಳಲಿದ್ದಾರೆ. ಇಂತಹ ಸನ್ನಿವೇಶದಲ್ಲಿ ಬೆಳಗಾವಿಗೆ ಜನರು ದೊಡ್ಡ ಸಂಖ್ಯೆಯಲ್ಲಿ ಪ್ರಯಾಣಿಸುವುದು ಮತ್ತು ಸಮಾವೇಶಗೊಳ್ಳುವುದು ಮತ್ತೊಂದು ಬೃಹತ್ ಕೋವಿಡ್ ಸೋಂಕಿನ ವಲಯ ಸೃಷ್ಟಿಗೆ ಕಾರಣವಾಗಬಹುದು ಎಂಬ ಆತಂಕ ಸರ್ಕಾರದೊಳಗೆ ವ್ಯಕ್ತವಾಗುತ್ತಿದೆ.

ಮುಂದಿನ ವಾರದ ವೇಳೆಗೆ ಕೋವಿಡ್ ಸೋಂಕಿನ ಹೊಸ ಪ್ರಕರಣಗಳ ದೃಢ ಪ್ರಮಾಣ ದರ ಹೇಗಿರಲಿದೆ ಎಂಬುದರ ಆಧಾರದಲ್ಲಿ ಬೆಳಗಾವಿಯಲ್ಲಿ ಅಧಿವೇಶನ ನಡೆಸಬೇಕೇ ಬೇಡವೇ ಎಂಬುದನ್ನು ನಿರ್ಧರಿಸುವ ಸಾಧ್ಯತೆ ಇದೆ. ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಈ ಬಗ್ಗೆ ಪುನರ್ ಪರಿಶೀಲನೆ ನಡೆಸುವ ಸಂಭವವಿದೆ ಎಂದು ಮೂಲಗಳು ತಿಳಿಸಿವೆ.

ಬೆಂಗಳೂರಿನ ವಿಧಾನಸೌಧದಲ್ಲಿ ವಿಧಾನಸಭೆ ಮತ್ತು ವಿಧಾನ ಪರಿಷತ್ ಸಭಾಂಗಣಗಳಲ್ಲಿ ಶಾಸಕರ ಆಸನಗಳ ನಡುವೆ ಗಾಜಿನ ತಡೆ ಅಳವಡಿಸಲಾಗಿದೆ. ಕೋವಿಡ್ ಹರಡುವುದನ್ನು ತಡೆಯಲು ಈ ಕ್ರಮ ಕೈಗೊಳ್ಳಲಾಗಿದೆ. ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ಅಂತಹ ವ್ಯವಸ್ಥೆ ಇಲ್ಲ. ಇಂತಹ ಸನ್ನಿವೇಶದಲ್ಲಿ ಅಲ್ಲಿ ಅಧಿವೇಶನ ನಡೆಸುವುದು ಅಪಾಯಕಾರಿ. ಬೆಂಗಳೂರಿನಲ್ಲೇ ಅಧಿವೇಶನ ನಡೆದರೆ ಹೆಚ್ಚಿನವರು ತಮ್ಮ ಮನೆಗಳಿಂದಲೇ ಸದನಕ್ಕೆ ಬರುತ್ತಾರೆ. ಇದರಿಂದ ಆರೋಗ್ಯದ ದೃಷ್ಟಿಯಿಂದ ಯಾವುದೇ ಅಪಾಯ ಇರುವುದಿಲ್ಲ. ಆದರೆ, ಈ ವಿಚಾರದಲ್ಲಿ ಸರ್ಕಾರ ಅಂತಿಮ ನಿರ್ಧಾರ ಕೈಗೊಂಡು,

ಅದಕ್ಕೆ ರಾಜ್ಯಪಾಲರ ಅನುಮೋದನೆ ಪಡೆಯಬೇಕಾಗುತ್ತದೆ ಎಂದು ಮೂಲಗಳು ಹೇಳಿವೆ. ಅಧಿವೇಶನ ಸಿದ್ಧತೆ ಕುರಿತು ಪರಿಶೀಲಿಸಲು ವಿಧಾನಸಭಾಧ್ಯಕ್ಷರು ಮುಂದಿನವಾರ ಬೆಳಗಾವಿಗೆ ಭೇಟಿ ನೀಡುವ ಸಾಧ್ಯತೆ ಇದೆ.

ಆಧಾರ:ಪ್ರಜಾವಾಣಿ,ದಿನಾಂಕ:29.11.2021

## 36. ಸುವರ್ಣ ಸೌಧ ಪರಿಶೀಲನೆ ನಡೆಸಲಿರುವ ಸ್ಪೀಕರ್, ಸಭಾಪತಿ

ಡಿಸೆಂಬರ್ 13 ರಿಂದ ಆರಂಭವಾಗಲಿರುವ ವಿಧಾನಮಂಡಲ ಅಧಿವೇಶನದ ಹಿನ್ನೆಲೆಯಲ್ಲಿ ಡಿಸೆಂಬರ್ 2 ರಂದು ವಿಧಾನಸಭೆ ಸ್ಪೀಕರ್ ಹಾಗೂ ವಿಧಾನ ಪರಿಷತ್ ಸಭಾಪತಿ ಬೆಳಗಾವಿಗೆ ಭೇಟಿ ನೀಡಿ, ಅಧಿವೇಶನದ ಸಿದ್ಧತೆಯ ಕುರಿತಂತೆ ಸುವರ್ಣ ವಿಧಾನಸೌಧದಲ್ಲಿ ಜಿಲ್ಲಾಡಳಿತದೊಂದಿಗೆ ಸಭೆ ನಡೆಸಲಿದ್ದಾರೆ. ಜಿಲ್ಲಾಧಿಕಾರಿ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಸೇರಿದಂತೆ ಜಿಲ್ಲೆಯ ಉನ್ನತಾಧಿಕಾರಿಗಳು ಮತ್ತು ಕರ್ನಾಟಕ ವಿಧಾನಸಭೆ ಸಚಿವಾಲಯದ ಉನ್ನತಾಧಿಕಾರಿಗಳು ಸುವರ್ಣ ವಿಧಾನಸೌಧದಲ್ಲಿ ನಡೆಯಲಿರುವ ಈ ಸಭೆಯಲ್ಲಿ ಭಾಗಿಯಾಗಲಿದ್ದಾರೆ. ಅಧಿವೇಶನದ ಹಿನ್ನೆಲೆಯಲ್ಲಿ ಸಚಿವಾಲಯದ ಅಧಿಕಾರಿಗಳ ತಂಡ ಬೆಳಗಾವಿ ತಲುಪಲಿದೆ.

ಆಧಾರ:ಉದಯವಾಣಿ, ದಿನಾಂಕ:30.11.2021

## 37. ಪರಿಷತ್ ಸದಸ್ಯ ಸ್ಥಾನಕ್ಕೆ ಮಹೋಹರ್ ರಾಜೀನಾಮೆ

ಸ್ಥಳೀಯ ಸಂಸ್ಥೆಗಳಿಂದ ಕೋಲಾರದಿಂದ ವಿಧಾನ ಪರಿಷತ್ ಪ್ರತಿನಿಧಿಸಿದ್ದ ಜೆಡಿಎಸ್‌ನ ಸಿ.ಆರ್. ಮಹೋಹರ್ ರಾಜೀನಾಮೆ ಸಲ್ಲಿಸಿದ್ದಾರೆ. ವೈಯಕ್ತಿಕ ಕಾರಣ ಮತ್ತು ಸ್ವಇಚ್ಛೆಯಿಂದ ರಾಜೀನಾಮೆ ನೀಡಿರುವುದಾಗಿ ರಾಜೀನಾಮೆ ಪತ್ರದಲ್ಲಿ ಹೇಳಿದ್ದಾರೆ. ರಾಜೀನಾಮೆಯನ್ನು ಸಭಾಪತಿ ಅಂಗೀಕರಿಸಿದ್ದಾರೆ.

ಮನೋಹರ್ ಜೆಡಿಎಸ್ ವರಿಷ್ಠರ ಜೊತೆ ಮುನಿಸಿಕೊಂಡಿದ್ದು,. ಬಿಜೆಪಿ ಕಡೆ ಒಲವು ತೋರಿದ್ದರು. ಅಲ್ಲಿ ಟಿಕೆಟ್ ಸಿಗದೆ ಇರುವುದರಿಂದ ಕಾಂಗ್ರೆಸ್‌ನತ್ತ ಮುಖ ಮಾಡಿದ್ದಾರೆ. ಡಿಸೆಂಬರ್ 2 ರಂದು ಕಾಂಗ್ರೆಸ್ ಸೇರುವ ಸಾಧ್ಯತೆಗಳಿವೆ.

ಆಧಾರ:ವಿಜಯವಾಣಿ,ದಿನಾಂಕ:30.11.2021

## 38. ಬೆಳಗಾವಿ ಅಧಿವೇಶನ ಸಿದ್ಧತೆ ಪರಿಶೀಲನೆ

ಅಧಿವೇಶನಕ್ಕೆ ಕಡಿಮೆ ಸಮಯಾವಕಾಶ ಇರುವುದರಿಂದ ಇಂಟರ್‌ನೆಟ್-ಕಂಪ್ಯೂಟರ್ ಅಳವಡಿಕೆ ಸೇರಿದಂತೆ ಎಲ್ಲ ಸಿದ್ಧತೆಗಳನ್ನು ಸಕಾಲದಲ್ಲಿ ಪೂರ್ಣಗೊಳಿಸಬೇಕು. ಎರಡು ದಿನ ಮುಂಚಿತವಾಗಿ ಪ್ರತಿಯೊಂದು ವ್ಯವಸ್ಥೆಯನ್ನು ಸಜ್ಜುಗೊಳಿಸಿ ಪ್ರಾಯೋಗಿಕವಾಗಿ ಪರಿಶೀಲಿಸಬೇಕು ಎಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಕಾರ್ಯದರ್ಶಿ ಪಿ. ಹೇಮಲತಾ ಅಧಿಕಾರಿಗಳಿಗೆ ಸೂಚನೆ ನೀಡಿದರು.

ಚಳಿಗಾಲ ಅಧಿವೇಶನದ ಹಿನ್ನೆಲೆಯಲ್ಲಿ ಸುವರ್ಣ ವಿಧಾನಸೌಧಕ್ಕೆ ಭೇಟಿ ನೀಡಿ ಪರಿಶೀಲನೆ ನೆಡೆಸಿದ ಬಳಿಕ ನಡೆದ ಅಧಿಕಾರಿಗಳ ಸಭೆಯಲ್ಲಿ ಮಾತನಾಡಿ, ಸುವರ್ಣ ವಿಧಾನಸೌಧದಲ್ಲಿ ಬಿಎಸ್‌ಎನ್‌ಎಲ್ ಹಾಗೂ ಕೇಸ್ವಾನ್ ಮೂಲಕವು ಡಿಸೆಂಬರ್ 5ರೊಳಗೆ ಇಂಟರ್‌ನೆಟ್ ಸೌಲಭ್ಯ ಕಲ್ಪಿಸಬೇಕು. ಅಧಿವೇಶನ ಸಂದರ್ಭದಲ್ಲಿ ಸಚಿವಾಲಯ ಸಿಬ್ಬಂದಿಗೆ ಅಗತ್ಯ ಲೇಖನ ಸಾಮಗ್ರಿ, ಪ್ರಿಂಟರ್ ಮತ್ತಿತರ ಅಗತ್ಯ ಸೌಲಭ್ಯಗಳನ್ನು ಕಲ್ಪಿಸಬೇಕು. ಸಂಬಂಧಿಸಿದ ಅಧಿಕಾರಿಗಳು ಅಥವಾ ಸಿಬ್ಬಂದಿ ಸಂಪರ್ಕಿಸಲು ಅನುಕೂಲವಾಗುವಂತೆ ದೂರವಾಣಿ ಸಂಖ್ಯೆ ಒಳಗೊಂಡಿರುವ ಮಾಹಿತಿ ಪುಸ್ತಕವನ್ನು ಮುದ್ರಿಸಬೇಕು. ಕೋವಿಡ್ ಹಿನ್ನೆಲೆಯಲ್ಲಿ ಸರ್ಕಾರದ ಮಾರ್ಗಸೂಚಿ ಪಾಲನೆಗೆ ಗಮನಹರಿಸಬೇಕು ಕೋವಿಡ್ ಪರೀಕ್ಷೆ ಮಾಡಲು ವಿಶೇಷ ತಂಡಗಳನ್ನು ನಿಯೋಜಿಸಬೇಕು ಎಂದರು.

ಇದಕ್ಕೆ ಪ್ರತಿಕ್ರಿಯಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಡಾ:ಎಸ್. ವಿ. ಮುನ್ಯಾಳ ಅವರು ಸುವರ್ಣ ವಿಧಾನಸೌಧ ಸೇರಿದಂತೆ ಗಣ್ಯರು ವಾಸಿಸುವ ಕಡೆಗಳಲ್ಲಿ ಆಹಾರ ಗುಣಮಟ್ಟ ಪರಿಶೀಲನೆಗೆ ಪ್ರತ್ಯೇಕ ತಂಡಗಳನ್ನು ನಿಯೋಜಿಸಲಾಗುತ್ತದೆ. ಇದರೊಂದಿಗೆ ತುರ್ತು ಚಿಕಿತ್ಸೆಗೆ ಅನುಕೂಲವಾಗುವಂತೆ ಆಂಬ್ಯುಲೆನ್ಸ್ ಮತ್ತು ವೈದ್ಯಕೀಯ ತಂಡಗಳನ್ನು ಎಲ್ಲ ಕಡೆಗಳಲ್ಲಿ ನಿಯೋಜನೆ ಮಾಡಲಾಗುತ್ತಿದೆ ಎಂದರು.

ಸುವರ್ಣ ವಿಧಾನಸೌಧದಲ್ಲಿ ಕುಡಿಯುವ ನೀರು ಸರಬರಾಜು, ಕಂಪ್ಯೂಟರ್ ನಿರ್ವಹಣೆ ಊಟೋಪಹಾರ ಪೂರೈಕೆ ಸೇರಿದಂತೆ ಪ್ರತಿಯೊಂದು ವಿಭಾಗಕ್ಕೂ ಪ್ರತ್ಯೇಕ ತಂಡಗಳನ್ನು ನಿಯೋಜಿಸಲಾಗಿದೆ ಎಂದು ಲೋಕೋಪಯೋಗಿ ಇಲಾಖೆ ಕಾರ್ಯನಿರ್ವಾಹಕ ಎಂಜಿನಿಯರ್ ಸಂಜೀವ್‌ಕುಮಾರ್ ಹುಲಕಾಯಿ ತಿಳಿಸಿದರು.

ಆಧಾರ:ಉದಯವಾಣಿ,ದಿನಾಂಕ:02.12.2021





**ಸನ್ಮಾನ್ಯ ಸಭಾಪತಿಗಳು, ಸನ್ಮಾನ್ಯ ಸಭಾಧ್ಯಕ್ಷರು ಹಾಗೂ ಸನ್ಮಾನ್ಯ ಉಪ ಸಭಾಧ್ಯಕ್ಷರು ದಿನಾಂಕ: 02.12.2021ರಂದು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಹಿರಿಯ ಅಧಿಕಾರಿಗಳೊಂದಿಗೆ ಪೂರ್ವಸಿದ್ಧತೆಯ ಕುರಿತು ಸಭೆ ಹಾಗೂ ಸ್ಥಳಪರಿವೀಕ್ಷಣೆ ನಡೆಸಿ, ಪತ್ರಿಕಾಗೋಷ್ಠಿ ನಡೆಸಿದ ಸಂದರ್ಭ.**

## 39. ಬೆಳಗಾವಿಯಲ್ಲೇ ಅಧಿವೇಶನ

ಒಮಿಕ್ರಾನ್ ವೈರಸ್ ಇದುವರೆಗೂ ನಮ್ಮ ದೇಶ ಅಥವಾ ರಾಜ್ಯದಲ್ಲಿ ಪತ್ತೆಯಾಗಿಲ್ಲ. ಆದರೂ ಎಚ್ಚರಿಕೆ ವಹಿಸಿದ್ದೇವೆ. ಬೆಳಗಾವಿಯಲ್ಲಿ ಎಲ್ಲ ರೀತಿಯ ಸುರಕ್ಷತಾ ಕ್ರಮ ಕೈಗೊಂಡು ವಿಧಾನಮಂಡಲ ಅಧಿವೇಶನ ನಡೆಸಲಿದ್ದೇವೆ ಎಂದು ಕಂದಾಯ ಸಚಿವ ಆರ್. ಅಶೋಕ್ ಹೇಳಿದ್ದಾರೆ ಸುದ್ದಿಗಾರರ ಜೊತೆ ಮಾತನಾಡಿದ ಅವರು ಬೆಳಗಾವಿಯಲ್ಲಿ ಅಧಿವೇಶನ ನಡೆಸುವುದಾಗಿ ಹೇಳಲಾಗಿದೆ. ಈಗಾಗಲೇ ಎರಡು ವರ್ಷದಿಂದ ಅಧಿವೇಶನ ಅಲ್ಲಿ ಮಾಡಿಲ್ಲ. ಇದೀಗ ರದ್ದು ಮಾಡಿದರೆ ಬೇರೆ ರೀತಿಯ ಸಂದೇಶ ಹೋಗುತ್ತದೆ. ಎಲ್ಲ ರೀತಿಯ ಮುನ್ನಚ್ಚರಿಕೆ ಕ್ರಮಗಳೊಂದಿಗೆ ಅಧಿವೇಶನ ಸುಸೂತ್ರವಾಗಿ ನಡೆಸಲಾಗುವುದೆಂದು ತಿಳಿಸಿದರು. ನಿಗದಿತ ದಿನಾಂಕದಂದು ಅಧಿವೇಶನ ನಡೆಯಲಿದೆ ಎಂದರು.

ಆಧಾರ:ಉದಯವಾಣಿ,ದಿನಾಂಕ:02.12.2021

## 40. ಚಳಿಗಾಲದ ಅಧಿವೇಶನಕ್ಕೆ ಸಮರ್ಪಕ ವ್ಯವಸ್ಥೆ

ಡಿಸೆಂಬರ್ ತಿಂಗಳ 13 ರಿಂದ 24ರವರೆಗೆ ಬೆಳಗಾವಿಯ ಸುವರ್ಣಸೌಧದಲ್ಲಿ ನಡೆಯಲಿರುವ ಚಳಿಗಾಲದ ಅಧಿವೇಶನ ಯಶಸ್ವಿಗೊಳಿಸಲು ಉತ್ತಮ ವಸತಿ, ಸಾರಿಗೆ, ಆಹಾರ, ಶಿಷ್ಟಾಚಾರಗಳ ಸಿದ್ಧತೆಗಳನ್ನು ಸರ್ಕಾರ ಮತ್ತು ಜಿಲ್ಲಾಡಳಿತ ಸಮರ್ಪಕವಾಗಿ ಕೈಗೊಳ್ಳಬೇಕು ಎಂದು ವಿಧಾನಸಭಾಧ್ಯಕ್ಷರು ಹೇಳಿದರು.

ಇಲ್ಲಿನ ಸುವರ್ಣ ಸೌಧದ ಸಮ್ಮೇಳನ ಸಭಾಂಗಣದಲ್ಲಿ ಕರೆಯಲಾಗಿದ್ದ ಅಧಿವೇಶನದ ಪೂರ್ವಸಿದ್ಧತಾ ಸಭೆಯಲ್ಲಿ ಮಾತನಾಡಿದ ಅವರು ಮೂರು ವರ್ಷಗಳ ಬಳಿಕ ಸುವರ್ಣಸೌಧದಲ್ಲಿ ಅಧಿವೇಶನ ನಡೆಯುತ್ತಿದೆ. ಈ ಹಿಂದೆ 2008ರ ಡಿಸೆಂಬರ್‌ನಲ್ಲಿ ಅಧಿವೇಶನ ನಡೆದಿತ್ತು. ಕೊರೋನಾ ನಿಯಂತ್ರಣ, ಅತಿವೃಷ್ಟಿ, ವಿಧಾನ ಪರಿಷತ್ ಚುನಾವಣೆ ಎಲ್ಲವುಗಳ ಮಧ್ಯೆ ಅಧಿವೇಶನ ಆಯೋಜಿಸುವುದು ಸವಾಲಿನ ಕಾರ್ಯವಾಗಿದೆ. ಸಿದ್ಧತೆಗಳನ್ನು ಸರ್ಕಾರ ಜಿಲ್ಲಾಡಳಿತ ಹಾಗೂ ವಿಧಾನಸಭೆ ಹಾಗೂ ವಿಧಾನ ಪರಿಷತ್‌ನ ಪರಸ್ಪರ ಸಮನ್ವಯದೊಂದಿಗೆ ವಿಶ್ವಾಸಪೂರ್ಣವಾಗಿ ಆಯೋಜಿಸಬೇಕು. ಜವಾಬ್ದಾರಿಯುತವಾಗಿ ಎಲ್ಲಾ ಹಂತಗಳಲ್ಲಿ ಪರಸ್ಪರ ಸಂವಹನ ಮಾಡಬೇಕು. ಸಚಿವರು, ಶಾಸಕರ ಹಿರಿತನ ಆಧರಿಸಿ ಸೌಕರ್ಯ ಕಲ್ಪಿಸಬೇಕು. ಎಲ್ಲರಿಗೂ ಲಯೇಸನ್ ಅಧಿಕಾರಿಗಳನ್ನು ನೇಮಿಸಬೇಕು. ಅಧಿವೇಶನಕ್ಕೆ ಸಂಬಂಧಿಸಿದಂತೆ ವಿಧಾನಸಭೆ ಹಾಗೂ ವಿಧಾನ ಪರಿಷತ್ತಿನ ಬುಲೆಟಿನ್, ಕಾರ್ಯಕ್ರಮ ಪಟ್ಟಿ, ಕಲಾಪಗಳು ಪ್ರಶ್ನೋತ್ತರಗಳ ಸಿದ್ಧತೆ ಕೈಗೊಳ್ಳಲಾಗಿದೆ ಎಂದು ವಿವರಿಸಿದರು.

ವಿಧಾನಸಭೆ / ವಿಧಾನ ಪರಿಷತ್ತು ಕಲಾಪ ವೀಕ್ಷಣೆಗೆ ಈ ಬಾರಿ ಸಾರ್ವಜನಿಕರಿಗೆ ಅವಕಾಶ ನೀಡಲಾಗುತ್ತಿದ್ದು, ಕೊರೋನಾ ಹಿನ್ನಲೆಯಲ್ಲಿ ಈ ಬಾರಿ ಮಕ್ಕಳಿಗೆ ಅವಕಾಶವಿಲ್ಲ ಎಂದು ಅವರು ಸ್ಪಷ್ಟಪಡಿಸಿದರು.

ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿ, ಅಧಿವೇಶನವನ್ನು ಸಾಧ್ಯವಾದಷ್ಟು ಕಡಿಮೆ ಖರ್ಚಿನಲ್ಲಿ ಆಯೋಜಿಸಬೇಕು. ವಿಧಾನಸಭೆ ಹಾಗೂ ವಿಧಾನ ಪರಿಷತ್ತಿನ ಎಲ್ಲಾ ಸದಸ್ಯರಿಗೆ ಬೆಳಗಾವಿಯಲ್ಲಿಯೇ ವಸತಿ ಸೌಕರ್ಯ ಕಲ್ಪಿಸಿದರೆ ಸದನಕ್ಕೆ ಅವರು ಸಕಾಲದಲ್ಲಿ ಹಾಜರಾಗಲು ಅನುಕೂಲವಾಗುತ್ತದೆ ಎಂದರು.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:03.12.2021

## 41. ವಿಧಾನಮಂಡಲಗಳಿಗೆ ಆರ್ಥಿಕ ಸ್ವಾಯತ್ತತೆ : ಹೊರಟ್ಟಿ ಪ್ರತಿಪಾದನೆ

ವಿಧಾನ ಮಂಡಲಗಳ ಸ್ವತಂತ್ರ್ಯ ನಿರ್ವಹಣೆ ಹಾಗೂ ಪಕ್ಷಾತೀತ ಕಾರ್ಯನಿರ್ವಹಣೆ ದೃಷ್ಠಿಯಿಂದ ಅವುಗಳಿಗೆ ಆರ್ಥಿಕ ಸ್ವಾಯತ್ತತೆ ನೀಡುವುದು ಅಗತ್ಯವಾಗಿದ್ದು, ಆ ನಿಟ್ಟಿನಲ್ಲಿ ಆಯವ್ಯಯದಲ್ಲಿ ಪ್ರತ್ಯೇಕ ಬಜೆಟ್ ಮೀಸಲಿಡಬೇಕೆಂದು ವಿಧಾನ ಪರಿಷತ್ತು ಸಭಾಪತಿ ಬಸವರಾಜ ಹೊರಟ್ಟಿ ಮನವಿ ಮಾಡಿದರು.

ಶಿಮ್ಲಾದಲ್ಲಿ ನಡೆದ 2 ದಿನಗಳ 82ನೇ ಆಖಿಲ ಭಾರತ ಪೀಠಾಸೀನಾದಿಕಾರಿಗಳ ಸಮ್ಮೇಳನ ಮತ್ತು ಶತಮಾನೋತ್ಸವ ಸಮಾರಂಭದಲ್ಲಿ ಸಮ್ಮೇಳನ ನಿರ್ಣಯ ಕುರಿತ ಸಭೆಯಲ್ಲಿ ಮಾತನಾಡಿದ ಅವರು ವಿಧಾನ ಮಂಡಲದ ಸಚಿವಾಲಯಕ್ಕೆ ಆರ್ಥಿಕ ಸ್ವಾಯತ್ತತೆ ಕುರಿತು ಸಮ್ಮೇಳನ ಪೂರಕ ನಿರ್ಣಯ ಸ್ವೀಕರಿಸಿ, ಸದನಗಳ ಗೌರವ ಘನತೆ ಹಾಗೂ ಪ್ರಾಮುಖ್ಯತೆ ಹೆಚ್ಚಿಸಬೇಕು ಈ ನಿಟ್ಟಿನಲ್ಲಿ ಲೋಕ ಸಭಾಧ್ಯಕ್ಷರು ನಿರ್ಣಯ ಅಂಗೀಕರಿಸುವ ಮೂಲಕ ಸೂಕ್ತ ಕ್ರಮ ಕೈಗೊಳ್ಳುವಂತೆ ಮನವಿ ಮಾಡಿದರು.

ಅವರ ಮನವಿಗೆ ಸಕರಾತ್ಮಕವಾಗಿ ಸ್ಪಂದಿಸಿದ ಲೋಕ ಸಭಾಧ್ಯಕ್ಷರಾದ ಓಂ ಬಿರ್ಲಾ ಅವರು ಈ ಕುರಿತು ಕೂಡಲೇ ಎಲ್ಲಾ ರಾಜ್ಯಗಳ ಮುಖ್ಯಮಂತ್ರಿಗಳಿಗೆ ಪತ್ರ ಬರೆದು ಮನವಿ ಮಾಡಲಾಗುವುದು ಎಂದರು.

ಸದನದಲ್ಲಿ ಸದಸ್ಯರ ನಡವಳಿಕೆ, ನೀತಿ ನಿಯಮಗಳ ಪಾಲನೆ ಸೇರಿದಂತೆ ವಿವಿಧ ವಿಷಯಗಳ ಕುರಿತು 2 ದಿನಗಳ ಸಮ್ಮೇಳನದಲ್ಲಿ ಕೈಗೊಂಡ ಎಲ್ಲಾ ನಿರ್ಣಯಗಳನ್ನು ಯಥಾವತ್ತಾಗಿ ಅನುಷ್ಠಾನಗೊಳಿಸಲು ಲೋಕ ಸಭಾಧ್ಯಕ್ಷರು ಕ್ರಮಕೈಗೊಳ್ಳುವಂತೆ ಹೊರಟ್ಟಿ ಮನವಿ ಮಾಡಿದರು.

ರಾಜ್ಯ ಸಭೆಯ ಉಪಸಭಾಪತಿ ಹರಿವಂಶ್ ನಾರಾಯಣ ಸಿಂಗ್ ಮಾತನಾಡಿ, ಮೊದಲ ಪೀಠಾಸೀನಾಧಿಕಾರಿಗಳ ಸಮ್ಮೇಳನ 1921 ರಲ್ಲಿ ಹಿಮಾಚಲ ಪ್ರದೇಶದಲ್ಲಿಯೇ ನಡೆದಿದ್ದು, ಇದೀಗ ಶತಮಾನೋತ್ಸವವೂ ಸಹ ಹಿಮಾಚಲ ಪ್ರದೇಶದಲ್ಲಿ ನಡೆಯುತ್ತಿರುವುದು ಸಂತಸದ ಸಂಗತಿ ಎಂದರು.

ವಿಧಾನಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ, ಹಿಮಾಚಲ ಪ್ರದೇಶದ ವಿಧಾನ ಸಭಾಧ್ಯಕ್ಷ ವಿಪಿನ್ ಸಿಂಗ್ ಪರಮಾರ್ ಸೇರಿದಂತೆ ವಿವಿಧ ರಾಜ್ಯಗಳ ವಿಧಾನ ಸಭಾಧ್ಯಕ್ಷರು ಹಾಗೂ ಸಭಾಪತಿಗಳು ಪಾಲ್ಗೊಂಡಿದ್ದರು.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:03.12.2021

## 42. ಸವಾಲುಗಳ ನಡುವೆ ಅಧಿವೇಶನಕ್ಕೆ ಸಿದ್ಧತೆ

ಭಯದ ವಾತಾವರಣದ ಮಧ್ಯೆ ಅಧಿವೇಶನ ಬೇಡ ಎಂಬ ವಿಧಾನಮಂಡಲದ ನೌಕರರ, ಕೆಲ ಮಾಜಿ ಸಚಿವರ, ಶಾಸಕರ ಒತ್ತಡದ ಮಧ್ಯೆ ಬೆಳಗಾವಿ ಸುವರ್ಣ ಸೌಧದಲ್ಲಿ ಅಧಿವೇಶನದ ತಯಾರಿ ನಡೆದಿದೆ. ಈ ಮಧ್ಯೆ ಸರ್ಕಾರ ಕಲಾಪ ನಡೆಸುವ ಸಂಬಂಧ ಸಂಪುಟದಲ್ಲಿ ಚರ್ಚಿಸಿ ಅಂತಿಮ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಮುಂದಾಗಿದೆ.

ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರೊಂದಿಗೆ ಸುವರ್ಣ ವಿಧಾನಸೌಧಕ್ಕೆ ಭೇಟಿ ನೀಡಿದ ಸ್ಪೀಕರ್ ಕಾಗೇರಿ ಆತಂಕ, ಮುಂಜಾಗ್ರತೆ ಅನುಸರಿಸಿ ಡಿಸೆಂಬರ್ 13 ರಿಂದ ಅಧಿವೇಶನ ನಡೆಸಲು ಸಿದ್ಧತೆ ಮಾಡಿಕೊಳ್ಳಲಾಗುತ್ತಿದೆ ಎಂದರು.

ಸ್ಥಳೀಯ ಸಂಸ್ಥೆ ಪರಿಷತ್ ಚುನಾವಣೆ, ಅತಿವೃಷ್ಟಿ ಕೋವಿಡ್ ನಡುವೆ ಅಧಿವೇಶನ ನಡೆಸಬೇಕಿರುವುದು ಸವಾಲಾಗಿದೆ. ರಾಜ್ಯ ಸಭೆ ಮತ್ತು ಲೋಕಸಭೆಯಲ್ಲಿ ನಡೆದ ಅಶಿಸ್ತಿನ ಘಟನೆಗಳು ವೈಯಕ್ತಿಕವಾಗಿ ನನಗೆ ನೋವು ತಂದಿದೆ. ಈ ಬಗ್ಗೆ ಪತ್ರ ಬರೆದು ತಿಳಿಸಿದ್ದೇನೆ. ನಮ್ಮ ವರ್ತನೆಯನ್ನು

ಲಕ್ಷಾಂತ ಕಣ್ಣುಗಳು ನೋಡುತ್ತಿರುತ್ತವೆ. ನಡವಳಿಕೆಯಲ್ಲಿ ನಿಯಮ, ಸಭ್ಯತೆ ಮೀರಿದರೆ ಶಾಸಕರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಾಗುವುದು ಎಂದರು.

**ಉತ್ತರ ಕರ್ನಾಟಕ ಸಮಸ್ಯೆಗಳ ಚರ್ಚೆಗೆ ಪ್ರಾಶಸ್ತ್ಯ:** ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿ, ಕಲಾಪದಲ್ಲಿ ಉತ್ತರ ಕರ್ನಾಟಕ ಭಾಗದ ಸಮಸ್ಯೆಗಳ ಕುರಿತಾದ ಚರ್ಚೆಗೆ ಹೆಚ್ಚಿನ ಅವಕಾಶ ಕೊಡುವ ಪ್ರಯತ್ನ ಮಾಡಲಾಗುವುದು. ಬೆಳಗಾವಿಯಲ್ಲಿ ಶಾಸಕರ ಭವನ ನಿರ್ಮಿಸಲು ಸಿಎಂಗೆ ಸಲಹೆ ನೀಡಲಾಗಿದೆ ಎಂದರು.

**ಸಚಿವ ಸಂಪುಟದಲ್ಲಿ ಸ್ಪಷ್ಟತೆ:** ಬೆಳಗಾವಿಯಲ್ಲಿ ಅಧಿವೇಶನ ನಡೆಸುವ ಬಗ್ಗೆ ಈಗಾಗಲೇ ಕೈಗೊಂಡ ತೀರ್ಮಾನದ ಬಗ್ಗೆ ಮುಂದಿನ ವಾರದ ಸಂಪುಟ ಸಭೆಯಲ್ಲಿ ಚರ್ಚಿಸಿ ಮತ್ತೊಮ್ಮೆ ಸೂಕ್ತ ನಿರ್ಧಾರ ತೆಗೆದುಕೊಳ್ಳಲಾಗುತ್ತದೆ. ಇದರ ನಡುವೆ ಕೋವಿಡ್ ರೂಪಾಂತರಿ ತಳಿ ಒಮಿಕ್ರಾನ್ ಹರಡುವ ಆತಂಕ ಉಂಟಾಗಿರುವುದರಿಂದ ಮರು ಪರಾಮರ್ಶೆ ಮಾಡಬೇಕಾಗಿ ಬಂದಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:03.12.2021

## 43. ಬೆಳಗಾವಿ ಅಧಿವೇಶನ ಸವಾಲಾಗಿ ಸ್ವೀಕಾರ

ಸುವರ್ಣ ವಿಧಾನಸೌಧದಲ್ಲಿ ಡಿಸೆಂಬರ್ 13 ರಿಂದ 24ರವರೆಗೆ ನಿಗದಿಯಾಗಿರುವ ವಿಧಾನಮಂಡಲ ಚಳಿಗಾಲದ ಅಧಿವೇಶನವನ್ನು ಕೋವಿಡ್ ಹಿನ್ನೆಲೆಯಲ್ಲಿ ಅಗತ್ಯ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಂಡು ನಡೆಸಲಾಗುವುದು ಎಂದು ವಿಧಾನಸಭಾಧ್ಯಕ್ಷರು ತಿಳಿಸಿದರು.

ಅಧಿವೇಶನದ ಪೂರ್ವ ಸಿದ್ಧತೆ ಕುರಿತು ಸುವರ್ಣ ವಿಧಾನಸೌಧದಲ್ಲಿ ಅಧಿಕಾರಿಗಳ ಸಭೆ ನಡೆಸಿದ ಬಳಿಕ ಸುದ್ದಿಗೋಷ್ಠಿಯಲ್ಲಿ ಅವರು ಮಾತನಾಡಿದರು. ಈ ಬಾರಿ ಅಧಿವೇಶನಕ್ಕೆ ಅನೇಕ ಸವಾಲುಗಳು ಎದುರಾಗಿವೆ. ಅತಿವೃಷ್ಟಿಯಿಂದ ಸಾಕಷ್ಟು ಹಾನಿಯಾಗಿದ್ದು, ಅಧಿಕಾರಿಗಳು ಪರಿಹಾರ ಕಾರ್ಯ ಕೈಗೊಳ್ಳಬೇಕಿದೆ. ಡಿಸೆಂಬರ್ 14ಕ್ಕೆ ವಿಧಾನ ಪರಿಷತ್ ಚುನಾವಣೆ ಮತ ಎಣಿಕೆ ಇದೆ. ಇದೇ ತಿಂಗಳಲ್ಲಿ ಪುರಸಭೆ ಹಾಗೂ ಪಟ್ಟಣ ಪಂಚಾಯಿತಿಗಳ ಚುನಾವಣೆಯೂ ನಡೆಯಲಿದೆ. ಬೆಳಗಾವಿ ಜಿಲ್ಲಾಡಳಿತದ ಮೇಲೆ ದೊಡ್ಡ ಜವಾಬ್ದಾರಿ ಇದೆ. ಇವೆಲ್ಲ ಸವಾಲುಗಳನ್ನು ಅವಕಾಶವಾಗಿ ಸ್ವೀಕರಿಸಿ ಅಧಿವೇಶನ ನಡೆಸಲಾಗುವುದು ಎಂದರು. 2018ರ ನಂತರ ಬೆಳಗಾವಿಯಲ್ಲಿ ಅಧಿವೇಶನ ನಡೆದಿಲ್ಲ. ನಾವೂ ಸಮಾಲೋಚಿಸಿದಾಗ, ಈ ಬಾರಿ ಅಧಿವೇಶನ ನಡೆಸಲು ಸದ್ಯ ಯಾವುದೇ ಆತಂಕವಿಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿದೆ ಎಂದರು.

ಅಧಿವೇಶನಕ್ಕೆ ಬರುವ ಸಚಿವರು, ಶಾಸಕರು, ಅಧಿಕಾರಿಗಳು ಸಿಬ್ಬಂದಿ, ಮಾಧ್ಯಮ ಪ್ರತಿನಿಧಿಗಳಿಗೆ ವಸತಿ ವ್ಯವಸ್ಥೆ ಮಾಡಲಾಗಿದೆ. ಆಹಾರದ ವ್ಯವಸ್ಥೆಯನ್ನು ಮಾಡಿಕೊಳ್ಳಲಾಗಿದೆ ಎಂದು ತಿಳಿಸಿದರು. ಕಲಾಪ ವೀಕ್ಷಣೆಗಾಗಿ ವಿದ್ಯಾರ್ಥಿಗಳು ಶೈಕ್ಷಣಿಕ ಪ್ರವಾಸಕ್ಕೆ ಬರುತ್ತಿದ್ದರು. ಈ ಭಾರಿ ವಿದ್ಯಾರ್ಥಿಗಳಿಗೆ ಅವಕಾಶವಿಲ್ಲ. ಸಾರ್ವಜನಿಕರಿಗೆ ಕಲಾಪ ವೀಕ್ಷಿಸಲು ಅನುವು ಮಾಡಿಕೊಡಲಾಗುವುದು.

ಸರ್ಕಾರದಿಂದ ಈವರೆಗೆ ಯಾವುದೇ ಮಸೂದೆ ನಮ್ಮ ಮುಂದೆ ಬಂದಿಲ್ಲ. ಮಸೂದೆ ಮಂಡಿಸುವುದಿದ್ದರೆ ವಾರದ ಮುಂಚೆ ಕಳುಹಿಸುವಂತೆ ಸರ್ಕಾರಕ್ಕೆ ಸೂಚಿಸಲಾಗಿದೆ. ಇನ್ನು ಕಾಲಾವಕಾಶವಿದೆ. ಹತ್ತು ದಿನಗಳವರೆಗೆ ಎಲ್ಲ ಕಲಾಪಗಳನ್ನು ವ್ಯವಸ್ಥಿತವಾಗಿ ನಡೆಸಲಾಗುವುದು. ಉತ್ತರ ಕರ್ನಾಟಕದ ಸಮಸ್ಯೆಗಳ ಚರ್ಚೆಗೆ ಆದ್ಯತೆ ನೀಡಲಾಗುವುದು ಎಂದರು.

ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿ, ರಾಜ್ಯದ 25 ವಿಧಾನ ಪರಿಷತ್ ಸದಸ್ಯರ ಅಧಿಕಾರದ ಅವಧಿ 2022ರ ಜನವರಿ 5ರವರೆಗೆ ಇದೆ. ಅವರೆಲ್ಲರೂ ವಿಧಾನ ಪರಿಷತ್ ಕಲಾಪದಲ್ಲಿ ಭಾಗವಹಿಸಬಹುದು. ಡಿಸೆಂಬರ್ 10 ರಂದು ಮತದಾನ ಪ್ರಕ್ರಿಯೆ ಮುಗಿಯುವುದರಿಂದ

ಅಭ್ಯರ್ಥಿಗಳಿಗೂ (ಹಾಲಿ ಸದಸ್ಯರು) ಭಾಗವಹಿಸಲು ಅವಕಾಶವಿದೆ. ಹೊಸದಾಗಿ ಚುನಾಯಿತರಾದ ಸದಸ್ಯರು ಜನವರಿ 5ರ ನಂತರ ಪ್ರಮಾಣ ವಚನ ಸ್ವೀಕರಿಸುತ್ತಾರೆ ಎಂದು ಹೇಳಿದರು.

ಅಧಿವೇಶನ ವೇಳೆ ವಸತಿ ವ್ಯವಸ್ಥೆಗೆ ವ್ಯಯಿಸಿದ್ದನ್ನು ಗಮನಿಸಿದರೆ, ಆ ಹಣದಲ್ಲೇ ಈವರೆಗೆ ಶಾಸಕರ ಭವನ ನಿರ್ಮಾಣವಾಗುತ್ತಿತ್ತು. ಇನ್ನಾದರೂ ಇಲ್ಲಿ ಶಾಸಕರ ಭವನ ಹಾಗೂ ಸಚಿವಾಲಯದ ಕಟ್ಟಡ ನಿರ್ಮಿಸಬೇಕು ಎಂದು ಮುಖ್ಯಮಂತ್ರಿಯವರ ಗಮನಕ್ಕೆ ತಂದಿದ್ದೇವೆ. ಮತ್ತೊಮ್ಮೆ ಅವರೊಂದಿಗೆ ಸಮಾಲೋಚನೆ ನಡೆಸುವೆ ಎಂದರು.

ಆಧಾರ:ವಿಶ್ವವಾಣಿ,ದಿನಾಂಕ:03.12.2021

## 44. ಅಧಿವೇಶನ : ಸರ್ಕಾರಕ್ಕೆ ಇಕ್ಕಟ್ಟು

ಮೂರು ವರ್ಷದ ಬಳಿಕ ಸುವರ್ಣಸೌಧದಲ್ಲಿ ಚಳಿಗಾಲದ ಅಧಿವೇಶನ ನಡೆಸುವ ಹುಮ್ಮಸ್ಸಿನಲ್ಲಿರುವ ಸರ್ಕಾರಕ್ಕೆ ಇದೀಗ ಒಮಿಕ್ರಾನ್ ಸೋಂಕು ರಾಜ್ಯದಲ್ಲೇ ಪತ್ತೆಯಾಗಿರುವುದು ಸಂಕಷ್ಟ ತಂದಿದೆ. ಯಾವ ರೀತಿಯ ತೀರ್ಮಾನ ಕೈಗೊಳ್ಳಬೇಕು ಎಂದು ಗೊತ್ತಾಗದೆ ಇಕ್ಕಟ್ಟಿಗೆ ಸಿಲಿಕಿದೆ.

ಕೊರೋನಾ ಆತಂಕದ ನಡುವೆಯೇ ಬೆಳಗಾವಿಯಲ್ಲಿ ಅಧಿವೇಶನಕ್ಕೆ ಸಕಲ ಸಿದ್ಧತೆ ಮಾಡಿಕೊಳ್ಳಲಾಗುತ್ತಿದೆ. ಉತ್ತರ ಕರ್ನಾಟಕ ಭಾಗದ ಜನಪ್ರತಿನಿಧಿಗಳು ಬೆಳಗಾವಿಯಲ್ಲಿಯೇ ಅಧಿವೇಶನ ನಡೆಯಬೇಕು ಎನ್ನುತ್ತಿದ್ದಾರೆ. ಅಧಿಕಾರಿಗಳು ಹಾಗೂ ಹಳೇ ಮೈಸೂರು ಕರಾವಳಿ ಭಾಗದ ಶಾಸಕರು ಬೆಳಗಾವಿ ಅಧಿವೇಶನ ಬೇಡ ಎಂದು ಒತ್ತಾಯಿಸುತ್ತಿದ್ದಾರೆ. ಅದರಲ್ಲಿಯೂ ಮಹಾರಾಷ್ಟ್ರಕ್ಕೆ ಹೊಂದಿಕೊಂಡಿರುವ ಬೆಳಗಾವಿಯಲ್ಲಿ ಅಧಿವೇಶನ ನಡೆಸುತ್ತಿರುವುದರಿಂದ ಶಾಸಕರು, ಅಧಿಕಾರಿ ವಲಯದಲ್ಲಿ ಆತಂಕ ಶುರುವಾಗಿದೆ. ಬೇಡ ಎನ್ನುವವರ ವಾದಕ್ಕೆ ಪುಷ್ಠಿ ನೀಡುವಂತೆ ಕರ್ನಾಟಕದಲ್ಲಿ ಒಮಿಕ್ರಾನ್ ಕಾಣಿಸಿಕೊಂಡಿರುವುದರಿಂದ ಸರ್ಕಾರ ಇಕ್ಕಟ್ಟಿಗೆ ಸಿಲುಕಿದೆ. ಗೋವಾ ಮಹಾರಾಷ್ಟ್ರ ಸಮೀಪದಲ್ಲಿರುವ ಹಿನ್ನೆಲೆಯಲ್ಲಿ ಪ್ರವಾಸಿಗರ ಸಂಖ್ಯೆ ಹೆಚ್ಚಿರಲಿದ್ದು, ಅಂತರರಾಷ್ಟ್ರೀಯ ಪ್ರಯಾಣದ ಹಿನ್ನೆಲೆಯಿರುವ ಜನರು ಹೆಚ್ಚಾಗಿ ಬೆಳಗಾವಿ ಸಂಪರ್ಕಕ್ಕೆ ಬರುವ ಸಾಧ್ಯತೆ ಇದೆ.

**ಅಧಿಕಾರಿಗಳ ವಾದವೇನು:**

- ಕೊರೋನಾ ಭೀತಿಯ ಜೊತೆ ಒಮಿಕ್ರಾನ್ ಸೇರಿದೆ.
- ಡೆಲ್ಟಗಿಂತ ಒಮಿಕ್ರಾನ್ ವೇಗವಾಗಿ ಹಬ್ಬುತ್ತಿದೆ. ಆದ್ದರಿಂದ ನಿರ್ಲಕ್ಷ್ಯ ಬೇಡ.
- ಲಸಿಕೆ ಪಡೆದವರಿಗೂ ಸೋಂಕು ಬರುತ್ತಿರುವುದರಿಂದ ಈ ಸಮಯದಲ್ಲಿ ಬೆಂಗಳೂರೇ ಸೂಕ್ತ.
- ಎಲ್ಲರನ್ನು ಬೆಳಗಾವಿಯಲ್ಲಿ ಉಳಿಸಿದರೆ, ಸೋಂಕು ಹಬ್ಬುವ ಸಾಧ್ಯತೆ.
- ಸಿ ಮತ್ತು ಡಿ ಗ್ರೂಪ್ ನೌಕರರಿಗೆ ನೀಡುವ ವಾಸ್ತವ್ಯದ ಹೋಟೆಲ್‌ಗಳಲ್ಲಿ ಸಾಮಾಜಿಕ ಅಂತರ ಕಷ್ಟಸಾಧ್ಯ.
- ಬೆಳಗಾವಿಯಲ್ಲಿ ಅಧಿವೇಶನ ನಡೆದರೆ ಪ್ರತಿಭಟನೆಗಳು ಇರಲಿದೆ, ಆ ಸ್ಥಳದಲ್ಲಿ ಕೋವಿಡ್ ಮಾರ್ಗಸೂಚಿ ಪಾಲನೆ ಅಸಾಧ್ಯ.

ಆಧಾರ:ವಿಶ್ವವಾಣಿ,ದಿನಾಂಕ:03.12.2021

## 45. ಕೋವಿಡ್ ಸೋಂಕಿನ ನಿಯಮಗಳಲ್ಲಿ ನ್ಯೂನತೆ ಇದೆ :ಸಭಾಪತಿ ಹೊರಟ್ಟಿ

ಓಮಿಕ್ರಾನ್ ಆತಂಕದ ಹಿನ್ನೆಲೆಯಲ್ಲಿ ಕೆಂಪೇಗೌಡ ಅಂತರರಾಷ್ಟ್ರಿಯ ವಿಮಾನ ನಿಲ್ದಾಣದಲ್ಲಿ ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡಿರುವುದಾಗಿ ಸರ್ಕಾರ ಹೇಳಿದೆ. ಆದರೆ, ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರೇ ಇಲ್ಲಿ ಕೆಲ ನ್ಯೂನತೆಗಳಿದ್ದು ಸರ್ಕಾರ ಕೂಡಲೇ ಸರಿಪಡಿಸಬೇಕು ಎಂದು ಆಗ್ರಹಿಸಿದ್ದಾರೆ.

ವಿಮಾನ ನಿಲ್ದಾಣದಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಅವರು ವಿಮಾನ ನಿಲ್ದಾಣದಿಂದ ಹೊರಬರುವಾಗ ಎಲ್ಲರು ಬಸ್‌ನಲ್ಲಿ ಕೂರುತ್ತಾರೆ ಒಂದು ಬಸ್‌ನಲ್ಲಿ ಸುಮಾರು 50 ಮಂದಿ ಇರುತ್ತಾರೆ. ಸಾಮಾಜಿಕ ಅಂತರ ಇರುವುದಿಲ್ಲ. ವಿಮಾನ ನಿಲ್ದಾಣದಲ್ಲೂ ಕೂಡ ಸಾಮಾಜಿಕ ಅಂತರ ಬಹಳ ಕಡಿಮೆ ಇದೆ. ವಿಮಾನ ಇಳಿದು ಬರುವವರಿಗೆ ಬಸ್ಸುಗಳ ಸಂಖ್ಯೆ ಏರಿಕೆ ಮಾಡಬೇಕು ಎಂದು ಹೇಳಿದರು. ಇದೇ ವೇಳೆ ಬೆಳಗಾವಿ ಅಧಿವೇಶನಕ್ಕೆ ಎಲ್ಲ ಮುಂಜಾಗ್ರತಾ ಕ್ರಮಗಳನ್ನು ಸರ್ಕಾರ ತೆಗೆದುಕೊಳ್ಳಬೇಕು ಅಧಿವೇಶನ ಮಾಡುವುದು ಬಿಡುವುದು ಸರ್ಕಾರಕ್ಕೆ ಬಿಟ್ಟ ವಿಚಾರ ಎಂದರು.

ಆಧಾರ:ಕನ್ನಡಪ್ರಭ, ದಿನಾಂಕ:04.12.2021

## 46. ಬಾಲಬ್ರೂಯಿಯಲ್ಲೇ ' ಸಾಂವಿಧಾನಿಕ ಕ್ಲಬ್'

ಸಾರ್ವಜನಿಕರ ತೀವ್ರ ವಿರೋಧದ ನಡುವೆಯೂ 'ಬಾಲಬ್ರೂಯಿ ಅತಿಥಿ ಗೃಹವನ್ನು ಕರ್ನಾಟಕ ವಿಧಾನ ಮಂಡಲದ ಸಂವಿಧಾನಿಕ ಕ್ಲಬ್ (ಕಾನ್ಸ್ಟಿಟ್ಯೂಷನ್ ಕ್ಲಬ್) ಆಗಿ ಮಾಡಲು ರಾಜ್ಯ ಸರ್ಕಾರ ನಿರ್ಧರಿಸಿದೆ. ಆ ಮೂಲಕ ಈ ಪಾರಂಪರಿಕ ಕಟ್ಟಡ ಶಾಸಕರ ಮನೋರಂಜನಾ ಕ್ಲಬ್ ಆಗಿ ಪರಿವರ್ತನೆ ಆಗಲಿದೆ.

ಸಧ್ಯ ಇರುವ ಅತಿಥಿಗೃಹ ಕಟ್ಟಡದ ಮಾರ್ಪಾಡಿಗೆ ಕಾರಣವಾಗುವ ಯಾವುದೇ ಹೊಸ ನಿರ್ಮಾಣಕ್ಕೆ ಅವಕಾಶ ನೀಡದೆ ಮತ್ತು ಆವರಣದಲ್ಲಿರುವ ಮರಗಳನ್ನು ಕಡಿಯದೆಯೆ ಕ್ಲಬ್ ಆಗಿ ಬಳಸಲು  ಅವಕಾಶ ನೀಡಬಹುದು. ಕ್ಲಬ್ ಆಗಿ ಮಾಡಲು ಅಗತ್ಯವಿರುವ ಸೌಲಭ್ಯಗಳು ಮತ್ತು ವಾಸ್ತುಶಿಲ್ಪ ವಿನ್ಯಾಸದ ಬಗ್ಗೆ ಪ್ರಸ್ತಾವನೆ ಸಲ್ಲಿಸಲು ವಿಧಾನಮಂಡಲ ಸಚಿವಾಲಯಕ್ಕೆ ಸೂಚಿಸಬಹುದು ಎಂದು ಮುಖ್ಯ ಕಾರ್ಯದರ್ಶಿ ಪಿ. ರವಿಕುಮಾರ್ ಅವರು ಬರೆದ ಟಿಪ್ಪಣಿ ಪ್ರಜಾವಾಣಿಗೆ ಲಭ್ಯವಾಗಿದೆ. ಆರ್‌ಟಿಐ ಕಾರ್ಯಕರ್ತರೊಬ್ಬರು ಪಡೆದ ಮಾಹಿತಿಯಿಂದ ಈ ವಿಷಯ ಗೊತ್ತಾಗಿದೆ.

ಲೋಕಸಭಾ ಸದಸ್ಯರ ಅನುಕೂಲಕ್ಕಾಗಿ ನವದೆಹಲಿಯಲ್ಲಿರುವ ಸಾಂವಿಧಾನಿಕ ಕ್ಲಬ್ ಆರಂಭಿಸುವ ಉದ್ದೇಶದಿಂದ ಬಾಲಬ್ರೂಯಿ ಅತಿಥಿಗೃಹವನ್ನು ವಿಧಾನಸಭೆ ಸಚಿವಾಲಯಕ್ಕೆ ಹಸ್ತಾಂತರಿಸಲು ಮುಖ್ಯಮಂತ್ರಿಯಾಗಿದ್ದ ಬಿ.ಎಸ್. ಯಡಿಯೂರಪ್ಪ 2009ರಲ್ಲಿಯೇ ಆದೇಶಿಸಿದ್ದರು. ಆದರೆ, ಈ ಪ್ರಸ್ತಾವ ನಾನಾ ಕಾರಣಗಳಿಂದಾಗಿ ನೆನೆಗುದಿಗೆ ಬಿದ್ದಿತು. ಸಾಂವಿಧಾನಿಕ ಕ್ಲಬ್ ಸ್ಥಾಪಿಸಲು ಸೂಕ್ತ ಜಾಗ ಇಲ್ಲದೇ ಇರುವುದರಿಂದ ಈ ಮೊದಲೇ ಗುರುತಿಸಿದ್ದ ಬಾಲಬ್ರೂಯಿ ಅತಿಥಿಗೃಹವನ್ನು ಈ ಉದ್ದೇಶಕ್ಕೆ ಮಂಜೂರು ಮಾಡುವಂತೆ ವಿಧಾನ ಪರಿಷತ್ ಬಿಜೆಪಿ ಸದಸ್ಯ ಎನ್. ರವಿಕುಮಾರ್ ಅವರು ಮುಖ್ಯಮಂತ್ರಿಯವರಿಗೆ ಇತ್ತೀಚೆಗೆ ಮನವಿ ಸಲ್ಲಿಸಿದ್ದರು. ಈ ಬಗ್ಗೆ ಪರಿಶೀಲಿಸಿ ತಕ್ಷಣ ಅಗತ್ಯ  ಕ್ರಮ ತೆಗೆದುಕೊಳ್ಳುವಂತೆ ಮುಖ್ಯ ಕಾರ್ಯದರ್ಶಿಗೆ ಮುಖ್ಯಮಂತ್ರಿ ನಿರ್ದೇಶನ ನೀಡಿದ್ದಾರೆ.

ಸದ್ಯ ಇಲ್ಲಿ ನ್ಯಾಯಮೂರ್ತಿ ಕೆಂಪಣ್ಣ ಆಯೋಗದ ಕಛೇರಿ (ಡಿ.ಜೆ ಹಳ್ಳಿ ಮತ್ತು ಕೆ.ಜಿ. ಹಳ್ಳಿ) ಗಲಭೆಯ ಹಾನಿ ವಸೂಲಿಗೆ ಸರ್ಕಾರ ರಚಿಸಿದ ಕ್ಲೈಮ್ ಕಮೀಷನ್) ಕಾರ್ಯನಿರ್ವಹಿಸುತ್ತಿದೆ. ಐತಿಹಾಸಿಕ ಮಹತ್ವ ಪಡೆದಿರುವ ಈ ಅತಿಥಿಗೃಹಕ್ಕೆ ಹಿಂದೆ ಮಹಾತ್ಮ ಗಾಂಧಿ, ದೇಶದ ಮೊದಲ ಪ್ರಧಾನಿ ಜವಾಹರಲಾಲ್ ನೆಹರೂ, ನೋಬೆಲ್ ಪ್ರಶಸ್ತಿ ಪುರಸ್ಕೃತ ರವೀಂದ್ರನಾಥ್ ಟ್ಯಾಗೂರ್ ಭೇಟಿ ನೀಡಿದ್ದಾರೆ. ಈ ಕಟ್ಟಡವನ್ನು ಬಾಲಬ್ರೂಯಿ ಅತಿಥಿಗೃಹವೆಂದು ಯಥಾಸ್ಥಿತಿಯಲ್ಲಿ ಮುಂದುವರಿಸುವುದು ಸೂಕ್ತ

ಎಂದು ಅಭಿಪ್ರಾಯ ವ್ಯಕ್ತಪಡಿಸಿ ಮುಖ್ಯಮಂತ್ರಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಡಿಪಿಎಆರ್) ಕಾರ್ಯದರ್ಶಿ ಕಡತ ಮಂಡಿಸಿದ್ದರು. ಆದರೆ, ಈ ಬಗ್ಗೆ ಮರು ಚರ್ಚಿಸುವಂತೆ ಮುಖ್ಯಮಂತ್ರಿ ಸೂಚಿಸಿದ್ದರು. ಈ ಹಿನ್ನೆಲೆಯಲ್ಲಿ ಸಭಾಧ್ಯಕ್ಷರು ನಡೆಸಿದ ಪರಿಶೀಲನಾ ಸಭೆಗೆ ಕಡತ ಮಂಡಿಸಲಾಗಿತ್ತು.

ಬಾಲಬ್ರೂಯಿ ಅತಿಥಿಗೃಹವನ್ನು ಸಾಂವಿಧಾನಿಕ ಕ್ಲಬ್ ಆಗಿ ಪರಿವರ್ತಿಸುವ ವಿಷಯದಲ್ಲಿ ಸಾರ್ವಜನಿಕರ ವಿರೋಧ ಇರುವುದರಿಂದ ಮತ್ತು ಈಗಾಗಲೇ ಈ ವಿಚಾರದಲ್ಲಿ ಕೋರ್ಟ್‌ಗೆ ಸಾರ್ವಜನಿಕ ಹಿತಾಸಕ್ತಿ ಅರ್ಜಿ (ಪಿಐಎಲ್) ಸಲ್ಲಿಕೆ ಆಗಿರುವುದರಿಂದ ಕ್ಲಬ್ ಆಗಿ ಪರಿವರ್ತಿಸುವ ಪ್ರಸ್ತಾವಕ್ಕೆ ಸಚಿವ ಸಂಪುಟದ ಅನುಮೋದನೆ ಪಡೆಯುವುದು ಸೂಕ್ತ ಎಂದು ಕಾರ್ಯದರ್ಶಿ ಅಭಿಪ್ರಾಯಪಟ್ಟಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:06.12.2021





**ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: 05.12.2021 ರಂದು ನವದೆಹಲಿಯಲ್ಲಿನ "ಕಾನ್ಸ್ಟಿಟ್ಯೂಶನ್ ಕ್ಲಬ್" ಗೆ ಭೇಟಿ ನೀಡಿ ಕ್ಲಬ್‌ನ ಚಟುವಟಿಕೆಗಳು, ಸೌಲಭ್ಯಗಳು ಮತ್ತು ನಿರ್ವಹಣೆಯ ಬಗ್ಗೆ ಎಲ್ಲಾ ಮಾಹಿತಿಯನ್ನು ಪಡೆದುಕೊಂಡರು.**

## 47. ಅಧಿವೇಶನ : ಮಿತವ್ಯಯಕ್ಕೆ ಕ್ರಮ

ಓಮಿಕ್ರಾನ್ ಆತಂಕದ ಮಧ್ಯೆ ಬೆಳಗಾವಿಯಲ್ಲಿ ಡಿಸೆಂಬರ್ 13 ರಿಂದ 24ರವರೆಗೆ ಚಳಿಗಾಲದ ಅಧಿವೇಶನ ನಡೆಸಲು ರಾಜ್ಯ ಸರ್ಕಾರ ಮುಂದಾಗಿದೆ. ಕೊರೋನಾ ಮುನ್ನೆಚ್ಚರಿಕೆ ಕ್ರಮದ ಜೊತೆಗೆ ಮಿತವ್ಯಯದಲ್ಲಿ ಅಧಿವೇಶನ ನಡೆಸಲು ನಿರ್ಧರಿಸಲಾಗಿದೆ.

ಶಾಸಕರು, ಅಧಿಕಾರಿಗಳು ಸಿಬ್ಬಂದಿ, ಮಾಧ್ಯಮ ಪ್ರತಿನಿಧಿಗಳ ವಸತಿ ವ್ಯವಸ್ಥೆಗೆ ವಿವಿಧ ಹೋಟೆಲ್‌ಗಳಲ್ಲಿ ಒಟ್ಟು 1,740 ಕೊಠಡಿಗಳನ್ನು ಕಾಯ್ದಿರಿಸಲಾಗಿದೆ. ಶಾಸಕರುಗಳಿಗೆ ಈ ಬಾರಿ ಹೋಟೆಲ್ ಕೊಠಡಿಗಳು ಬೆಳಗಾವಿಯಲ್ಲೇ ಲಭ್ಯವಿದೆ. ಹುಬ್ಬಳ್ಳಿ, ಧಾರವಾಡದಲ್ಲಿ ವಸತಿ ವ್ಯವಸ್ಥೆ ಮಾಡುವ ಅನಿವಾರ್ಯತೆ ಬಂದಿಲ್ಲ.

ಆಧಾರ:ಪ್ರಜಾವಾಣಿ, ದಿನಾಂಕ:06.12.2021

## 48. ಬೆಳಗಾವಿ ಅಧಿವೇಶನಕ್ಕೆ ಸಕಲ ಸಿದ್ಧತೆ

ಮೂರು ವರ್ಷಗಳ ತರುವಾಯ ಬೆಳಗಾವಿಯಲ್ಲಿ ನಡೆಯಲಿರುವ ಚಳಿಗಾಲದ ಅಧಿವೇಶನಕ್ಕೆ ಸಕಲ ಸಿದ್ಧತೆ ನಡೆದಿದೆ. ಡಿಸೆಂಬರ್ 13 ರಿಂದ 24ರವರೆಗೆ ವಿಧಾನ ಮಂಡಲದ ಉಭಯ ಸದನಗಳ ಅಧಿವೇಶನ ನಡೆಯಲಿದೆ. ಈ ಹಿನ್ನೆಲೆಯಲ್ಲಿ ವಿಧಾನಸಭೆ ಸಚಿವಾಲಯ ದಿನಾಂಕ:11.12.2021ರಿಂದ ಸುವರ್ಣ ವಿಧಾನಸೌಧದಲ್ಲಿ ಕಾರ್ಯನಿರ್ವಹಿಸಲಿದೆ. ಅಧಿವೇಶನದಲ್ಲಿ ಪಾಲ್ಗೊಳ್ಳುವ ಸಚಿವರು, ಶಾಸಕರು ಅಧಿಕಾರಿ ವರ್ಗಕ್ಕೆ ವಸತಿ ಸೇರಿ ಎಲ್ಲ ಸೌಕರ್ಯ ಒದಗಿಸುವ ಕಾರ್ಯ ಭರದಿಂದ ಸಾಗಿದೆ. ಅಧಿವೇಶನದ ವೇಳೆ ಶಾಸಕರಿಗೆ ಮಧ್ಯಾಹ್ನದ ಊಟವನ್ನು ಸುವರ್ಣ ವಿಧಾನಸೌಧದಲ್ಲಿ ಏರ್ಪಡಿಸಲಾಗುತ್ತದೆ. ರಾತ್ರಿ ಊಟದ ವ್ಯವಸ್ಥೆಯನ್ನು ಆಯಾ ಶಾಸಕರೇ ಮಾಡಿಕೊಳ್ಳಬೇಕು. ಕೋವಿಡ್ ಹಿನ್ನೆಲೆಯಲ್ಲಿ ಮುನ್ನೆಚ್ಚರಿಕಾ ಕ್ರಮ ತೆಗೆದುಕೊಳ್ಳಲಾಗಿದೆ. ಕಟ್ಟುನಿಟ್ಟಾಗಿ ಮಾರ್ಗಸೂಚಿ ಪಾಲಿಸಲಾಗುತ್ತದೆ ಎಂದು ಅಧಿಕಾರಿಗಳು ತಿಳಿಸಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:07.12.2021.

## 49. ಚಳಿಗಾಲದ ಅಧಿವೇಶನಕ್ಕೆ ಪ್ರತಿಭಟನೆಗಳ ಬಿಸಿ

ಸುವರ್ಣ ವಿಧಾನ ಸೌಧದಲ್ಲಿ ಡಿಸೆಂಬರ್ 13ರಿಂದ ನಡೆಯಲಿರುವ ರಾಜ್ಯ ವಿಧಾನ ಮಂಡಲಗಳ 'ಚಳಿ'ಗಾಲದ ಅಧಿವೇಶನದ ವೇಳೆ ಸರ್ಕಾರಕ್ಕೆ ಪ್ರತಿಭಟನೆಗಳ 'ಬಿಸಿ' ತಟ್ಟುವುದು ನಿಶ್ಚಿತ. ಈಗಾಗಲೇ 70ಕ್ಕೂ ಹೆಚ್ಚು ಸಂಘಟನೆಗಳು ಪ್ರತಿಭಟನೆ ನಡೆಸಲು ಅನುಮತಿ ಕೋರಿದ್ದು, ಈ ಸಂಖ್ಯೆ ಮತ್ತಷ್ಟು ಹೆಚ್ಚುವ ಸಾಧ್ಯತೆ ಇದೆ.

ಅಧಿವೇಶನ ಸುಸೂತ್ರವಾಗಿ ನಡೆಸಲು ಜಿಲ್ಲಾಡಳಿತ ಸಿದ್ಧತೆಗಳನ್ನು ಮಾಡಿಕೊಂಡಿದೆ. ಬೆಳಗಾವಿ ಅಧಿವೇಶನದಿಂದ ಉತ್ತರ ಕರ್ನಾಟಕ ಭಾಗದ ಅಭಿವೃದ್ಧಿಯ ಬಗ್ಗೆ ಗಮನಹರಿಸುವ ವೇದಿಕೆ ಆಗುವುದೆಂಬ ಆಶಯ ಇಲ್ಲಿನ ಜನರದ್ದು. ಆದರೆ ಈವರೆಗೂ ಅದು ಈಡೇರಿಲ್ಲ ಪ್ರಸ್ತುತ ಆಡಳಿತ ಯಂತ್ರವೇ ಈ 10 ದಿನಗಳ ಕಾಲ ಬೆಳಗಾವಿಯಲ್ಲಿರಲಿದೆ. ಈ ವೇಳೆಯಲ್ಲಾದರೂ ಸಮಸ್ಯೆಗಳ ಕುರಿತು ಸರ್ಕಾರದ ಗಮನ ಸೆಳೆಯಲು ಸಂಘಟನೆಗಳು ಪ್ರತಿಭಟನೆ ನಡಸಲಿವೆ.

**ದೂರು ನಿರ್ವಹಣಾ ಸಮಿತಿ:** ಬೆಳಗಾವಿ ಅಧಿವೇಶನದ ಅವಧಿಯಲ್ಲಿ ಪ್ರತಿಭಟನೆಗೆ ಅವಕಾಶ ನೀಡಲು ದೂರು ನಿರ್ವಹಣಾ ಸಮಿತಿ ರಚಿಸಲಾಗಿದೆ. ಬೆಳಗಾವಿಯ ಹಿರಿಯ ಪೊಲೀಸ್ ಅಧಿಕಾರಿಗಳು, ಉಪ ವಿಭಾಗಾಧಿಕಾರಿಗಳು ಮತ್ತಿತರ ಅಧಿಕಾರಿಗಳು ಸಮಿತಿಯಲ್ಲಿದ್ದಾರೆ. "ಪ್ರತಿಭಟನಾಕಾರರು ಅನುಮತಿ ಪಡೆಯಲು ಮುಂಚಿತವಾಗಿ ಅರ್ಜಿ ಸಲ್ಲಿಸಬೇಕಿದ್ದು, ಈಗಾಗಲೇ 70ಕ್ಕೂ ಹೆಚ್ಚು ಸಂಘಟನೆಗಳಿಂದ ಅರ್ಜಿ ಬಂದಿದೆ. ಅವರಿಗೆಲ್ಲ ಪ್ರತಿಭಟನೆಯ ದಿನಾಂಕ ಮತ್ತು ಸ್ಥಳ ನಿಗದಿ ಮಾಡಲಾಗಿದೆ. ಡಿಸೆಂಬರ್ 12 ರಂದು ಅರ್ಜಿ ಸಲ್ಲಿಸಲು ಅವಕಾಶವಿದೆ," ಎಂದು ಬೆಳಗಾವಿ ಡಿಸಿಪಿ ವಿಕ್ರಂ ಆಮ್ಟೆಯವರು ತಿಳಿಸಿದರು.

**ನಾನಾ ಭಾಗಗಳಿಂದ ಧ್ವನಿ:** "ಬೆಂಗಳೂರಿನಲ್ಲಿ ಪ್ರತಿಭಟನೆ ನಡೆಸಿದರೆ ಅದರ ಧ್ವನಿ. ವಿಧಾನಸೌಧಕ್ಕೆ ತಲುಪುವ ಸಾಧ್ಯತೆ ಕಡಿಮೆ. ಬೆಳಗಾವಿಯಲ್ಲಿ ಸರ್ಕಾರಕ್ಕೆ ತಲುಪಿ ಕ್ಷಿಪ್ರವಾಗಿ ಸ್ಪಂದಿಸುವ ಆಶಯವಿದೆ", ಎಂದು ಕರ್ನಾಟಕ ರಕ್ಷಣಾ ವೇದಿಕೆಯ ಬಾಗಲಕೋಟೆ ಜಿಲ್ಲಾ ಪ್ರಮುಖ ರಮೇಶ ಬದ್ನೂರ ಅಭಿಪ್ರಾಯಪಡುತ್ತಾರೆ. ಬಾಗಲಕೋಟೆಯಲ್ಲಿ ಮೆಡಿಕಲ್ ಕಾಲೇಜು ಸ್ಥಾಪಿಸಲು ಒತ್ತಾಯಿಸಿ ಅಧಿವೇಶನ ವೇಳೆ ಬೂಟ್ ಪಾಲಿಷ್ ಮಾಡುವ ಮೂಲಕ ಪ್ರತಿಭಟನೆ ನಡೆಸುವುದಾಗಿ ಅವರು ತಿಳಿಸಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:12.12.2021.

## 50. 'ಚಲೋ ಸುವರ್ಣಸೌಧ' ಪಾದಯಾತ್ರೆ

ಖಾನಾಪುರ ಕ್ಷೇತ್ರದ ಜನರ ಒಟ್ಟು 24 ಬೇಡಿಕೆ ಈಡೇರಿಸುವಂತೆ ಹಾಗೂ ಕ್ಷೇತ್ರದಲ್ಲಿರುವ ಸಮಸ್ಯೆಗಳ ಕುರಿತು ಸರ್ಕಾರದ ಗಮನ ಸೆಳೆಯಲು ಶಾಸಕಿ ಡಾ.ಅಂಜಲಿ ನಿಂಬಾಳ್ಕರ್ ನೇತೃತ್ವದಲ್ಲಿ 'ಚಲೋ ಸುವರ್ಣ ಸೌಧ' ಪಾದಯಾತ್ರೆ ಹಮ್ಮಿಕೊಳ್ಳಲಾಗಿದೆ.

ಡಿಸೆಂಬರ್ 12ರಂದು ಮಧ್ಯಾಹ್ನ 2 ಗಂಟೆಗೆ ಖಾನಾಪುರ ಪಟ್ಟಣದ ಶಿವಸ್ಮಾರಕದಿಂದ ಆರಂಭಗೊಳ್ಳುವ ಪಾದಯಾತ್ರೆಯು ಬರಗಾವ, ಗರ್ಲಗುಂಜಿ, ರಾಜಹಂಸಗಡ ಮಾರ್ಗವಾಗಿ ಯಳ್ಳೂರ ಗ್ರಾಮ ತಲುಪಿ, ಅಲ್ಲಿ ವಾಸ್ತವ್ಯ ಹೂಡಲಿದೆ. 13ರಂದು ಯಳ್ಳೂರಿನಿಂದ ಹೊರಟು ವಡಗಾವ, ಶಹಾಪುರ ಮಾರ್ಗವಾಗಿ ಸುವರ್ಣ ವಿಧಾನಸೌಧ ತಲುಪಲಿದೆ.

**ಬೇಡಿಕೆಗಳು ಏನೇನು:** ಸರ್ಕಾರಿ ಮತ್ತು ಅರಣ್ಯ ಪ್ರದೇಶದಲ್ಲಿ ಅತಿಕ್ರಮಣ ಮಾಡಿ ಉಳುಮೆ ಮಾಡುತ್ತಿರುವ ಜಮೀನನ್ನು ಆಯಾ ರೈತರಿಗೆ ಮಂಜೂರು ಮಾಡುವುದು. ಅತಿವೃಷ್ಟಿಯಿಂದ ಹಾನಿಯಾದ ಬೆಳೆಗಳಿಗೆ ಯೋಗ್ಯ ಪರಿಹಾರ ನೀಡುವುದು. ರೈತರಿಗೆ ಕಡಿಮೆ ದರದಲ್ಲಿ ರಸಗೊಬ್ಬರ ನೀಡುವುದು. ಕಾಡುಪ್ರಾಣಿಗಳಿಂದ ರೈತರ ಪ್ರಾಣ ಮತ್ತು ಅವರ ಬೆಳೆಗಳಿಗೆ ರಕ್ಷಣೆ ನೀಡುವುದು. ಖಾನಾಪುರ ತಾಲ್ಲೂಕಿನ ಎಲ್ಲ ಗ್ರಾಮಗಳಿಗೆ ಅಗತ್ಯ ಸಾರಿಗೆ ಸೌಲಭ್ಯ ಕಲ್ಪಿಸುವುದು. ಸರ್ಕಾರಿ ಶಾಲೆಗಳಲ್ಲಿ ಖಾಲಿ ಉಳಿದಿರುವ ಶಿಕ್ಷಕರ ಹುದ್ದೆಗಳ್ನು ಭರ್ತಿ ಮಾಡುವುದು. ನಿರುದ್ಯೋಗಿ ಯುವಕ–ಯುವತಿಯರಿಗೆ ಸೂಕ್ತ ಉದ್ಯೋಗಾವಕಾಶ ವ್ಯವಸ್ಥೆ ಮಾಡುವುದು. ಅರಣ್ಯ ಪ್ರದೇಶದಲ್ಲಿನ ಸರ್ಕಾರಿ ರಸ್ತೆ, ಸೇತುವೆ ಕಾಮಗಾರಿಗಳ ಮೇಲಿನ ಅರಣ್ಯ ಇಲಾಖೆಯ ನಿರ್ಬಂಧಗಳನ್ನು ತೆರವುಗೊಳಿಸುವುದು. ತಾಲ್ಲೂಕಿನಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ಆದ್ಯತೆ ಮೇರೆಗೆ ನಿವಾರಿಸುವುದು. ಗ್ರಾಮಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವುದು. ಶಿಥಿಲಗೊಂಡ ಸರ್ಕಾರಿ ಶಾಲೆಗಳ ಕಟ್ಟಡ ಜಮೀನುಗಳಿಗೆ ನೀರಾವರಿ ಸೌಲಭ್ಯ ಮತ್ತು ಕುಡಿಯುವ ನೀರಿನ ಸಮಸ್ಯೆಯನ್ನು ಆದ್ಯತೆ ಮೇರೆಗೆ ನಿವಾರಿಸುವುದು. ಗ್ರಾಮಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವುದು. ಶಿಥಿಲಗೊಂಡ ಸರ್ಕಾರಿ ಶಾಲೆಗಳ ಕಟ್ಟಡ ದುರಸ್ತಿ ಮಾಡುವುದು. ಬೈಲೂರು, ಹಲಸಿ, ಕೊಡಚವಾಡ ಗ್ರಾಮಗಳಲ್ಲಿ ವಿದ್ಯುತ್ ಉಪಕೇಂದ್ರದ ಕಾಮಗಾರಿಗಳನ್ನು ಸಕಾಲಕ್ಕೆ ಪ್ರಾರಂಭಿಸುವುದು. ಕೃಷಿ ಜಮೀನುಗಳಿಗೆ ನೀರಾವರಿ ಸೌಲಭ್ಯ ಮತ್ತು ಕುಡಿಯುವ ನೀರಿಗಾಗಿ ವಿವಿಧ ಯೋಜನೆ ರೂಪಿಸುವುದು. ಕೆರೆ ಹೂಳೆತ್ತುವುದು. ಅರಣ್ಯ ಭಾಗದ ಗ್ರಾಮಗಳ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಮೊಬೈಲ್ ಟವರ್ ನಿರ್ಮಿಸುವುದು. ವಸತಿ ರಹಿತ ಬಡವರಿಗೆ ಸರ್ಕಾರಿ ಮನೆ ನಿರ್ಮಿಸಿ ಕೊಡುವುದು, ಅರಣ್ಯ ಭೂಮಿಯಲ್ಲಿ ವಾಸಿಸುತ್ತಿರುವವರಿಗೆ ಹಕ್ಕು ಪತ್ರ ನೀಡುವುದು. ಖಾನಾಪುರ–ರಾಮನಗರ ರಾಷ್ಟ್ರೀಯ ಹೆದ್ದಾರಿ ಕಾಮಗಾರಿ ಪೂರ್ಣಗೊಳಿಸುವುದು. ಜಾಂಬೋಟಿ, ಗರ್ಲಗುಂಜಿ, ಗಂದಿಗವಾಡ, ಮಾಡಿಗುಂಜಿ ಗ್ರಾಮಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಆರಂಭಿಸುವುದು. ಕಳೆದ ಸಾಲಿನಲ್ಲಿ ಮಳೆಯಿಂದ ಹಾನಿ ಅನುಭವಿಸಿದ ರೈತರಿಗೆ ಕೂಡಲೇ ಹಾನಿ ಪರಿಹಾರ ಬಿಡುಗಡೆ ಮಾಡುವುದು. ಹೀಗೆ ವಿವಿಧ ಬೇಡಿಕೆ ಈಡೇರಿಸುವಂತೆ ಪಾದಯಾತ್ರೆ ಮೂಲಕ ಸುವರ್ಣ ಸೌಧಕ್ಕೆ ತೆರಳಿ ಸರ್ಕಾರವನ್ನು ಒತ್ತಾಯಿಸಲಾಗುವುದು ಎಂದು ಶಾಸಕಿ ಡಾ. ಅಂಜಲಿ ನಿಂಬಾಳ್ಕರ್ ತಿಳಿಸಿದ್ದಾರೆ.

ಸಂವಿಧಾನ ಶಿಲ್ಪಿ ಡಾ.ಬಾಬಾ ಸಾಹೇಬ್ ಅಂಬೇಡ್ಕರ್, ಜಗಜ್ಯೋತಿ ಬಸವೇಶ್ವರ, ಸಂತ ಮಹರ್ಷಿ ವಾಲ್ಮೀಕಿ ಮೂರ್ತಿಗೆ ಪುಷ್ಪ ಹಾರ ಹಾಕಿ ಮುಂದೆ ತಾಯಿ ಚೌರಾಶಿದೇವಿ ಪೂಜೆ ಸಲ್ಲಿಸಿ, ಟಿಪ್ಪು ಸುಲ್ತಾನ್ ಚೌಕಗೆ ಪುಷ್ಪಾರ್ಚನೆ ಮಾಡಿ ಪಾದಯಾತ್ರೆಯು ಬರಗಾಂವ ಗ್ರಾಮದ ಕಡೆಗೆ ಮುಂದುವರಿಯಲಿದೆ.

ಗುರ್ಲಗುಂಜಿ ಗ್ರಾಮ ತಲುಪಿದ ನಂತರ ಶಾಸಕಿ ಡಾ. ಅಂಜಲಿ ನಿಂಬಾಳ್ಕರ್ ಅವರು ಪ್ರತಿಭಟನೆಯಲ್ಲಿ ಪಾಲ್ಗೊಂಡವರನ್ನು ಉದ್ದೇಶಿಸಿ ಮಾತನಾಡಲಿದ್ದಾರೆ. ಅದೇ ಗ್ರಾಮದಲ್ಲಿ ಪ್ರತಿಭಟನಾಕಾರರಿಗೆ ಚಹಾ ಮತ್ತು ನೀರಿನ ವ್ಯವಸ್ಥೆ ಮಾಡಲಾಗಿದೆ. ಇದೆಲ್ಲ ಮುಗಿದ ನಂತರ ಪಾದಯಾತ್ರೆಯು ಯಳ್ಳೂರ ಗ್ರಾಮದ ಕಡೆಗೆ ಸಾಗುವುದು ಹಾಗೆ ಯಳ್ಳೂರು ಗ್ರಾಮದಲ್ಲಿ ಶಾಸಕರನ್ನು ಒಳಗೊಂಡು ಪಾದಯಾತ್ರೆಯಲ್ಲಿ ಪಾಲ್ಗೊಳ್ಳುವವರ ಜೊತೆ ವಾಸ್ತವ್ಯ ಮಾಡುವರು. ರಾತ್ರಿ ಊಟದ ವ್ಯವಸ್ಥೆ ಯಳ್ಳೂರು ಗ್ರಾಮದಲ್ಲೇ ಇರುತ್ತದೆ. ಇದು ಚಳಿಗಾಲದ ದಿನವಾಗಿದ್ದರಿಂದ ಪ್ರತಿಯೊಬ್ಬರೂ ತಮ್ಮೊಂದಿಗೆ ಹೊದಿಕೆ, ಸ್ವೆಟರ್, ಟಾರ್ಚ್ ಇತ್ಯಾದಿಗಳನ್ನು ತರಬೇಕೆಂದು ಸಂಘಟಕರು ಮನವಿ ಮಾಡಿದ್ದಾರೆ.

ಡಿಸೆಂಬರ್ 13ರಂದು ಬೆಳಗ್ಗೆ 5.30ಕ್ಕೆ ಪಾದಯಾತ್ರೆ ವಡಗಾಂವ ಮಾರ್ಗವಾಗಿ ಯಡಿಯೂರಪ್ಪ ರಸ್ತೆಯನ್ನು ಸುಮಾರು 7.30ಕ್ಕೆ ತಲುಪಲಿದೆ. ಬೆಳಗ್ಗೆ 7.30ರಿಂದ ರಾತ್ರಿ 8 ರವರೆಗೆ ತಲುಪಿದ ನಂತರ ಯಡಿಯೂರಪ್ಪ ರಸ್ತೆಯ ಕೊನೆಯಲ್ಲಿ ಉಪಹಾರದ ವ್ಯವಸ್ಥೆ ಮಾಡಲಾಗಿದೆ. ಬೆಳಗ್ಗೆ 8.30ರ ಸುಮಾರಿಗೆ ಸಂಘರ್ಷ ಪಾದಯಾತ್ರೆ ಹೋರಾಟಗಾರರು ಉಪಹಾರ ಸೇವಿಸಿ ಹೆದ್ದಾರಿಗೆ ಆಗಮಿಸಲಿದ್ದಾರೆ. ಮಾಜಿ ಮುಖ್ಯಮಂತ್ರಿ ಹಾಗೂ ಪ್ರತಿಪಕ್ಷನಾಯಕ ಸಿದ್ದರಾಮಯ್ಯ, ಕೆಪಿಸಿಸಿ ಕಾರ್ಯಾಧ್ಯಕ್ಷ ಸತೀಶ ಜಾರಕಿಹೋಳಿ, ಪಕ್ಷದ ಮುಖಂಡರು, ಜಿಲ್ಲೆಯ ಕಾಂಗ್ರೆಸ್ ಶಾಸಕರು ಹಾಗೂ ಮಹಿಳಾ ಶಾಸಕರು, ಯುವ ಶಾಸಕರು ಪಾದಯಾತ್ರೆಯಲ್ಲಿ ಭಾಗವಹಿಸುವರು. ನಂತರ ಪಾದಯಾತ್ರೆಯು ಬೆಳಿಗ್ಗೆ 9.30ಕ್ಕೆ ಸುವರ್ಣಸೌಧದ ಗೇಟ್ ತಲುಪಲಿದೆ. ಅಂತಿಮವಾಗಿ ಶಾಸಕಿ ಡಾ. ಅಂಜಲಿ ಅವರು ಸರ್ಕಾರಕ್ಕೆ ವಿವಿಧ ಬೇಡಿಕೆಗಳ ಮನವಿ ಪತ್ರವನ್ನು ಸಲ್ಲಿಸಲಿದ್ದಾರೆ.

ಆಧಾರ:ವಿಜಯಕರ್ನಾಟಕ, ದಿನಾಂಕ:12.12.2021.

## 51. ಬೆಳಗಾವಿಯಲ್ಲಿ ಬೀಡು ಬಿಟ್ಟ ರಾಜಕಾರಣಿಗಳು

ಸರ್ಕಾರದ ದಿಟ್ಟ ನಿರ್ಧಾರ ಹಾಗೂ ಒಮಿಕ್ರಾನ್ ಭೀತಿಯ ನಡುವೆಯೂ ಕುಂದಾನಗರಿ ಬೆಳಗಾವಿಯಲ್ಲಿ ಚಳಿಗಾಲದ ಅಧಿವೇಶನ ಇಂದಿನಿಂದ ಆರಂಭವಾಗಲಿದೆ. ಭೀಕರ ಪ್ರವಾಹ ಹಾಗೂ ಕೊರೋನಾ ಹಿನ್ನೆಲೆ ಸ್ಥಗಿತಗೊಂಡಿದ್ದ ಚಳಿಗಾಲ ಅಧಿವೇಶನ ಮೂರು ವರ್ಷಗಳ ನಂತರ ಬೆಳಗಾವಿ ಸುವರ್ಣ ಸೌಧದಲ್ಲಿ ನಡೆಯುತ್ತಿದ್ದು, ಈ ಬಾರಿ ಉತ್ತರ ಕರ್ನಾಟಕದ ಹಲವು ಸಮಸ್ಯೆಗಳಿಗೆ ಪರಿಹಾರ ಸಿಗುವ ನಿರೀಕ್ಷೆಯಲ್ಲಿ ಜನರಿದ್ದಾರೆ.

ವಿಧಾನಮಂಡಲ ಅಧಿವೇಶನ ಪ್ರಾರಂಭವಾಗಲಿದ್ದು, ಅಗಲಿದ ಗಣ್ಯರಿಗೆ ಸಂತಾಪ ಸೂಚಿಸಲಾಗುತ್ತದೆ. ಈ ಬಾರಿ ಅಧಿವೇಶನಕ್ಕೆ ಪ್ರತಿಭಟನೆ ಕಾವು ತಟ್ಟಲಿದ್ದು, ನೂರಕ್ಕೂ ಅಧಿಕ ಸಂಘಟನೆಗಳಿಂದ ಹಲವು ಬೇಡಿಕೆ ಈಡೇರಿಸುವಂತೆ ಆಗ್ರಹಿಸಿ ಪ್ರತಿಭಟನೆ ನಡೆಯಲಿವೆ.

ಕಳೆದ ಮೂರು ವರ್ಷಗಳಿಂದ ನಿರಂತರ ಪ್ರವಾಹಕ್ಕೆ ತುತ್ತಾಗಿರುವ ಉತ್ತರ ಕರ್ನಾಟಕ ಭಾಗದ ಹಲವು ಜಿಲ್ಲೆಗಳ ನಿರಾಶ್ರಿತರಿಗೆ ಈವರೆಗೆ ಸರ್ಕಾರದಿಂದ ಪರಿಹಾರ ಲಭಿಸಿಲ್ಲ. ಕಳೆದ ತಿಂಗಳು ಸುರಿದ ಅಕಾಲಿಕ ಮಳೆಯಿಂದ ಬೆಳೆ ಹಾನಿಯಾಗಿದ್ದು ಈವರೆಗೆ ಪರಿಹಾರ ಸಿಕ್ಕಿಲ್ಲ. ಇನ್ನೂ ಬಾಕಿ ಇರುವ ನೀರಾವರಿ ಯೋಜನೆಗಳು ಸೇರಿದಂತೆ, ಕಬ್ಬಿನ ಬಾಕಿ ಬಿಲ್ ಹಾಗೂ ಬೆಂಬಲ ಬೆಲೆ ನೀಡುವಂತೆ ಆಗ್ರಹಿಸಿ ಪ್ರತಿಭಟನೆಗಳು ನಡೆಯಲಿವೆ. ಅಷ್ಟೇ ಅಲ್ಲದೆ ಕೃಷಿ ಮಸೂದೆ ವಾಪಸ್ ಪಡೆಯುವಂತೆ ಆಗ್ರಹಿಸಿ, ರೈತ ಸಂಘಟನೆಗಳು ಸುವರ್ಣ ಸೌಧ ಮುತ್ತಿಗೆ ಹಾಕಲು ಕರೆ ನೀಡಿವೆ. ಇನ್ನೂ ಪಂಚಮಸಾಲಿ ಸಮುದಾಯಕ್ಕೆ 2–ಎ ಮೀಸಲಾತಿ ಕಲ್ಪಿಸುವಂತೆ ಸರ್ಕಾರದ ಮೇಲೆ ಒತ್ತಡ ಹೇರಲು ಸಜ್ಜಾಗಿದ್ದಾರೆ. ಈ ಕುರಿತು ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಲು ವಿರೋಧ ಪಕ್ಷ ತಯಾರಿ ನಡೆಸಿದೆ.

ಪ್ರತಿ ಅಧಿವೇಶನ ಸಂದರ್ಭ ಬೆಳಗಾವಿಯನ್ನು ಮಹಾರಾಷ್ಟ್ರಕ್ಕೆ ಸೇರಿಸುವಂತೆ ಎಂಇಎಸ್ ನಡೆಸುವ ಮಹಾಮೇಳಾವ್‌ಗೆ ಇಲ್ಲಿಯವರೆಗೆ ಜಿಲ್ಲಾಡಳಿತ ಪರವಾನಿಗಿ ನೀಡಿಲ್ಲವಾದರೂ, ಎಂಇಎಸ್ ಪುಂಡರು ಪುಂಡಾಟಿಕೆ ಮಾಡುವ ಸಾಧ್ಯತೆಯಿದೆ. ಈ ಹಿನ್ನೆಲೆಯಲ್ಲಿ ನಗರದ ಪ್ರಮುಖ ಭಾಗಗಳಲ್ಲಿ ಪೊಲೀಸ್ ಸರ್ಪಗಾವಲು ರಚಿಸಲಾಗಿದ್ದು, ಯಾವುದೇ ಅಹಿತರಕರ ಘಟನೆ ನಡೆಯದಂತೆ ಜಿಲ್ಲಾಡಳಿತ ಹಾಗೂ ಪೊಲೀಸ್ ಇಲಾಖೆ ಸಿದ್ಧತೆ ಮಾಡಿಕೊಂಡಿದೆ. ಕೋವಿಡ್ ಮೂರನೇ ಅಲೆ ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಅಧಿವೇಶನದ ಮೇಲೆ ಕೊರೋನಾ ಕರಿನೆರಳು ಬೀರಿದ್ದು, ಮುನ್ನೆಚ್ಚರಿಕೆಯಾಗಿ ಕೊರೋನಾ ಟೆಸ್ಟ್ ಕಡ್ಡಾಯಗೊಳಿಸಲಾಗಿದೆ. ಆರ್‌ಟಿಪಿಸಿಆರ್ ನೆಗೆಟಿವ್ ವರದಿ ಬಂದವರಿಗೆ ಮಾತ್ರ ಸುವರ್ಣ ಸೌಧಕ್ಕೆ ಪ್ರವೇಶ ಕಲ್ಪಿಸಲಾಗಿದೆ. ಕಳೆದ ಒಂದು ವಾರದಿಂದ ಬೆಳಗಾವಿಯಲ್ಲಿ ತಲಾ ಒಂದು ಕೊರೋನ ಕೇಸ್ ಪತ್ತೆಯಾಗಿದ್ದು ಆರೋಗ್ಯ ಇಲಾಖೆ ಮುನ್ನೆಚ್ಚರಿಕೆ ವಹಿಸಿದೆ.

ಆಧಾರ:ವಿಶ್ವವಾಣಿ, ದಿನಾಂಕ:13.12.2021.

## 52. ಉತ್ತರ ಕರ್ನಾಟಕ ಸಮಸ್ಯೆ ಪ್ರಸ್ತಾಪಕ್ಕೆ ಆದ್ಯತೆ ನೀಡುವೆ

ಬೆಳಗಾವಿಯಲ್ಲಿ ನಡೆದ ವಿಧಾನಮಂಡಲ ಅಧಿವೇಶನ ಜಾತ್ರೆಯಂತಾಯಿತು ಎಂಬ ಭಾವನೆ ಜನರಲ್ಲಿ ಮೂಡುವಂತಾಗದೆ ಅಧಿವೇಶನ ಅರ್ಥಪೂರ್ಣವಾಗಲಿ ಎಂದು ಎಲ್ಲ ಸದಸ್ಯರಿಗೆ ಮನವಿ ಮಾಡಿದ್ದೇನೆ. 330 ನಿಯಮದಡಿ ಮೂರು ವಿಷಯಗಳ ಚರ್ಚೆಗೆ ಅವಕಾಶವಿದ್ದು, ಅದರಲ್ಲಿ ಎರಡು ಈ ಭಾಗಕ್ಕೆ ನೀಡುವೆ, ಶೂನ್ಯ ವೇಳೆಯಲ್ಲಿ 10 ಜನರಿಗೆ ಅವಕಾಶವಿದ್ದು, ಉತ್ತರದ ಬಗ್ಗೆ ಗಂಭೀರ ವಿಷಯಗಳ ಪ್ರಸ್ತಾಪಕ್ಕೆ ಮುಂದಾದರೆ 15 ಜನರಿಗೂ ಅವಕಾಶ ನೀಡುವೆ. ಒಟ್ಟಿನಲ್ಲಿ ಬೆಳಗಾವಿ ಅಧಿವೇಶನ ಉತ್ತರ ಕರ್ನಾಟಕದ ಸಮಸ್ಯೆ-ಸಂಕಷ್ಟಗಳ ಮೇಲೆ ಬೆಳಕು ಚೆಲ್ಲುವಂತಾಗಬೇಕು.

ಬೆಳಗಾವಿಯಲ್ಲಿ ನಡೆಯುವ ಚಳಿಗಾಲ ಅಧಿವೇಶನದಲ್ಲಿ ರಾಜ್ಯದ ಹಲವು ವಿಷಯಗಳ ಜೊತೆಗೆ ಉತ್ತರ ಕರ್ನಾಟಕದ ವಿಷಯಗಳಿಗೆ ಹೆಚ್ಚು ಆದ್ಯತೆ ನೀಡಬೇಕೆಂಬುದು ಈ ಭಾಗದ ಜನತೆಯ ಆಶಯವೂ ಆಗಿದೆ. ಅದಕ್ಕೆ ಪೂರಕವಾಗಿ ಪರಿಷತ್ತಿನಲ್ಲಿ ಅವಕಾಶ ನೀಡಲಾಗುವುದು. ಅಧಿವೇಶನದ ಕಾರ್ಯಕಲಾಪ ಇನ್ನಿತರೆ ವಿಷಯಗಳ ಕುರಿತಾಗಿ ಸಭಾಪತಿ ಬಸವರಾಜ್ ಹೊರಟ್ಟಿಯವರು ಅಭಿಪ್ರಾಯ ಹಂಚಿಕೊಂಡಿದ್ದಾರೆ.

**ಉತ್ತರದ ವಿಷಯಗಳಿಗೆ ಆದ್ಯತೆ:** ಬೆಳಗಾವಿಯಲ್ಲಿ ಈ ಬಾರಿಯ ಚಳಿಗಾಲ ಅಧಿವೇಶನ ನಡೆಸಲೇಬೇಕೆಂದು ಪ್ರಸ್ತಾಪ ಮಾಡಿದ್ದೇ ನಾನು. ಮುಖ್ಯಮಂತ್ರಿಗಳು, ಸ್ಪೀಕರ್, ಪರಿಷತ್ ಸಭಾಪತಿಯಾಗಿ ನಾನು ಮೂವರು ಇದೇ ಭಾಗದವರಾಗಿದ್ದು, ಬೆಳಗಾವಿಯಲ್ಲಿ ಅಧಿವೇಶನ ನಡೆಸಿದರೆ ಹೇಗೆಂದು ಪ್ರಸ್ತಾಪಿಸಿದ್ದೆ ಅದಕ್ಕೆ ಸರ್ಕಾರದಿಂದಲೂ ಉತ್ತಮ ಸ್ಪಂದನೆ ದೊರೆಯಿತು.

ಬೆಳಗಾವಿಯಲ್ಲಿ ಅಧಿವೇಶನ ನಡೆಯುತ್ತಿರುವುದರಿಂದ ಸಹಜವಾಗಿಯೇ ಈ ಭಾಗದ ವಿಷಯಗಳಿಗೆ ಆಧ್ಯತೆ ನೀಡಬೇಕಾಗುತ್ತದೆ. ರಾಜ್ಯದ ವಿವಿಧ ವಿಷಯಗಳ ಜೊತೆಗೆ ಉತ್ತರ ಕರ್ನಾಟಕ ಸಮಸ್ಯೆ ವಿಷಯಗಳ ಬಗ್ಗೆ ಹೆಚ್ಚು ಪ್ರಸ್ತಾಪ ಹಾಗೂ ಚರ್ಚೆ ಆಗುವಂತಾಗಬೇಕೆಂಬ ನಿಟ್ಟಿನಲ್ಲಿ ಎಲ್ಲ ಪಕ್ಷಗಳ ನಾಯಕರಿಗೆ ಸುಗಮ ಕಲಾಪಕ್ಕೆ ಸಹಕರಿಸುವಂತೆ ಕೇಳಿದ್ದೇನೆ.

330 ನಿಯಮದಡಿ ಚರ್ಚೆಗೆ ದಿನಕ್ಕೆ ಮೂರು ವಿಷಯಗಳಿಗೆ ಅವಕಾಶವಿದ್ದು, ಇದರಲ್ಲಿ 2 ವಿಷಯಗಳಿಗೆ ಉತ್ತರ ಕರ್ನಾಟಕಕ್ಕೆ ಆದ್ಯತೆ ನೀಡಲು ಸಿದ್ದನಿದ್ದೇನೆ. ಅದೇ ರೀತಿ ಗಮನ ಸೆಳೆಯುವ ಸೂಚನೆ ಮಂಡನೆಯಲ್ಲೂ ಈ ಭಾಗಕ್ಕೆ ಆದ್ಯತೆ ನೀಡುವೆ. ಶೂನ್ಯ ವೇಳೆಯಲ್ಲಿ ನಿಯಮದಂತೆ 10 ಜನರಿಗೆ ಅವಕಾಶ ನೀಡಬೇಕಾಗಿದೆ. ಒಂದು ವೇಳೆ ಉತ್ತರ ಕರ್ನಾಟಕದ ನೀರಾವರಿ, ಕಬ್ಬು ಬೆಳೆಗಾರರ,

ಸಮಸ್ಯೆ, ರೈತರ ಸಮಸ್ಯೆ, ಅತಿವೃಷ್ಟಿ ಬೆಳೆಹಾನಿಯಂತಹ ಜರೂರು ವಿಷಯಗಳ ಪ್ರಸ್ತಾಪಕ್ಕೆ ಸದಸ್ಯರು ಮುಂದಾದರೆ 15 ಜನರವರೆಗೂ ಅವಕಾಶ ನೀಡಲು ಸಿದ್ದನಿದ್ದೇನೆ.

ಸದನದಲ್ಲಿ ಗದ್ದಲ ಧರಣಿಯಂತಹ ಕಾರ್ಯಗಳಿಗೆ ಮುಂದಾಗದಂತೆ ಎಲ್ಲಾ ಪಕ್ಷದವರೆಗೂ ಮನವಿ ಮಾಡಿದ್ದೇನೆ. ಇದೇ ವಿಚಾರವನ್ನು ಶಿಮ್ಲಾದಲ್ಲಿ ನಡೆದ ರಾಷ್ಟ್ರಮಟ್ಟದ ಎಲ್ಲಾ ಪೀಠಾಧ್ಯಕ್ಷರ ಸಮಾವೇಶದಲ್ಲೂ ಪ್ರಸ್ತಾಪಿಸಿದ್ದೆ. ಸದನದಲ್ಲಿ ಧರಣಿ ಕಡಿಮೆಯಾಗಿಸುವ ನಿಟ್ಟಿನಲ್ಲಿ ಬದಲಾವಣೆ ನಿಯಮ ಸ್ಪಂದನೆಯೂ ಅಲ್ಲಿ ವ್ಯಕ್ತವಾಗಿದೆ. ಮೇಲ್ಮನೆ–ಕೆಳಮನೆ ಎಂದರೆ ಶಿಕ್ಷಕರು–ವಿದ್ಯಾರ್ಥಿಗಳ ಸಂಬಂಧ ಇದ್ದಂತೆ. ಶಿಕ್ಷಕರ ರೂಪದಲ್ಲದಿರುವ ಮೇಲ್ಮನೆ ಸದಸ್ಯರ ಗದ್ದಲ–ಗಲಾಟೆ, ಧಿಕ್ಕಾರ ಕೂಗುವ, ಧರಣಿಗೆ ಮುಂದಾದರೆ ಒಳ್ಳೆಯದಲ್ಲ.

**ಅಜೆಂಡಾ ಮುಗಿವವರೆಗೂ ಕಲಾಪ:** ದಿನದ ಅಜೆಂಡಾ ಮುಗಿಯುವವರೆಗೂ ಕಲಾಪ ನಡೆಸುತ್ತೇನೆ, ಅದು ರಾತ್ರಿ 12 ಗಂಟೆಯಾಗಲಿ ಅಜೆಂಡಾ ಮುಗಿಸಿದ ನಂತರವೇ ಕಲಾಪ ಮುಂದೂಡುವೆ. ಪ್ರಶ್ನೆ ಕೇಳಿದವರಿಗೆ ಒಂದು ಉಪ ಪ್ರಶ್ನೆಗೆ ಮಾತ್ರ ಅವಕಾಶ ನೀಡಲಾಗುತ್ತಿದ್ದು, ಬೇರೆ ಸದಸ್ಯರ ಪ್ರಶ್ನೆಗೆ ಯಾವುದೇ ಕಾರಣಕ್ಕೂ ಅವಕಾಶ ನೀಡಲಾಗಲ್ಲ, ಸಂಜೆವರೆಗೂ ಸರ್ಕಾರದಿಂದ ಒಂದು ವಿಧೇಯಕ ಬಂದಿಲ್ಲ. ಮುಂಚಿತವಾಗಿಯೇ ಮಸೂದೆಗಳ ಬಗ್ಗೆ ಸದಸ್ಯರಿಗೆ ಮಾಹಿತಿ ನೀಡಿದರೆ ಅವರು ಓದಿಕೊಂಡು ತಮ್ಮ ಅಭಿಪ್ರಾಯ ಮಂಡನೆಗೆ ಸಹಕಾರಿ ಆಗಲಿದೆ.

ಆಧಾರ:ಉದಯವಾಣಿ, ದಿನಾಂಕ:13.12.2021.

## 53. 2 ದಿನ ಉತ್ತರ ಕರ್ನಾಟಕ ಚರ್ಚೆ

ವಿಧಾನಸಭಾ ಅಧಿವೇಶನದಲ್ಲಿ ಉತ್ತರ ಕರ್ನಾಟಕ ಭಾಗಕ್ಕೆ ಸಂಬಂಧಿಸಿದ ವಿಷಯಗಳ ಕುರಿತ ಚರ್ಚೆಗೆ ಎರಡು ದಿನಗಳನ್ನು ಮೀಸಲಿಡುವ ಸಾಧ್ಯತೆಯನ್ನು ಪರಿಶೀಲಿಸುವುದಾಗಿ ಕರ್ನಾಟಕ ವಿಧಾನ ಸಭಾಧ್ಯಕ್ಷರವರು ತಿಳಿಸಿದ್ದಾರೆ.

ಸುವರ್ಣ ಸೌಧದಲ್ಲಿ ಮಾಧ್ಯಮಗಳೊಂದಿಗೆ ಮಾತನಾಡಿದ ಸಭಾಧ್ಯಕ್ಷರವರು ಉತ್ತರ–ಕರ್ನಾಟಕ ಪ್ರದೇಶದ ನಿರ್ದಿಷ್ಟ ವಿಷಯಗಳನ್ನು ಚರ್ಚೆಗೆ ಕೈಗೆತ್ತಿಕೊಳ್ಳಲು ಹಲವು ಸದಸ್ಯರಿಂದ ಮನವಿಗಳು ಬಂದಿವೆ. ನಾನು ಕಲಾಪ ಪ್ರಾರಂಭವಾಗುವ ಮುನ್ನ ನಾಳೆ ಬೆಳಗ್ಗೆ 10.30ಕ್ಕೆ ನಿಗದಿಪಡಿಸಲಾಗಿರುವ ಕಲಾಪ ಸಲಹಾ ಸಮಿತಿ ಸಭೆಯಲ್ಲಿ ಈ ವಿಷಯದ ಬಗ್ಗೆ ಚರ್ಚಿಸಿ, ಎರಡು ದಿನಗಳನ್ನು ಉತ್ತರ ಕರ್ನಾಟಕ ನಿರ್ಧಿಷ್ಟ ವಿಷಯಗಳಿಗೆ ಮೀಸಲಿಡುವ ಸಾಧ್ಯತೆಯನ್ನು ಅನ್ವೇಷಿಸಲು ಪ್ರಯತ್ನಿಸುತ್ತೇನೆ ಎಂದು ಸ್ಪೀಕರ್ ಹೇಳಿದರು. ವಿಧಾನ ಸಭೆ ಅಧಿವೇಶನದಲ್ಲಿ ಇಡೀ ಕರ್ನಾಟಕದ ಜನರ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸಬೇಕಿದೆ ಎಂದ ಸಭಾಧ್ಯಕ್ಷರು, ಪ್ರತಿಪಕ್ಷಗಳು ಎತ್ತುವ ಸಮಸ್ಯೆಗಳಿಗೆ ಆಡಳಿತ ಪಕ್ಷ ಸ್ಪಂದಿಸಲಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು.

ಕಾರ್ಯಕಲಾಪ ಅರ್ಥಪೂರ್ಣವಾಗಿರುತ್ತದೆ ಮತ್ತು ಅದರ ಫಲಶ್ರುತಿ ಜನರ ಹಿತಾಸಕ್ತಿಗೆ ಅನುಗುಣವಾಗಿರುತ್ತದೆ ಎಂದು ತಾವು ನಿರೀಕ್ಷಿಸುವುದಾಗಿ ಕಾಗೇರಿ ಹೇಳಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:13.12.2021.

## 54. 2020ರ ಕೃಷಿ ತಿದ್ದುಪಡಿ ರದ್ದುಗೊಳಿಸಿ

ಭೂಸುಧಾರಣೆ, ಎಪಿಎಂಸಿ ಮತ್ತು ಜಾನುವಾರು ಕಾಯ್ದೆಗಳಿಗೆ ರಾಜ್ಯ ಸರ್ಕಾರವು 2020ರಲ್ಲಿ ತಂದಿರುವ ತಿದ್ದುಪಡಿಗಳನ್ನು ಕೂಡಲೇ ರದ್ದುಗೊಳಿಸುವಂತೆ ಒತ್ತಾಯಿಸಿ ಸಂಯುಕ್ತ ಹೋರಾಟ

ಕರ್ನಾಟಕ ಸಂಘಟನೆಯು ಗೋಕಾಕ ರಸ್ತೆ ಮಾರ್ಗದ ಸಂಕಲ್ಪ ಗಾರ್ಡನ್‌ನಲ್ಲಿ ರೈತ ಅಧಿವೇಶನ ಹಮ್ಮಿಕೊಂಡಿತ್ತು.

ವಿಧಾನಮಂಡಲ ಚಳಿಗಾಲದ ಅಧಿವೇಶನಕ್ಕೆ ಪೂರ್ವಭಾವಿಯಾಗಿ ಆಯೋಜಿಸಿದ್ದ ಈ ಕಾರ್ಯಕ್ರಮದಲ್ಲಿ ಕೇಂದ್ರ ಸರ್ಕಾರವು 3 ಕೃಷಿ ಕಾಯ್ದೆಗಳನ್ನು ವಾಪಸ್ಸು ಪಡೆದಿದ್ದನ್ನು ಸ್ವಾಗತಿಸಿ, ಸಂಭ್ರಮಿಸಲಾಯಿತು. ಕೇಂದ್ರದಂತೆ ರಾಜ್ಯ ಸರ್ಕಾರವು ಚಳಿಗಾಲದ ಅಧಿವೇಶನದಿಂದಲೇ ಕಾಯಿದೆಗಳನ್ನು ವಾಪಸ್ಸು ಪಡೆಯಬೇಕು ಎಂದು ಹಕ್ಕೊತ್ತಾಯ ಮಂಡಿಸಲಾಯಿತು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ರೈತರು ಮತ್ತು ಕಾರ್ಮಿಕ ವಿರೋಧಿ ನೀತಿಗಳ ವಿರುದ್ಧ ತೀವ್ರ ಆಕ್ರೋಶ ವ್ಯಕ್ತಪಡಿಸಲಾಯಿತು.

**ನಿರ್ಣಯಗಳು:** ಅತಿವೃಷ್ಟಿಯಿಂದ ಹಾಳಾದ ಆಹಾರ ಧಾನ್ಯದ ಬೆಳೆಗಳಿಗೆ ಎಕರೆಗೆ ರೂ.25 ಸಾವಿರ ಹಾಗೂ ತೋಟಗಾರಿಕೆ ಬೆಳಗೆ ಎಕರೆಗೆ ರೂ.1 ಲಕ್ಷ ಪರಿಹಾರ ಒದಗಿಸಬೇಕು. ಮನೆ ಕಳೆದುಕೊಂಡವರಿಗೆ ಸಂಪರ್ಕ ಪರಿಹಾರ ನೀಡಬೇಕು. ರಾಷ್ಟ್ರೀಯ ವಿಪತ್ತು ಪರಿಹಾರ ನಿಧಿಯ ಅವೈಜ್ಞಾನಿಕ ಮಾನದಂಡ ಪರಿಷ್ಕರಿಸಬೇಕು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರೈತರು, ಕೃಷಿ ಕೂಲಿಕಾರರು ಹಾಗೂ ಗ್ರಾಮೀಣ ಕಸುಬುದಾರರ ಎಲ್ಲ ಸಾಲಗಳನ್ನು ಒಂದು ಸಲ ಕ್ರಮವಾಗಿ ಸಂಪೂರ್ಣ ಸಾಲ ಮನ್ನಾ ಮಾಡಬೇಕು. ರಾಜ್ಯ ಸರ್ಕಾರ ಜಾರಿಗೊಳಿಸಿರುವ ರೈತ ವಿರೋಧಿಯಾದ ಭೂ ಸುಧಾರಣಾ ಕಾಯ್ದೆ ತಿದ್ದುಪಡಿ ರದ್ದಾಗಬೇಕು. ರೈತರಿಗೆ ಕೃಷಿಯು ಲಾಭದಾಯಕ ಆಗುವಂತೆ ಸಹಕಾರಿ ಬೇಸಾಯಕ್ಕೆ ಅಗತ್ಯ ಪ್ರೋತ್ಸಾಹ ನೀಡಬೇಕು. ರಾಜ್ಯದ ಎಪಿಎಂಸಿ ಕಾಯ್ದೆಯ ತಿದ್ದುಪಡಿ ರದ್ದಾಗಬೇಕು. ಮಹದಾಯಿ–ಕಳಸಾ–ಬಂಡೂರಿ ವಿವಾದವನ್ನು ಶೀಘ್ರ ಪರಿಹರಿಸಿ ಯೋಜನೆಗಳನ್ನು ತ್ವರಿತವಾಗಿ ಅನುಷ್ಠಾನಕ್ಕೆ ತರಬೇಕು. ವಿಶೇಷ ಸಂದರ್ಭಗಳಲ್ಲಿ ಸಾಲಮನ್ನಾ ಮಾಡುವಂತಹ ಋಣಮುಕ್ತ ಕಾಯ್ದೆ ಜಾರಿಗೆ ತರಬೇಕು. ಸಾಹಿತಿ ಅಲ್ಲಮಪ್ರಭು ಬೆಟ್ಟದೂರ ಅವರು ರೈತ ಅಧಿವೇಶನದ ಸಭಾಪತಿಯಾಗಿದ್ದರು. ಸಂಯುಕ್ತ ಕಿಸಾನ್ ಮೋರ್ಚಾದ ಮುಖಂಡ ಅಶೋಕ ಧವಳೆ, ರಾಜ್ಯ ರೈತ ಸಂಘದ ಅಧ್ಯಕ್ಷ ಬಡಗಲಪುರ ನಾಗೇಂದ್ರ, ಸಾಮಾಜಿಕ ಕಾರ್ಯಕರ್ತ ಎಸ್.ಆರ್.ಹಿರೇಮಠ, ಕೋಡಿಹಳ್ಳಿ ಚಂದ್ರಶೇಖರ್, ಬಿ.ಆರ್. ಪಾಟೀಲ, ಸಿದ್ದಗೌಡ ಮೋದಗಿ, ಚಾಮರಸ ಮಾಲಿಪಾಟೀಲ, ಪ್ರಕಾಶ ಕಮ್ಮರಡಿ, ಬಿ.ಎ.ಸೊಪ್ಪಿನ, ದಿವಾಕರ ದೇವಿ ಮತ್ತಿತರಿದ್ದರು.

ಆಧಾರ:ವಿಜಯವಾಣಿ, ದಿನಾಂಕ:13.12.2021.

## 55. ಕಿತ್ತೂರು ಕರ್ನಾಟಕಕ್ಕೆ 'ಅಭಿವೃದ್ಧಿ' ಕನವರಿಕೆ

ಉತ್ತರ ಕರ್ನಾಟಕ ಭಾಗಕ್ಕೆ **'ಕಿತ್ತೂರು ಕರ್ನಾಟಕ'** ಎಂದು ಸರ್ಕಾರ ನಾಮಕರಣ ಮಾಡಿದ ಬಳಿಕ ಬೆಳಗಾವಿಯ ಸುವರ್ಣಸೌಧದಲ್ಲಿ ಇಂದಿನಿಂದ 10 ದಿನಗಳ ಕಾಲ ಚಳಿಗಾಲದ ಅಧಿವೇಶನ ನಡೆಯಲಿದೆ. ಮುಖ್ಯಮಂತ್ರಿಯವರು ವಿಧಾನಸಭಾ ಸಭಾಪತಿಯವರು ಹಾಗೂ ಸಭಾಧ್ಯಕ್ಷರು ಇವರುಗಳು ಸಹ ಕಿತ್ತೂರು ಕರ್ನಾಟಕ ಭಾಗದವರೇ ಆಗಿದ್ದು, ಬೆಳಗಾವಿಯ ಅಧಿವೇಶನ ಬಹಳ ಮಹತ್ವ ಪಡೆದಿದೆ.

**ಜನರಲ್ಲಿ ಬಹುನಿರೀಕ್ಷೆ:** ಬಸವರಾಜ ಬೊಮ್ಮಾಯಿಯವರು ಮುಖ್ಯಮಂತ್ರಿಯಾದ ಬಳಿಕ ಉತ್ತರ ಕರ್ನಾಟಕ ಭಾಗಕ್ಕೆ ಕಿತ್ತೂರು ಕರ್ನಾಟಕ ಭಾಗವನ್ನು ಸಮಗ್ರವಾಗಿ ಅಭಿವೃದ್ಧಿ ಪಡಿಸುವುದಾಗಿಯೂ ಈ ಹಿಂದೆ ಭರವಸೆ ನೀಡಿದ್ದಾರೆ. ಕಿತ್ತೂರು ಕರ್ನಾಟಕ ಅಭಿವೃದ್ಧಿ ಮಂಡಳಿ ರಚಿಸಿ, ಈ ಭಾಗಕ್ಕೆ ದಕ್ಕಬೇಕಾದ ಎಲ್ಲ ಸೌಲಭ್ಯಗಳನ್ನೂ ಸರ್ಕಾರ ನೀಡಲಿದೆ ಎಂಬ ಬಹುನಿರೀಕ್ಷೆ ಜನರಲ್ಲಿದೆ. ಕಿತ್ತೂರು ಕರ್ನಾಟಕ ಭಾಗದವರೇ ಆದ ಸಿಎಂ, ಸಭಾಪತಿ ಹಾಗೂ ಸಭಾಧ್ಯಕ್ಷರು ಈ ಭಾಗದ ಸಮಸ್ಯೆಗಳ ಬಗ್ಗೆ ಚರ್ಚೆ ಮಾಡಲು ಅವಕಾಶ ಮಾಡಿಕೊಡುತ್ತಾರೆ ಎನ್ನುವ ಆಶಾಭಾವದಲ್ಲಿದ್ದಾರೆ ಈ ಭಾಗದ ವಿವಿಧ ಹೋರಾಟಗಾರರು ಹಾಗೂ ಜನರು.

**ಕೇಂದ್ರಕ್ಕೆ ಒತ್ತಡ ಹಾಕಲಿ:** ರಾಜ್ಯ ಸರ್ಕಾರ 2017ರಿಂದಲೇ ಭದ್ರಾ ಮೇಲ್ದಂಡೆ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಮಾರ್ಪಡಿಸಲು ಅವಿರತವಾಗಿ ಹೋರಾಟ ಮಾಡಿತ್ತು. ಅಂದು ನೀರಾವರಿ ಸಚಿವರಾಗಿದ್ದ ರಮೇಶ ಜಾರಕಿಹೊಳಿ ನೇತೃತ್ವದ ನಿಯೋಗ ಕೇಂದ್ರಕ್ಕೆ ದುಂಬಾಲು ಬಿದ್ದು, ಒತ್ತಡ ತಂದಿದ್ದರು. ಅದರ ಫಲವಾಗಿ 4 ವರ್ಷದ ಬಳಿಕ ಈ ಯೋಜನೆ 'ರಾಷ್ಟ್ರೀಯ ಯೋಜನೆ' ಯಾಗಿದೆ. ಅದೇ ರೀತಿ ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಘೋಷಣೆ ಮಾಡಲು ಈ ಅಧಿವೇಶನದಲ್ಲಿ ಸರ್ವಪಕ್ಷಗಳು ಕೇಂದ್ರ ಸರ್ಕಾರದ ಮೇಲೆ ಒತ್ತಡ ಹಾಕಬೇಕಿದೆ. ನಿರ್ಣಯವನ್ನು ಕೈಗೊಳ್ಳಬೇಕಿದೆ. ಈ ವಿಚಾರವಾಗಿ ಕಿತ್ತೂರು ಕರ್ನಾಟಕ ಭಾಗದ ಸಚಿವರು, ಶಾಸಕರು 'ಅಧಿವೇಶನದ ಅವಕಾಶ'ವನ್ನು ಎಷ್ಟರ ಮಟ್ಟಿಗೆ ಬಳಸಿಕೊಳ್ಳುತ್ತಾರೆ ಎನ್ನುವುದನ್ನು ಕಾದು ನೋಡಬೇಕಾಗಿದೆ.

ಆಧಾರ:ವಿಜಯವಾಣಿ, ದಿನಾಂಕ:13.12.2021.

## 56. ಮುಂದಿನ ಸಾಲಿನ ನಾಯಕರೆಲ್ಲರು ಕಿತ್ತೂರು–ಕಲ್ಯಾಣ ಕರ್ನಾಟಕದವರೇ

ಬೆಳಗಾದರೆ ಬೆಳಗಾವಿಯಲ್ಲಿ ಬಿಳಿ ಬಟ್ಟೆಧಾರಿಗಳ ಭೇಟಿಗಳು, ಬೇಗ ಎದ್ದರೆ ಬೆಚ್ಚನೆಯ ಬೆಳಕಲ್ಲಿ ಬಣ್ಣದ ಕಾರಿನಲ್ಲಿ ಬಂದವರಿಂದ ಬಯಲು ಸೀಮೆಗಳ ಬಣ್ಣನೆಗಳು, ಭಾಷಣದಲ್ಲಿಯೇ ಬಡಿದಾಡಿದವರ ಬೆಸುಗೆಯ ಬಂಧಗಳು. ಬಿಸಿಲ ಬೇಗೆಯ ಬಯಲಲ್ಲಿ ಬಡವರ ಬೇಡಿಕೆಗಳು...

ಸೋಮವಾರ ಆರಂಭವಾಗಲಿರುವ ಬೆಳಗಾವಿ ಅಧಿವೇಶನದ ಕಲಾಪ ಆರಂಭದ ಹೊರ ನೋಟ ಹೀಗಿದ್ದರೆ ಸದನದೊಳಗೆ ಇನ್ನೂ ವಿಶೇಷತೆ ಇದೆ. ಇದೇ ಮೊದಲ ಬಾರಿಗೆ ಸದನದ ಮುಂದಿನ ಸಾಲಿನಲ್ಲಿ ಕುಳಿತುಕೊಳ್ಳುವ ನಾಯಕರೆಲ್ಲರೂ ಕಿತ್ತೂರು–ಕಲ್ಯಾಣ ಕರ್ನಾಟಕ ಭಾಗದವರಾಗಿದ್ದಾರೆ. ಸಭಾಧ್ಯಕ್ಷರು, ಸಭಾಪತಿ, ಮುಖ್ಯಮಂತ್ರಿ, ಇಬ್ಬರೂ ಪ್ರತಿಪಕ್ಷ ನಾಯಕರು ಉತ್ತರ ಕರ್ನಾಟಕಕ್ಕೆ ಸೇರಿದವರು.

ಕಿತ್ತೂರ–ಕಲ್ಯಾಣ ಕರ್ನಾಟಕ ಭಾಗದ 14 ಜಿಲ್ಲೆಗಳ 96 ಶಾಸಕರಿದ್ದರೆ. ಉತ್ತರ ಕರ್ನಾಟಕ ಭಾಗ ಸಮಸ್ಯೆ ತೆರೆದಿಡಬೇಕಾದವರು ಪ್ರತಿಪಕ್ಷ ನಾಯಕರು. ಇದಕ್ಕೆ ಉತ್ತರಿಸಬೇಕಿರುವವರು ಆಡಳಿತ ಪಕ್ಷದ ಮುಖ್ಯಮಂತ್ರಿ ಇದ್ದಾರೆ. ವಿಧಾನಸಭೆ ಮತ್ತು ವಿಧಾನಪರಿಷತ್ ಕಲಾಪವನ್ನು ನಿಯಂತ್ರಿಸಿ. ನಡೆಸಬೇಕಿರುವ ಸಭಾಧ್ಯಕ್ಷರು, ಸಭಾಪತಿಯವರು ಉತ್ತರ ಕರ್ನಾಟಕದ ಭಾಗದವರು. ಈ ರೀತಿಯ ಅಪರೂಪದ ಅವಕಾಶ ಹಿಂದೆಂದೂ ಸಿಕ್ಕಿರಲಿಲ್ಲ.

ವಿಧಾನಸಭೆಯ ಕಲಾಪದ ಒಳ ಹೊಕ್ಕಾಗ ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ (ಶಿರಸಿ), ಮೊದಲ ಸಾಲಿನಲ್ಲಿ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ (ಶಿಗ್ಗಾಂವಿ). ಜಲಸಂಪನ್ಮೂಲ ಸಚಿವ ಗೋವಿಂದ ಕಾರಜೋಳ (ಮುಧೋಳ), ಆಹಾರ ಸಚಿವ ಉಮೇಶ ಕತ್ತಿ (ಹುಕ್ಕೇರಿ), ಸಾರಿಗೆ ಸಚಿವ ಶ್ರೀರಾಮುಲು (ಬಳ್ಳಾರಿ), ಉಪಾಧ್ಯಕ್ಷ ಆನಂದ ಮಾಮನಿ(ಸವದತ್ತಿ), ಆಡಳಿತ ಪಕ್ಷದ ಸಾಲಿನ ಘಟಾನುಘಟಿಗಳೂ. ಪ್ರತಿಪಕ್ಷಗಳ ಸಾಲಿನತ್ತ ಹೊರಳಿದಾಗ ಜೆಡಿಎಸ್‌ನಿಂದ ಬಂಡೆಪ್ಪ ಕಾಶೆಂಪುರ (ಬೀದರ್), ಆರ್.ವಿ.ದೇಶಪಂಡೆ (ಹಿರಿಯ ಶಾಸಕ ಹಳಿಯಾಳ), ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ (ಬಾದಾಮಿ), ಕಾಂಗ್ರೆಸ್ ಪಕ್ಷದ ಮುಖ್ಯ ಸಚೇತಕ ಅಜಯ್ ಸಿಂಗ್ (ಜೇವರ್ಗಿ) ಇವರೆಲ್ಲ ಉತ್ತರ ಕರ್ನಾಟಕ ಜಿಲ್ಲೆಗಳ ವಿಧಾನ ಸಭೆ ಕ್ಷೇತ್ರ ಪ್ರತಿನಿಧಿಸುವ ನಾಯಕರು.

ಮೊದಲ ಸಾಲಿನ 16 ಕುರ್ಚಿಯಲ್ಲಿ 9 ಮಂದಿ ಕಿತ್ತೂರು–ಕಲ್ಯಾಣ ಕರ್ನಾಟಕದವರು. ರಾಜಕೀಯ ಭಾಷಣದಲ್ಲಿ ಉತ್ತರ ಕರ್ನಾಟಕದ ಬಗ್ಗೆ ಗಟ್ಟಿ ಧ್ವನಿಯಲ್ಲಿ ಪ್ರತಿಪಾದಿಸುವ, ಆರೋಪಿಸುವ ಪಕ್ಷ ಚುಕ್ಕಾಣಿ ಹಿಡಿದಿರುವ ಸಮಗ್ರ ರಾಜ್ಯದ ನಾಯಕರಾದ ಡಿ.ಕೆ.ಶಿವಕುಮಾರ್,

ಹೆಚ್.ಡಿ.ಕುಮಾರಸ್ವಾಮಿಯವರೂ ಪ್ರತಿಪಕ್ಷ ಸಾಲಿನ ಮೊದಲ ಸಾಲಿನಲ್ಲೇ ಇದ್ದಾರೆ. ಅಲ್ಲಿಗೆ 16 ನಾಯಕರಲ್ಲಿ 11 ಮಂದಿಯ ಮೇಲೆ ಕಿತ್ತೂರು–ಕಲ್ಯಾಣ ಕರ್ನಾಟಕದ ಸಮಸ್ಯೆಯ ಮೇಲೆ ಸುವರ್ಣ ಸೌಧದಲ್ಲಿ ಬೆಳಕು ಚೆಲ್ಲಿ ಅಧಿವೇಶನದ ಸಾರ್ಥಕತೆಯನ್ನು ಎತ್ತಿ ಹಿಡಿಯುವ ಜವಾಬ್ದಾರಿ ಇದೆ. ಉತ್ತರ ಕರ್ನಾಟಕದ ಯೋಜನೆ, ಹಿಂದುಳಿದಿರುವಿಕೆ ವಿಚಾರದಲ್ಲಿ ಬಹಿರಂಗವಾಗಿ ರಾಜಕೀಯ ಕೆಸರೆರಚಾಟ ಮಾಡಿಕೊಳ್ಳುವವರು ಅಪರೂಪದ ಈ ಅಧಿವೇಶನದಲ್ಲಿ ಹೇಗೆ ನಡೆದು ಕೊಳ್ಳುವವರು ಎಂಬುದನ್ನು ಜನ ಕಾದುನೋಡುತ್ತಿದ್ದಾರೆ. ಪರಿಷತ್‌ನಲ್ಲೂ ಸಭಾಪತಿ ಬಸವರಾಜ ಹೊರಟ್ಟಿ, ಪ್ರತಿಪಕ್ಷದ ನಾಯಕ ಎಸ್.ಆರ್.ಪಾಟೀಲ್, ಪರಿಷತ್ ಬಿಜೆಪಿ ಮುಖ್ಯ ಸಚೇತಕ ಕವಟಗಿಮಠ ಸಹ ಉತ್ತರ ಕರ್ನಾಟಕದವರು. ಈಗಾಗಲೇ ಸ್ಪೀಕರ್ ಮತ್ತು ಸಭಾಪತಿ ಉತ್ತರ ಕರ್ನಾಟಕದ ವಿಚಾರಗಳಿಗೆ ಆದ್ಯತೆ ಸಿಗಲಿದೆ ಎಂಬುದನ್ನು ಪರೋಕ್ಷವಾಗಿಯೇ ಹೇಳಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:13.12.2021.

## 57. ಇಂದಿನಿಂದ ಬೆಳಗಾವಿಯಲ್ಲಿ ಅಧಿವೇಶನ

ಚುಮು ಚುಮು ಚಳಿಯ ಮಧ್ಯೆ ನಡೆಯಲಿರುವ ಬೆಳಗಾವಿ ಅಧಿವೇಶನದ ಕಲಾಪದಲ್ಲಿ ಬಿಸಿಯೇರುವುದು ಖಚಿತ. ಬಿಟ್ ಕಾಯಿನ್ ಪ್ರಕರಣ, 40 ಪರ್ಸೆಂಟ್ ಕಮೀಷನ್ ಸೇರಿದಂತೆ ಸರ್ಕಾರದ ವಿರುದ್ಧ ಟೀಕಾಸ್ತ್ರ ಪ್ರಯೋಗಿಸಲು ಪ್ರತಿಪಕ್ಷ ಕಾಂಗ್ರೆಸ್ ಸನ್ನದ್ಧವಾಗಿದೆ.

ಈ ನಡುವೆ ಮತಾಂತರ ನಿಷೇಧ ವಿಧೇಯಕ ಮಂಡಿಸಲು ಸರ್ಕಾರ ಮುಂದಾಗಿದೆ. ಇದಕ್ಕೆ ಈಗಾಗಲೇ ಕಾಂಗ್ರೆಸ್ ವಿರೋಧ ಇದೆ. ಇದು ಸದನದಲ್ಲಿ ಭಾರಿ ಕೋಲಾಹಲ ಸೃಷ್ಟಿಸಬಹುದು. ಕೋವಿಡ್ ಲಾಕ್‌ಡೌನ್ ಕಾರಣದಿಂದ ಕಳೆದೆರಡು ವರ್ಷದಿಂದ ಬೆಳಗಾವಿಯ ಸುವರ್ಣ ಸೌಧದಲ್ಲಿ ಅಧಿವೇಶನ ನಡೆದಿಲ್ಲ. ಎಲ್ಲ ಮುಂಜಾಗ್ರತಾ ಕ್ರಮ ಕೈಗೊಂಡು ಅಧಿವೇಶನ ನಡೆಸಲು ಸರ್ಕಾರ ಗಟ್ಟಿ ಮನಸ್ಸು ಮಾಡಿದೆ. ಹಾಗಾಗಿ ಅಪರೂಪಕ್ಕೊಮ್ಮೆ ಮಹಾಮಜ್ಜನ ಮಾಡಿಕೊಂಡಂತೆ ಧೂಳು ತೊಳೆದುಕೊಂಡಿರುವ ಸುವರ್ಣಸೌಧ ಸ್ವಚ್ಛ, ಶುಭ್ರವಾಗಿ ನಳನಳಿಸುತ್ತಿದೆ. ಒಂದು ಕಾಲದ ವೇಣು ಗ್ರಾಮ ಮತ್ತು ವರ್ತಮಾನದ ಸಕ್ಕರೆ ಜಿಲ್ಲೆ ಖ್ಯಾತಿಯ ಬೆಳಗಾವಿಯಲ್ಲೂ ಚಟುವಟಿಕೆ ಗರಿಗೆದರಿದೆ. ಸೌಧದ ಹೊರಗಡೆ ಸಾಲುಸಾಲು ಪ್ರತಿಭಟನೆಗಳು ನಿರೀಕ್ಷಿತವಾಗಿವೆ.

ಉತ್ತರ ಕರ್ನಾಟಕದ ಅಭಿವೃದ್ಧಿಯ ಅಮೂಲಾಗ್ರ ಚರ್ಚೆ ನಡೆಯಲಿ ಎಂಬುದು ಈ ಭಾಗದ ಜನರ ಅಪೇಕ್ಷೆಯಾಗಿದೆ ಈ ತಿಂಗಳ 24ರವರೆಗೆ ಅಧಿವೇಶನ ನಡೆಯಲಿದೆ, ಈ ಅವಧಿಯಲ್ಲಿ ವಾರಾಂತ್ಯದ ಬಿಡುವು ಹೊರೆತು ಪಡಿಸಿ 10 ದಿನಗಳ ಕಾಲ ವಿಧಾನಮಂಡಲದ ಉಭಯ ಸದನಗಳ ಕಲಾಪ ಜರುಗಲಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:13.12.2021.

## 58. ಬೆಳಗಾವಿಯಲ್ಲಿ ಇದು 11ನೇ ಅಧಿವೇಶನ

ಸ್ವಾತಂತ್ರ್ಯದ ಹೋರಾಟದ ನೆಲವೀಡು, ಬ್ರಿಟೀಷರ ವಿರುದ್ಧ ಹೋರಾಡಿದ ರಾಣಿಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ತವರು, ಕುಂದಾ ನಗರಿಯಲ್ಲಿ ನಡೆಯುತ್ತಿರುವ ಚಳಿಗಾಲದ ಅಧಿವೇಶನ 11ನೇ ಸಮಾವೇಶವಾಗಿದೆ.

2006ರಲ್ಲಿ ನಡೆದ ಮೊದಲ ಅಧಿವೇಶನದ ನಂತರ ಇದುವರೆಗಿನ 16 ವರ್ಷಗಳ ಅವಧಿಯಲ್ಲಿ ಒಟ್ಟು ಹತ್ತು ಭಾರಿ ಬೆಳಗಾವಿಯಲ್ಲಿ ಅಧಿವೇಶನ ನಡೆಸಲಾಗಿದ್ದು, ಈ ಪೈಕಿ ಮೊದಲ ಮೂರು ಅಧಿವೇಶನಗಳನ್ನು ಕೆಎಲ್‌ಇ ಸಂಸ್ಥೆ ಆವರಣದಲ್ಲಿ ನಡೆಸಿದ್ದರೆ, ಉಳಿದ ಏಳು ಅಧಿವೇಶನಗಳು ಸುವರ್ಣ

ವಿಧಾನಸೌಧದಲ್ಲಿ ಜರುಗಿವೆ. ಹಿಂದೆ ಹತ್ತು ಭಾರಿ ಅಧಿವೇಶನ ನಡೆದಿದ್ದರೂ ಒಟ್ಟಾರೆ 86 ದಿನ ಕಲಾಪ ನಡೆದಿದೆ.

**ಮೊದಲ ಅಧಿವೇಶನ:** ಬೆಳಗಾವಿ ನಮ್ಮದು ಎಂದು ತರಲೆ ಮಾಡುತ್ತಿದ್ದ ಮಹಾರಾಷ್ಟ್ರ ರಾಜಕಾರಣಿಗಳಿಗೆ ಉತ್ತರ ಎಂಬಂತೆ ರಾಜ್ಯ ಸರ್ಕಾರ ಬೆಳಗಾವಿಯಲ್ಲಿ ಅಧಿವೇಶನ ನಡೆಸಬೇಕೆಂಬ ಐತಿಹಾಸಿಕ ತೀರ್ಮಾನವನ್ನು 2006ರಲ್ಲಿ ಆಡಳಿತದಲ್ಲಿದ್ದ ಜೆಡಿಎಸ್–ಬಿಜೆಪಿ ಸಮ್ಮಿಶ್ರ ಸರ್ಕಾರ ತೆಗೆದುಕೊಂಡಿತು. ಸಂಪುಟದ ತೀರ್ಮಾನದಂತೆ ಮೊಟ್ಟ ಮೊದಲ ಬಾರಿಗೆ ಕೆಎಲ್ಇ ಸಂಸ್ಥೆಯ ಡಾ.ಬಿ.ಎಸ್. ಜೀರಿಗೆ ಹಾಲ್, ಜೆಎನ್ಎಮ್‌ಸಿ ಮೆಮೋರಿಯಲ್ ಆಡಿಟೋರಿಯಂನಲ್ಲಿ ಸಿದ್ಧಪಡಿಸಿದ ಬೃಹತ್ ಸಭಾಂಗಣದಲ್ಲಿ 12ನೇ ವಿಧಾನಸಭೆಯ ನಾಲ್ಕನೇ ಅಧಿವೇಶನವನ್ನು 2006ರ ಸೆಪ್ಟಂಬರ್ 25 ರಿಂದ 29 ರವರೆಗೆ ನಡೆಸಲಾಯಿತು.

ಈ ಮಧ್ಯೆ 2007ರಲ್ಲಿ ಬೆಳಗಾವಿಯಲ್ಲಿ ವಿಧಾನಸೌಧ ಮಾದರಿಯಲ್ಲಿ ಸುವರ್ಣಸೌಧ ನಿರ್ಮಾಣಕ್ಕೆ ಶಂಕು ಸ್ಥಾಪನೆ ನೆರವೇರಿಸಿ ಕಾಮಗಾರಿ ಶುರು ಮಾಡಲಾಯಿತು. ಮೂರು ವರ್ಷಗಳ ಕಾಲ ಬೆಳಗಾವಿಯಲ್ಲಿ ಅಧಿವೇಶನ ನಡೆಸಲು ಆಗಲಿಲ್ಲ ಆದರೆ ವಿಧಾನಸಭಾ, ಚುನಾವಣೆಯಲ್ಲಿ ಉತ್ತರ ಕರ್ನಾಟಕದ ಜನತೆ ಬಿಜೆಪಿಯನ್ನು ಅಭೂತಪೂರ್ವವಾಗಿ ಬೆಂಬಲಿಸಿದ ಪರಿಣಾಮ 2009ರಲ್ಲಿ ಬಿಜೆಪಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಬಿ.ಎಸ್ ಯಡಿಯೂರಪ್ಪ ನೇತೃತ್ವದಲ್ಲಿ ಸರ್ಕಾರ ಬೆಳಗಾವಿಯಲ್ಲಿ ಅಧಿವೇಶನ ನಡೆಸಲು ತೀರ್ಮನಿಸಿದ ಪರಿಣಾಮ 13ನೇ ವಿಧಾನಸಭೆಯ ಎರಡು ಮತ್ತು ಮೂರನೇ ಅಧಿವೇಶನ ಸಹ ಕೆಎಲ್ಇ ಸಂಸ್ಥೆಯ ಆವರಣದಲ್ಲಿ ಕ್ರಮವಾಗಿ 8 ಮತ್ತು 6 ದಿನಗಳ ಕಾಲ ನಡೆಸಿತು.

ಈ ಅಧಿವೇಶನದ ನಂತರ ಬೆಳಗಾವಿ ಸೇರಿದಂತೆ ಉತ್ತರ ಕರ್ನಾಟಕದ ಭಾಗದಲ್ಲಿ ಅತಿವೃಷ್ಟಿ ಪ್ರವಾಹದಿಂದ ದೊಡ್ಡ ಸಂಖ್ಯೆಯಲ್ಲಿ ನಷ್ಟ, ಹಾನಿ ಉಂಟಾದ ಕಾರಣ ಎರಡು ವರ್ಷಗಳ ಕಾಲ ಬೆಳಗಾವಿಯಲ್ಲಿ ಅಧಿವೇಶನ ನಡೆಸಲಾಗಲಿಲ್ಲ. ಇದೇ ವೇಳೆ ಬೆಳಗಾವಿಯಲ್ಲಿ ಸುವರ್ಣ ವಿಧಾನಸೌಧ ನಿರ್ಮಾಣ ಕಾಮಗಾರಿ ಪೂರ್ಣಗೊಂಡಿತು. ನಂತರ ಜಗದೀಶ ಶೆಟ್ಟರ್ ನೇತೃತ್ವದ ಸರ್ಕಾರ 2012ರಲ್ಲಿ ಡಿಸೆಂಬರ್ 5 ರಿಂದ 13 ರವರೆಗೆ ಸುವರ್ಣವಿಧಾನ ಸೌಧದಲ್ಲಿ ಅಧಿವೇಶನವನ್ನು ನಡೆಸಿತು.

ಆಧಾರ:ಕನ್ನಡ ಪ್ರಭ, ದಿನಾಂಕ:13.12.2021.

## 59. ಪರ್ಸೆಂಟೇಜ್: ಭ್ರಷ್ಟಾಚಾರ ತನಿಖೆಗೆ ಸಿದ್ದು ಆಗ್ರಹ

ಕಾಂಗ್ರೆಸ್ ವಿನಾಕಾರಣ ಆರೋಪ ಮಾಡುವುದಿಲ್ಲ. 40 ಪರ್ಸೆಂಟೇಜ್ ಭ್ರಷ್ಟಾಚಾರ ನಡೆದಿರುವ ಸಮಗ್ರ ತನಿಖೆ ನಡೆಸಲಿ ಎಂದು ವಿಪಕ್ಷ ನಾಯಕ ಸಿದ್ದರಾಮಯ್ಯ ರಾಜ್ಯ ಸರ್ಕಾರವನ್ನು ಒತ್ತಾಯಿಸಿದರು.

ಬೆಳಗಾವಿ ವಿಮಾನ ನಿಲ್ದಾಣದಲ್ಲಿ ಮಾಧ್ಯಮದವರೊಂದಿಗೆ ಅವರು ಮಾತನಾಡಿದರು ಕಾಂಗ್ರೆಸ್‌ನವರು ವಿನಾಕಾರಣ ಆರೋಪ ಮಾಡುತ್ತಿದ್ದಾರೆ ಎಂದು ಸಚಿವ ಎಸ್.ಟಿ.ಸೋಮಶೇಖರ್ ಹೇಳಿಕೆ ಬಗ್ಗೆ ಮಾಧ್ಯಮದವರ ಪ್ರಶ್ನೆಗೆ ಉತ್ತರಿಸಿದ ಅವರು, ಗುತ್ತಿಗೆದಾರ ಕೆಂಪಣ್ಣನಿಗೆ ಪ್ರಧಾನಮಂತ್ರಿ ನರೇಂದ್ರ ಮೋದಿ ಅವರಿಗೆ ಪತ್ರ ಬರೆ ಎಂದು ನಾನು ಹೇಳಿ ಬರೆಸಿದ್ದೇನಾ? ಅವರು ಪತ್ರ ಬರೆದಿರುವುದು ಸುಳ್ಳಾ ಎಂದು ಪ್ರಶ್ನಿಸಿದರು.

ಅವರು ಬರೆದ ಪತ್ರದ ಕಾಪಿ ಇದೆ ಎಂದ ಅವರು ರಾಜ್ಯದಲ್ಲಿ ಕಾಂಗ್ರೆಸ್ ಸರ್ಕಾರ ಇದ್ದ ವೇಳೆ ಕರ್ನಾಟಕಕ್ಕೆ ಪ್ರಧಾನಿ ಮೋದಿ ಅವರು ಆಗಮಿಸಿದಾಗ 10 ಪರ್ಸೆಂಟೇಜ್ ಕಮೀಷನ್ ಸರ್ಕಾರ ಎಂದು ಆರೋಪಿಸಿದ್ದರು. ಅವರ ಹತ್ತಿರ ಏನು ದಾಖಲಾತಿ ಇತ್ತು ಎಂದು ಪ್ರಶ್ನಿಸಿದರು.

ರೈತರು ಸಾಕಷ್ಟು ಸಮಸ್ಯೆಯಲ್ಲಿದ್ದಾರೆ. ಎಪಿಎಂಸಿ ಕಾಯ್ದೆ ಹಿಂಪಡೆಯುವುದಿಲ್ಲ ಎಂದು ಹೇಳಿಕೆ ನೀಡಿರುವ ಸಚಿವ ಸೋಮಶೇಖರ, ಎಪಿಎಂಸಿ ಕಾಯ್ದೆಯಿಂದ ರೈತರಿಗೆ ಮಾರಕವಾಗಿದೆಯೋ, ಪರವಾಗಿದೆ ಎಂದು ರೈತರು ಹೇಳಬೇಕು. ಅದನ್ನು ಸೋಮಶೇಖರ ಹೇಳುವುದಲ್ಲ ಎಂದರು.

2019ರಲ್ಲಿ ಯಡಿಯೂರಪ್ಪ ಮುಖ್ಯಮಂತ್ರಿಯಾದ ವೇಳೆ ನೆರೆಯಿಂದ ಸಾಕಷ್ಟು ಮನೆಗಳು ಬಿದ್ದಿವೆ. ಗೋಕಾಕ, ರಾಯಭಾಗ, ಹುಕ್ಕೇರಿ ಸೇರಿದಂತೆ ಅನೇಕ ಕಡೆಗಳಲ್ಲಿ ಪರಿಹಾರ ಕೊಟ್ಟಿಲ್ಲ. ಕೇವಲ ಒಂದೇ ಕಂತಿನ ಪರಿಹಾರ ನೀಡಿದ್ದಾರೆ. ಸರ್ಕಾರದಲ್ಲಿ ಹಣ ಇದೆಯೋ ಇಲ್ಲವೋ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರಿಗೆ ಕೇಳುತ್ತೇವೆ ಎಂದರು.

ಅಧಿವೇಶನ ಬಂದಾಗ ರೈತರು ಪ್ರತಿಭಟನೆ ಮಾಡುವುದು ಸಹಜ ಎಂದು ಮುಖ್ಯಮಂತ್ರಿಯವರ ಹೇಳಿಕೆಯ ಬಗ್ಗೆ ಪ್ರತಿಕ್ರಿಯಿಸಿದ ಅವರು, ರೈತರ ಬಗ್ಗೆ ಮುಖ್ಯಮಂತ್ರಿಯವರು ಲಘುವಾಗಿ ಮಾತನಾಡಬಾರದು. ಇದೇ ಬೊಮ್ಮಾಯಿ ಅವರು ಸದನದಲ್ಲಿ ಹೇಳಿದರು. ಚಳುವಳಿ ಮಾಡುತ್ತಿರುವವರು ರೈತರಲ್ಲ ಎಂದು ಹೇಳಿದ್ದರು. ಮತ್ತೆ ಕೇಂದ್ರ ಸರ್ಕಾರ ಯಾಕೆ ಹಿಂಪಡೆದರು ಎಂದು ಪ್ರಶ್ನಿಸಿದ ಅವರು, ಬಿಟ್ ಕಾಯಿನ್ ವಿಚಾರ ಕುರಿತು ಕಾಂಗ್ರೆಸ್ ಶಾಸಕರೊಂದಿಗೆ ಚರ್ಚಿಸಿ ಸದನದಲ್ಲಿ ಧ್ವನಿ ಎತ್ತುವ ಬಗ್ಗೆ ತೀರ್ಮಾನ ಕೈಗೊಳ್ಳಲಾಗವುದು ಎಂದರು.

ಬೆಳಗಾವಿ ಚಳಿಗಾಲದ ಅಧಿವೇಶನದಲ್ಲಿ ಸಾಕಷ್ಟು ವಿಷಯಗಳನ್ನು ಚರ್ಚೆ ಮಾಡುವುದು ಇದೆ ಪ್ರವಾಹ, ಉತ್ತರ ಕರ್ನಾಟಕದ ಸಮಸ್ಯೆ ನೆರೆ ಸಂತ್ರಸ್ತರಿಗೆ ಇಲ್ಲಿಯವರೆಗೂ ಮನೆ ನೀಡಿಲ್ಲ ಮತಾಂತರ ನಿಷೇದ ಕಾಯಿದೆ ತರುವುದು 40 ಪರ್ಸೆಂಟೇಜ್ ಭ್ರಷ್ಟಾಚಾರದ ನಡೆಸಿರುವ ವಿಷಯ ಸೇರಿದಂತೆ ಸಾಕಷ್ಟು ವಿಷಯಗಳಿವೆ ಎಂದರು. ರಾಜ್ಯ ಸರ್ಕಾರದಲ್ಲಿ ಯಾವುದೇ ಕೆಲಸಗಳು ಆಗುತ್ತಿಲ್ಲ. ರೈತರು ಸಾಕಷ್ಟು ಸಮಸ್ಯೆಯಲ್ಲಿದ್ದಾರೆ. ಅವರಿಗೆ ಸರ್ಕಾರದಿಂದ ಪರಿಹಾರ ಕೊಡಿಸುವ ಕಾರ್ಯವನ್ನು ವಿಪಕ್ಷ ಸ್ಥಾನದಲ್ಲಿ ಇದ್ದು ಮಾಡುತ್ತೇವೆ ಎಂದರು.

**ಪಾದಯಾತ್ರೆಯಲ್ಲಿ ಭಾಗಿ**: ಖಾನಾಪುರ ಕ್ಷೇತ್ರದ ಅಭಿವೃದ್ಧಿ, ನೆರೆ ಸಂತ್ರಸ್ತರಿಗೆ ಪರಿಹಾರ ನೀಡುವಂತೆ ಆಗ್ರಹಿಸಿ ಖಾನಾಪುರ ಶಾಸಕಿ ಡಾ.ಅಂಜಲಿ ನಿಂಬಾಳ್ಕರ್ ಅವರು ಖಾನಾಪುರದಿಂದ ಸುವರ್ಣ ವಿಧಾನ ಸೌಧದವರೆಗೆ ಹಮ್ಮಿಕೊಂಡಿರುವ ಸಂಘರ್ಷ ಪಾದಯಾತ್ರೆಯಲ್ಲಿ ಪಾಲ್ಗೊಳ್ಳುತ್ತೇನೆ ಎಂದು ಹೇಳಿದರು. ಬೆಳಗಾವಿ ಗ್ರಾಮೀಣ ಮತಕ್ಷೇತ್ರದ ಶಾಸಕಿ ಲಕ್ಷ್ಮೀ ಹೆಬ್ಬಾಳ್ಕರ್, ಮಾಜಿ ಸಚಿವ ಎ.ಬಿ.ಪಾಟೀಲ್, ಕಾಂಗ್ರೆಸ್ ಮುಖಂಡರಾದ ಚನ್ನರಾಜ ಹಟ್ಟಿಹೋಳಿ ಉಪಸ್ಥಿತರಿದ್ದರು.

ಆಧಾರ:ಕನ್ನಡ ಪ್ರಭ, ದಿನಾಂಕ:13.12.2021.

## 60. 10 ಅಧಿವೇಶನ ನಡೆದರೂ 'ಉತ್ತರ'ವಿಲ್ಲ

ಬೆಳಗಾವಿಯಲ್ಲಿ ಈವರೆಗೂ 10 ಅಧಿವೇಶನ ನಡೆದಿವೆ. ಇವುಗಳಿಂದ ಉತ್ತರ ಕರ್ನಾಟಕಕ್ಕೆ ಏನಾದರೂ ಅನುಕೂಲವಾಗಿದೆಯೇ, ಈ ಭಾಗದ ಸಮಸ್ಯೆಗಳಿಗೆ ಶಾಶ್ವತ ಪರಿಹಾರವೇನಾದರೂ ಸಿಕ್ಕಿದೆಯೇ.

ಡಿಸೆಂಬರ್ 13 ರಂದ ಮತ್ತೆ ಅಧಿವೇಶನ ಶುರುವಾಗುತ್ತಿರುವ ಹಿನ್ನೆಲೆಯಲ್ಲಿ ಇಂತಹದೊಂದು ಪ್ರಶ್ನೆ ಉದ್ಭವವಾಗಿದೆ. ಇದಕ್ಕೆ ಕಾರಣವೂ ತಿಳಿದಿಲ್ಲ. ಸುವರ್ಣ ವಿಧಾನಸೌಧ ಉದ್ಘಾಟನೆಯಾಗಿದ್ದ 2012ರಲ್ಲಾದರು ಅದಕ್ಕಿಂತ ಮುನ್ನವೇ ಅಂದರೆ 2006ರಿಂದ ಅಧಿವೇಶನ ನಡೆಯುತ್ತಿದೆ. ಆಗಿನಿಂದ ಕೆಲವೊಂದು ಸಲ ನಡೆದಿದ್ದರು ಈವರೆಗೂ ಬರೋಬ್ಬರಿ 10 ಅಧಿವೇಶನ ನಡೆದಿವೆ. ಇದೀಗ ನಡೆಯುತ್ತಿರುವುದು 11ನೇಯ ಅಧಿವೇಶನ.

ಪ್ರತಿಸಲ ಅಧಿವೇಶನ ಬಂದಾಗಲೂ ಈ ಭಾಗದ ಜನತೆಯಲ್ಲಿ ಹತ್ತಾರು ನಿರೀಕ್ಷೆ ಹುಟ್ಟಿಕೊಳ್ಳುತ್ತವೆ ಇಡೀ ಮುಖ್ಯಮಂತ್ರಿ, ಮಂತ್ರಿಗಳು, ಉನ್ನತಾಧಿಕಾರಿಗಳು ಹೀಗೆ ಸರ್ಕಾರವೇ ಇತ್ತ ಬರುತ್ತದೆ. ನಮ್ಮ ಸಮಸ್ಯೆಗಳಿಗೆ ಪರಿಹಾರ ಕಾಣಬಹುದು ಎಂದು ಆಸೆಗಣ್ಣಿನಿಂದ ನೋಡುತ್ತಿರುತ್ತಾರೆ .ಆದರೆ ಪ್ರತಿಸಲವೂ ಬರೀ ಗೋಜು ಗದ್ದಲ, ಬಹಿಷ್ಕಾರಗಳಲ್ಲೇ ಅಧಿವೇಶನ ಮುಕ್ತಾಯವಾಗುತ್ತದೆ. 10 ದಿನದ ಅಧಿವೇಶನದಲ್ಲೂ ಹೇಳಿಕೊಳ್ಳುವಂತಹ ಸಮಸ್ಯೆಗಳ ಸುದೀರ್ಘ ಚರ್ಚೆಗಳು ನಡೆದಿಲ್ಲ. ಅವುಗಳಿಗೆ ಪರಿಹಾರವೂ ಸಿಕ್ಕಿಲ್ಲ.

**ಏನಾಗಬೇಕಿತ್ತು:** ಕಬ್ಬು ಬೆಳೆಗಾರರ ಬಾಕಿ ಹಣ ಪಾವತಿಯ ಸಮಸ್ಯೆ ಈಗಿನದ್ದಲ್ಲ. ದಶಕಗಳಿಂದಲೇ ಇದೆ. ಪ್ರತಿಸಲ ಅಧಿವೇಶನದಲ್ಲಿ ಬೆಳೆಗಾರರಿಂದ ಪ್ರತಿಭಟನೆ ಮಾಮೂಲು. ಆದರೂ ಇವರ ಸಮಸ್ಯೆಗೆ ಮಾತ್ರ ಪರಿಹಾರ ಕಂಡುಕೊಳ್ಳಲು ಅಧಿವೇಶನದಿಂದ ಸಾಧ್ಯವಾಗಿಲ್ಲ. ಇನ್ನು ಕೃಷ್ಣಾ ನದಿಯ ಪ್ರವಾಹದಿಂದ ಪ್ರತಿವರ್ಷ ಈ ಭಾಗದ ಜಿಲ್ಲೆಗಳು ಸಮಸ್ಯೆ ಎದುರಿಸುತ್ತಿವೆ. ಆಲಮಟ್ಟಿ ಜಲಾಶಯದ ಎತ್ತರವನ್ನು ಎತ್ತರಿಸಬೇಕಿದೆ. ಈ ಬಗ್ಗೆ ಗಟ್ಟಿ ನಿರ್ಧಾರ ಕೈಗೊಳ್ಳಲು ಸರ್ಕಾರಕ್ಕೆ ಆಗುತ್ತಿಲ್ಲ.

**ಶಕ್ತಿ ಸೌಧವಾಗಲಿಲ್ಲ:** ಸುವರ್ಣ ವಿಧಾನಸೌಧಕ್ಕೆ ಈ ಭಾಗದ ಅಭಿವೃದ್ಧಿಗೆ ಪೂರಕವಾಗದ ರಾಜ್ಯಮಟ್ಟದ ಕಚೇರಿ ಸ್ಥಳಾಂತರಿಸಬೇಕು. ಈ ಮೂಲಕ ಶಕ್ತಿಸೌಧ ಮಾಡಬೇಕೆನ್ನುವ ಬೇಡಿಕೆ ಬಹುವರ್ಷದ್ದು. 2019ರಲ್ಲಿ ಕಚೇರಿ ಸ್ಥಳಾಂತರಕ್ಕೆ ಆದೇಶಿಸಿ ಮತ್ತೆ ವಾಪಸ್ ಪಡೆದಿರುವುದುಂಟು. ಉತ್ತರಕ್ಕೆ ಬರಲು ಒಲ್ಲದ ಮನಸ್ಸಿನ ಅಧಿಕಾರಿಗಳ ಕುತಂತ್ರದಿಂದಾಗಿ ಈ ಆದೇಶ ರದ್ದಾಯಿತು ಎಂಬ ಆರೋಪ ಕೆಲ ಜನಪ್ರತಿನಿಧಿಗಳದ್ದು.

ಆಧಾರ:ಕನ್ನಡ ಪ್ರಭ, ದಿನಾಂಕ:13.12.2021.

## 61. Kids’ issues form minuscule of questions in legislature

The government and the parties focused entirely on stepping up health infrastructure in the state, besides feeding the poor, during the pandemic.

Due to this, political leaders hardly found time to debate and discuss other relevant issues such as malnutrition, as also the education, health and rights of children.

Even though the legislature met five times in 2020-21, discussions on education, rights and health of children took a backseat compared to the previous years, according to a finding by The Karnataka Child Rights Observatory (KSRO) –an umberella organization of child rights NGOs in Karnataka.

In the backdrop of the winter session of the legislature in Belagavi from Monday, an analysis of the last five sessions shows that the discussion on these topics have come down considerably.

“The total number of questions pertaining to children in the Assembly was only 4.57%. Last year, the same stood at 5.4%. Out of the 7,491 questions that were asked during this period, only 342 pertained to children,” the report said. Similarly, the Council witnessed a slump in the percentage of questions pertaining to children.

“Out of the 5,289 questions, only 266 were about children and their rights accounting for just 5% of the total questions that were asked,’’ the report said.

Council chairperson Basavaraj Horatti has assured the child rights bodies that the House would deliberate more on children-centric issues in the coming days.

However, a few legislators have made continuous efforts to draw the government's attention to child rights. Congress members Sowmya Reddy, N A Harris and JD(S) member H D Revanna have asked the maximum number of questions in the Assembly in this regard.

While Sowmya has asked 11 questions, Harris and Revanna have asked 10 questions each pertaining to child rights. Mahantesh Kavatagimat, N Ravikumar of the BJP and U.B.Venkatesh (Congress) have asked the maximum questions in the Upper House on children's issues.

Kavatagimat stood in the first place with 36 questions, Ravikumar asked 14 questions, followed by Venkatesh with 13 questions in the last five sessions, the KCRO analysis shows.

Courtesy:Deccan Herald, Dated:13.12.2021

## 62. ಮತಾಂತರ ನಿಷೇಧ ಕಾಯ್ದೆ ಜಾರಿಗೆ ಬಿಡುವುದಿಲ್ಲ

ಮತಾಂತರ ನಿಷೇಧ ಕಾಯ್ದೆ ಜಾರಿಗೆ ಯಾವುದೇ ಕಾರಣಕ್ಕೂ ಬಿಡುವುದಿಲ್ಲ ಎಂದು ಮಾಜಿ ಸಿಎಂ, ವಿಪಕ್ಷನಾಯಕ ಸಿದ್ದರಾಮಯ್ಯ ಹೇಳಿದ್ದಾರೆ. ಆರಂಭವಾಗಲಿರುವ ಬೆಳಗಾವಿ ಅಧಿವೇಶನದಲ್ಲಿ ರಾಜ್ಯ ಸರ್ಕಾರ ಮತಾಂತರ ನಿಷೇಧ ಕಾಯ್ದೆ ಮಸೂದೆ ಮಂಡನೆ ಮಾಡಲು ಸಿದ್ಧತೆ ನಡೆಸಿದೆ. ಈ ಹಿನ್ನೆಲೆಯಲ್ಲಿ ಕಾಯ್ದೆ ಜಾರಿ ವಿಚಾರ ರಾಜ್ಯಾದ್ಯಾಂತ ಭಾರಿ ಚರ್ಚೆಗೆ ಗ್ರಾಸವಾಗಿದೆ. ಪ್ರತಿಪಕ್ಷವಾಗಿರುವ ಕಾಂಗ್ರೆಸ್ ನಾಯಕರು ಮತಾಂತರ ನಿಷೇಧ ಕಾಯ್ದೆ ಜಾರಿಗೆ ತೀವ್ರ ವಿರೋಧ ವ್ಯಕ್ತಪಡಿಸಿದ್ದಾರೆ. ಒಂದು ವೇಳೆ ಸರ್ಕಾರ ಮಸೂದೆ ಮಂಡಿಸಿದಲ್ಲಿ ಅಧಿವೇಶನದಲ್ಲಿ ಕೋಲಾಹಲ ನಡೆಯುವ ಸಾಧ್ಯತೆ ಇದೆ ಎಂದು ಹೇಳಲಾಗುತ್ತಿದೆ.

ಸಿದ್ದರಾಮಯ್ಯರವರು ಯಾವ ಕಾರಣಕ್ಕೂ ಕಾಯ್ದೆ ಜಾರಿಗೆ ಬಿಡಲ್ಲ. ದುರುದ್ದೇಶ ಪೂರ್ವಕವಾಗಿ ಬಿಜೆಪಿ ಸರ್ಕಾರ ಇಂತಹ ಕ್ರಮಕ್ಕೆ ಮುಂದಾಗಿದೆ. ಇಂತಹ ಕಾಯ್ದೆ ಜಾರಿಗೆ ಅವಕಾಶವಿಲ್ಲ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಇದೇ ವೇಳೆ ವಿಧಾನಪರಿಷತ್ ಸದಸ್ಯ ಸಿ.ಎಂ.ಇಬ್ರಾಹಿಂ ಪ್ರತಿಕ್ರಿಯೆ ನೀಡಿ, ಮತಾಂತರ ನಿಷೇಧದ ಕುರಿತು ಸಂವಿಧಾನದಲ್ಲಿಯೇ ಕಾನೂನು ಇರುವಾಗ ಇವರು ಪ್ರತ್ಯೇಕವಾಗಿ ಮಸೂದೆ ಮಂಡಿಸುತ್ತಿರುವುದಾದರೂ ಏಕೆ ಎಂದು ಪ್ರಶ್ನಿಸಿದರು. ಮದುವೆ ಮೂಲಕ ಬಲವಂತದ ಮತಾಂತರ ಮಾಡಲಾಗುತ್ತಿದೆ ಎಂಬುದು ಸುಳ್ಳು. ಲವ್ ಇರುವುದರಿಂದಲೇ ಮದುವೆಯಾಗೋದು. ಯಾರಾದರೂ ಲವ್ ಇಲ್ಲ ಅಂದರೆ ಮದುವೆಯಗ್ತಾರಾ? ಇದರಲ್ಲಿ ಜಿಹಾದಿ ಏನ್ ಬಂತು? ನಾನು ಮದುವೆಯಾಗಿರೋದು ಲವ್‌ನಿಂದಲೇ ಅಂದಮೇಲೆ ಮತಾಂತರ ಜಿಹಾದಿ ಎಂಬುದು ಎಲ್ಲಿಂದ ಬಂತು? ಸಂವಿಧಾನದಲ್ಲಿಯೇ ಅವಕಾಶವಿರುವಾಗ ರಾಜ್ಯ ಸರ್ಕಾರ ಹೊಸದಾಗಿ ಕಾನೂನು ಜಾರಿ ಮಾಡಲು ಹೊರಟಿರುವುದಾದರೂ ಯಾಕೆ ಎಂಬುದು ಗೊತ್ತಾಗುತ್ತಿಲ್ಲ ಎಂದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:13.12.2021.

## 63. ಮತಾಂತರ ನೋಂದಣಿ

ಮತಾಂತರ ನಿಷೇಧ ಮಸೂದೆ ವಿಚಾರದಲ್ಲಿ ರಾಜ್ಯದಲ್ಲಿ ಗದ್ದಲ ಜೋರಾಗಿದ್ದು ಇದರ ಮಧ್ಯೆಯೇ ವಿವಾಹ ನೋಂದಣಿ ರೀತಿಯಲ್ಲೇ ಮತಾಂತರ ಪ್ರಕ್ರಿಯೆಗೂ ನೋಂದಣಿ ವ್ಯವಸ್ಥೆ ಜಾರಿಗೆ ತರುವ ಸಾಧ್ಯತೆಗಳ ಬಗ್ಗೆ ರಾಜ್ಯ ಸರ್ಕಾರ ಸುಳಿವು ನೀಡಿದೆ. ಈ ಸಂಬಂಧ ಮಾತನಾಡಿದ ಕಾನೂನು

ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ಅವರು, ಈ ಅಂಶವನ್ನು ಪ್ರಸ್ತಾವಿತ ಮಸೂದೆಯಲ್ಲಿ ಸೇರ್ಪಡೆ ಮಾಡಲಾಗುತ್ತದೆ ಎಂದು ತಿಳಿಸಿದ್ದಾರೆ.

ಈ ನಡುವೆ, ಆರಂಭವಾಗುವ ಬೆಳಗಾವಿಯ ಚಳಿಗಾಲದ ಅಧಿವೇಶನದಲ್ಲೇ ಮತಾಂತರ ನಿಷೇಧ ಮಸೂದೆ ಮಂಡಿಸುವ ಕುರಿತಂತೆ ಮುಖ್ಯಮಂತ್ರಿಯವರು ಮಾಹಿತಿ ನೀಡಿದ್ದಾರೆ. ಸದ್ಯ ಕಾನೂನು ಇಲಾಖೆ ಪರಿಶೀಲನೆ ನಡಸುತ್ತಿದೆ. ಇದು ಕರಡು ಮಸೂದೆಗೆ ಒಪ್ಪಿಗೆ ನೀಡಲಿದ್ದು, ಬಳಿಕ ಸಚಿವ ಸಂಪುಟ ಸಭೆಯಲ್ಲಿ ವಿಷಯ ಮಂಡನೆಯಾಗಲಿದೆ. ಇದಾದ ನಂತರ ಅಧಿವೇಶನದಲ್ಲಿ ಮಂಡಿಸಿ ಚರ್ಚೆಗೆ ಬರಲಿದೆ ಎಂದು ಹೇಳಿದ್ದಾರೆ. ರಾಜ್ಯ ಸರ್ಕಾರ ಈ ಎಲ್ಲಾ ಸಿದ್ಧತೆಗಳನ್ನು ನಡೆಸುತ್ತಿರುವಂತೆಯೇ, ಪ್ರಸ್ತಾವಿತ ಮಸೂದೆಯನ್ನು ವಿರೋಧಿಸುವುದಾಗಿ ಪ್ರತಿಪಕ್ಷನಾಯಕ ಸಿದ್ದರಾಮಯ್ಯ ಸೇರಿದಂತೆ ಹಲವು ನಾಯಕರು ತಿಳಿಸಿದ್ದಾರೆ.

**ಆಕ್ಷೇಪಣೆಗೆ ಕಾಲಾವಕಾಶ:** ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿಯಲ್ಲಿ ಮಾತನಾಡಿದ ಸಚಿವ ಜೆ.ಸಿ.ಮಾಧುಸ್ವಾಮಿ, ವಿವಾಹ ನೋಂದಣಿ ಮಾಡುವಂತೆ, ಮತಾಂತರ ಕೂಡ ನೋಂದಣಿ ಮಾಡುವ ಚಿಂತನೆ ನಡೆದಿದೆ ಎಂದರು. ಮದುವೆ ನೋಂದಣಿ ಪ್ರಕ್ರಿಯೆಯಲ್ಲಿ ಹೇಗೆ ನೋಟೀಸ್ ಬೋರ್ಡ್‌ಗೆ ವಿವಾಹಿತರ ವಿವರ ಹಾಕುತ್ತೇವೆಯೋ, ಹಾಗೆಯೇ ಮತಾಂತರಗೊಂಡವರ ವಿವರವನ್ನು ನೋಟಿಸ್ ಬೋರ್ಡ್‌ಗೆ ಹಾಕಿ ಆಕ್ಷೇಪಣೆ ಇಲ್ಲದಿದ್ದರೆ ಅಂಥವರ ಅರ್ಜಿಯನ್ನು ಪುರಸ್ಕರಿಸಲಾಗುತ್ತದೆ ಎಂದು ಪ್ರತಿಕ್ರಿಯಿಸಿದರು.

ಯಾರಿಗೂ ನೋವು, ಅಡಚಣೆ ಆಗದ ರೀತಿಯಲ್ಲಿ ಕಾಯಿದೆ ಇರಬೇಕು ಎಂದು ಯೋಚಿಸಿದ್ದೇನೆ. ಆ ನಿಟ್ಟಿನಲ್ಲಿ ಪರಾಮರ್ಶೆ ನಡದಿದೆ. ಬಲವಂತ ಹಾಗೂ ಆಮಿಷ ಒಡ್ಡಿ ಮಾಡುವ ಮತಾಂತರ ಈಗಾಗಲೇ ನಿಷೇಧ ಇದ್ದು, ಮತಾಂತರ ಮಾಡಿದವರಿಗೆ ಯಾವ ರೀತಿಯ ಶಿಕ್ಷೆ ಆಗಬೇಕು ಎನ್ನುವ ಬಗ್ಗೆ ಚರ್ಚೆ ನಡೆಯಬೇಕಿದೆ ಎಂದು ಸಚಿವ ಮಾಧುಸ್ವಾಮಿ ಹೇಳಿದ್ದಾರೆ.

ಸ್ವಯಂ ಪ್ರೇರಿತ ಮತಾಂತರಕ್ಕೂ ರೂಪುರೇಷೆ ಸಿದ್ಧಗೊಳ್ಳುತ್ತಿದ್ದು, ಮತಾಂತರ ಆಗುವವನು ಅರ್ಜಿ ಸಲ್ಲಿಸುವ ವ್ಯವಸ್ಥೆ ಜಾರಿಯಾಗಲಿದೆ. ಬಲವಂತದ ಮತಾಂತರ ಅಲ್ಲ ಎಂದು ತಿಳಿದ ಮೇಲೆ ಜಿಲ್ಲಾಧಿಕಾರಿ ಮತಾಂತರದ ಅರ್ಜಿ ಪುರಸ್ಕರಿಸಬಹುದಾಗಿದೆ. ಜೊತೆಗೆ ಒಮ್ಮೆ ಮತಾಂತರಗೊಂಡ ವ್ಯಕ್ತಿ ಮೂಲ ಜಾತಿ, ಧರ್ಮವನ್ನು ಕಳೆದುಕೊಳ್ಳುತ್ತಾನೆ ಎಂದು ಮಾಹಿತಿ ನೀಡಿದರು.

ಆಧಾರ:ಉದಯವಾಣಿ, ದಿನಾಂಕ:13.12.2021.

## 64. ಮಧ್ಯಪ್ರದೇಶ ಮಾದರಿ ಕಬ್ಬಿನ ಬೆಲೆಗೆ ರೈತರ ಪಟ್ಟು

ಎರಡು ವರ್ಷಗಳ ನಂತರ ಬೆಳಗಾವಿಯಲ್ಲಿ ಚಳಿಗಾಲದ ಅಧಿವೇಶನ ನಡೆಯುತ್ತಿದ್ದು ಪ್ರತಿವರ್ಷದಂತೆ ಈ ವರ್ಷ ಕಬ್ಬು ಬೆಳೆಗಾರರು ಬಾಕಿ ಬಿಲ್ ಪಾವತಿಗೆ ಆಗ್ರಹಿಸುವುದಕ್ಕಿಂತ ಮಧ್ಯಪ್ರದೇಶ, ಜಾರ್ಖಂಡ್ ಮಾದರಿಯಲ್ಲಿ ರೈತರಿಗೆ ರಾಜ್ಯ ಸರ್ಕಾರವೂ ಕಬ್ಬಿಗೆ ಹೆಚ್ಚುವರಿ ಬೆಲೆ ನೀಡಬೇಕೆಂಬ ಬೇಡಿಕೆ ಮುಂದಿಡಲು ತೀರ್ಮಾನಿಸಿದ್ದಾರೆ.

ಪ್ರತಿ ವರ್ಷ ಬೆಳಗಾವಿ ಅಧಿವೇಶನದ ಸಂದರ್ಭದಲ್ಲಿ ರೈತರು ಕಬ್ಬಿನ ಬೆಲೆ ನಿಗದಿ ಹಾಗೂ ಕಾರ್ಖಾನೆ ಮಾಲೀಕರಿಂದ ಹಳೇ ಬಾಕಿ ಕೊಡಿಸುವಂತೆ ಸರ್ಕಾರದ ಮೇಲೆ ಒತ್ತಡ ಹೇರಲು ಬೆಳಗಾವಿ ಸುವರ್ಣ ಸೌಧದ ಎದುರು ಪ್ರತಿಭಟನೆ ನಡೆಸುತ್ತಿದ್ದರು.

ಈ ಬಾರಿ ರಾಜ್ಯ ಸರ್ಕಾರ ರೈತರ ಹಳೇ ಬಾಕಿ ಬಿಲ್‌ಗಳನ್ನು ಕೊಡಿಸಲು ಈಗಾಗಲೇ ರೈತರೊಂದಿಗೆ ಮಾತುಕತೆ ನಡೆಸಿದ್ದು, ಬೆಳಗಾವಿ ಅಧಿವೇಶನ ಮುಗಿದ ತಕ್ಷಣ ಕಾರ್ಖಾನೆ ಮಾಲೀಕರು

ಹಾಗೂ ರೈತರೊಂದಿಗೆ ಸಭೆ ನಡೆಸಿ ಸಮಸ್ಯೆ ಬಗೆಹರಿಸುವ ಭರವಸೆಯನ್ನು ರಾಜ್ಯ ಸರ್ಕಾರ ನೀಡಿದೆ ಎಂಬ ಮಾಹಿತಿ ಲಭ್ಯವಾಗಿದೆ.

**ಮಧ್ಯ ಪ್ರದೇಶ ಮಾದರಿ ಬೆಲೆ:** ಕೇಂದ್ರ ಸರ್ಕಾರ ಪ್ರತಿ ವರ್ಷ ಕಬ್ಬಿಗೆ ಬೆಲೆ ನಿಗದಿ ಪಡಿಸುತ್ತಿದ್ದು, ಕೇಂದ್ರ ಸರ್ಕಾರ ನಿಗದಿ ಪಡಿಸುವ ಎಫ್ಆರ್‌ಪಿ(ಫೇರ್ ಆ್ಯಂಡ್ ರೆಮ್ಯುರರೇಷನ್ ಪ್ರೈಸ್) ದರವನ್ನು ಕಾರ್ಖಾನೆಗಳು ರೈತರಿಗೆ ನೀಡುವಂತೆ ರಾಜ್ಯ ಸರ್ಕಾರ ಸೂಚನೆ ನೀಡುತ್ತಿತ್ತು.

ಕೇಂದ್ರ ಸರ್ಕಾರ ನಿಗದಿ ಪಡಿಸುವ ಎಫ್ಆರ್‌ಪಿ ದರವನ್ನು ಬಹುತೇಕ ಕಾರ್ಖನೆ ಮಾಲೀಕರು ನೀಡುವುದಿಲ್ಲ. ಹೀಗಾಗಿ ರೈತರ ಕಬ್ಬಿಗೆ ಸರಿಯಾದ ಬೆಲೆ ದೊರೆಯದೇ ನಿರಂತರ ನಷ್ಟ ಅನುಭವಿಸುವಂತಾಗುತ್ತಿದೆ ಎಂಬ ಮಾತುಗಳು ಕೇಳಿ ಬರುತ್ತಿವೆ.

ರಾಜ್ಯದ ರೈತರು ಕೇಂದ್ರ ಸರ್ಕಾರ ನಿಗದಿ ಪಡಿಸುವ ಎಫ್ಆರ್‌ಪಿ ಜೊತೆಗೆ ರಾಜ್ಯ ಸರ್ಕಾರವೂ ಇಳುವರಿ ಆಧಾರದಲ್ಲಿ ಮಧ್ಯಪ್ರದೇಶ ಮಾದರಿಯಲ್ಲಿ ಪ್ರತಿ ಟನ್ ಕಬ್ಬಿಗೆ ಕನಿಷ್ಠ ರೂ.250ರಿಂದ 350ಗಳನ್ನು ರಾಜ್ಯ ಸರ್ಕಾರ ನೀಡಬೇಕೆನ್ನುವ ರೈತರ ಬೇಡಿಕೆಯಾಗಿದೆ. ಈಗಾಗಲೇ ಮಧ್ಯಪ್ರದೇಶ, ಜಾರ್ಖಂಡ್ ರಾಜ್ಯಗಳು ಕೇಂದ್ರ ಸರ್ಕಾರ ಪ್ರತಿ ಟನ್ ಕಬ್ಬಿಗೆ ನಿಗದಿ ಪಡಿಸುವ ರೂ.2900 ಜೊತೆಗೆ ಕಬ್ಬಿನಲ್ಲಿರುವ ಸಕ್ಕರೆ ಅಂಶದ ಆಧಾರದಲ್ಲಿ ಕನಿಷ್ಠ ರೂ.250 ರಿಂದ 350 (ರಾಜ್ಯ ಹೆಚ್ಚಿನ ಬೆಲೆ) ನೀಡುತ್ತಿವೆ. ಅದೇ ರೀತಿ ರಾಜ್ಯ ಸರ್ಕಾರವು ದರ ಕೊಡಬೇಕೆಂದು ರೈತರು ಸರ್ಕಾರದ ಮೇಲೆ ಒತ್ತಡ ಹೇರಲು ತೀರ್ಮಾನಿಸಿದ್ದಾರೆ.

**ಹತ್ತು ವರ್ಷದಿಂದ ಏರದ ದರ:** ಕಳೆದ ಹತ್ತು ವರ್ಷಗಳಿಂದ ರೈತರ ಕಬ್ಬಿನ ಉತ್ಪಾದನಾ ವೆಚ್ಚ ನಿರಂತರವಾಗಿ ಏರುತ್ತಲೇ ಇದೆ. ರಸಗೊಬ್ಬರ, ಕಬ್ಬಿನ ನಾಟಿ, ಕಟಾವಿಗೆ ಮಾಡುವ ವೆಚ್ಚ ಎಲ್ಲವೂ ಮೂರು ನಾಲ್ಕು ಪಟ್ಟು ಹೆಚ್ಚಳವಾಗಿದೆ. ಆದರೆ, ಕಬ್ಬಿನ ದರ ಮಾತ್ರ ಏರುತ್ತಿಲ್ಲ. ಕಾರ್ಖಾನೆ ಮಾಲೀಕರು ರೈತರಿಗೆ ಪ್ರತಿ ಟನ್‌ಗೆ 2300 ರಿಂದ 2700 ರವರೆಗೆ ಮಾತ್ರ ಬೆಲೆ ನೀಡುತ್ತ ಬರುತ್ತಿದ್ದು ಎಫ್ಆರ್‌ಪಿ ದರ ಪಡೆಯುವುದಕ್ಕೂ ರೈತರು ನಿರಂತರ ಹೋರಾಟ ಮಾಡಬೇಕಾಗಿದೆ ಎಂಬ ಅಭಿಪ್ರಾಯವನ್ನು ರೈತ ಮುಖಂಡರು ವ್ಯಕ್ತಪಡಿಸುತ್ತಿದ್ದಾರೆ.

**ಕಟಾವಿಗೆ ಖರ್ಚು:** ರೈತರು ಬೆಳೆದ ಕಬ್ಬು ನಿಗದಿತ ಸಮಯದಲ್ಲಿ ಕಾರ್ಖಾನೆಗಳಿಗೆ ತೆರಳಿದರೆ ಕಾರ್ಖಾನೆ ನಿಗದಿಪಡಿಸುವ ಕಟಾವಿನ ದರದಲ್ಲಿಯೇ ಸಾಗಣೆ ಮಾಡಲಾಗುತ್ತದೆ. ಒಂದು ವೇಳೆ ಅಕಾಲಿಕ ಮಳೆ, ಅತಿಯಾದ ಬೆಳೆಯಿಂದ ರೈತರು ಬೇಗ ಕಾರ್ಖಾನೆಗೆ ಕಳುಹಿಸಲು ಪೈಪೋಟಿ ನಡೆಸುವುದರಿಂದ ಕಬ್ಬು ಕಟಾವು ಮಾಡುವ ಗ್ಯಾಂಗ್ (ಆಳು)ಗಳಿಗೆ ಪ್ರತಿ ಟನ್ ಕಬ್ಬಿಗೆ ಕನಿಷ್ಠ ರೂ.200 ಗಳಿಗೆ 500ವರೆಗೂ ರೈತರೇ ನೀಡುವ ಪರಿಸ್ಥಿತಿ ಇದೆ. ಹೀಗಾಗಿ ಕೇಂದ್ರ ಸರ್ಕಾರ ನಿಗದಿ ಪಡಿಸುವ ಎಫ್ಆರ್‌ಪಿ ನೀಡಿದರೂ ರೈತರಿಗೆ ಪ್ರಯೋಜನವಾಗುವುದಿಲ್ಲ. ಹೀಗಾಗಿ, ರಾಜ್ಯ ಸರ್ಕಾರವೂ ಮಧ್ಯಪ್ರದೇಶ ಹಾಗೂ ಜಾರ್ಖಂಡ್ ಮಾದರಿಯಲ್ಲಿ ಹೆಚ್ಚಿನ ದರ ನೀಡಬೇಕೆನ್ನುವುದು ರೈತರ ಒತ್ತಾಸೆಯಾಗಿದೆ.

ಆಧಾರ: ಉದಯವಾಣಿ, ದಿನಾಂಕ:13.12.2021.

## 65. ಕೇಂದ್ರದಿಂದ ನಯಾಪೈಸೆ ನೆರೆ ಪರಿಹಾರ ಇಲ್ಲ

ಸತತ ಮೂರು ವರ್ಷಗಳಿಂದ ತೀವ್ರ ಅತಿವೃಷ್ಟಿ, ಪ್ರವಾಹದಿಂದ ರಾಜ್ಯ ತತ್ತರಿಸಿದೆ, ಕಳೆದ ಐದು ತಿಂಗಳಲ್ಲೇ ಮೂರು ಬಾರಿ ನೆರೆ ಉಂಟಾಗಿದ್ದು, 12.5 ಲಕ್ಷ ಹೆಕ್ಟೇರ್ ಬೆಳೆ ನಾಶವಾಗಿದೆ. ಎನ್‌ಡಿಆರ್‌ಎಫ್ ನಿಯಾಮಾವಳಿ ಪ್ರಕಾರವೇ ರೂ. 11,916 ಕೋಟಿ ನಷ್ಟ ಉಂಟಾಗಿದ್ದರೂ ಕೇಂದ್ರ ಸರ್ಕಾರ ಈ ವರ್ಷ

ನಯಾಪೈಸೆ ಪರಿಹಾರ ನೀಡಿಲ್ಲ ಎಂದು ವಿಧಾನಸಭೆ ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಕಿಡಿಕಾರಿದ್ದಾರೆ.

ರಾಜ್ಯದಲ್ಲಿನ ಪ್ರವಾಹ, ನೆರೆ ಹಾನಿ ಕುರಿತು ನಿಲುವಳಿ ಸೂಚನೆ ಮಂಡಿಸಿ ಪ್ರಾಸ್ತಾವಿಕವಾಗಿ ಮಾತನಾಡಿದ ಅವರು, ರಾಜ್ಯ ಸರ್ಕಾರದ ನೆರೆ ನಿರ್ವಹಣೆ ವೈಫಲ್ಯ ಹಾಗೂ ಕೇಂದ್ರ ಸರ್ಕಾರದ ಮಲತಾಯಿ ಧೋರಣೆ ಕುರಿತು ತರಾಟೆಗೆ ತೆಗೆದುಕೊಂಡರು.

ಕಳೆದ ಮೂರು ವರ್ಷದಿಂದ ರಾಜ್ಯದ ಜನತೆ ಅತಿವೃಷ್ಟಿ ಹಾಗೂ ಬರದಿಂದ ತತ್ತರಿಸಿದ್ದಾರೆ. ಕೆಲವು ಜಿಲ್ಲೆಗಳಲ್ಲಿ ಅತಿವೃಷ್ಟಿ ಉಂಟಾದರೆ ಕೆಲ ಜಿಲ್ಲೆಗಳಲ್ಲಿ ತೀವ್ರ ಬರ ಕಾಡಿದೆ. ಈ ವರ್ಷ 22 ಜಿಲ್ಲೆಗಳಲ್ಲಿ ನೆರೆ ಉಂಟಾಗಿದ್ದು, ಉಳಿದ ಜಿಲ್ಲೆಗಳಲ್ಲಿ ಬರ ಉಂಟಾಗಿದೆ. ಇದರಿಂದಾಗಿ 3 ವರ್ಷದಲ್ಲಿ ರೂ. 2.5 ಲಕ್ಷ ಕೋಟಿ ನಷ್ಟ ಆಗಿದೆ. ಜೂನ್‌ನಿಂದ ಡಿಸೆಂಬರ್ ಮೊದಲ ವಾರದವರೆಗೆ ಮೂರು ಭಾರಿ ಮಳೆಯಿಂದಾಗಿ ರಾಜ್ಯದಲ್ಲಿ ನೆರೆ ಉಂಟಾಗಿದೆ.

ದಕ್ಷಿಣ ಒಳನಾಡು, ಮಲೆನಾಡು, ಉತ್ತರ ಒಳನಾಡು ಭಾಗದಲ್ಲಿ ಶೇ.75 ರಿಂದ 80 ರಷ್ಟು ಬೆಳೆ ನೆಲಕಚ್ಚಿದ್ದು, ರೈತ ಕಂಗಾಲಾಗಿದ್ದಾನೆ. 3 ಪ್ರವಾಹ ಬಂದರೂ ಕೇಂದ್ರ ಸರ್ಕಾರ ಒಂದು ಪೈಸೆ ಪರಿಹಾರ ನೀಡಿಲ್ಲ. ರಾಜ್ಯ ಸರ್ಕಾರವು ರೈತರಿಗೆ ಬೆಳೆ ಹಾನಿ ಪರಿಹಾರ ನೀಡಿಲ್ಲ. ರಸ್ತೆ, ಸೇತುವೆ, ಕಟ್ಟಡಗಳು, ಸಾರ್ವಜನಿಕರ ಮನೆಗಳು ಹಾನಿಯಾಗಿವೆ. ಹೀಗಿದ್ದರೂ ಕೇಂದ್ರ ಸರ್ಕಾರವು ತಲೆಕೆಡಿಸಿಕೊಂಡಿಲ್ಲ ಎಂದು ಕಿಡಿಕಾರಿದರು.

ಕಳೆದ 3 ವರ್ಷದಿಂದಲೂ ರಾಜ್ಯಕ್ಕೆ ಅನ್ಯಾಯ ಮಾಡಿದೆ. ಈ ಬಗ್ಗೆ ಪ್ರಶ್ನಿಸಿದರೆ 2013ರಲ್ಲಿ ಯುಪಿಎ ಸರ್ಕಾರ ಎಷ್ಟು ಪರಿಹಾರ ನೀಡಿತ್ತು ಎನ್ನುತ್ತಾರೆ. ರಾಜ್ಯದಲ್ಲಿ ರೂ. 2013 ರಲ್ಲಿ ವರ್ಷಕ್ಕೆ 4 ಸಾವಿರ ಕೋಟಿ ಪೆಟ್ರೋಲಿಯಂ ತೆರಿಗೆ ಸಂಗ್ರಹವಾಗುತ್ತಿತ್ತು. ಈ ವರ್ಷ ರೂ.36 ಸಾವಿರ ಕೋಟಿಗಳನ್ನು ಕೇಂದ್ರ ಸರ್ಕಾರವೇ ಸಂಗ್ರಹಿಸಿದೆ. ಆದರೆ ರಾಜ್ಯದ ಜನತೆಗೆ ಪರಿಹಾರ ನೀಡಲು ಮಾತ್ರ ಮುಂದಾಗುತ್ತಿಲ್ಲ. ಈ ಬಗ್ಗೆ ಸಮಗ್ರವಾಗಿ ಚರ್ಚಿಸಲು ಅವಕಾಶ ನೀಡಬೇಕು. ಮುಖ್ಯಮಂತ್ರಿಯವರು ಅವರೇ ಇದಕ್ಕೆ ಉತ್ತರ ನೀಡಬೇಕು ಎಂದು ಹೇಳಿದರು.

ಆಧಾರ:ವಿಜಯವಾಣಿ, ದಿನಾಂಕ:13.12.2021.

## 66. ಮೊದಲ ದಿನವೇ ಪ್ರತಿಭಟನೆಗಳ ಬಿಸಿ

ದೆಹಲಿಯಲ್ಲಿ ನಡೆದ ರೈತರ ಪ್ರತಿಭಟನೆಗೆ ಕೇಂದ್ರ ಸರ್ಕಾರ ಮಣಿದಿದೆ. ರಾಜ್ಯ ಸರ್ಕಾರ ಇನ್ನೂ ಕಾಯ್ದೆ ಹಿಂಪಡೆದಿಲ್ಲ. ಈ ಮೂರೂ ಕಾಯ್ದೆಗಳನ್ನು ಹಿಂಪಡೆಯುವವರೆಗೆ ಪ್ರತಿಭಟನೆ ನಿಲ್ಲಿಸುವುದಿಲ್ಲ ಎಂದು ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ರಾಜ್ಯಾಧ್ಯಕ್ಷರು ಎಚ್ಚರಿಸಿದರು.

ಎಪಿಎಂಸಿ ಕಾಯ್ದೆ, ಭೂಸುಧಾರಣೆ ಕಾಯ್ದೆ ಹಾಗೂ ಜಾನುವಾರು ಹತ್ಯೆ ನಿಷೇಧ ಕಾಯ್ದೆ ಹಿಂಪಡೆಯಲು ಒತ್ತಾಯಿಸಿ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ವತಿಯಿಂದ ಸುವರ್ಣ ವಿಧಾನಸೌಧದ ಬಳಿ ಆಯೋಜಿಸಿದ್ದ ಪ್ರತಿಭಟನೆಯಲ್ಲಿ ಅವರು ಮಾತನಾಡಿದರು.

ದೆಹಲಿಯಲ್ಲಿ ಹೋರಾಟ ಮಾಡಿದ ರೈತರ ಮೇಲೆ ಹಾಕಿದ ಕೇಸ್ ವಾಪಸ್ಸು ಪಡೆಯಬೇಕು. ಡಾ:ಸ್ವಾಮಿನಾಥನ್ ವರದಿ ಜಾರಿಯಾಗಬೇಕು. ವಿದ್ಯುತ್ ವಲಯದ ಖಾಸಗೀಕರಣಗೊಳಿಸುವ ಕಾಯ್ದೆ ಕೈಬಿಡಬೇಕು ಎಂದು ಒತ್ತಾಯಿಸಿದ ಅವರು,ಮಧ್ಯಾಹ್ನದ ಒಳಗೆ ಮುಖ್ಯಮಂತ್ರಿ ಪ್ರತಿಭಟನೆ ಸ್ಥಳಕ್ಕೆ ಬಂದು ರೈತರ ಮನವಿ ಆಲಿಸದಿದ್ದರೆ ಸುವರ್ಣ ವಿಧಾನಸೌಧಕ್ಕೆ ನುಗ್ಗುವುದಾಗಿ ಎಚ್ಚರಿಸಿದರು.

**ಸ್ಥಳಕ್ಕೆ ಬಂದ ಕೃಷಿ ಸಚಿವ:** ಕೃಷಿ ಸಚಿವರು ಸ್ಥಳಕ್ಕೆ ಬಂದು ಪ್ರತಿಭಟನಾನಿರತರ ಮನವೊಲಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಬಿ.ಸಿ.ಪಾಟೀಲ್ ರೈತರ ಬೇಡಿಕೆಗಳನ್ನು ಮುಖ್ಯಮಂತ್ರಿಗಳ ಗಮನಕ್ಕೆ ತಂದು ಮುಂದಿನ ನಿರ್ಧಾರ ತೆಗೆದುಕೊಳ್ಳಲಾಗುವುದು ಎಂದು ಭರವಸೆ ನೀಡಿದರು.

ಹನಿ ನೀರಾವರಿಗೆ ಶೇ.90% ರವರೆಗೆ ಸಬ್ಸಿಡಿ ನೀಡಲು ಸೌಲಭ್ಯವನ್ನು 2 ಎಕರೆಗೆ ವಿಸ್ತರಿಸಲು ಕ್ರಮ ಕೈಗೊಳ್ಳಲಾಗುವುದು ಎಂದರು. ಭೈರತಿ ಬಸವರಾಜ ಮಾತನಾಡಿ ತುರ್ತು ಕಾರ್ಯಕ್ರಮದ ನಿಮಿತ್ತ ಮುಖ್ಯಮಂತ್ರಿಗಳು ವಾರಣಾಸಿಗೆ ತೆರಳಿದ್ದಾರೆ. ಅವರು ವಾಪಸ್ಸು ಬಂದ ಬಳಿಕ ಸಮಸ್ಯೆಗಳ ಬಗ್ಗೆ ಚರ್ಚಿಸಲಾಗುವುದು ಎಂದರು.

**'ಸಂಘರ್ಷ ಪಾದಯಾತ್ರೆ' ಮೂಲಕ ಅಧಿವೇಶನಕ್ಕೆ ಆಗಮಿಸಿದ ಶಾಸಕಿ:** ಕ್ಷೇತ್ರದ ಸಮಸ್ಯೆಗಳಿಗೆ ಪರಿಹಾರ ಒದಗಿಸುವಂತೆ ಆಗ್ರಹಿಸಿ 40. ಕಿ.ಮೀ. ದೂರದ ಖಾನಾಪುರದಿಂದ ಸಂಘರ್ಷ ಪಾದಯಾತ್ರೆ ಆರಂಭಿಸಿದ ಅಂಜಲಿ ನಿಂಬಾಳ್ಕರ್ ಸುವರ್ಣ ವಿಧಾನಸೌಧ ತಲುಪಿದರು. ಈ ವೇಳೆ ಸಿದ್ದರಾಯಯ್ಯ, ಸತೀಶ್ ಜಾರಕಿಹೊಳಿ ಮತ್ತಿತರ ಮುಖಂಡರು ಸಾಥ್ ನೀಡಿದರು.

ಅಂಜಲಿ ನಿಂಬಾಳ್ಕರ್ ಮಾತನಾಡಿ ಸ್ವಾತಂತ್ರ್ಯ ಬಂದು ಏಳು ದಶಕ ಕಳೆದರೂ ಖಾನಾಪುರ ತಾಲ್ಲೂಕಿನ ಅನೇಕ ಗ್ರಾಮಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಿಲ್ಲ. ರಸ್ತೆ, ನೀರು, ಶಿಕ್ಷಣ ಸೇರಿದಂತೆ ಮೂಲ ಸೌಕರ್ಯಗಳಿಂದ ತಾಲ್ಲೂಕಿನ ಜನ ವಂಚಿತರಾಗಿದ್ದಾರೆ. ಸೌಲಭ್ಯ ಕಲ್ಪಿಸಲು ಸರ್ಕಾರ ವಿಫಲವಾಗಿದೆ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಸತೀಶ್ ಜಾರಕಿಹೊಳಿ ಮಾತನಾಡಿ ಬಿಜೆಪಿಯವರಿಗೆ ಸಮಾಜ ಮತ್ತು ಧರ್ಮ ಒಡೆಯುವುದೊಂದೇ ಕೆಲಸ. ಆರು ತಿಂಗಳಿಗೊಮ್ಮೆ ಹೊಸ ಕಾಯ್ದೆ ತರುತ್ತಾರೆ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:14.12.2021

## 67. ಕೃಷಿ ಕಾಯ್ದೆ ಹಿಂಪಡೆಯಲು ಡಿಸೆಂಬರ್ 20ರ ವರೆಗೆ ಗಡುವು

ಮೂರು ಕೃಷಿ ಕಾಯ್ದೆಗಳನ್ನು ಹಿಂಪಡೆಯಲು ಡಿಸೆಂಬರ್ 20ರ ವರೆಗೆ ಗಡುವು ನೀಡಿ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ನೇತೃತ್ವದಲ್ಲಿ ರೈತರು ಹಮ್ಮಿಕೊಂಡಿದ್ದ ಪ್ರತಿಭಟನೆಯನ್ನು ತಾತ್ಕಾಲಿಕವಾಗಿ ಮುಂದೂಡಲಾಯಿತು.

ಸುವರ್ಣ ವಿಧಾನಸೌಧ ಸಮೀಪದ ಕೊಂಡಸಕೊಪ್ಪ ಗ್ರಾಮದಲ್ಲಿ ಹಮ್ಮಿಕೊಂಡಿದ್ದ ಪ್ರತಿಭಟನೆ ವೇಳೆ ಕೃಷಿ ಕಾಯ್ದೆಗಳನ್ನು ಈಗಾಗಲೇ ಕೇಂದ್ರ ಸರ್ಕಾರ ಹಿಂಪಡೆದಿದೆ. ಅದರಂತೆ ರಾಜ್ಯ ಸರ್ಕಾರವು ತಕ್ಷಣವೇ ಈ ಕಾಯ್ದೆಗಳನ್ನು ಹಿಂಪಡೆಯಬೇಕು ಎಂದು ಆಗ್ರಹಿಸಿದರು. ಗಡುವಿನೊಳಗೆ ಕಾಯ್ದೆಗಳನ್ನು ಹಿಂಪಡೆಯದಿದ್ದರೆ ಡಿಸೆಂಬರ್ 20 ರಂದು ನಗರದ ಚನ್ನಮ್ಮ ವೃತ್ತದಿಂದ ಸುವರ್ಣ ವಿಧಾನಸೌಧದವರೆಗೆ ಬಾರುಕೋಲು ಚಳವಳಿ ನಡೆಸಲಾಗುವುದು ಎಂದು ಪ್ರತಿಭಟನಾ ವೇದಿಕೆಯಲ್ಲಿಯೇ ಘೋಷಿಸಿದರು.

ಡಿಸೆಂಬರ್ 20 ರಂದು ಬೆಳಿಗ್ಗೆ 10 ಗಂಟೆಗೆ ಚೆನ್ನಮ್ಮ ವೃತ್ತದಲ್ಲಿ ರಾಜ್ಯದ ಎಲ್ಲ ಜಿಲ್ಲೆಗಳಿಂದ ಬಂದ ರೈತರು ಜಮಾವಣೆಗೊಂಡು ಬಾರುಕೋಲು ಚಳವಳಿ ನಡೆಸುತ್ತೇವೆ ಎಂದು ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ರಾಜ್ಯಾಧ್ಯಕ್ಷರು ಪ್ರಕಟಿಸಿದರು.

ಬೆಳಗಾವಿ ಅಧಿವೇಶನ ಮುಂದುವರೆಯುತ್ತಿರುವ ಹಿನ್ನೆಲೆಯಲ್ಲಿ ಕರ್ನಾಟಕದ ಎಲ್ಲ ಭಾಗಗಳಿಂದ ಹೆಚ್ಚಿನ ರೈತರು ಸೇರಬೇಕು. ಅದರೊಳಗಾಗಿ ಮುಖ್ಯಮಂತ್ರಿ ಅವರು ಕಾಯ್ದೆಗಳನ್ನು ಹಿಂಪಡೆದರೆ ನಾವು

ಇರುವ ಸ್ಥಳಗಳಿಂದಲೇ ಅಭಿನಂದನೆಗಳನ್ನು ಸಲ್ಲಿಸೋಣ. ಇಲ್ಲದಿದ್ದರೆ ರಾಜ್ಯಾದ್ಯಂತ ರೈತರು ತಮ್ಮ ಜಾನುವಾರುಗಳ ಜೊತೆಗೆ ಮಹಿಳೆಯರನ್ನು ಕರೆತರುವ ಬಗ್ಗೆ ಚರ್ಚೆ ನಡೆಸಲಾಗುವುದು ಎಂದರು.

**ಬಸ್ಸಿನಲ್ಲಿ ರೈತರನ್ನು ಕರೆತಂದ ಪೊಲೀಸರು:** ಇದಕ್ಕೂ ಪೂರ್ವದಲ್ಲಿ ಹಿರೇಬಾಗೇವಾಡಿ ಟೋಲ್ ನಾಕಾಬಳಿ ರಾಷ್ಟ್ರೀಯ ಹೆದ್ದಾರಿ ತಡೆದು ಪ್ರತಿಭಟನೆ ನಡೆಸಲು ರೈತರು ಮುಂದಾಗಿದ್ದರು. ಈ ವೇಳೆ ಪ್ರತಿಭಟನಾಕಾರರನ್ನು ವಶಕ್ಕೆ ಪಡೆದ ಪೊಲೀಸರು ಸಾರಿಗೆ ಬಸ್ ಮೂಲಕ ಕೊಂಡಸಕೊಪ್ಪ ಪ್ರತಿಭಟನಾ ಸ್ಥಳಕ್ಕೆ ಭದ್ರತೆಯೊಂದಿಗೆ ಅವರನ್ನು ಕರೆತಂದರು.

**ಸಚಿವರ ಮನವಿಗೆ ಮಣಿಯದ ರೈತರು:** ರೈತರ ಪ್ರತಿಭಟನಾ ಸ್ಥಳಕ್ಕೆ ಭೈರತಿ ಬಸವರಾಜು ಹಾಗೂ ಬಿ.ಸಿ.ಪಾಟೀಲ್ ಅವರುಗಳು ಸರ್ಕಾರದ ಪ್ರತಿನಿಧಿಯಾಗಿ ಬಂದು ಪ್ರತಿಭಟನೆ ಹಿಂಪಡೆಯುವಂತೆ ರೈತರ ಮನವೊಲಿಕೆಗೆ ಯತ್ನಿಸಿದರು. ಈ ವೇಳೆ ಮಾತನಾಡಿದ ಕೃಷಿ ಸಚಿವರು ಸರ್ಕಾರ ರೈತರ ಪರವಾಗಿದೆ. ಮುಖ್ಯಮಂತ್ರಿಗಳು ವಾರಣಾಸಿಗೆ ಹೋಗಿರುವುದರಿಂದ ಅವರು ಬಂದ ಕೂಡಲೇ ಅವರೊಂದಿಗೆ ರೈತರ ಬೇಡಿಕೆಗಳ ಬಗ್ಗೆ ಚರ್ಚಿಸಲಾಗುವುದು. ರೈತರು ಪ್ರತಿಭಟನೆ ಕೈ ಬಿಡಬೇಕು ಎಂದು ಮನವಿ ಮಾಡಿದರು. ನಗರಾಭಿವೃದ್ಧಿ ಸಚಿವರು ಕೃಷಿ ಮಸೂದೆ ಕಾಯ್ದೆಯನ್ನು ಹಿಂಪಡೆಯುವಂತೆ ಬೇಡಿಕೆ ಇದೆ. ಸರ್ಕಾರ ರೈತರ ಬೇಡಿಕೆಗಳಿಗೆ ಸಕಾರಾತ್ಮವಾಗಿ ಸ್ಪಂದಿಸಲಿದೆ ಎಂದು ಭರವಸೆ ನೀಡಿದರು.

ಸಚಿವರ ಭರವಸೆ ನಂತರ ಮಾತನಾಡಿದ ರೈತ ಮುಖಂಡರು ಸರ್ಕಾರ ಸ್ಪಷ್ಟ ಸಂದೇಶ ನಮಗೆ ಬಂದಿಲ್ಲ. ಕೃಷಿ ಕಾಯ್ದೆ ಹಿಂಪಡೆಯಲೇಬೇಕು. ಇಲ್ಲದಿದ್ದರೆ ನಮ್ಮ ಹೋರಾಟ ನಿರಂತರವಾಗಿ ಮುಂದುವರಿಯುತ್ತದೆ. ಯಾವುದೇ ಕಾರಣಕ್ಕೂ ಹೋರಾಟ ನಿಲ್ಲಿಸುವುದಿಲ್ಲ ಎಂದು ಎಚ್ಚರಿಕೆ ನೀಡಿದರು. ಕೇಂದ್ರ ಸರ್ಕಾರ ಈಗಾಗಲೇ ಶಾಸನಬದ್ಧವಾಗಿ ತಾನು ಜಾರಿಗೊಳಿಸಿದ ಮಸೂದೆ ಹಿಂಪಡೆದಿದೆ. ರಾಜ್ಯ ಸರ್ಕಾರ ಮಾತ್ರ ಹಿಂಪಡೆಯುವುದಿಲ್ಲವೇ ಏಕೆ ಎಂದು ಪ್ರಶ್ನಿಸಿದರು. ಕರ್ನಾಟಕದಲ್ಲಿ ಜಾರಿಗೊಳಿಸಿದ ಭೂ ಸುಧಾರಣೆ ಕಾಯ್ದೆ, ಕೃಷಿ ಮಸೂದೆ, ಎಪಿಎಂಸಿ ಕಾಯ್ದೆಯನ್ನು ಹಿಂಪಡೆಯಬೇಕು ಎಂದು ಆಗ್ರಹಿಸಿದರು. ಅಕಾಲಿಕ ಮಳೆಯಿಂದ ರೈತರ ಅಪಾರ ಬೆಳೆಗಳು ಹಾನಿಯಾಗಿದ್ದು ವೈಜ್ಞಾನಿಕವಾಗಿ ಸಮೀಕ್ಷೆ ನಡೆಸಿ ಪರಿಹಾರ ಕಲ್ಪಿಸಬೇಕು. ಹನಿ ನೀರಾವರಿ ಬಗ್ಗೆ ಮೊದಲಿನಂತೆಯೇ ರಿಯಾಯಿತಿ ಕಲ್ಪಿಸಬೇಕು. ರೈತರು ಉತ್ಪನ್ನಗಳ ಖರೀದಿ ಕೇಂದ್ರಗಳಿಗೆ ಆವರ್ತನಿಧಿ ಕಾಯ್ದಿಯಿರಿಸುವುದು ಸೇರಿದಂತೆ ವಿವಿಧ ಬೇಡಿಕೆಗಳನ್ನು ಈಡೇರಿಸಲು ಆಗ್ರಹಿಸಲಾಯಿತು. ಇದಕ್ಕೆ ಇಬ್ಬರೂ ಸಚಿವರು ಸಕಾರಾತ್ಮಕವಾಗಿ ಸ್ಪಂದಿಸಿದರು.

ಆಧಾರ:ಕನ್ನಡ ಪ್ರಭ,ದಿನಾಂಕ:14.12.2021

## 68. ಪುನೀತ್‌ಗೆ ಕರ್ನಾಟಕ ರತ್ನ ಪ್ರಶಸ್ತಿ ದಿನಾಂಕ ಪ್ರಕಟ ಶೀಘ್ರ

ಬೆಳಗಾವಿಯಲ್ಲಿ ಚಳಿಗಾಲದ ಅಧಿವೇಶನ ಆರಂಭವಾಗಿದ್ದು, ಮೊದಲ ದಿನ ಉಭಯ ಸದನದಲ್ಲಿ ಅಗಲಿದ ಗಣ್ಯರಿಗೆ ಸಂತಾಪ ವ್ಯಕ್ತಪಡಿಸಲಾಯಿತು. ವಿಧಾನ ಸಭೆಯಲ್ಲಿ ಕಲಾಪ ಆರಂಭವಾಗುತ್ತಿದ್ದಂತೆ ವಿಧಾನಸಭಾಧ್ಯಕ್ಷರವರು ಸಂತಾಪ ನಿರ್ಣಯವನ್ನು ಮಂಡಿಸಿದರು. ಕೆಲ ದಿನಗಳ ಹಿಂದೆ ಹೆಲಿಕಾಪ್ಟರ್ ಅಪಘಾತದಲ್ಲಿ ಮೃತಪಟ್ಟ ಸಿಡಿಎಸ್ ಜ.ಬಿಪಿನ್ ರಾವತ್, ನಟ ಪುನೀತ್ ರಾಜ್‌ಕುಮಾರ್, ಹಿರಿಯ ನಟ ಶಿವರಾಂ, ವಿದ್ವಾಂಸರಾದ ಕೆ.ಎಸ್.ನಾರಾಯಣಾಚಾರ್ಯ ಸೇರಿದಂತೆ 9 ಜನರಿಗೆ ಸಂತಾಪ ಸೂಚಿಸಲಾಯಿತು.

ಸಂತಾಪ ನಿರ್ಣಯದ ವೇಳೆ ಮಾತನಾಡಿದ ಮುಖ್ಯಮಂತ್ರಿಯವರು, ಸೇನೆಯ ಮುಖ್ಯಸ್ಥರಾಗಿದ್ದ ಜನರಲ್ ಬಿಪಿನ್ ರಾವತ್ ಅವರ ನಿಧನ ಇಡೀ ದೇಶವನ್ನು ದಿಗ್ಭ್ರಮೆ ಉಂಟು ಮಾಡಿದೆ. ಅತ್ಯಾಧುನಿಕ ತಂತ್ರಜ್ಞಾನ ಆಧಾರಿತ ಹೆಲಿಕಾಪ್ಟರ್‌ನಲ್ಲಿ ರಾವತ್ ಅವರು ಪ್ರಯಾಣಿಸುತ್ತಿದ್ದರೂ ಅಪಘಾತದಲ್ಲಿ

ಮೃತಪಟ್ಟಿದ್ದಾರೆ. ಹೆಲೆಕಾಪ್ಟರ್ ಅಪಘಾತ ಸಾಮಾನ್ಯ. ಸೇನೆಯ ಹೆಲಿಕಾಪ್ಟರ್‌ಗಳು ಅಪಘಾತವಾಗಿರುವ ಉದಾಹರಣೆಗಳಿವೆ. ಆದರೆ ಸೇನಾ ಮುಖ್ಯಸ್ಥರಿಂದ ಹೆಲಿಕಾಪ್ಟರ್ ಈ ರೀತಿ ಆಗಿದ್ದು ನಿಜಕ್ಕೂ ಆಘಾತಕಾರಿ ಎಂದು ಹೇಳಿದರು.

ಸಂತಾಪ ಸೂಚನಾ ನಿರ್ಣಯದ ಮೇಲೆ ಮಾತನಾಡಿದ ಮುಖ್ಯಮಂತ್ರಿಯವರು ನಟ ಪುನೀತ್ ರಾಜ್‌ಕುಮಾರ್ ಅವರು ಕರ್ನಾಟಕ ಕಂಡ ಶ್ರೇಷ್ಟ ನಾಯಕ. ನಿತ್ಯ ವ್ಯಾಯಾಮದಿಂದ ಉತ್ತಮ ಆರೋಗ್ಯ ಹೊಂದಿದ್ದರೂ ದಿಢೀರ್ ನಿಧನರಾದರು. ಕೇವಲ ನಟನೆಯಲ್ಲಿ ಮಾತ್ರವಲ್ಲದೇ, ಸಾಮಾಜಿಕ ಕಾರ್ಯದ ಮೂಲಕವೂ ಹೆಸರು ಮಾಡಿರುವ ಪುನೀತ್ ಅವರಿಗೆ ಸರ್ಕಾರ ಕರ್ನಾಟಕ ರತ್ನ ಪ್ರಶಸ್ತಿ ಘೋಷಿಸಿದೆ. ಶೀಘ್ರವೇ ಪ್ರಶಸ್ತಿ ಪ್ರದಾನದ ದಿನಾಂಕವನ್ನು ಪ್ರಕಟಿಸಲಾಗುವುದು. ಇದರೊಂದಿಗೆ ಪ್ರತಿಪಕ್ಷನಾಯಕ ಸಿದ್ದರಾಮಯ್ಯ ಸೇರಿದಂತೆ ಅನೇಕರು, ಪುನೀತ ಹೆಸರನ್ನು ಪದ್ಮಶ್ರೀಗೆ ಶಿಫಾರಸ್ಸು ಮಾಡಲಾಗುವುದು ಎಂದು ತಿಳಿಸಿದರು.

**ಸಮಗ್ರ ತನಿಖೆಯಾಗಲಿ:** ವಿಧಾನಸಭೆ ಪ್ರತಿಪಕ್ಷನಾಯಕ ಸಿದ್ದರಾಮಯ್ಯ ಮಾತನಾಡಿ, ಸೇನೆಯ ಮೂರೂ ಪಡೆಗಳ ಮುಖ್ಯಸ್ಥರಾಗಿದ್ದ ಬಿಪಿನ್ ರಾವತ್ ಅವರಿದ್ದ ಹೆಲಿಕಾಪ್ಟರ್ ಪತನವಾಗಿ ಕೊನೆಯುಸಿರೆಳೆದಿರುವುದು ದುರದೃಷ್ಟಕರ. ಈ ಅಪಘಾತದಲ್ಲಿ ಯಾರದ್ದೋ ಕೈವಾಡವಿದೆ ಎಂದು ಹೇಳುತ್ತಿಲ್ಲ. ಆದರೆ ಅತ್ಯಾಧುನಿಕ ಹೆಲಿಕಾಪ್ಟರ್‌ನಲ್ಲಿ ಪ್ರಯಾಣಿಸಿದರೂ ಅಪಘಾತವಾಗಿದೆ. ಇದಕ್ಕೆ ಕಾರಣ ಏನು ಎನ್ನುವ ಬಗ್ಗೆ ಸಮಗ್ರ ತನಿಖೆ ನಡೆಸಬೇಕು. ಮೂರೂ ಪಡೆಗಳ ಮುಖ್ಯಸ್ಥರಿದ್ದ ಹೆಲಿಕಾಪ್ಟರ್ ಈ ರೀತಿ ಅಪಘಾತವಾಗುವುದು ಕೆಟ್ಟ ಸಂಗತಿ. ಆದ್ದರಿಂದ ಈ ಬಗ್ಗೆ ಸಮಗ್ರ ತನಿಖೆ ನಡೆಸಬೇಕು ಎಂದು ಆಗ್ರಹಿಸಿದರು.

**ನ್ಯಾಯಾಧೀಶರ ನೇತೃತ್ವದಲ್ಲಿ ತನಿಖೆಯಾಗಲಿ: ಈಶ್ವರಪ್ಪ:** ಗ್ರಾಮೀಣಾಭಿವೃದ್ಧಿ ಸಚಿವ ಈಶ್ವರಪ್ಪ ಅವರು ಮಾತನಾಡಿ, ಜನರಲ್ ಬಿಪಿನ್ ರಾವತ್ ಅವರ ಸಾವಿಗೆ ಆಘಾತ ವ್ಯಕ್ತಪಡಿಸಿದರು. ಈಗಾಗಲೇ ಪ್ರಧಾನಿ ನರೇಂದ್ರ ಮೋದಿ ಅವರು ಸೇನೆಯ ಹಿರಿಯ ಅಧಿಕಾರಿಗಳಿಂದ ತನಿಖೆ ನಡೆಸಲು ಆದೇಶಿಸಿದ್ದರೆ. ಆದರೆ ಅದರ ಬದಲು, ಸುಪ್ರೀಂಕೋರ್ಟ್ ನ್ಯಾಯಾಧೀಶರ ನೇತೃತ್ವದಲ್ಲಿ ತನಿಖೆಯಾಗಬೇಕು. ಈ ಕೃತ್ಯದ ಹಿಂದೆ ಯಾರಿದ್ದರೋ ಅವರಿಗೆ ಶಿಕ್ಷೆಯಾಗಬೇಕು. ಯಾವುದೇ ಕಾರಣಕ್ಕೂ ದುಷ್ಟ ಶಕ್ತಿಗಳು ತಪ್ಪಿಸಿಕೊಳ್ಳಲು ಅವಕಾಶ ನೀಡಬಾರದು ಎಂದು ಹೇಳಿದರು. ಬಿಪಿನ್ ರಾವತ್ ಅವರು ದೇಶ ಕಂಡ ಅಪ್ರತಿಮ ಯೋಧ. ಅವರಿಗೆ ದೇಶದ ಮೇಲೆ ಭಾರಿ ಅಭಿಮಾನವಿತ್ತು. ಸರ್ಜಿಕಲ್ ಸ್ಟ್ರೈಕ್ ಸೇರಿದಂತೆ ಹಲವು ಕ್ಲಿಷ್ಟ ಪರಿಸ್ಥಿತಿಯ ಸಮಯದಲ್ಲಿ ಮುಂಚೂಣಿಯಲ್ಲಿ ನಿಂತು ಸೇನೆಯನ್ನು ಮುನ್ನಡೆಸಿದ್ದರು. ಚೀನಾ ಹಾಗೂ ಪಾಕಿಸ್ತಾನದವರಿಗೆ ಬಿಪಿನ್ ರಾವತ್ ಕಂಡರೆ ಹೆದರಿಕೆ ಇತ್ತು. ಅಂತಹ ವೀರ ಪುತ್ರನನ್ನು ದೇಶ ಕಳೆದುಕೊಂಡಿದೆ ಎಂದು ಬೇಸರ ವ್ಯಕ್ತಪಡಿಸಿದರು. ಪರಿಷತ್‌ನಲ್ಲೂ ಅಗಲಿದ ಗಣ್ಯರಿಗೆ ಸಂತಾಪ ಸೂಚಿಸಲಾಯಿತು.

ಆಧಾರ:ವಿಶ್ವವಾಣಿ, ದಿನಾಂಕ:14.12.2021.

## 69. ಕನಿಷ್ಠ ಕೃಷಿ ಭೂಮಿ ಮಿತಿ ನಿಗದಿ

ಕೃಷಿ ಭೂಮಿಯನ್ನು ತುಂಡುಗಳನ್ನಾಗಿ ಮಾಡಿ ಕೃಷಿ ಉದ್ದೇಶಕ್ಕೆ ಬಳಸದೆ ನಿವೇಶನಗಳನ್ನಾಗಿ ಮಾಡುವುದನ್ನು ತಡೆಯಲು ಆಯ್ದ ಜಿಲ್ಲೆಗಳಲ್ಲಿ ಕನಿಷ್ಠ ಕೃಷಿ ಭೂಮಿಯ ವಿಸ್ತೀರ್ಣವನ್ನು ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ ಎಂದು ಕಾನೂನು ಸಚಿವ ಜೆ.ಸಿ. ಮಾಧುಸ್ವಾಮಿ ಸ್ಪಷ್ಟಪಡಿಸಿದರು.

ಜೆಡಿಎಸ್ ಸದಸ್ಯ ಕೆ.ಟಿ.ಶ್ರೀಕಂಠೇಗೌಡ ಅವರ ಗಮನ ಸೆಳೆಯುವ ಸೂಚನೆಗೆ ಕಂದಾಯ ಸಚಿವ ಆರ್.ಅಶೋಕ್ ಪರವಾಗಿ ಉತ್ತರಿಸಿದ ಸಚಿವರು, ರಾಜ್ಯದ ಕೊಡಗು, ದಕ್ಷಿಣ ಕನ್ನಡ, ಉಡುಪಿ, ಹಾಗೂ

ಉತ್ತರ ಕನ್ನಡ ಜಿಲ್ಲೆಗಳಲ್ಲಿ 3 ಗುಂಟೆ ಹಾಗೂ ಉಳಿದ ಜಿಲ್ಲೆಗಳಲ್ಲಿ 5 ಗುಂಟೆಗೆ ನಿಗದಿಪಡಿಸಲಾಗಿದೆ. ಕೃಷಿ ಭೂಮಿಯನ್ನು ತುಂಡು ತುಂಡು ಮಾಡಿ ನಿವೇಶನ ಮಾಡುವುದರಿಂದ ಅಲ್ಲಿ ನಾಗರಿಕ ಸೌಲಭ್ಯ ಕೊಡಲು ಆಗುವುದಿಲ್ಲ. ಹೀಗಾಗಿ ಈ ಆದೇಶ ಹೊರಡಿಸಲಾಗಿದೆ. ಆದರೆ ಈಗಾಗಲೇ ಅಸ್ತಿತ್ವದಲ್ಲಿ ಇರುವ ಸರ್ವೇ ನಂಬರ್ ಹಾಗೂ ಪಹಣಿಗಳಲ್ಲಿ ಕನಿಷ್ಠ ವಿಸ್ತೀರ್ಣಕ್ಕಿಂತ ಕಡಿಮೆ ಇದ್ದಲ್ಲಿ ಅವುಗಳನ್ನು ಹಾಗೆಯೇ ಮುಂದುವರಿಸಲು ಹಾಗೂ ಈ ನಿರ್ಬಂಧಗಳನ್ನು ಭವಿಷ್ಯದಲ್ಲಿ ಜಾರಿಗೆ ತರುವಂತೆ ಆದೇಶಿಸಲಾಗಿದೆ. ಅಲ್ಲದೇ ಈ ಆದೇಶ ಈಗಾಗಲೇ ಅಸ್ತಿತ್ವದಲ್ಲಿ ಇರುವ ಸರ್ವೇ ನಂಬರ್‌ಗಳು ಹೊಸ ಆದೇಶದಲ್ಲಿ ಸೂಚಿಸಲಾದ ಕನಿಷ್ಠ ವಿಸ್ತೀರ್ಣಕ್ಕಿಂತ ಕಡಿಮೆ ಇದ್ದರೂ ಸಹ ಅನ್ವಯವಾಗುವುದಿಲ್ಲ ಎಂದು ವಿವರಿಸಿದರು.

ಈ ಆದೇಶ ಅನುವಂಶಿಕತೆಯಿಂದ ಬರುವ ಜಮೀನನ್ನು ವಿಭಜಿಸಲು ನಿರ್ಬಂಧನೆ ಮಾಡುವುದಿಲ್ಲ, ಪ್ರಸ್ತುತ ಜಂಟಿ ಹಕ್ಕಿನ ಅಥವಾ ಬಹುಮಾಲೀಕತ್ವ ಹೊಂದಿರುವ ಜಮೀನಿನ ಪಹಣಿಗಳನ್ನು ಅಸ್ತಿತ್ವದಲ್ಲಿ ಇರುವ ಹಕ್ಕಿನ ಅನುಸಾರ ವಿಭಜಿಸಬಹುದಾಗಿದೆ ಎಂದು ಸಚಿವ ಮಾಧುಸ್ವಾಮಿ ಸ್ಪಷ್ಟಪಡಿಸಿದರು.

ಆಧಾರ:ಕನ್ನಡಪ್ರಭ, ದಿನಾಂಕ:14.12.2021.

## 70. ಮತಾಂತರ ನಿಷೇಧ ಕಾಯ್ದೆಗೆ ಬೆಂಬಲವಿಲ್ಲ

ಮತಾಂತರ ನಿಷೇಧ ಕಾಯ್ದೆಗೆ ನಮ್ಮ ಪಕ್ಷದ ಸಂಪೂರ್ಣ ವಿರೋಧವಿದೆ ಎಂದು ಮಾಜಿ ಸಿಎಂ ಹೆಚ್.ಡಿ.ಕುಮಾರಸ್ವಾಮಿ ಹೇಳಿದರು.

ನಗರದ ರಾಣಿ ಚನ್ನಮ್ಮ ಪ್ರತಿಮೆಗೆ ಮಾಲಾರ್ಪಣೆ ಮಾಡಿದ ಬಳಿಕ ಮಾತನಾಡಿದ ಅವರು, ಎರಡೂ ಸದನದಲ್ಲಿ ನಾವು ಮತಾಂತರ ನಿಷೇಧ ಕಾಯ್ದೆಗೆ ತೀವ್ರವಾಗಿ ವಿರೋಧಿಸುತ್ತೇವೆ. ಮಹಾನ್ ನಾಯಕರ ಪ್ರತಿಮೆಗಳಿಗೆ ಅವಮಾನ ಮಾಡಿರುವವರನ್ನು, ಗೂಂಡಾಗಿರಿ ವರ್ತನೆ ಮಾಡಿದವರನ್ನು ಗಡಿಪಾರು ಮಾಡಬೇಕು. ಅಧಿವೇಶನದಲ್ಲಿ ಕೊನೆಯ ಎರಡು ದಿನಗಳ ಕಾಲ ನಿಗದಿಪಡಿಸಿದಂತೆ ಸಮಸ್ಯೆಗಳ ಬಗ್ಗೆ ಚರ್ಚೆ ಕಂಡುಕೊಳ್ಳಲಾಗುವುದು. ಅಧಿವೇಶನಕ್ಕೆ ಕಲಾಪ ಆಗಬೇಕೆಂಬ ಉದ್ದೇಶದಿಂದ ವಿಧಾನಸೌಧ ನಿರ್ಮಾಣ ಆಗಿದೆ. ಅದನ್ನು ಬಗೆಹರಿಸಲು ಈ ಸರ್ಕಾರ ಮುಂದಿನ ಅಧಿವೇಶನದಲ್ಲಿ ಉತ್ತರ ಕರ್ನಾಟಕ ಚರ್ಚೆ ಆಗಬೇಕು ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:14.12.2021.

## 71. ಮೊದಲ ದಿನ ಸುಗಮ ಕಲಾಪ

ವಿಧಾನಮಂಡಲ ಅಧಿವೇಶನದ ಮೊದಲ ದಿನ ಕಲಾಪ ಉಭಯ ಸದನಗಳಲ್ಲಿ ಪ್ರತಿಭಟನೆ, ಧರಣಿಯಗೊಡವೆ ಇಲ್ಲದೆ ಸುಸೂತ್ರವಾಗಿ ನಡೆಯಿತು. ಬಿಟ್ ಕಾಯಿನ್, ಶೇ.40 ಪರ್ಸಂಟೇಜ್ ಆರೋಪ ವಿಚಾರ ಪ್ರಸ್ತಾಪಕ್ಕೆ ಪ್ರತಿಪಕ್ಷ ಕಾಂಗ್ರೆಸ್ ಚಿಂತನೆ ನಡೆಸಿತ್ತಾದರೂ ಮೊದಲ ದಿನವೇ ಆ ವಿಚಾರ ಪ್ರಸ್ತಾಪಿಸಿದರೆ ಕಲಾಪದಲ್ಲಿ ಗದ್ದಲ ಉಂಟಾದರೆ ಬೇರೆ ರೀತಿಯ ಸಂದೇಶ ರವಾನೆಯಾಗಬಹುದು ಎಂಬ ಕಾರಣಕ್ಕೆ ಮಳೆಯಿಂದ ಪ್ರವಾಹ, ಬೆಳೆ ನಷ್ಟ ಪರಿಹಾರ ವಿಚಾರ ನಿಲುವಳಿ ಮಂಡಿಸುವ ಮೂಲಕ ಜಾಣ್ಮೆ ನಡೆ ಅನುಸರಿಸಿತು. ಸಭಾಧ್ಯಕ್ಷರವರು ವಿಚಾರ ಪ್ರಸ್ತಾಪಕ್ಕೆ ಅವಕಾಶವನ್ನು ಕೊಟ್ಟರು.

ಪ್ರತಿ ಪಕ್ಷನಾಯಕ ಸಿದ್ದರಾಮಯ್ಯ ಪೂರ್ವಭಾವಿಯಾಗಿ ಪ್ರಸ್ತಾವನೆ ಮಾಡಿದರು. ಮೊದಲ ದಿನ ಸಂತಾಪ, ಪ್ರಶ್ನೋತ್ತರ, ಗಮನ ಸೆಳೆಯುವ ಸೂಚನೆ ಸೇರಿ ಎಲ್ಲವು ನಿಗದಿತ ಕಾರ್ಯ ಸೂಚಿಯಂತೆಯೇ ನಡೆಯಿತು. ವಿಧಾನಪರಿಷತ್‌ಲ್ಲೂ ಸಂತಾಪ, ಪ್ರಶ್ನೋತ್ತರ, ಸಾರ್ವಜನಿಕ ಜರೂರು ವಿಷಯಗಳ

ಪ್ರಸ್ತಾವನೆಗೆ ಅವಕಾಶ ದೊರೆಯಿತು. ಹೀಗಾಗಿ, ಉಭಯ ಸದನಗಳಲ್ಲಿ ಮೊದಲ ದಿನದ ಕಲಾಪ ಸುಗಮವಾಗಿ ನಡೆಯುವಂತಾಯಿತು.

**ಹತ್ತು ದಿನ ಅಧಿವೇಶನ ನಡೆಸಲು ಕಲಾಪ ಸಲಹಾ ಸಮಿತಿ ನಿರ್ಧಾರ:** ಬೆಳಗಾವಿಯಲ್ಲಿ ಆರಂಭವಾಗಿರುವ ವಿಧಾನ ಮಂಡಲದ ಚಳಿಗಾಲದ ಅಧಿವೇಶನ ಅರ್ಧಕ್ಕೆ ಮೊಟಕುಗೊಳಿಸದೇ ಹತ್ತು ದಿನ ಪೂರ್ಣಗೊಳಿಸಲು ಸದನ ಸಲಹಾ ಸಮಿತಿ ಸಭೆಯಲ್ಲಿ ತೀರ್ಮಾನಿಸಲಾಗಿದೆ.

ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆದ ಸದನ ಸಲಹಾ ಸಮಿತಿ ಸಭೆಯಲ್ಲಿ ಈಗಾಗಲೇ ನಿರ್ಧರಿಸಿರುವಂತೆ ಡಿಸೆಂಬರ್ 24 ರವರೆಗೂ ಅಧಿವೇಶನ ನಡೆಸಲು ನಿರ್ಧರಿಸಲಾಗಿದೆ.

ಅಧಿವೇಶನದಲ್ಲಿ ಸರ್ಕಾರವು ಒಂಭತ್ತು ಹೊಸ ವಿಧೇಯಕಗಳನ್ನು ಮಂಡಿಸುವುದಾಗಿ ಸಭೆಗೆ ಮಾಹಿತಿ ನೀಡಿದೆ ಎಂದು ತಿಳಿದು ಬಂದಿದೆ. ಲವ್ ಜಿಹಾದ್ ಹಾಗೂ ಮತಾಂತರ ನಿಷೇಧ ಕಾಯ್ದೆ ಮಂಡನೆ ಮಾಡುವ ಬಗ್ಗೆ ಎರಡು ದಿನ ಮೊದಲೇ ತಮ್ಮ ಗಮನಕ್ಕೆ ತರಬೇಕೆಂದು ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ಮನವಿ ಮಾಡಿದ್ದಾರೆಂಬ ಮಾಹಿತಿ ಲಭ್ಯವಾಗಿದೆ.

ಅಧಿವೇಶನದ ಮೊದಲವಾರ ಉತ್ತರ ಕರ್ನಾಟಕ ಭಾಗದ ಪ್ರಮುಖ ಸಮಸ್ಯೆಗಳ ಕುರಿತು ಚರ್ಚಿಸಿ ಪರಿಹಾರ ಕಂಡುಕೊಳ್ಳುವ ಬಗ್ಗೆ ಸಭೆಯಲ್ಲಿ ಚರ್ಚಿಸಲಾಗಿದೆ ಎಂದು ತಿಳಿದು ಬಂದಿದೆ. ಸಭೆಯಲ್ಲಿ ಮುಖ್ಯಮಂತ್ರಿಯವರು, ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ, ಜೆಡಿಎಸ್ ಉಪನಾಯಕ ಬಂಡೆಪ್ಪ ಕಾಶೆಂಪೂರ್, ಸಚಿವರಾದ ಗೋವಿಂದ ಕಾರಜೋಳ, ಕೆ.ಎಸ್.ಈಶ್ವರಪ್ಪ ಹಾಜರಿದ್ದರು.

ಆಧಾರ: ಉದಯವಾಣಿ, ದಿನಾಂಕ:14.12.2021.

## 72. ಅಕಾಲಿಕ ಮಳೆಗೆ ಬೆಳೆ ಹಾನಿ, ಪರಿಹಾರ ಚರ್ಚೆಗೆ ಅವಕಾಶ

ಅಕಾಲಿಕ ಮಳೆಯಿಂದಾಗಿ ರಾಜ್ಯದಲ್ಲಿ ಉಂಟಾಗಿರುವ ಬೆಳೆ ನಷ್ಟಕ್ಕೆ ಸಂಬಂಧಿಸಿದಂತೆ ಚರ್ಚೆಗೆ ಪ್ರತ್ಯೇಕ ಸಮಯ ನೀಡಲಾಗುವುದು ಎಂದು ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಭರವಸೆ ನೀಡಿದರು. ವಿಧಾನಪರಿಷತ್‌ನಲ್ಲಿ ಪರಿಷತ್ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಅವರು, ಅಕಾಲಿಕ ಮಳೆಯಿಂದಾದ ಬೆಳೆ, ಮನೆ ಹಾನಿಯ ಕುರಿತು ಚರ್ಚಿಸಲು ನಿಲುವಳಿ ಸೂಚನೆಯನ್ನು ಮಂಡಿಸಿದರು. ರಾಜ್ಯದಲ್ಲಿ 70 ಲಕ್ಷ ಎಕರೆ ಪ್ರದೇಶದಲ್ಲಿ ತೋಟಗಾರಿಕೆ, ವಾಣಿಜ್ಯ, ಕೃಷಿ ಬೆಳೆ ಹಾನಿಗೀಡಾಗಿವೆ. ಅಕಾಲಿಕ ಮಳೆಯಿಂದ ಉಂಟಾದ ಪ್ರವಾಹಕ್ಕೆ 376 ಪ್ರಾಣಿಗಳು ಮೃತಪಟ್ಟಿದ್ದು, 20 ಸಾವಿರ ಮನೆ ಹಾನಿಯಾಗಿದೆ. ರಾಜ್ಯ ಸರ್ಕಾರವೇ ಹೇಳುವಂತೆ ರೂ.11 ಸಾವಿರ ಕೋಟಿ ಅಂದಾಜು ವೆಚ್ಚದಷ್ಟು ಆಸ್ತಿ–ಪಾಸ್ತಿ, ಬೆಳೆ ನಷ್ಟವಾಗಿರುವುದರಿಂದ ವಿಸ್ತೃತ ಚರ್ಚೆಗೆ ಅವಕಾಶ ನೀಡಬೇಕೆಂದು ಕೇಳಿದರು. ವಿಷಯ ಗಂಭೀರತೆ ಅರಿತ ಸಭಾಪತಿಗಳು, ನಿಯಮ 69 ರಡಿ ಚರ್ಚೆಗೆ ಅವಕಾಶ ಕಲ್ಪಿಸಿ ಸರ್ಕಾರದ ಮೂಲಕ ಉತ್ತರ ಕೊಡಸಲು ಸಮಯ ನಿಗದಿಪಡಿಸುವ ಭರವಸೆ ನೀಡಿದರು.

ಆಧಾರ:ಉದಯವಾಣಿ, ದಿನಾಂಕ:14.12.2021.

## 73. ಅನುದಾನಿತ ಖಾಸಗಿ ಶಾಲೆ ಹುದ್ದೆ ಭರ್ತಿ: ಹೊರಟ್ಟಿ ಸೂಚನೆ

ರಾಜ್ಯದ ಅನುದಾನಿತ ಖಾಸಗಿ ಶಾಲಾ ಕಾಲೇಜುಗಳಲ್ಲಿ ನಿವೃತ್ತಿ, ನಿಧನ ಹಾಗೂ ರಾಜೀನಾಮೆಯಿಂದ ತೆರವಾಗಿರುವ ಹುದ್ದೆಗಳ ಭರ್ತಿ ಸಂಬಂಧ ಶಿಕ್ಷಣ ಇಲಾಖೆ, ಆರ್ಥಿಕ ಇಲಾಖೆ ಸಭೆ ಮಾಡಿ ಸೂಕ್ತ ತೀರ್ಮಾನ ಕೈಗೊಂಡು ತಿಳಿಸಬೇಕು ಎಂದು ಸಭಾಪತಿ ಬಸವರಾಜ ಹೊರಟ್ಟಿ ಸೂಚಿಸಿದ್ದಾರೆ.

ವಿಧಾನ ಪರಿಷತ್‌ನಲ್ಲಿ ಪ್ರಶ್ನೋತ್ತರ ಅವಧಿಯಲ್ಲಿ ಸದಸ್ಯರಾದ ಕೆ.ಟಿ.ಶ್ರೀಕಂಠೇಗೌಡ, ಎಸ್.ವಿ.ಸಂಕನೂರ, ಪುಟ್ಟಣ್ಣ, ಅರುಣ್ ಶಹಾಪುರ ಅವರ ಪ್ರಶ್ನೆಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಪರವಾಗಿ ಉನ್ನತ ಶಿಕ್ಷಣ ಸಚಿವ ಡಾ.ಸಿ.ಎನ್.ಅಶ್ವತ್ಥ ನಾರಾಯಣ ಉತ್ತರ ನೀಡಿದರು. ಸಚಿವರ ಉತ್ತರಕ್ಕೆ ಸಮಾಧಾನಗೊಳ್ಳದ ಸದಸ್ಯರು ಸರ್ಕಾರ ಅನುದಾನಿತ ಶಾಲಾ ಕಾಲೇಜುಗಳಲ್ಲಿ ಖಾಲಿ ಇರುವ ಹುದ್ದೆಗಳ ಭರ್ತಿ ಬಗ್ಗೆ ಸ್ಪಷ್ಟ ನಿರ್ಧಾರ ಪ್ರಕಟಿಸಬೇಕೆಂದು ಪಟ್ಟು ಹಿಡಿದರು. ಈ ವೇಳೆ ಮಧ್ಯ ಪ್ರವೇಶಿಸಿದ ಸಭಾಪತಿ ಅವರು, ಇದು ಗಂಭೀರ ಸಮಸ್ಯೆ. ಶಿಕ್ಷಣ ಇಲಾಖೆ ಮತ್ತು ಆರ್ಥಿಕ ಇಲಾಖೆ ಸಭೆ ನಡೆಸಿ ಖಾಲಿ ಹುದ್ದೆಗಳ ಭರ್ತಿ ಬಗ್ಗೆ ಸೂಕ್ತ ತೀರ್ಮಾನ ಕೈಗೊಂಡು ಸಭೆಗೆ ತಿಳಿಸಲಿ ಎಂದು ಸೂಚಿಸಿದರು.

ಆಧಾರ:ಕನ್ನಡಪ್ರಭ,ದಿನಾಂಕ:14.12.2021

## 74. Manual scavenging survey to be completed by Feb: Minister

A survey to identify manual scavengers will be completed by February, Social Welfare Minister Kota Srinivas Poojary told the Legislative Council, assuring the House that the existing laws to prohibit the practice will be implemented strictly.

In response to a calling attention motion by B K Hariprasad of the congress, Poojary said the survey of safai karmacharis had been completed in 12 districts, and better steps for their welfare would be taken after completing the survey in remaining districts by February-end.

Under the prohibition of Employment as Manual Scavengers and their Rehabilitation Act, 2013, some 5,080 people who were engaged in manual scavenging were identified in the state, and rehabilitation programme had been implemented for them since 1993, Rs10 lakh compensation each was provided to 88 families for deaths while cleaning manholes. Criminal cases are booked against contractors or officials concerned in such incidents, Poojary said.

A high –level committee comprising safai karmachari representatives and different departments has to meet once in six months, the minister pointed out. “ In some places, including BBMP, we saw negligence in calling meetings, and suitable instructions were given in this regard. A meeting will be convened by January10, to strictly implement the laws,” he said.

Hariprasad sought a separate Bill to totally prevent manual scavenging, having provisions of jail term for those who encourage manual scavenging. Though it is prohibited, manual scavenging is still in practice in several districts, he lamented.

He also charged that deaths in manholes are not reported as they are and shown as accidents to avoid paying compensation. “ Nobody is convicted in such cases. What is the use of we people being in positions if manual scavenging continues,” he asked.

Courtesy:Deccan Herald, Dated:14.12.2021

## 75. ಪ್ರತ್ಯೇಕ ಎಥೆನಾಲ್ ನೀತಿಗೆ ಒಕ್ಕೊರಲ ದನಿ

ಫಸಲ್ ಭೀಮಾ ಯೋಜನೆಗೆ ಕಬ್ಬು ಬೆಳೆ ಒಳಪಡಿಸುವ ಸಂಬಂಧ ಪರಿಷತ್‌ನಲ್ಲಿ ಆರಂಭವಾದ ಚರ್ಚೆ ಗಂಭೀರ ಸ್ವರೂಪ ಪಡೆದುಕೊಂಡಿತ್ತು.

ಪರಿಷತ್ ಮುಖ್ಯ ಸಚೇತಕ ಮಹಾಂತೇಶ ಕವಠಗಿಮಠ, ಕಬ್ಬು ಬೆಳೆ ಬಾಕಿ ಬಿಲ್ ಪಾವತಿ ಬಗ್ಗೆ ಗಮನ ಸೆಳೆದಾಗ ಉಳಿದ ಸದಸ್ಯರು, ಎಥೆನಾಲ್‌ಗಾಗಿ ರಾಜ್ಯಕ್ಕೆ ಪ್ರತ್ಯೇಕ ನೀತಿ ಜಾರಿಗೆ ಆಗ್ರಹಿಸಿದರು. ಕೇಂದ್ರವು ಶೇ.6 ರಷ್ಟು ಬಡ್ಡಿ ಸಹಾಯಧನ ನೀಡುತ್ತದೆ. ಗ್ರೇನ್ (ಕಾಳು) ಎಥೆನಲ್‌ಗೆ ಕೇಂದ್ರವು ಉತ್ತೇಜನ ನೀಡುತ್ತಿದೆ. ಉತ್ತರ ಕರ್ನಾಟಕದ ಜಿಲ್ಲೆಗಳು ಹೆಚ್ಚು ಕಬ್ಬು ಉತ್ಪಾದನೆಗೆ ಪ್ರೋತ್ಸಾಹಧನ ವಿತರಿಸುವಂತೆ ಲಕ್ಷ್ಮಣ ಸವದಿ, ಮಹಾಂತೇಶ ಕವಠಗಿಮಠ ಸಲಹೆ ನೀಡಿದರು.

ಎಥೆನಾಲ್ ಉತ್ಪಾದನೆಗೆ ಪ್ರತ್ಯೇಕ ನೀತಿ ಜಾರಿಗೆ ಒತ್ತಾಯಿಸಿ ಲಕ್ಷ್ಮಣ ಸವದಿ ಮಾತು ಮುಗಿಸುತ್ತಿದ್ದಂತೆ ಮಧ್ಯ ಪ್ರವೇಶಿಸಿದ ಬಿ.ಕೆ.ಹರಿಪ್ರಸಾದ್ "ವೈಯುಕ್ತಿಕ ಹಿತಾಸಕ್ತಿಗಳಿದ್ದರೆ ಕೇಂದ್ರದ ಸಂಸತ್‌ಗಳಲ್ಲಿ ಚರ್ಚೆಗಳನ್ನು ಕೈಬಿಡಲಾಗುತ್ತದೆ. ವಿಧಾನಮಂಡಲ ಸಭೆಗಳಲ್ಲೂ ನಡೆಯಲಿ." ಎಂದು ಪರೋಕ್ಷವಾಗಿ ಸವದಿ ಸಕ್ಕರೆ ಕಾರ್ಖಾನೆ ಇರುವ ಹಿನ್ನೆಲೆಯಲ್ಲಿ 'ಸ್ವಹಿತಾಸಕ್ತಿ' ವಿಷಯ ಪ್ರಸ್ತಾಪಿಸಿದರು.

**ಸರ್ಕಾರದಿಂದಲೇ ವೇ ಬ್ರಿಡ್ಜ್:** ಪರಿಷತ್ ಪ್ರತಿಪಕ್ಷದ ನಾಯಕ ಎಸ್. ಆರ್. ಪಾಟೀಲ್, ಸರ್ಕಾರವೇ ಸಕ್ಕರೆ ಕಾರ್ಖಾನೆಗಳಲ್ಲಿ ವೇ ಬ್ರಿಡ್ಜ್ ಅಳವಡಿಸುವ ಕೆಲಸ ಮಾಡಬೇಕು. ಖಾಸಗಿ ವೇ ಬ್ರಿಡ್ಜ್‌ಗಳಿಂದ ಪ್ರತಿ ಲಾರಿಯಲ್ಲೂ 2 ರಿಂದ 3 ಟನ್‌ಗಳಷ್ಟು ರೈತರು ಮೋಸಕ್ಕೊಳಗಾಗುತ್ತಿದ್ದಾರೆ. ತಲಾ ವೇ ಬ್ರಿಡ್ಜ್‌ಗೆ 20 ಲಕ್ಷ ಖರ್ಚಾಗುತ್ತದೆ. ಸರ್ಕಾರಕ್ಕೂ ಹೊರೆಯಲ್ಲ," ಎಂದರು.

**ಫಸಲ್ ಭೀಮಾಗೆ ಒಳಪಡಿಸಿ:** ಕಬ್ಬು ಬೆಳೆಯನ್ನು ಫಸಲ್ ಭೀಮಾ ಯೋಜನೆ ವ್ಯಾಪ್ತಿಗೆ ಅಳವಡಿಸಲು ಒಕ್ಕೂರಲಿನ ಅಭಿಪ್ರಾಯ ವ್ಯಕ್ತವಾಯಿತು. ಈ ಸಂದರ್ಭದಲ್ಲಿ ಸಕ್ಕರೆ ಸಚಿವರ ಪರವಾಗಿ ಉತ್ತರಿಸಿದ ಸಚಿವ ಗೋವಿಂದ ಕಾರಜೋಳ "ಕಬ್ಬು ವಾಣಿಜ್ಯ ಬೆಳೆ ಆಗಿರುವುದರಿಂದ ರೈತರಿಗೆ ವಿಮಾ ಕಂತಿನ ಹೊರೆ ಅಧಿಕವಾಗುತ್ತದೆ. ರೈತರ ಹಿತದೃಷ್ಟಿಯಿಂದಲೇ ವಿಮೆಗೆ ಅಳವಡಿಸಲಿಲ್ಲ," ಎಂದರು. ಆಗ ಮಧ್ಯ ಪ್ರವೇಶಿಸಿದ ಮಹಂತೇಶ್ ಕವಠಗಿಮಠ, "ರೈತರು ಪಾವತಿಸುವ ವಿಮೆ ಕಂತಿನಲ್ಲಿ ಕೇಂದ್ರ ಸರ್ಕಾರವು ಒಂದು ಪಾಲನ್ನು ನೀಡಲಿ," ಎಂದು ಆಗ್ರಹಿಸಿದರು.

**ಶಿವಸಾಗರ ಶುಗರ್ಸ್ ಗೆ 3 ಕೋಟಿ:** ಸ್ಥಗಿತಗೊಂಡಿದ್ದ ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಉದುಪಡಿಯ ಶಿವಸಾಗರ ಶುಗರ್ಸ್ ಲೀ. ಗೆ ರೂ.3 ಕೋಟಿ ನೀಡಿ ಪ್ರಸಕ್ತ ಸಾಲಿನಲ್ಲಿ ಪುನಾರಂಭ ಮಾಡಲಾಗಿದೆ ಎಂದು ಪರಿಷತ್‌ಗೆ ಸಕ್ಕರೆ ಸಚಿವರು ಮಾಹಿತಿ ನೀಡಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:14.12.2021.

## 76. ಪೊಲೀಸ್ ಕ್ವಾರ್ಟರ್ಸ್ ಕೋಳಿ ಗೂಡಿನಂತಿವೆ

ರಾಜ್ಯದಲ್ಲಿ ಹಳೆಯ ಪೊಲೀಸ್ ವಸತಿ ಮತ್ತು ಪೊಲೀಸ್ ಠಾಣೆಗಳ ಅವ್ಯವಸ್ಥೆ ಬಗ್ಗೆ ವಿಧಾನಸಭೆಯಲ್ಲಿ ಗಂಭೀರ ಚರ್ಚೆ ನಡೆದಿದ್ದು, ಸಭಾಧ್ಯಕ್ಷರು ಸೇರಿದಂತೆ ಹಲವು ಸದಸ್ಯರು ಅಸಮಾಧಾನ ವ್ಯಕ್ತಪಡಿಸಿದ ಪ್ರಸಂಗ ಜರುಗಿತು.

ಪ್ರಶ್ನೋತ್ತರ ಅವಧಿಯಲ್ಲಿ ಜೆಡಿಎಸ್ ಸದಸ್ಯ ಶಿವಲಿಂಗೇಗೌಡ ಅವರು ಅರಸೀಕೆರೆ ಕ್ಷೇತ್ರದ ಗಂಡಸಿ ಗ್ರಾಮದಲ್ಲಿನ ಹಳೆ ಪೊಲೀಸ್ ಠಾಣೆ ಶಿಥಿಲಗೊಂಡಿರುವ ಕುರಿತು ಕೇಳಿದ ಪ್ರಶ್ನೆಗೆ ಉತ್ತರಿಸಿದ ಗೃಹ ಸಚಿವರು ಹಳೆಯ ಕಟ್ಟಡವನ್ನು ನೆಲಸಮಗೊಳಿಸಲು ಅನುಮತಿ ನೀಡಲಾಗಿದ್ದು, ನೆಲಸಮಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ ಎಂದು ಮಾಹಿತಿ ನೀಡಿದರು.

ಈ ವೇಳೆ ಮಧ್ಯ ಪ್ರವೇಶಿಸಿದ ಸಭಾಧ್ಯಕ್ಷರು ಪೊಲೀಸ್ ವಸತಿ ಮತ್ತು ಪೊಲೀಸ್ ಠಾಣೆಗಳ ಅವ್ಯವಸ್ಥೆ ರಾಜ್ಯದ ಸಮಸ್ಯೆ. ಪೊಲೀಸ್ ವಸತಿಗಳ ನಿರ್ಮಾಣದ ಯೋಜನೆಗಳೇ ಸರಿ ಇಲ್ಲ. ಕೋಳಿಗಳಿಗೆ ಗೂಡು ಮಾಡಿದಂತೆ ನಿರ್ಮಿಸಲಾಗುತ್ತಿದೆ. ಅಲ್ಲದೇ ನಿರ್ವಹಣೆಯೂ ಸರಿ ಇಲ್ಲ. ಹೀಗಿರುವಾಗ ಪೊಲೀಸರ ಕಾರ್ಯ ಕ್ಷಮತೆ ಯಾವ ರೀತಿಯಲ್ಲಿರಲಿದೆ ಎಂಬುದನ್ನು ಊಹಿಸಿಕೊಳ್ಳಬಹುದು ಎಂದರು.

ಆಧಾರ:ಕನ್ನಡ ಪ್ರಭ,ದಿನಾಂಕ:15.12.2021

## 77. ಶಾಸಕರ ಗೈರಿಗೆ ಸ್ಪೀಕರ್ ಗರಂ

ಸದನಕ್ಕೆ ಗೈರು ಹಾಜರಾಗುತ್ತಿರುವ ಶಾಸಕರ ಬಗ್ಗೆ ಸಭಾಧ್ಯಕ್ಷರು ತೀವ್ರ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಪ್ರಶ್ನೋತ್ತರ ಕಲಾಪದ ಬಳಿಕ ಈ ಬಗ್ಗೆ ಸೂಚನೆ ನೀಡಿದ ಅವರು ಚಳಿಗಾಲದ ಅಧಿವೇಶನ ಆರಂಭವಾಗಿದೆ. ಮೊದಲ ದಿನ 224 ಶಾಸಕರಲ್ಲಿ ಕೇವಲ 119 ಮಂದಿ ಮಾತ್ರ ಹಾಜರಿದ್ದರು. ಇಂದು ಕೂಡ ಬೆರಳೆಣಿಕೆಯಷ್ಟು ಸದಸ್ಯರು ಮಾತ್ರ ಹಾಜರಿದ್ದೀರಿ. ಅಧಿವೇಶನ ಈ ಭಾಗದ ಸಮಸ್ಯೆಗಳ ಕುರಿತಾಗಿ ಚರ್ಚೆ ನಡೆಸಲು ಕರೆದಿದ್ದೇನೆ. ಈ ಭಾಗದ ಶಾಸಕರೇ ಗೈರು ಹಾಜರಾದರೆ ಹೇಗೆ ಎಂದು ಪ್ರಶ್ನಿಸಿದರು. ಎಲ್ಲರೂ ಕಡ್ಡಾಯವಾಗಿ ಪಾಲ್ಗೊಳ್ಳಬೇಕು ಎಂದು ಸದಸ್ಯರಲ್ಲಿ ಮನವಿ ಮಾಡಿದರು.

ಆಧಾರ:ವಿಶ್ವವಾಣಿ, ದಿನಾಂಕ:15.12.2021

## 78. ಶಾಸಕ ಅನ್ನದಾನಿಗೆ ಸ್ಪೀಕರ್ ತರಾಟೆ

ವಿಧಾನಸಭೆ ಸಭಾಂಗಣದಲ್ಲಿ ಡಾ:ಅಂಬೇಡ್ಕರ್ ಭಾವಚಿತ್ರ ಅಳವಡಿಸುವ ಕುರಿತು ಜೆಡಿಎಸ್ ಸದಸ್ಯ ಡಾ:ಕೆ.ಅನ್ನದಾನಿ ಏಕಾಏಕಿ ವಿಷಯ ಪ್ರಸ್ತಾಪಿಸಿ ಸಭಾಧ್ಯಕ್ಷರು ಕೋಪಕ್ಕೆ ಪಾತ್ರರಾದ ಘಟನೆ ನಡೆಯಿತು. ಭೋಜನಾನಂತರ ಕಲಾಪ ಆರಂಭವಾಗುತ್ತಿದ್ದಂತೆ ಸಭಾಧ್ಯಕ್ಷರವರು ಅವರು ಮಳೆ ಹಾನಿ ಕುರಿತು ಚರ್ಚೆ ಮುಂದುವರಿಸಲು ಪ್ರತಿಪಕ್ಷ ನಾಯಕರನ್ನು ಆಹ್ವಾನಿಸಿದರು.

ಈ ವೇಳೆ ಏಕಾಏಕಿ ಎದ್ದುನಿಂತು ಡಾ:ಅನ್ನದಾನಿ, ಬೆಂಗಳೂರಿನ ವಿಧಾನಸೌಧದಲ್ಲಿರುವಂತೆ ಇಲ್ಲೂ ವಿಧಾನಸಭೆ ಸಭಾಂಗಣದಲ್ಲಿ ಅಂಬೇಡ್ಕರ್ ಭಾವಚಿತ್ರ ಅಳವಡಿಸುವ ಬಗ್ಗೆ ಎರಡು ವರ್ಷ ಹಿಂದೆಯೇ ಪ್ರಸ್ತಾಪಿಸಿದ್ದೆ. ಆದರೆ ಇದುವರೆಗೂ ಭಾವಚಿತ್ರ ಅಳವಡಿಸಿಲ್ಲ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಇದಕ್ಕೆ ಸಭಾಧ್ಯಕ್ಷರು ಈ ಕುರಿತು ಸದನದ ಹಿರಿಯರೊಂದಿಗೆ ಚರ್ಚಿಸಿ ಸೂಕ್ತ ನಿರ್ಧಾರ ಕೈಗೊಳ್ಳಲಾಗುವುದು, ಅಂಬೇಡ್ಕರ್ ಭಾವಚಿತ್ರ ಅಳವಡಿಸಲಾಗುವುದು ಎಂದು ಹೇಳಿದರು. ಇದಕ್ಕೆ ಒಪ್ಪದ ಅನ್ನದಾನಿ ಈಗಲೇ ಈ ಕುರಿತು ನಿರ್ಧಾರ ಕೈಗೊಳ್ಳಬೇಕು. ಭಾವಚಿತ್ರ ಅಳವಡಿಸಬೇಕು ಎಂದು ಪಟ್ಟು ಹಿಡಿದರು. ಇದರಿಂದ ಅಸಮಾಧಾನಗೊಂಡ ಸಭಾಧ್ಯಕ್ಷರು ಅವರು ಅಂಬೇಡ್ಕರ್ ಭಾವಚಿತ್ರ ಹಾಕುವುದಿಲ್ಲ ಎಂದು ಯಾರು ಹೇಳಿದರು. ವಿಷಯ ಪ್ರಸ್ತಾಪಿಸಲು ನಿಯಮ ಸಂಪ್ರದಾಯಗಳಿವೆ. ಅದನ್ನು ಪಾಲಿಸಬೇಕು. ಏಕಾಏಕಿ ಎದ್ದುನಿಂತು ಮನಸೋ ಇಚ್ಛೇ ಮಾತನಾಡುವುದಲ್ಲ ಎಂದು ಹೇಳಿದರು.

ಆದರೂ ಅನ್ನದಾನಿ ಜೋರು ದನಿಯಿಂದ ಅಂಬೇಡ್ಕರ್ ಭಾವಚಿತ್ರ ಅಳವಡಿಸಬೇಕು ಎಂದು ಪಟ್ಟು ಹಿಡಿದರು. ಸಭಾಧ್ಯಕ್ಷರ ಪೀಠದ ಎದುರು ಧಾವಿಸಿ ಬಂದರು. ಜೆಡಿಎಸ್‌ನ ಲಿಂಗೇಶ್ ಮತ್ತು ಮಂಜುನಾಥ್ ಕೂಡ ಅನ್ನದಾನಿಗೆ ಬೆಂಬಲ ವ್ಯಕ್ತಪಡಿಸಿದರು. ಸಭಾಧ್ಯಕ್ಷರು ಏನೇ ಹೇಳಿದರೂ ಕೇಳುವ ಪರಿಸ್ಥಿತಿಯಲ್ಲಿ ಅನ್ನದಾನಿ ಇರಲಿಲ್ಲ. ಇದರಿಂದ ಸಿಟ್ಟುಗೊಂಡ ಸಭಾಧ್ಯಕ್ಷರು ಸದನದ ನಿಯಮಕ್ಕೆ ತಕ್ಕಂತೆ

ನಡೆದುಕೊಳ್ಳಬೇಕು. ಅಂಬೇಡ್ಕರ್ ಭಾವಚಿತ್ರ ಅಳವಡಿಸುವುದಿಲ್ಲ ಎಂದು ಯಾರಾದರೂ ಹೇಳಿದ್ದಾರಾ? ಈ ರೀತಿ ನಿಯಮ ಬಿಟ್ಟು ಏಕಾಏಕಿ ಗದ್ದಲ ಮಾಡಿದರೆ ಸಹಿಸಿಕೊಳ್ಳಲು ಸಾಧ್ಯವಿಲ್ಲ. ನೀವು ಡಾಕ್ಟರ್ ನಿಮಗೆ ಗೌರವ ಘನತೆ ಇದೆ. ಹೀಗೆಲ್ಲ ವರ್ತಿಸಿದರೆ ನಾವು ಮುಂದುವರೆಯಬೇಕಾಗುತ್ತದೆ ಎಂದು ತರಾಟೆಗೆ ತೆಗೆದುಕೊಂಡರು.

ಸಭಾಧ್ಯಕ್ಷರವರ ಸಿಟ್ಟು ಗಮನಿಸಿದ ಪ್ರತಿಪಕ್ಷ ನಾಯಕರು ಹಾಗೂ ಡಾ:ಜಿ.ಪರಮೇಶ್ವರ್ ಇದು ಗಂಭೀರ ವಿಚಾರ, ಅಂಬೇಡ್ಕರ್ ಭಾವಚಿತ್ರಕ್ಕೆ ಯಾರ ವಿರೋಧವೂ ಇಲ್ಲ. ಸಭಾಧ್ಯಕ್ಷರು ಈಗಾಗಲೇ ಭಾವಚಿತ್ರ ಅಳವಡಿಸುವುದಾಗಿ ಹೇಳಿದ್ದಾರೆ. ಆದ್ದರಿಂದ ಈ ಬಗ್ಗೆ ವಿವಾದ ಸೃಷ್ಟಿಸುವುದು ಬೇಡ ಎಂದರು.

ಆದರೂ ಅನ್ನದಾನಿ ಸಮಾಧಾನಗೊಳ್ಳಲಿಲ್ಲ. ಈ ವೇಳೆ ಕೆಲವು ಕಾಂಗ್ರೆಸ್ ಸದಸ್ಯರು ಎದ್ದುನಿಂತು ಅಂಬೇಡ್ಕರ್ ಭಾವಚಿತ್ರ ಹಾಕುವ ಕುರಿತು ನಿರ್ಧಾರ ಪ್ರಕಟಿಸುವಂತೆ ಸಭಾಧ್ಯಕ್ಷರು ಅವರನ್ನು ಒತ್ತಾಯಿಸಿದರು. ಇದು ಬಿಜೆಪಿಯ ಎಂ.ಪಿ.ರೇಣುಕಾಚಾರ್ಯ ಮತ್ತಿತರನ್ನು ಕೆರಳಿಸಿತು. ನಾವು ಅಂಬೇಡ್ಕರ್ ಭಾವಚಿತ್ರ ಹಾಕುತ್ತೇವೆ. ಅವರಿಗೆ ಗೌರವವನ್ನೂ ಕೊಡುತ್ತೇವೆ. ಅವರನ್ನು ಸೋಲಿಸುವುದಿಲ್ಲ ಎಂದು ಕಾಂಗ್ರೆಸ್ ಸದಸ್ಯರನ್ನು ಕೆಣಕಿದರು.

ಬಳಿಕ, ಅಂಬೇಡ್ಕರ್ ಭಾವಚಿತ್ರ ಸೇರಿದಂತೆ ಯಾರೆಲ್ಲಾ ಭಾವಚಿತ್ರಗಳನ್ನು ವಿಧಾನಸಭೆ ಸಭಾಂಗಣದಲ್ಲಿ ಅಳವಡಿಸಬೇಕು ಎಂಬುದನ್ನು ಹಿರಿಯರೊಂದಿಗೆ ಚರ್ಚಿಸುವ ಕುರಿತು ಕ್ರಮ ಕೈಗೊಳ್ಳಲಾಗುವುದು ಎಂದು ಹೇಳಿ ವಿಷಯಕ್ಕೆ ತೆರೆ ಎಳೆದರು.

ಆಧಾರ:ಕನ್ನಡ ಪ್ರಭ,ದಿನಾಂಕ:15.12.2021

## 79. ಶಾಸಕರು ಕಲಾಪದಿಂದ ದೂರ

ಕುಂದಾನಗರಿ ಬೆಳಗಾವಿಯಲ್ಲಿ ಉತ್ತರ ಕರ್ನಾಟಕ ಭಾಗದ ಆಶೋತ್ತರಗಳನ್ನು ಚರ್ಚಿಸಲು ಕರೆಯಲಾಗಿರುವ ಮಹತ್ವದ ಅಧಿವೇಶನಕ್ಕೆ ಉಭಯ ಸದನಗಳಲ್ಲಿ ಸದಸ್ಯರ ನಿರಾಸಕ್ತಿ ಎದ್ದು ಕಾಣುತ್ತಿದೆ.

ರಾಜ್ಯಾಡಳಿತವೇ ಉತ್ತರ ಕರ್ನಾಟಕಕ್ಕೆ ಶಿಫ್ಟ್ ಆದ ಬಳಿಕ ಸಚಿವಾಲಯಗಳು ಚಟುವಟಿಕೆಯ ಕೇಂದ್ರವಾಗುತ್ತವೆ ಎಂಬ ನಿರೀಕ್ಷೆ ಈಡೇರುತ್ತಿಲ್ಲ. ನೇರವಾಗಿ ಸಚಿವರು ಸದನದ ಕಲಾಪಕ್ಕೆ ಆಗಮಿಸುತ್ತಿದ್ದಾರೆ. ಅದು ಕೂಡ ಗಂಟೆ ಹೊಡೆದ ಮೇಲೆ ಎನ್ನುವಂತಾಗಿದೆ. ವಿಧಾನ ಮಂಡಲ ಕಲಾಪ 11 ಗಂಟೆಗೆ ಆರಂಭವಾಗುವ ಮುನ್ನವೇ ಬರುವವರ ಸಂಖ್ಯೆ ಕಡಿಮೆಯಾದರೆ, ನಂತರದಲ್ಲಿ ಸುವರ್ಣ ವಿಧಾನಸೌಧದ ಕಡೆಗೆ ಆಗಮಿಸುವರ ಸಂಖ್ಯೆಯೇ ಹೇರಳ ಎಂಬಂತಾಗಿದೆ. ಸದನ ಆರಂಭವಾದ ಅಧಿವೇಶನ ಎರಡು ದಿನ ಪೂರೈಸಿದ ಬಳಿಕವೂ ನಾಯಕರ ಹಾಜರಾತಿಯಲ್ಲಿ ಭಾರಿ ವ್ಯತ್ಯಾಸ ಕಾಣಿಸಿಲ್ಲ. ಜೊತೆಗೆ ಸಮಯಕ್ಕೆ ಸರಿಯಾಗಿ ಬರುವುದಕ್ಕೂ ಹಿಂದೇಟು ಹಾಕುತ್ತಿದ್ದು, ಉತ್ತರ ಕರ್ನಾಟಕದಲ್ಲಿ ನಡೆಸುತ್ತಿರುವ ಅಧಿವೇಶನ ಉದ್ದೇಶವೇ ಹಳಿ ತಪ್ಪಿದೆ.

**ಅವಕಾಶ ಸದ್ಬಳಕೆಯಿಲ್ಲ**: ಮುಖ್ಯಮಂತ್ರಿಗಳೂ, ಸಚಿವರು ಸೇರಿದಂತೆ ಶಾಸಕರು ಬೆಳಗಾವಿಗೆ ಆಗಮಿಸಿ, ವಸತಿ ಗೃಹದಲ್ಲಿ ವಾಸ್ತವ್ಯ ಹೂಡಿದ್ದಾರೆ. ಕಲಾಪ 11 ಗಂಟೆಯಿಂದ ಶುರುವಾಗುತ್ತಿರುವ ಹಿನ್ನೆಲೆಯಲ್ಲಿ ಅದಕ್ಕೂ ಮುನ್ನವೇ ಸಚಿವರು ಆಗಮಿಸಿ ಸಚಿವಾಲಯದಲ್ಲಿ ಅಧಿಕಾರಿಗಳ ಸಭೆ ನಡೆಸಿ ಬೇಕು–ಬೇಡಗಳ ಬಗ್ಗೆ ಚರ್ಚಿಸಲು ಅವಕಾಶವಿದೆ. ಬಹುತೇಕ ಸಚಿವರು ಈವರೆಗೆ ಬಿಟ್ಟರೆ ನಂತರ ತಿರುಗಿ ನೋಡಿಲ್ಲ. ಅಲ್ಲಿ ಬರೀ ಸಿಬ್ಬಂದಿ ಮಾತ್ರ ಕಂಡು ಬರುತ್ತಿದ್ದಾರೆ.

ಬೆಳಿಗ್ಗೆ 9 ಕ್ಕೆ ಆಗಮಿಸಿದರೂ ಕಲಾಪಕ್ಕೂ ಮುನ್ನ ಎರಡು ತಾಸಿನ ಕಾಲ ಇಲ್ಲಿನ ಸಚಿವಾಲಯಗಳಲ್ಲಿ ಕುರಿತು ಕೆಲಸ ಮಾಡಲು ಸಾಕಷ್ಟು ಅವಕಾಶವಿದೆ. ಸಚಿವರೇ ಬೆಳಿಗ್ಗೆ ಆಗಮಿಸುವುದನ್ನು ರೂಡಿಸಿಕೊಂಡರೆ ಅಧಿಕಾರಿಗಳಿಗೂ ಚುರುಕು ಮುಟ್ಟಿಸಿದಂತಾಗುತ್ತದೆ. ಸುವರ್ಣ ವಿಧಾನಸೌಧಕ್ಕೂ ಒಂದು ಕಳೆ ಬರುತ್ತದೆ. ಅಂತಹ ಯಾವ ಪ್ರಯತ್ನ ಕಂಡುಬಾರದಿದ್ದರಿಂದ ಬೆಂಗಳೂರಿನ ಸೌಧಕ್ಕೂ ಇಲ್ಲಿನ ಸೌಧಕ್ಕೂ ಸಾಕಷ್ಟು ವ್ಯತ್ಯಾಸ ಎಂಬಂತಾಗಿದೆ. ಇಲ್ಲಿನ ಸದನ ಕಲಾಪಕ್ಕೆ ಮಾತ್ರ ಸೀಮಿತ, ಸಚಿವಾಲಯಗಳು ನಾಮಾಕಾವಸ್ತೆ ಎನ್ನುವಂತಾಗಿದೆ.

ಆಧಾರ:ಉದಯವಾಣಿ, ದಿನಾಂಕ:15.12.2021

## 80. ಅಧಿವೇಶನದಲ್ಲಿ ಪರಿಷತ್ ಫಲಿತಾಂಶ ಅನುಕರಣ

ಇತ್ತ ವಿಧಾನಮಂಡಲ ಅಧಿವೇಶನ ನೆಡೆಯುತ್ತಿದ್ದರೂ ಆಡಳಿತ ಹಾಗೂ ಪ್ರತಿಪಕ್ಷದ ನಾಯಕರಿಗೆ ವಿಧಾನ ಪರಿಷತ್ ಚುನಾವಣೆ ಫಲಿತಾಂಶದ್ದೇ ಚಿಂತೆ.

ವಿಧಾನಮಂಡಲ ಅಧಿವೇಶನದಲ್ಲಿ ಪಾಲ್ಗೊಂಡಿದ್ದ ಸಚಿವರು, ಶಾಸಕರು ಆಗಾಗ್ಗೆ ಹೊರಬಂದು ತಮ್ಮ ಸಹಾಯಕರನ್ನು ಕರೆದು ಫಲಿತಾಂಶದ ಬಗ್ಗೆ ಮಾಹಿತಿ ಪಡೆಯುತ್ತಿದ್ದದ್ದು ಸಾಮಾನ್ಯವಾಗಿತ್ತು. ವಿಧಾನಸಭೆ ಹಾಗೂ ವಿಧಾನಪರಿಷತ್ತಿನ ಆಡಳಿತ ಹಾಗೂ ಪ್ರತಿಪಕ್ಷ ಮೊಗಸಾಲೆಯಲ್ಲಿ ಮೂರೂ ಪಕ್ಷಗಳ ಸದಸ್ಯರು ಫಲಿತಾಂಶದ ಬಗ್ಗೆಯೇ ಪರಸ್ಪರ ಸಮಾಲೋಚನೆ ನಡೆಸುತ್ತಿದ್ದರು. ಜಿಲ್ಲಾ ಉಸ್ತುವಾರಿ ಸಚಿವರುಗಳು ತಾವು ಹೊಣೆಗಾರಿಕೆ ವಹಿಸಿಕೊಂಡಿದ್ದ ಕ್ಷೇತ್ರಗಳ ಫಲಿತಾಂಶ ಏನಾಗುತ್ತೋ ಎಂದು ಕಾತುರದಿಂದ ಕಾಯುತ್ತಿದ್ದರು.

ಮತ ಎಣಿಕೆ ಪ್ರಾರಂಭಗೊಂಡ ನಂತರ ಕೊಡಗು ಕ್ಷೇತ್ರದ ಫಲಿತಾಂಶ ಪ್ರಕಟಗೊಂಡು ಬಿಜೆಪಿ ಗೆಲುವು ಸಾಧಿಸಿದ್ದು ಸಚಿವರಲ್ಲಿ ಸಂತಸ ಕಂಡು ಬಂದಿತು. ಈಶ್ವರಪ್ಪ ಅವರು ಸುವರ್ಣ ವಿಧಾನಸೌಧಕ್ಕೆ ನಗು ಮುಖದೊಂದಿಗೆ ಆಗಮಿಸಿ ಗೆಲುವಿನ ಸಂಕೇತ ತೋರಿಸಿ ಕೊಡಗು ಗೆದ್ದಿದ್ದೇವೆ. 15 ಗೆಲ್ಲುತ್ತೇವೆ ಪರಿಷತ್‌ನಲ್ಲಿ ನಮಗೆ ಬಹುಮತ ಸಿಗಲಿದೆ ಎಂದರು.

ಇತ್ತ ಪ್ರತಿಪಕ್ಷದ ಮೊಗಸಾಲೆಯಲ್ಲೂ ಫಲಿತಾಂಶದ್ದೇ ಚರ್ಚೆ. ಕಾಂಗ್ರೆಸ್ ಹಾಗೂ ಜೆಡಿಎಸ್ ಸದಸ್ಯರು ಫಲಿತಾಂಶದ ಬಗ್ಗೆ ಮಾಹಿತಿ ಪಡೆಯುತ್ತಿದ್ದರು. ಹಾಸನ ಕ್ಷೇತ್ರದ ಗೆಲುವು ಮೊದಲು ಘೋಷಣೆಯಾಗಿದ್ದು, ಹಾಸನ ಭಾಗದ ಜೆಡಿಎಸ್ ಶಾಸಕರಲ್ಲಿ ಹರ್ಷವುಂಟು ಮಾಡಿತು. ಮಾಜಿ ಪ್ರಧಾನಿ ದೇವೇಗೌಡರ ಮೊಮ್ಮಗ ಸೂರಜ್ ರೇವಣ್ಣ ಪರಿಷತ್ ಪ್ರವೇಶ ಖಚಿತವಾಗುತ್ತಿದ್ದಂತೆ ಆ ಕುರಿತು ಗೌಡರ ಕುಟುಂಬದ ಮತ್ತೊಬ್ಬ ಸದಸ್ಯರ ಎಂಟ್ರಿ ಎಂದು ಮಾತನಾಡಿಕೊಳ್ಳುತ್ತಿದ್ದರು. ಈ ಮಧ್ಯೆ ಬೆಳಗಾವಿ, ಮೈಸೂರು, ಕೋಲಾರ, ತುಮಕೂರು, ಬೆಂಗಳೂರು ಗ್ರಾಮಾಂತರ, ಬೀದರ್, ಕಲಬುರಗಿ, ಧಾರವಾಡ, ವಿಜಯಪುರ, ಮಂಡ್ಯ ಕ್ಷೇತ್ರಗಳ ಫಲಿತಾಂಶದ ಬಗ್ಗೆ ಮೂರೂ ಪಕ್ಷಗಳ ನಾಯಕರಿಗೆ ಹೆಚ್ಚು ಕುತೂಹಲವಿತ್ತು.

**ನಾನು ಸಿಎಂ ಆದರೆ ಇತಿಹಾಸವೇ ಬದಲು**: ನಾಲ್ವರು ಸಚಿವರಲ್ಲಿ ನಿಷ್ಕ್ರಿಯ ಸಚಿವರನ್ನೆಲ್ಲಾ ಬದಲಾವಣೆ ಮಾಡಬೇಕು. ನಾನು ಮುಖ್ಯಮಂತ್ರಿಯಾದರೆ ರಾಜ್ಯದ ಇತಿಹಾಸವೇ ಬದಲಾವಣೆ ಆಗುತ್ತದೆ ಎಂದು ಬಸವನಗೌಡ ಪಾಟೀಲ್ ಯತ್ನಾಳ್ ಹೇಳಿದ್ದಾರೆ. ಸುದ್ದಿಗಾರರ ಜೊತೆ ಮಾತನಾಡಿದ ಅವರು, ಅಧಿಕಾರ ವಿಚಾರದಲ್ಲಿ ಮಕ್ಕಳು, ಮರಿ ಮಕ್ಕಳೇ ಆಗಿಬಿಟ್ಟರೆ ಪಕ್ಷ ಏನು ಮಾಡಬೇಕು. ವಂಶ ಪಾರಂಪರ್ಯ ಬಿಜೆಪಿಯಲ್ಲಿ ನಡೆಯಲ್ಲ. ಕುಟುಂಬದವರೆಲ್ಲಾ ಎಂಪಿ, ಎಂಎಲ್ಎ, ಆದರೆ ದೇವೇಗೌಡರ ಫ್ಯಾಮಿಲಿ ಆಗಿಬಿಡುತ್ತದೆ. ಮುಖ್ಯಮಂತ್ರಿ ಬದಲಾವಣೆ ನನಗೆ ಗೊತ್ತಿಲ್ಲ. ಆದರೆ ಸಂಪುಟದಲ್ಲಿ ಭಾರೀ ಬದಲಾವಣೆಯಾಗಲಿದೆ. ವಿಧಾನ ಪರಿಷತ್ ಫಲಿತಾಂಶದ ನಂತರ ದೊಡ್ಡ ಮಟ್ಟದ ಬೆಳವಣಿಗೆ ಆಗಲಿದೆ.

ಸಂಪುಟದಲ್ಲಿ ಬದಲಾವಣೆ ಖಂಡಿತ ಆಗಲಿದೆ. ನಿಷ್ಕ್ರಿಯ ಸಚಿವರನ್ನೆಲ್ಲಾ ತೆಗೆದುಹಾಕಬೇಕು. ಬಸವರಾಜ ಬೊಮ್ಮಾಯಿ ಮುಖ್ಯಮಂತ್ರಿಯಾಗಿ 100 ದಿನ ಆಗಿದೆಯಷ್ಟೇ. ಮುಂದಿನ ದಿನಗಳಲ್ಲಿ ತೃಪ್ತಿ, ಅತೃಪ್ತಿ ಎಲ್ಲವೂ ಗೊತ್ತಾಗುತ್ತದೆ. ಪ್ರಸ್ತುತ ಭ್ರಷ್ಟಾಚಾರ ಕಡಿಮೆಯಾಗುತ್ತಿದೆ. ಸೂಪರ್ ಸಿಎಂ ಇದ್ದಾಗ ಇದ್ದಷ್ಟು ಪ್ರಮಾಣದ ಭ್ರಷ್ಟಾಚಾರ ಇಲ್ಲ. ಪ್ರಧಾನಿಗೆ ಶೇ.40 ಕಮಿಷನ್ ವಿಚಾರದಲ್ಲಿ ಯಾರು ಪತ್ರ ಬರೆದಿದ್ದಾರೆ ಗೊತ್ತಿಲ್ಲ. ಆ ಪತ್ರ ಬರೆದಾಗ ಸಿಎಂ ಆಗಿದ್ದವರು ಯಾರು ಎಂದರು.

ಆಧಾರ:ಕನ್ನಡ ಪ್ರಭ, ದಿನಾಂಕ:15.12.2021

## 81. ವರ್ಷದಲ್ಲಿ ರೂ.96,509 ಕೋಟಿ ಸಾಲ

ವರ್ಷಗಳು ಕಳೆದಂತೆ ಸರ್ಕಾರದ ಋಣಭಾರವು ಹೆಚ್ಚುತ್ತಿದ್ದು 2020-21ನೇ ಸಾಲಿನಲ್ಲಿ ರಾಜ್ಯ ಸರ್ಕಾರದ ಒಟ್ಟು ಸಾಲ ಹಾಗೂ ಋಣಭಾರ ಪ್ರಮಾಣಕ್ಕೆ ರೂ.96,500 ಕೋಟಿ ಸೇರ್ಪಡೆಯಾಗಿದೆ.

ವಿಧಾನಸಭೆಯಲ್ಲಿ ಮಂಡನೆಯಾದ ಹಣಕಾಸು ಲೆಕ್ಕಪತ್ರ ಸಂಬಂಧ ಮಹಾಲೇಖಪಾಲರ ವರದಿಯಲ್ಲಿ ಈ ಅಂಶ ದಾಖಲಾಗಿದೆ. 2020-21ನೇ ಸಾಲಿನಲ್ಲಿ ಮಾರ್ಚ್ 31ಕ್ಕೆ ಅಂತ್ಯಗೊಂಡಂತೆ, ರಾಜ್ಯ ಸರ್ಕಾರ ಒಟ್ಟು ರೂ.61,900 ಕೋಟಿ ಮಾರುಕಟ್ಟೆ ಸಾಲ ಪಡೆದಿದೆ.

ಕೊರೋನಾ ಲಾಕ್‌ಡೌನ್ ಸಮಯದಲ್ಲಿ ಉಂಟಾಗಿದ್ದ ಆದಾಯದ ಕೊರತೆ ಸರಿದೂಗಿಸಲು ರಾಜ್ಯ ಸರ್ಕಾರವು ಹೆಚ್ಚುವರಿ ಸಾಲ ಮಾಡಿದೆ. ಇದು ಒಟ್ಟಾರೆ ಸಾಲದ ಪ್ರಮಾಣದಲ್ಲಿ ಏರಿಕೆಗೆ ಕಾರಣವಾಗಿದೆ.

ಕೊರೋನಾದಿಂದ ಜಿಎಸ್‌ಟಿ ಆದಾಯದಲ್ಲೂ ಕೊರತೆಯಾಗಿತ್ತು. ಇದರ ಜೊತೆಗೆ ಕೇಂದ್ರ ಸರ್ಕಾರವು ಜಿಎಸ್‌ಟಿ ಪರಹಾರವನ್ನು ಸಾಲದ ರೂಪದಲ್ಲಿ ನೀಡಲು ನಿರ್ಧರಿಸಿತ್ತು. ಇದರಿಂದ ಸಾಲದ ಹೊರೆ ರೂ.18 ಸಾವಿರ ಕೋಟಿಯಾಗಿದೆ. ಕಳೆದ ಆರ್ಥಿಕ ವರ್ಷದಲ್ಲಿ ಆದಾಯವು ಕುಸಿತವಾಗಿತ್ತು. ಇದು ಕೂಡ ಸಾಲದ ಹೊರೆಯ ಹೆಚ್ಚಳಕ್ಕೆ ಕಾರಣವಾಗಿದೆ.

ರಾಜ್ಯದ ಆದಾಯದ ಮೂಲಗಳಲ್ಲೂ ಕುಸಿತವಾಗಿದೆ. ಜಿಎಸ್‌ಟಿ 2019-20ರಲ್ಲಿ ರೂ.42,147 ಕೋಟಿಗಳಿಂದ 2020-21ರಲ್ಲಿ ರೂ.37,711 ಕೋಟಿಗಳಿಗೆ ಇಳಿದಿದೆ. ಸರ್ಕಾರದ ವಿವಿಧ ಆದಾಯದ ಮೂಲಗಳಿಂದ ರಾಜ್ಯ ಅಬಕಾರಿ, ನೋಂದಣಿ ಶುಲ್ಕ ಹಾಗೂ ಇತರ ತೆರಿಗೆಗಳು ಕೂಡ ಕಡಿಮೆಯಾಗಿದೆ. ಸರ್ಕಾರದ ಸಾಲವು ವರ್ಷದಲ್ಲಿ ರೂ. 96,509 ಕೋಟಿಗಳಷ್ಟು ಹೆಚ್ಚಾಗಿದೆ. ಇದರಲ್ಲಿ ರೂ.18,421 ಕೋಟಿ ಬಜೆಟ್ ಸಾಲವು ಒಳಗೊಂಡಿದೆ ಎಂದು ವರದಿಯಲ್ಲಿ ತಿಳಿಸಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:15.12.2021

## 82. ಕುಲಪತಿ, ಕುಲಸಚಿವರ ವಿರುದ್ಧ ಕಠಿಣ ಕ್ರಮ

ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಯುಜಿಸಿ ನಿಯಮಗಳನ್ನು ಉಲ್ಲಂಘಿಸಿ ನೇಮಕಾತಿ ಮಾಡಿರುವ ಕುಲಪತಿಗಳು ಮತ್ತು ಕುಲಸಚಿವರ ವಿರುದ್ಧ ಕಠಿಣ ಶಿಸ್ತಿನ ಕ್ರಮ ತೆಗೆದುಕೊಳ್ಳಬೇಕು ಎಂದು ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ ಶಿಫಾರಸ್ಸು ಮಾಡಿದೆ.

ಭಾರತ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕ ಪರಿಶೋಧಕರ ವರದಿಯಲ್ಲಿನ ಬೋಧನಾ ಸಿಬ್ಬಂದಿ ನೇಮಕಾತಿ, ಪದೋನ್ನತಿ ಮತ್ತು ವೇತನ ನಿಗದಿಯ ವಿಷಯಾಧಾರಿತ ಲೆಕ್ಕಪರಿಶೋಧನೆ ಬಗ್ಗೆ ಸಮಿತಿಯ ಶಿಫಾರಸ್ಸುಗಳನ್ನು ಒಳಗೊಂಡ ವರದಿಯನ್ನು ವಿಧಾನಸಭೆಯಲ್ಲಿ ಮಂಡಿಸಲಾಯಿತು.

ಸರ್ಕಾರದ ಹಂತದಲ್ಲಿ ನೇಮಕಾತಿಗಳಿಗೆ ಅನುಮೋದನೆ ನೀಡಿರುವ ಅಧಿಕಾರಿಗಳ ವಿರುದ್ಧವೂ ಶಿಸ್ತಿನ ಕ್ರಮ ತೆಗೆದುಕೊಳ್ಳಬೇಕು ಎಂದು ಸಮಿತಿ ಶಿಫಾರಸ್ಸು ಮಾಡಿದೆ.

**ವರದಿಯ ಪ್ರಮುಖ ಶಿಫಾರಸ್ಸುಗಳು:**

- ನಿಯಮ ಬಾಹಿರವಾಗಿ ನೇಮಕವಾಗಿರುವ, ಪದೋನ್ನತಿ ಹೊಂದಿರುವ ಪ್ರಾಧ್ಯಾಪಕರು ಸಹಾಯಕ ಗ್ರಂಥಪಾಲಕರು, ಇತರೆ ಬೋಧನಾ ಸಿಬ್ಬಂದಿ ಸೇವೆಯಲ್ಲಿದ್ದರೆ, ತಕ್ಷಣವೇ ಅಂತಹವರನ್ನು ವಜಾಗೊಳಿಸಬೇಕು. ಪಾವತಿಸಿರುವ ಹೆಚ್ಚುವರಿ ಮೊತ್ತವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು, ಕಾಲೇಜುಗಳು ವಸೂಲಿ ಮಾಡಬೇಕು.

- ಚಾಲ್ತಿಯಲ್ಲಿದ್ದ ಯುಜಿಸಿ ನಿಯಮಾವಳಿಗಳನ್ನು ಪಾಲಿಸದೇ ದುರುದ್ದೇಶಪೂರ್ವಕವಾಗಿ ವಿಶ್ವವಿದ್ಯಾಲಯಗಳ ಪರಿನಿಯಮಗಳನ್ನು ರಚನೆ ಮಾಡಿ, ಅದರ ಪ್ರಕಾರ ಕಾನೂನು ಬಾಹಿರವಾಗಿ ನೇಮಕಾತಿಯನ್ನು ವಿಶ್ವವಿದ್ಯಾಲಯಗಳು ಮಾಡಿರುವುದು ಸರಿಯಲ್ಲ. ಆಗಿರುವ ಲೋಪದೋಷಗಳನ್ನು ಶೀಘ್ರವಾಗಿ ಸರಿಪಡಿಸಿ, ಅನುಸರಣಾ ವರದಿ ಸಲ್ಲಿಸಬೇಕು.

- ಹಿಂದೆ ಗೌರವಾನ್ವಿತರು ಪ್ರಾಮಾಣಿಕರು ಮತ್ತು ಸಮಾಜಕ್ಕೆ ಮಾದರಿಯಾದ ವ್ಯಕ್ತಿಗಳು ಕುಲಪತಿಗಳು ಆಗುತ್ತಿದ್ದರು. ಇತ್ತೀಚಿನ ವರ್ಷಗಳಲ್ಲಿ ಅರ್ಹತೆ ಇಲ್ಲದವರನ್ನು ಕುಲಪತಿಗಳನ್ನಾಗಿ ಆಯ್ಕೆ ಮಾಡಲಾಗುತ್ತಿದೆ. ಇದರಿಂದ ವಿಶ್ವವಿದ್ಯಾಲಯಗಳ ಗುಣಮಟ್ಟ ಕುಸಿಯುತ್ತಿದೆ. ಉನ್ನತ ಶಿಕ್ಷಣದ ಗುಣಮಟ್ಟ ಕಾಪಾಡಲು ಆಗತ್ಯವಿರುವ ಕ್ರಮ ತೆಗೆದುಕೊಳ್ಳಬೇಕು.

- ಯುಜಿಸಿ ಮತ್ತು ಎಐಸಿಟಿಇ ಶೈಕ್ಷಣಿಕ ಸಿಬ್ಬಂದಿ ನೇಮಕಾತಿ ಕುರಿತು ಕನಿಷ್ಠ ವಿದ್ಯಾರ್ಹತೆ ಆಯ್ಕೆ ಸಮಿತಿಯ ರಚನೆ ಕುರಿತು ನೇಮಕಾತಿ ಸೂತ್ರಗಳನ್ನು ನಿಗದಿಪಡಿಸುತ್ತದೆ. ಸೂತ್ರಗಳನ್ನು ಉಲ್ಲಂಘಿಸಿ, ಹಲವಾರು ವಿಶ್ವವಿದ್ಯಾಲಯಗಳಲ್ಲಿ ನಿಯಮ ಬಾಹಿರ ನೇಮಕಾತಿ ಮಾಡಿರುವುದನ್ನು ಮಹಾಲೇಖಪಾಲರ ವರದಿ ಹೇಳಿದೆ. ಇಂತಹ ಲೋಪದೋಷಗಳನ್ನು ನಿಯಂತ್ರಿಸಲು ಮತ್ತು ಉತ್ತಮ ಗುಣಮಟ್ಟದ ಬೋಧನ ಮತ್ತು ಬೋಧನೇತರ ಸಿಬ್ಬಂದಿ ನೇಮಕಾತಿ ಮಾಡಲು ಪಾರದರ್ಶಕವಾದ ಒಂದು ನೇಮಕಾತಿ ಆಯೋಗ ರಚನೆ ಮಾಡಲು ಅಥವಾ ಬದಲಿ ವ್ಯವಸ್ಥೆ ಕಾರ್ಯಗತಗೊಳಿಸಬೇಕು.

ಆಧಾರ:ಪ್ರಜಾವಾಣಿ, ದಿನಾಂಕ:15.12.2021

## 83. ಕಳಪೆ ಔಷಧ: ಶಿಸ್ತು ಕ್ರಮಕ್ಕೆ ಸೂಚನೆ

ಕಳಪೆ ಗುಣಮಟ್ಟದ ಔಷಧಿಗಳನ್ನು ಖರೀದಿ ಮಾಡಿರುವ ಅಧಿಕಾರಿಗಳ ವಿರುದ್ಧ ಕಠಿಣ ಕ್ರಮ ಕೈಗೊಳ್ಳಬೇಕು ಎಂದು ಸಾರ್ವಜನಿಕ ಲೆಕ್ಕಪತ್ರ ಸಮಿತಿ ಶಿಫಾರಸ್ಸು ಮಾಡಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವೈದ್ಯಕೀಯ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ 2014–15 ರಿಂದ 2019ನೇ ಸಾಲಿನ ಸಿಎಜಿ ವರದಿಯಲ್ಲಿನ ವಿಷಯಗಳ ಬಗ್ಗೆ ಸಮಿತಿಯ ವರದಿಯನ್ನು ವಿಧಾನಸಭೆಯಲ್ಲಿ ಮಂಡಿಸಲಾಯಿತು.

2014–15 ರಿಂದ 2016–17ರ ಅವಧಿಯಲ್ಲಿ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ ಆ್ಯಂಡ್ ವೇರ್ ಹೌಸಿಂಗ್ ಸೊಸೈಟಿಯು 6,776 ಬ್ಯಾಚ್‌ಗಳ ಔಷದ ಖರೀದಿಸಿತ್ತು. ಈ ಪೈಕಿ ರೂ.1.23 ಕೋಟಿ ಮೌಲ್ಯದ 27

ಬ್ಯಾಚ್‌ಗಳ ಔಷದ ಉತ್ತಮ ಗುಣಮಟ್ಟದ್ದು ಆಗಿರಲಿಲ್ಲ. ಅದೇ ಅವಧಿಯಲ್ಲಿ ರೂ.4.08 ಕೋಟಿ ಮೊತ್ತದ 77 ಬ್ಯಾಚ್‌ಗಳ ಔಷಧ ಉತ್ತಮ ಗುಣಮಟ್ಟದ್ದು ಆಗಿರಲಿಲ್ಲ ಎಂದು ರಾಜ್ಯ ಔಷಧ ನಿಯಂತ್ರಕರು ಹೇಳಿದ್ದರು. ಸೊಸೈಟಿ ಹಾಗೂ ಔಷಧ ನಿಯಂತ್ರಕರ ನಡುವೆ ಸಮನ್ವಯ ಕೊರತೆ ಇದೆ ಎಂದು ಸಮಿತಿ ಅಸಮಾಧಾನ ವ್ಯಕ್ತಪಡಿಸಿದೆ.

ಕಳಪೆ ಗುಣಮಟ್ಟದ ಔಷಧಗಳನ್ನು ಸರಬರಾಜು ಮಾಡಿದ ಸಂಸ್ಥೆಗಳಿಂದ ಪೂರ್ಣ ಮೊತ್ತವನ್ನು ಇಲ್ಲಿಯವರೆಗೆ ವಸೂಲಿ ಮಾಡಿಲ್ಲ. ಸರಬರಾಜುದಾರರ ಭದ್ರತಾ ಠೇವಣಿಯನ್ನು ಕೂಡಲೇ ಮುಟ್ಟುಗೋಲು ಹಾಕಿಕೊಂಡು ಸಮಿತಿಗೆ ವರದಿ ಸಲ್ಲಿಸಬೇಕು ಎಂದು ಸಮಿತಿ ಸೂಚಿಸಿದೆ.

ಆಧಾರ:ಪ್ರಜಾವಾಣಿ, ದಿನಾಂಕ:15.12.2021

## 84. ಹೇಮಾವತಿ ಅಕ್ರಮ:ತನಿಖೆಗೆ ವಿಶೇಷ ತಂಡ

ಹೇಮಾವತಿ/ಯಗಚಿ/ವಾಟೆಹೊಳೆ ಜಲಾಶಯ ಯೋಜನೆಗಳ ಭೂ ಪರಿಹಾರ ಅಕ್ರಮದ ತನಿಖೆಗೆ ವಿಶೇಷ ತನಿಖಾ ತಂಡ ರಚಿಸಬೇಕು ಎಂದು ವಿಧಾನಮಂಡಲದ ಸಾರ್ವಜನಿಕ ಲೆಕ್ಕಪತ್ರ ಸಮಿತಿ ಶಿಫಾರಸ್ಸು ಮಾಡಿದೆ.

ಈ ಯೋಜನೆಗಳ ಭೂ ಸಂತ್ರಸ್ತರಿಗೆ ಮೀಸಲಿಟ್ಟ ಸರ್ಕಾರಿ ಜಮೀನುಗಳನ್ನು ನಕಲಿ ದಾಖಲೆಗಳನ್ನು ಸೃಷಿಸಿ, ಭೂ ಸಂತ್ರಸ್ತರಲ್ಲದವರಿಗೆ ಭೂ ಮಂಜೂರಾತಿ ಮಾಡಿರುವ ಕುರಿತ ಮಧ್ಯಂತರ ವರದಿಯನ್ನು ವಿಧಾನಸಭೆಯಲ್ಲಿ ಮಂಡಿಸಲಾಯಿತು. 2005ರ ನಂತರ ಆಗಿರುವ ಅಕ್ರಮ ಭೂ ಪರಭಾರೆಗಳನ್ನು ರದ್ದುಪಡಿಸಿ ಸಮಿತಿಗೆ ಸಮಗ್ರ ವರದಿ ಸಲ್ಲಿಸಬೇಕು ಎಂದು ಶಿಫಾರಸ್ಸು ಮಾಡಿದೆ.

ಅಕ್ರಮವಾಗಿ ನಕಲಿ ದಾಖಲೆಗಳನ್ನು ಸೃಷ್ಟಿಸಿ ಕರ್ತವ್ಯಲೋಪ ಎಸಗಿದ ಅಧಿಕಾರಿಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆಗಳನ್ನು ದಾಖಲಿಸಿ ಶಿಸ್ತುಕ್ರಮ ಕೈಗೊಂಡು ಸಮಿತಿ ವರದಿ ಸಲ್ಲಿಸಬೇಕು. ನೈಜ ಸಂತ್ರಸ್ತರಿಗೆ ಸಲ್ಲಬೇಕಾದ ಶಾಸನಬದ್ಧ ಹಿಸ್ಸೆಯನ್ನು ಲಭ್ಯವಾಗುವಂತೆ ಮಾಡಲು ಮತ್ತು ಅಧಿಕೃತ ಭೂ ಸಂತ್ರಸ್ತರಿಗೆ ಭೂಮಿ ಮಂಜೂರಾಗಿದ್ದರೆ, ಭೂಮಿಯನ್ನು ಅವರ ಬಳಿ ಉಳಿಯುವಂತೆ ಮಾಡಲು ಇಲಾಖೆ ಸೂಕ್ತ ಕ್ರಮ ಕೈಗೊಳ್ಳಬೇಕು ಎಂದು ಸಮಿತಿ ಸೂಚಿಸಿದೆ.

ಈ ಜಲಾಶಯಗಳ ಮುಳುಗಡೆ ರೈತರಿಗೆ ಭೂಮಿ ಮಂಜೂರು ಮಾಡುವ ಸಂಬಂಧ 15 ವರ್ಷಗಳ ಭೂ ಮಂಜೂರಾತಿ ಪರಭಾರೆ ನಿಷೇಧ ಷರತ್ತನ್ನು ಮರು ಸೇರಿಸಿ, ಸಂತ್ರಸ್ತ ಕುಟುಂಬದವರ ಬಳಿಯೇ ನಿರ್ದಿಷ್ಟ ಅವಧಿಗೆ ಜಮೀನು ಉಳಿಯುವಂತೆ ಮಾಡಿ, ಆಗಿರುವ ಅಕ್ರಮ ಭೂ ಖಾತಾ ಬದಲಾವಣೆಯನ್ನು ತಪ್ಪಿಸಬೇಕು.

ಈ ಎಲ್ಲ ಶಿಫಾರಸ್ಸುಗಳನ್ನು ಆರು ತಿಂಗಳಲ್ಲಿ ಇಲಾಖೆ ಅನುಷ್ಠಾನ ಮಾಡಬೇಕು ಎಂದು ಸಮಿತಿ ನಿರ್ದೇಶನ ನೀಡಿದೆ.

ಸರ್ಕಾರವು 1971ರಲ್ಲಿ ಪ್ರಾರಂಭಿಕ ಅಧಿಸೂಚನೆಯಲ್ಲಿ ನಿಗದಿಪಡಿಸಿದ ಭೂ ಪರಿಹಾರದ ಪ್ರಮಾಣಕ್ಕಿಂತ ಬಹಳ ಹೆಚ್ಚು ಪ್ರಮಾಣದಲ್ಲಿ ಪರಿಹಾರ ನೀಡಲಾಗಿದೆ ಎಂದು ಸಮಿತಿ ಅಸಮಾಧಾನ ವ್ಯಕ್ತಪಡಿಸಿದೆ.

ಯೋಜನೆಯ ಭೂ ಪರಿಹಾರ ಅಕ್ರಮದ ಬಗ್ಗೆ ಎಸ್.ಆರ್.ಬೊಮ್ಮಾಯಿ ನೇತೃತ್ವದ ಸಮಿತಿ 1982ರಲ್ಲೇ ವರದಿ ನೀಡಿದೆ. ಆದರೆ 40 ವರ್ಷಗಳು ಕಳೆದ ಬಳಿಕವು ಭೂ ಸಂತ್ರಸ್ತರಿಗೆ ಭೂ ಮಂಜೂರಾತಿ ಪ್ರಕ್ರಿಯೆ ನಡೆಯುತ್ತಿದೆ. ಬೊಮ್ಮಾಯಿ ಸಮಿತಿಯ ಶಿಫಾರಸ್ಸುಗಳ ಬಗ್ಗೆ ಕಂದಾಯ ಇಲಾಖೆ ಇಲ್ಲಿಯವರೆಗೆ ಕಠಿಣ ಕ್ರಮ ಕೈಗೊಂಡಿಲ್ಲ ಎಂದು ಸಮಿತಿ ಅಸಮಾಧಾನ ವ್ಯಕ್ತಪಡಿಸಿದೆ.

ಜಲಾಶಯ ಮುಳುಗಡೆ ವಿಸ್ತೀರ್ಣವನ್ನು ಭೂ ಮಂಜೂರಾತಿಗೆ ಹೋಲಿಸಿದಾಗ, ಭೂ ಪರಿಹಾರದ ಅಕ್ರಮ ಮಂಜೂರಾತಿ ಅತ್ಯಂತ ಹೇರಳವಾಗಿದ್ದು ಇದರ ಆಳ ಮತ್ತು ಅಗಲ ಅಳತೆಗೆ ನಿಲುಕದ್ದು ಎಂದು ಸಮಿತಿ ಅಭಿಪ್ರಾಯ ವ್ಯಕ್ತಪಡಿಸಿದೆ.

1,654 ಎಕರೆ ಸರ್ಕಾರಿ ಭೂಮಿಯನ್ನು ಅಕ್ರಮವಾಗಿ ಮಂಜೂರು ಮಾಡಿದ್ದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗಿದೆ ಎಂದು ಹಾಸನ ಜಿಲ್ಲಾಧಿಕಾರಿ ರಚಿಸಿದ್ದ ತನಿಖಾ ತಂಡ ವರದಿ ನೀಡಿದೆ. ಆದರೂ ಕಂದಾಯ ಇಲಾಖೆ ಯಾವುದೇ ಪರಿಣಾಮಕಾರಿ ಕ್ರಮ ಕೈಗೊಂಡಿಲ್ಲ ಎಂದು ಸಮಿತಿ ತಿಳಿಸಿದೆ.

ಈ ಯೋಜನೆಗಳಿಗೆ ಭೂ ಮಂಜೂರಾತಿಗಾಗಿ 95 ಸಾವಿರ ಎಕರೆ ಕಾಯ್ದಿರಿಸಲಾಗಿತ್ತು. 2015–16 ರ ನಂತರ 979 ಪ್ರಕರಣಗಳಲ್ಲಿ ಭೂ ಮಂಜೂರಾತಿ ಆಗಿದೆ. ಅವುಗಳ ಪೈಕಿ 569 ಪ್ರಕರಣಗಳು ವಿಶೇಷ ಭೂ ಸ್ವಾಧೀನಾಧಿಕಾರಿಗಳ ಆದೇಶದ ಅನ್ವಯ ಭೂ ಮಂಜೂರಾತಿ ಆಗಿದೆ. ಉಳಿದ 410 ಪ್ರಕರಣಗಳು ವಿಶೇಷ ಭೂ ಸ್ವಾಧೀನಾಧಿಕಾರಿಯವರ ಕಛೇರಿಯಿಂದ ಮಂಜೂರಾಗದೇ ಅಧಿಕಾರಿಗಳ ಸಹಿಯನ್ನು ನಕಲಿ ಮಾಡಿ ಮತ್ತು ಸೃಷ್ಟಿಸಲಾದ ದಾಖಲೆಗಳಿಂದ ಮಂಜೂರಾಗಿತ್ತು ಎಂದು ಸಮಿತಿ ಉಲ್ಲೇಖಿಸಿದೆ.

ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಯವರು ವರದಿ ಮಾಡಿರುವ 2,370 ಅನರ್ಹ ಭೂ ಮಂಜೂರಾತಿ ಪ್ರಕರಣಗಳ ಕುರಿತಂತೆ ಇಲಾಖೆ ಇಲ್ಲಿಯವರೆಗೂ ಸಮರ್ಪಕ ಕ್ರಮ ಕೈಗೊಂಡಿಲ್ಲ. ವಿಶೇಷ ಭೂ ಸ್ವಾಧೀನಾಧಿಕಾರಿ ಕ್ಯಾಪ್ಟನ್ ಶ್ರೀನಿವಾಸಗೌಡ ಅವಧಿಯಲ್ಲಿ 648 ಪ್ರಕರಣಗಳಲ್ಲಿ ಸೃಷ್ಟಿಸಿದ್ದ ಜಮೀನು ಮಂಜೂರಾತಿ ಪ್ರಕರಣಗಳ ತನಿಖೆ ಮಾಡಲು ಸೂಚಿಸಲಾಗಿತ್ತು. ಇದರ ಬಗ್ಗೆಯೂ ಇಲ್ಲಿಯವರೆಗೂ ವರದಿ ಸಲ್ಲಿಸಿಲ್ಲ ಎಂದು ಸಮಿತಿ ಅಸಮಾಧಾನ ವ್ಯಕ್ತಪಡಿಸಿದೆ.

ಆಧಾರ:ಪ್ರಜಾವಾಣಿ, ದಿನಾಂಕ:15.12.2021

## 85. ರೈತರಿಗೆ 3 ಪಟ್ಟು ಹೆಚ್ಚು ಪರಿಹಾರ ಕೊಡಿ

ರಾಜ್ಯದಲ್ಲಿ 3 ವರ್ಷದಿಂದ ನೆರೆ, ಭಾರಿ ಮಳೆಯಿಂದ ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿದಾಗ ಸದ್ಯ ನೀಡುತ್ತಿರುವ ಪರಿಹಾರಕ್ಕೆ 3 ಪಟ್ಟು ಹೆಚ್ಚು ಬೆಳೆ ಪರಿಹಾರ ನೀಡಬೇಕು. ಎನ್‌ಡಿಆರ್‌ಎಫ್ ನಿಯಮಾವಳಿಗೆ ತಿದ್ದುಪಡಿ ತರಬೇಕು ಎಂದು ಪ್ರತಿಪಕ್ಷದ ನಾಯಕರು ಒತ್ತಾಯಿಸಿದರು. ನೆರೆ, ಮಳೆ ಹಾನಿ ಕುರಿತಂತೆ ನಿಯಮ 69ರಡಿ ಚರ್ಚೆ ನಡೆಸಿದ ಅವರು ಕಳೆದ ಏಪ್ರಿಲ್‌ನಿಂದಿಚೇಗೆ ಮೂರು ಬಾರಿ ಪ್ರವಾಹ, ಭಾರಿ ಮಳೆಯಾಗಿದೆ. ರೈತರ ಬೆಳೆಯೆಲ್ಲಾ ನಾಶವಾಗಿದ್ದು, ಡಿಸೆಂಬರ್ 8ಕ್ಕೆ ಬೆಳೆ ನಷ್ಟ ಪರಿಹಾರ ಅರ್ಜಿ ಸ್ವೀಕಾರವು ಸ್ಥಗಿತಗೊಂಡಿದೆ. ಅಧಿಕಾರಿಗಳು ಬೆಳೆ ನಷ್ಟ ಸಮೀಕ್ಷೆ ನಿಲ್ಲಿಸಿದ್ದಾರೆ. ಕೂಡಲೇ ಬೆಳೆ ನಷ್ಟ ಸಮೀಕ್ಷೆ ನಡೆಸುವ ಜೊತೆಗೆ ಅರ್ಜಿಗಳನ್ನು ಸ್ವೀಕರಿಸಿ ಪರಿಹಾರ ವಿತರಿಸಬೇಕು ಎಂದು ಅಗ್ರಹಿಸಿದರು.

**ಸರ್ಕಾರ ಎಚ್ಚರ ವಹಿಸಲಿ**: ಹವಾಮಾನ ಬದಲಾವಣೆಯಾಗುತ್ತಿದ್ದು 2030ರ ಹೊತ್ತಿಗೆ ರಾಗಿ, ಭತ್ತ, ಕಡಲೆ ಇತರ ಬೆಳೆಗಳ ಉತ್ಪಾದನೆ ಕುಸಿತವಾಗಲಿದೆ. ಹತ್ತಿ, ಜೋಳ, ಕಬ್ಬು, ಉತ್ಪಾದನೆ ಹೆಚ್ಚಾಗಲಿದೆ ಎಂದು ವಿಜ್ಞಾನಿಗಳು ಸರ್ಕಾರಕ್ಕೆ ವರದಿ ಸಲ್ಲಿಸಿದ್ದಾರೆ. ಸರ್ಕಾರ ಕೂಡಲೇ ಇದನ್ನು ಗಂಭೀರವಾಗಿ ಪರಿಗಣಿಸಿ ಅಗತ್ಯ ಮುನ್ನೆಚ್ಚರಿಕೆ ಕ್ರಮ ವಹಿಸಬೇಕು ಎಂದು ಸಿದ್ದರಾಮಯ್ಯ ಆಗ್ರಹಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:15.12.2021

## 86. ಸೋಮಣ್ಣ ಸವಾಲು ಸಿದ್ದರಾಮಯ್ಯ ಪ್ರತಿ ಸವಾಲು

ರಾಜ್ಯದಲ್ಲಿ ಮನೆಗಳ ನಿರ್ಮಾಣಕ್ಕೆ ಸಂಬಂಧಪಟ್ಟಂತೆ ತಾವು ಸದನಕ್ಕೆ ನೀಡುತ್ತಿರುವ ಮಾಹಿತಿ ನಿಜ ಎಂದು ಪ್ರತಿ ಪಕ್ಷ ನಾಯಕರು ಹಾಗೂ ಸಚಿವರು ಒತ್ತಿ ಹೇಳಿದರು. ತಾವು ನೀಡುತ್ತಿರುವ ಮಾಹಿತಿ ಸುಳ್ಳೆಂದು ಸಾಬೀತಾದರೆ ಸ್ಥಾನ ತೊರೆಯುವುದಾಗಿ ಪರಸ್ಪರ ಸವಾಲು–ಪ್ರತಿಸವಾಲು ಹಾಕಿದರು.

ವಿಧಾನಸಭೆಯಲ್ಲಿ ವಸತಿ ಯೋಜನೆ ಬಗ್ಗೆ ಕಾವೇರಿದ ಚರ್ಚೆ ನಡೆಯಿತು. ಸಿದ್ದರಾಮಯ್ಯ ಅವರು ಬಿಜೆಪಿ ಸರ್ಕಾರ ಅಧಿಕಾರಕ್ಕೆ ಬಂದ ನಂತರ ರಾಜ್ಯದಲ್ಲಿ ಹೊಸದಾಗಿ ಮನೆ ಕೊಟ್ಟಿಲ್ಲ. ನಮ್ಮ ಸರ್ಕಾರವಿದ್ದಾಗ 15 ಲಕ್ಷ ಮನೆಗಳನ್ನು ನಿರ್ಮಿಸಿ ಹಂಚಿಕೆ ಮಾಡಿದ್ದೆವು ಎಂದು ಹೇಳಿದರು.

ಆಗ ಸೋಮಣ್ಣ ಸದನದಲ್ಲಿಲ್ಲದ ಕಾರಣ ಶ್ರೀರಾಮುಲು ಉತ್ತರ ನೀಡಿದರು. ನಿಮ್ಮ ಸರ್ಕಾರದ ಅವಧಿಯಲ್ಲಿ 20 ಲಕ್ಷ ಮನೆ ನೀಡುವುದಾಗಿ ಘೋಷಿಸಿದ್ದರೂ ಒಂದು ಅನುದಾನ ಇಟ್ಟಿರಲಿಲ್ಲ ಎಂದು ಕಾಲೆಳೆದರು. ಆಗ ಸಿದ್ದರಾಮಯ್ಯ ನಿಮಗೆ ಇದೆಲ್ಲಾ ಗೊತ್ತಾಗಲ್ಲ ಕುಳಿತುಕೊಳ್ಳಿ ಎಂದು ಸಿಡುಕಿದರು.

ಆ ಹೊತ್ತಿಗೆ ಸದನಕ್ಕೆ ಬಂದ ವಿ.ಸೋಮಣ್ಣ ಸದನಕ್ಕೆ ವಾಸ್ತವಾಂಶ ತಿಳಿಸಿ. ನಾನೂ ನಿಮ್ಮ ಗರಡಿಯಲ್ಲಿ ಬೆಳೆದವನು. ನೀವು ಕುಳಿತುಕೊಂಡರೆ ನಾನು ಮಾಹಿತಿ ನೀಡುತ್ತೇನೆ ಎಂದು ಉತ್ತರ ನೀಡಲು ಅಣಿಯಾದರು. ಗದ್ದಲದಲ್ಲೇ ಮಾಹಿತಿ ನೀಡಲಾರಂಭಿಸಿದ ಸೋಮಣ್ಣ ನೀವು 2018ರಲ್ಲಿ ವಿಧಾನಸಭೆ ಚುನಾವಣೆಗೆ ಹೋಗುವ ಹೊತ್ತಿನಲ್ಲಿ 20 ಲಕ್ಷ ಮನೆ ನೀಡುವುದಾಗಿ ಘೋಷಿಸಿದಿರಿ. ಬಳಿಕ ಒಂದು ಅನುದಾನ ನೀಡಿರಲಿಲ್ಲ. ಬಳಿಕ ಸಿಎಂ ಆದ ಹೆಚ್.ಡಿ.ಕುಮಾರಸ್ವಾಮಿಯವರು ರೂ.3,000 ಕೋಟಿ ಅನುದಾನದಲ್ಲಿ 1.33 ಲಕ್ಷ ಮನೆ ಪೂರ್ಣಗೊಳಿಸಲು ಸೂಚಿಸಿದರು. ಬಸವರಾಜ ಬೊಮ್ಮಾಯಿ ನೇತೃತ್ವದ ಸರ್ಕಾರದಲ್ಲಿ 5 ಲಕ್ಷ ಮನೆಗಳನ್ನು 12 ತಿಂಗಳಲ್ಲಿ ಪೂರ್ಣಗೊಳಿಸಲಾಗುವುದು ಎಂದು ತಿಳಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:15.12.2021

## 87. ಅಧಿವೇಶನಕ್ಕೆ ಪ್ರತಿಭಟನೆ ಬಿಸಿ

ಇಲ್ಲಿಯ ಸುವರ್ಣ ವಿಧಾನಸೌಧದಲ್ಲಿ ನಡೆಯುತ್ತಿರುವ ವಿಧಾನಮಂಡಲ ಅಧಿವೇಶನ ಹಿನ್ನೆಲೆಯಲ್ಲಿ ವಿವಿಧ ಸಂಘಟನೆಗಳು ಹಲವು ಬೇಡಿಕೆ ಈಡೇರಿಸುವಂತೆ ಒತ್ತಾಯಿಸಿ ಸುವರ್ಣಸೌಧದ ಬಳಿ ಪ್ರತಿಭಟನೆ ನಡೆಸಿ ಸರ್ಕಾರದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದವು.

ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ರನ್ನಶುಗರ್ಸ್ ಕಾರ್ಖಾನೆ 2 ವರ್ಷದಿಂದ ಬಂದ್ ಆಗಿದ್ದು, ಇದನ್ನೇ ನಂಬಿಕೊಂಡಿದ್ದ ಕಾರ್ಮಿಕ ಕುಟುಂಬಗಳು ಬೀದಿಗೆ ಬಿದ್ದಿವೆ. ಕಾರ್ಖಾನೆ ಪುನಾರಂಭಿಸುವುದರ ಬಗ್ಗೆ ತಹಶೀಲ್ದಾರ್‌ಗೆ ಬಹಳಷ್ಟು ಬಾರಿ ಮನವಿ ಸಲ್ಲಿಸಿದರೂ ಪ್ರಯೋಜನವಾಗಿಲ್ಲ. ಜಲಸಂಪನ್ಮೂಲ ಸಚಿವರು ಸಮಸ್ಯೆಗೆ ಸ್ಪಂದಿಸುತ್ತಿಲ್ಲ ಎಂದು ರೈತರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಎಂಪ್ಲಾಯೀಸ್ ಯೂನಿಯನ್ ಪದಾಧಿಕಾರಿಗಳು ತರಾಟೆಗೆ ತೆಗೆದುಕೊಂಡರು. ಸರ್ಕಾರಕ್ಕೆ ಹಲವು ಬಾರಿ ಮನವಿ ಸಲ್ಲಿಸಿದರೂ ನಮ್ಮ ಸಮಸ್ಯೆಗೆ ಕಿವಿಗೊಡುತ್ತಿಲ್ಲ. ರೂ.350 ಕೋಟಿ ಹಗರಣ ಮಾಡಿ ಕಾರ್ಖಾನೆ ದಿವಾಳಿ ಮಾಡಿದ ಆಡಳಿತ ಮಂಡಳಿ ಮೇಲೆ ಕ್ರಮ ಕೈಗೊಳ್ಳಬೇಕು ಎಂದು ಆಕ್ರೋಶ ವ್ಯಕ್ತಪಡಿಸಿದರು.

**ಆಡಳಿತ ಮಂಡಳಿ ವಜಾ ಮಾಡಿ**: ಸರ್ಕಾರವೇ ಜವಾಬ್ದಾರಿ ವಹಿಸಿಕೊಂಡು ಕಾರ್ಖಾನೆ ಪುನರಾರಂಭಿಸಬೇಕು. ಕಾರ್ಮಿಕರ ಎಲ್ಲ ಹಿಂಬಾಕಿ ಪಾವತಿಸಬೇಕು. 2020ರ ನವೆಂಬರ್‌ನಿಂದ ಇಲ್ಲಿಯವರೆಗೆ ಪೂರ್ಣ ಪ್ರಮಾಣದ ವೇತನ ನೀಡಬೇಕು. ಹೆಚ್ಚುವರಿ ಅವಧಿಯಲ್ಲಿ ಕಾರ್ಯನಿರ್ವಹಿಸಿದ್ದಕ್ಕೆ ಹಣ ನೀಡಬೇಕು. ನಿವೃತ್ತ ಕಾರ್ಮಿಕರಿಗೆ ಗ್ರ್ಯಾಚುಟಿ ನೀಡಬೇಕು. ಕಾರ್ಮಿಕರಿಗೆ

ಬರಬೇಕಾದ ಬೋನಸ್ ಸೇರಿ ಸವಲತ್ತು ಕೊಡಿಸುವುದಕ್ಕೆ ಕ್ರಮ ಕೈಗೊಳ್ಳಬೇಕು. ಇಲ್ಲವಾದರೆ ಎಲ್ಲ ಕಾರ್ಮಿಕ, ರೈತ ಸಂಘಟನೆಗಳೊಂದಿಗೆ ಸುವರ್ಣಸೌಧಕ್ಕೆ ಮುತ್ತಿಗೆ ಹಾಕಬೇಕಾಗುತ್ತದೆ ಎಂದು ಆಗ್ರಹಿಸಿದರು. ಬಳಿಕ ಸಕ್ಕರೆ ಸಚಿವರು, ಕಾರ್ಮಿಕ ಪ್ರತಿನಿಧಿಗಳನ್ನು ಸುವರ್ಣಸೌಧಕ್ಕೆ ಕರೆಸಿಕೊಂಡು ಮನವಿ ಸ್ವೀಕರಿಸಿದರು. ಈರನಗೌಡ ಪಾಟೀಲ, ಉಮೇಶ ಬಡಿಗೇರ, ಪ್ರಕಾಶ ಕನ್ನೂರ, ಪಾಂಡು ಮುಳ್ಳೂರು ಇತರರು ಇದ್ದರು.

ಆಧಾರ:ವಿಜಯ ವಾಣಿ, ದಿನಾಂಕ:15.12.2021

## 88. ಕುಟುಂಬದ ಆಸ್ತಿಯಾದ ಮೇಲ್ಮನೆ

ಒಂದು ಕಾಲದಲ್ಲಿ ರಾಜಕೀಯ ಮುತ್ಸದ್ದಿಗಳು, ವಿವಿಧ ಕ್ಷೇತ್ರದ ಪ್ರಾಜ್ಞರು, ಪ್ರಾತಿನಿಧ್ಯವನ್ನೇ ಕಾಣದ ತಳಸಮುದಾಯದವರಿಗೆ ಪ್ರಜಾತಂತ್ರ ವ್ಯವಸ್ಥೆಯಲ್ಲಿ ವೇದಿಕೆ ಕಲ್ಪಿಸಿದ್ದ ಮೇಲ್ಮನೆ ಈಗ ಕುಟುಂಬದವರ ಆಸ್ತಿಯಾಗುವತ್ತ ಹೆಜ್ಜೆ ಇಟ್ಟಿದೆ.

ಬಿಜೆಪಿ, ಕಾಂಗ್ರೆಸ್ ಭೇದವೆಣಿಸದೇ ಎಲ್ಲರೂ ಕುಟುಂಬದವರನ್ನೇ ಗೆಲ್ಲಿಸಲು ಪಣತೊಟ್ಟಿದ್ದಾರೆ. ಸ್ಥಳೀಯ ಸಂಸ್ಥೆಗಳಿಂದ ಆಯ್ಕೆಯಾಗುವ ಸದಸ್ಯರ ಪೈಕಿ ಕುಟುಂಬದವರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

- ದೇವೇಗೌಡರ ಕುಟುಂಬದ ಸೂರಜ್ ರೇವಣ್ಣ
- ವಿಧಾನಸಭೆಯಲ್ಲಿ ಕಾಂಗ್ರೆಸ್‌ನ ಸತೀಶ ಜಾರಕಿಹೊಳಿ, ಬಾಲಚಂದ್ರ ಜಾರಕಿಹೊಳಿ ಸದಸ್ಯರಾಗಿದ್ದಾರೆ. ಮತ್ತೊಬ್ಬ ತಮ್ಮ ಲಖನ್ ಜಾರಕಿಹೊಳಿ ಈಗ ಮೇಲ್ಮನೆ ಪ್ರವೇಶಿಸಿದ್ದಾರೆ.
- ಬಿಜೆಪಿ ಶಾಸಕ ಜಗದೀಶ ಶೆಟ್ಟರ್ ತಮ್ಮ ಪ್ರದೀಪ್ ಶೆಟ್ಟರ್ ಮತ್ತೊಮ್ಮೆ ಆಯ್ಕೆಯಾಗಿದ್ದಾರೆ.
- ಮಡಿಕೇರಿ ಬಿಜೆಪಿ ಶಾಸಕ ಅಪ್ಪಚ್ಚು ರಂಜನ್ ತಮ್ಮ ಸುನಿಲ್ ಸುಬ್ರಮಣಿ ಸದ್ಯ ಮೇಲ್ಮನೆಯ ಸದಸ್ಯರಾಗಿದ್ದಾರೆ. ಈ ಬಾರಿ ಅವರ ಬದಲು ಮತ್ತೊಬ್ಬ ತಮ್ಮ ಸುಜಾ ಕುಶಾಲಪ್ಪ ಮೇಲ್ಮನೆಗೆ ಬಂದಿದ್ದಾರೆ.
- ಡಿ.ಕೆ.ಶಿವಕುಮಾರ್ ತಮ್ಮ ಸೋದರ ಸಂಬಂಧಿ ಎಸ್.ರವಿಯನ್ನು ಗೆಲ್ಲಿಸಿಕೊಂಡಿದ್ದಾರೆ.
- ಕಾಂಗ್ರೆಸ್ ಶಾಸಕ ಎಂ.ಬಿ.ಪಾಟೀಲರ ತಮ್ಮ ಸುನೀಲ್‌ಗೌಡ ಪಾಟೀಲ ಮತ್ತೊಮ್ಮೆ ಚುನಾಯಿತರಾಗಿದ್ದಾರೆ.
- ಕಾಂಗ್ರೆಸ್ ಶಾಸಕ ಅಮರೇಗೌಡ ಬಯ್ಯಾಪುರ ಅವರ ತಮ್ಮನ ಮಗ ಶರಣಗೌಡ ಪಾಟೀಲ ಬಯ್ಯಾಪುರ ಕೊಪ್ಪಳದಿಂದ ಆಯ್ಕೆಯಾಗಿದ್ದಾರೆ.
- ಕಾಂಗ್ರೆಸ್ ಶಾಸಕಿ ಲಕ್ಷ್ಮಿಹೆಬ್ಬಾಳ್ಕರ್ ಅವರ ತಮ್ಮ ಚನ್ನರಾಜ ಹಟ್ಟಿಹೊಳಿ ಬೆಳಗಾವಿಯಿಂದ ಚುನಾಯಿತರಾಗಿದ್ದಾರೆ.
- ತುಮಕೂರಿನಲ್ಲಿ ಕಾಂಗ್ರೆಸ್‌ನ ಮಾಜಿ ಶಾಸಕ ಕೆ.ಎನ್.ರಾಜಣ್ಣ ಅವರ ಪುತ್ರ ಆರ್.ರಾಜೇಂದ್ರ ಗೆದ್ದಿದ್ದಾರೆ.

- ವಿಧಾನಪರಿಷತ್ತನ್ನು ಬಹುಕಾಲ ಪ್ರತಿನಿಧಿಸಿ ಸಭಾಪತಿಯಾಗಿದ್ದ ಡಿ.ಹೆಚ್.ಶಂಕರಮೂರ್ತಿ ಮಗ ಡಿ.ಎಸ್.ಅರುಣ್ ಶಿವಮೊಗ್ಗದಿಂದ ವಿಜೇತರಾಗಿದ್ದಾರೆ.
- ಬಿಜೆಪಿ ರಾಷ್ಟ್ರೀಯ ಕಾರ್ಯದರ್ಶಿ, ಶಾಸಕ ಸಿ.ಟಿ.ರವಿ ಅವರ ಹತ್ತಿರದ ಸಂಬಂಧಿ ಉಪ ಸಭಾಪತಿಯಾಗಿರುವ ಎಂ.ಕೆ.ಪ್ರಾಣೇಶ್ ಪುನರಾಯ್ಕೆಯಾಗಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:15.12.2021

## 89. ಡಬಲ್ ಇಂಜಿನ್ ಸರ್ಕಾರ ಡಬಲ್ ಅನ್ಯಾಯ

ಅತಿವೃಷ್ಟಿ, ನೆರೆಹಾವಳಿಯಿಂದ ಜನರು ತತ್ತರಿಸಿದ್ದು, ಮನೆ ಕಳೆದುಕೊಂಡವರಿಗೆ ರಾಜ್ಯ ಸರ್ಕಾರ ಪರಿಹಾರ ನೀಡಿಲ್ಲ. ಕೇಂದ್ರದಿಂದಲೂ ನಯಾ ಪೈಸೆ ನೆರವು ಸಿಕ್ಕಿಲ್ಲ. ಡಬ್ಬಲ್ ಇಂಜಿನ್ ಸರ್ಕಾರದಿಂದ ಡಬ್ಬಲ್ ಅನ್ಯಾಯವಾಗಿದೆ ಎಂದು ವಿಧಾನ ಸಭೆಯಲ್ಲಿ ಪ್ರತಿ ಪಕ್ಷ ನಾಯಕ ಸಿದ್ದರಾಮಯ್ಯ ವಾಗ್ದಾಳಿ ನಡೆಸಿದರು. ಸಾಮಾಜಿಕ ಮಹತ್ವದ ಜರೂರು ವಿಷಯದಡಿ ಚರ್ಚೆ ಮುಂದುವರಿಸಿದ ಅವರು ಅತಿವೃಷ್ಟಿ ಹಾಗೂ ಪ್ರವಾಹ ತಂದಿತ್ತ ಕಷ್ಟ–ನಷ್ಟ ಸರ್ಕಾರ ಸ್ಪಂದಿಸಿದ ರೀತಿಯ ಬಗ್ಗೆ ಅಂಕಿ–ಅಂಶಗಳ ಸಹಿತ ಎಳೆ ಎಳೆಯಾಗಿ ಬಿಚ್ಚಿಟ್ಟು ಡಬಲ್ ಇಂಜಿನ್ ಸರ್ಕಾರ ಡಬಲ್ ಧೋಖಾ ಎಂದು ತಿವಿದರು. ರಾಜ್ಯದ 25 ಲೋಕಸಭೆ ಸದಸ್ಯರು ಧ್ವನಿ ಎತ್ತಲಿಲ್ಲ. ರಾಜ್ಯ ಸರ್ಕಾರವು ಕೇಂದ್ರಕ್ಕೆ ಒತ್ತಡ ಹೇರದ ಪರಿಣಾಮ ನೊಂದವರಿಗೆ ಸಕಾಲಕ್ಕೆ ನೆರವು ನೀಡುವಲ್ಲಿ ವಿಫಲವಾಗಿದೆ. ಅದೇನು ಮಾಡುತ್ತೀರೋ ಗೊತ್ತಿಲ್ಲ. ಕೇಂದ್ರದಿಂದ ಅನುದಾನ ತರಿಸಿಕೊಳ್ಳುವುದು ನಿಮ್ಮ ಜವಾಬ್ದಾರಿ. ತಕ್ಷಣವೇ ಬೆಳೆ ಹಾಗೂ ಮನೆ ಕಳೆದುಕೊಂಡವರಿಗೆ ಪರಿಹಾರ ವಿತರಿಸಬೇಕು ಎಂದು ಆಗ್ರಹಿಸಿದರು. ಕೃಷಿ ನೀರಾವರಿ ಮತ್ತು ಬಹು ವಾರ್ಷಿಕ ಬೆಳೆಗಳಿಗೆ ನಿಗದಿಪಡಿಸಿದ ಹೆಕ್ಟೇರ್‌ವಾರು ಪರಿಹಾರ ಮೊತ್ತ ಮೂರು ಪಟ್ಟು ಹೆಚ್ಚಿಸಬೇಕು. 10 ಲಕ್ಷ ರೈತರಿಗೆ ರೂ.700 ಕೋಟಿ ಬೆಳೆ ಪರಿಹಾರ ವಿತರಿಸಿದ್ದೇವೆ ಎಂದು ಸರ್ಕಾರ ಹೇಳಿದ್ದು, ಉಳಿದಿರುವ 10 ಲಕ್ಷ ರೈತರಿಗೂ ನೆರವು ನೀಡಬೇಕು. ಮನೆ ಕಳೆದುಕೊಂಡವರ ನೆರವಿಗೂ ತುರ್ತಾಗಿ ಧಾವಿಸಬೇಕು, 2019ರಲ್ಲಿ ಬಿದ್ದ ಮನೆಗಳಿಗೂ ಪರಿಹಾರ ಸಿಗದ ಸಂತ್ರಸ್ತರು ಆತ್ಮಹತ್ಯೆ ಬೆದರಿಕೆ ಹಾಕಿದ್ದು, ಸರ್ಕಾರ ಗಂಭೀರವಾಗಿ ಪರಿಗಣಿಸಬೇಕು ಎಂದು ಸಿದ್ದರಾಮಯ್ಯ ಒತ್ತಾಯಿಸಿದರು.

**ಡಬ್ಬಲ್ ಮೋಸ:** ಕೇಂದ್ರದಲ್ಲೂ ನಾವೇ, ರಾಜ್ಯದಲ್ಲೂ ನಾವೇ ಅಧಿಕಾರಕ್ಕೆ ಬಂದರೆ ಸ್ವರ್ಗವೇ ಸೃಷ್ಟಿಸುತ್ತೇವೆ ಎಂದು ಹೇಳಿಕೊಂಡಿದ್ದರು. ಆದರೆ ವಿವಿಧ ತೆರಿಗೆಗಳ ರೂಪದಲ್ಲಿ ಕೇಂದ್ರದ ಬೊಕ್ಕಸಕ್ಕೆ ರೂ.3 ಲಕ್ಷ ಕೋಟಿ ರಾಜ್ಯದಿಂದ ಜಮೆಯಾಗಿದ್ದರೆ, ಕೇಂದ್ರದ ಪಾಲು ಮತ್ತು ಅನುದಾನ ಸೇರಿ ರೂ.55.00 ಕೋಟಿ ನೀಡಿದೆ. ಕೇಂದ್ರದ ತೆರಿಗೆ ಹಂಚಿಕೆ ನಿಗದಿ ಪ್ರಮಾಣದಲ್ಲೂ ಕಳೆದೆರಡು ವರ್ಷಗಳಲ್ಲಿ ರೂ.18,000 ಕೋಟಿ ಖೋತಾ ಆಗಿದೆ. ಹಾಗೆಯೇ 15ನೇ ಹಣಕಾಸು ಆಯೋಗ ಶಿಫಾರಸ್ಸಿನಂತೆ ಮಧ್ಯಂತರ ಪರಿಹಾರವಾಗಿ ರೂ.5,495 ಕೋಟಿ ಕೊಡಲಿಲ್ಲ. ರಾಜ್ಯ ಸರ್ಕಾರಕ್ಕೂ ಕೇಳುವ ಧಮ್ ಇಲ್ಲ. ಕೇಂದ್ರ ಪುರಸ್ಕೃತ ಯೋಜನೆಯಡಿ ಕೇಂದ್ರದ ಪಾಲು ಶೇ.75 ರಿಂದ 45ಕ್ಕೆ ಕುಸಿದಿದೆ ಎಂದು ಸಿದ್ದರಾಮಯ್ಯ ಕಿಡಿಕಾರಿದರು.

ಆಧಾರ:ವಿಜಯವಾಣಿ, ದಿನಾಂಕ:15.12.2021

## 90. ಉತ್ತರವನ್ನೇ ಮರೆತ ಅಧಿವೇಶನ

ಉತ್ತರ ಕರ್ನಾಟಕದ ಸಮಸ್ಯೆಗಳಿಗೆ ಧ್ವನಿಯಾಗಬೇಕು ಎಂಬ ಉದ್ದೇಶದಿಂದ ನಿರ್ಮಾಣಗೊಂಡಿರುವ ಸುವರ್ಣ ವಿಧಾನ ಸೌಧದಲ್ಲಿ ನಡೆಯುತ್ತಿರುವ ಈ ಬಾರಿಯ ಚಳಿಗಾಲದ

ಅಧಿವೇಶನ ಕಿತ್ತೂರು ಮತ್ತು ಕಲ್ಯಾಣ ಕರ್ನಾಟಕದ ಜನರ ಆಶೋತ್ತರಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದೆ.

ಅಧಿವೇಶನ ಆರಂಭಗೊಂಡ ಕಳೆದ ಐದು ದಿನಗಳಲ್ಲಿ ಮಳೆ ಹಾನಿ ಹೊರತುಪಡಿಸಿ ಉತ್ತರದ ಯಾವ ವಿಚಾರವು ಪ್ರಧಾನವಾಗಿ ಚರ್ಚೆಯಾಗಿಲ್ಲ. ಈಗ ನಡೆಯುತ್ತಿರುವ ರಾಜಕೀಯ ಜಿದ್ದಾಜಿದ್ದಿ ಮುಂದೆ ನಡೆಯಬಹುದಾದ ವಿದ್ಯಮಾನಗಳು, ವಿಧೇಯಕಗಳ ಮಂಡನೆ ಸಾಧ್ಯತೆಗಳನ್ನು ಗಮನಿಸಿದರೆ ಮುಂದಿನ ಐದು ದಿನಗಳಲ್ಲೂ ಅವಕಾಶ ಸಿಗುವುದು ಅಸಾಧ್ಯ ಎಂಬಂತಿದೆ.

ಉತ್ತರ ಕರ್ನಾಟಕದ ಜನರನ್ನು ಹೈರಾಣಾಗಿಸಿದ ಮಳೆಯ ನೆರೆ ಹಾನಿಯು ಉಭಯ ಸದನಗಳಲ್ಲಿ ಪ್ರತಿಧ್ವನಿಸಿದರೂ ಇದಕ್ಕೊಂದು ತಾರ್ಕಿಕ ಅಂತ್ಯ ದೊರೆತಿಲ್ಲ. ಮುಖ್ಯಮಂತ್ರಿಗಳ ಉತ್ತರವೂ ಮುಂದೂಡಲ್ಪಟ್ಟಿದೆ. ಮಳೆ ಸಮಸ್ಯೆಯೊಂದೇ ಅಲ್ಲ ಉತ್ತರ ಕರ್ನಾಟಕದ ನೀರಾವರಿ ಯೋಜನೆಗಳು, ಎರಡನೇ ಹಂತದ ನಗರಗಳಲ್ಲಿ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಿ ದುಡಿಯುವ ಯುವ ಕೈಗಳಿಗೆ ಉದ್ಯೋಗಾವಕಾಶ ಕಲ್ಪಿಸುವುದು, ಗಡಿ ಭಾಷೆ ಕುರಿತ ಸಮಸ್ಯೆಗಳ ಚರ್ಚೆಗೆ ಆದ್ಯತೆ ಸಿಗದಂತಾಯಿತು. ಭೂಕಬಳಿಕೆ, ಹಕ್ಕುಚ್ಯುತಿ ಅನಗತ್ಯ ವಿಚಾರಗಳ ಬಗ್ಗೆಯೇ ಮಾತಿನಲ್ಲಿ ಕಳೆದ ಐದು ದಿನಗಳು ಕಳೆದುಹೋಗಿವೆ. ಮರು ಆರಂಭವಾಗುವ ಅಧಿವೇಶನದಲ್ಲೂ ಇಂಥಹುದೇ ವಿಚಾರಗಳು ಮುಂದುವರೆಯಲಿವೆ. ಶೇ.40 ರಷ್ಟು ಕಮೀಷನ್ ವಿಷಯವನ್ನು ಕಾಂಗ್ರೆಸ್ ಹಿಡಿದುಕೊಂಡಿದ್ದರೆ, ಮತಾಂತರ ನಿಷೇಧ ವಿಧೇಯಕವನ್ನು ಹಿಡಿದುಕೊಂಡು ಬಿಜೆಪಿ ಕಾಯುತ್ತಿದೆ. ಅಭಿವೃದ್ಧಿ ವಿಚಾರಗಳೆಲ್ಲವೂ ಬದಿಗೆ ಸರಿಯುವ ಅಪಾಯದಲ್ಲಿವೆ. ಅಧಿವೇಶನ ಡಿಸೆಂಬರ್ 24ಕ್ಕೆ ಮುಕ್ತಾಯವಾಗಲಿದ್ದು, ಮುಂದುವರಿಯುವ ಲಕ್ಷಣಗಳು ಇಲ್ಲ.

**ಉತ್ತರ ಕನ್ನಡ ಚರ್ಚೆಗೆ ಸಮಯ ಮೀಸಲಿಡಿ**: ಅಭಿವೃದ್ಧಿಗೆ ಹೆಚ್ಚು ಒತ್ತು ಕೊಡಬೇಕು. ಪ್ರಾದೇಶಿಕ ಅಸಮತೋಲನೆ ನಿವಾರಿಸುವ ಬಗ್ಗೆ ಚರ್ಚಿಸಿ ಉತ್ತರ ಕಂಡು ಕೊಳ್ಳಬೇಕಿದ್ದ ಉತ್ತರದ ಅಧಿವೇಶನ ನಿರುತ್ತರವಾಗಿದೆ. ಉತ್ತರ ಕರ್ನಾಟಕ ಮತ್ತು ಕಲ್ಯಾಣ ಕರ್ನಾಟಕದಲ್ಲಿ ಪ್ರತ್ಯೇಕ ರಾಜ್ಯದ ಕೂಗು ಜೀವ ಪಡೆಯುತ್ತಿದ್ದಂತೆಯೇ ಒಂದೆರಡು ಯೋಜನೆ ಪ್ರಕಟಿಸಿ ಜನರ ಮೂಗಿಗೆ ತುಪ್ಪ ಸವರುವ ಕೆಲಸ ಆಗುತ್ತಿದೆ ಎಂದು ಕಲ್ಯಾಣ ಕರ್ನಾಟಕ ಜನಪರ ಸಂಘರ್ಷ ಸಮಿತಿ ಅಧ್ಯಕ್ಷ ಲಕ್ಷ್ಮಣ ದಸ್ತಿ.

**ರೂ.15 ಕೋಟಿ ಖರ್ಚು**:2018ರಲ್ಲಿ ನಡೆದ 10 ದಿನದ ಅಧಿವೇಶನಕ್ಕೆ ಸರ್ಕಾರ ರೂ.13 ಕೋಟಿ ಖರ್ಚು ಮಾಡಿದೆ. ಈ ಬಾರಿ ಅದು ರೂ.15 ಕೋಟಿಗೆ ಏರಿರಬಹುದು. ಇಷ್ಟೆಲ್ಲ ಖರ್ಚು ಮಾಡಿ ಉತ್ತರ ಕರ್ನಾಟಕದ ಬಗ್ಗೆಯೇ ಖರ್ಚು ಇಲ್ಲ ಎಂದರೆ ಹೇಗೆ ಎಂದು ಜನ ಪ್ರಶ್ನಿಸುತ್ತಿದ್ದಾರೆ.

**ಉತ್ತರದ ಪ್ರಮುಖ ಬೇಡಿಕೆಗಳು:**

- ಕಲ್ಯಾಣ ಕರ್ನಾಟಕ ಮತ್ತು ಕಿತ್ತೂರು ಕರ್ನಾಟಕವೆಂದು ನಾಮಕರಣ ಮಾಡುವಾಗ ನೀಡಿದ ಭರವಸೆಯಂತೆ ಕಲ್ಯಾಣ ಕಾರ್ಯಕ್ರಮಗಳು ಬೇಕು.
- ಮಹಾದಾಯಿ ಯೋಜನೆ, ಕೃಷ್ಣಾ ಮೇಲ್ದಂಡೆ ಯೋಜನೆಯ 3ನೇ ಹಂತ ಜಾರಿ, ಕೃಷ್ಣಾ ಕಣಿವೆಯ ಹಲವು ನೀರಾವರಿ ಯೋಜನೆ ಪೂರ್ಣಗೊಳಿಸುವುದು.
- ಕಿತ್ತೂರು ಕರ್ನಾಟಕ ಅಭಿವೃದ್ಧಿ ಮಂಡಳಿ ರಚನೆ, ಕಲ್ಯಾಣ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಹೆಚ್ಚು ಅನುದಾನ ನೀಡುವುದು.
- ಕೇಂದ್ರ ಸರ್ಕಾರದ ಮಹತ್ವದ ಮೆಗಾ ಜವಳಿ ಪಾರ್ಕ್ ಕಲ್ಯಾಣದಲ್ಲಿ ಸ್ಥಾಪನೆ, ಏಮ್ಸ್ ರೈಲ್ವೆ ಡಿವಿಷನ್ ಆರಂಭ.

- ಪ್ರಮುಖ ಕೈಗಾರಿಕೆ ಸ್ಥಾಪಿಸುವುದು ತೊಗರಿಗೆ ರಾಜ್ಯದ ಪ್ರೋತ್ಸಾಹ ಧನ, ಕಬ್ಬು ಬೆಳೆಗಾರರ ಶೋಷಣೆ ತಪ್ಪಿಸಲು ಕ್ರಮ.

ಆಧಾರ:ವಿಜಯ ಕರ್ನಾಟಕ, ದಿನಾಂಕ:15.12.2021

## 91. ಅಧಿಕಾರಿಗಳಿಗೆ ಸಭಾಧ್ಯಕ್ಷರ ಸೂಚನೆ

ತಳಮಟ್ಟದ ಅಧಿಕಾರಿಗಳಿಗೆ ಮನಸೋ ಇಚ್ಛೆ ಕಾರ್ಯನಿರ್ವಹಿಸಲು ಹಿರಿಯ ಅಧಿಕಾರಿಗಳು ಬಿಡಬಾರದು ಎಂದು ಸಭಾಧ್ಯಕ್ಷರು ಸೂಚಿಸಿದರು. ವಿಭಾಗಮಟ್ಟದ ಜಿಲ್ಲಾಮಟ್ಟ, ರಾಜ್ಯಮಟ್ಟದ ಅಧಿಕಾರಿಗಳು, ನೋಡಲ್ ಕಾರ್ಯದರ್ಶಿಗಳು, ತಳಮಟ್ಟದ ಅಧಿಕಾರಿಗಳು ಮನಸೋ ಇಚ್ಛೆ ಕಾರ್ಯನಿರ್ವಹಿಸಿದ ಸಂದರ್ಭದಲ್ಲಿ ಯಾವ ರೀತಿಯ ಸೂಚನೆ ನೀಡಿದ್ದಾರೆ ಎಂದು ಮುಖ್ಯವಾಗುತ್ತದೆ. ಮುಖ್ಯಕಾರ್ಯದರ್ಶಿಯವರಿಗೆ ಹಾಗೂ ಕಾರ್ಯದರ್ಶಿಗಳಿಗೆ ನಿರ್ದೇಶನ ನೀಡುವುದೇನೆಂದರೆ ತಮ್ಮ ತಳ ಮಟ್ಟದ ಅಧಿಕಾರಿಗಳ ನಡವಳಿಕೆ ಕುರಿತು ಕಾಲಕಾಲಕ್ಕೆ ವರದಿಗಳನ್ನು ಪಡೆದುಕೊಂಡು ಅಗತ್ಯ ಸೂಚನೆ, ಸಲಹೆ ನೀಡಿ, ಅವರ ಸೇವಾವಧಿಯಲ್ಲಿ ಉತ್ತಮ ಅಧಿಕಾರಿಯಾಗಲು ಬೇಕಾದ ಮಾರ್ಗದರ್ಶನ ನೀಡಬೇಕು ಎಂದರು.

ಆಧಾರ:ಉದಯವಾಣಿ, ದಿನಾಂಕ:16.12.2021

## 92. ಮೇಲ್ಮನೆ ಕೋಲಾಹಲ

ಸಚಿವರು ಮತ್ತು ಶಾಸಕರೊಬ್ಬರ ಭೂ ಕಬಳಿಕೆ ಬಗ್ಗೆ ನಿಲುವಳಿ ಸೂಚನೆಗೆ ಅವಕಾಶ ನಿರಾಕರಿಸಿದ್ದು ವಿಧಾನಪರಿಷತ್‌ನಲ್ಲಿ ಬಾರಿ ಕೋಲಾಹಲಕ್ಕೆ ಕಾರಣವಾಗಿದ್ದಲ್ಲದೆ, ಸಭಾಪತಿ ಆದೇಶ ಉಲ್ಲಂಘಿಸಿ ಗದ್ದಲ ನಡೆಸಿದ ಕಾಂಗ್ರೆಸ್‌ನ 14 ಶಾಸಕರನ್ನು ಅಮಾನತ್ತುಗೊಳಿಸಲಾಯಿತು.

ಒಂದು ದಿನಕ್ಕೆ ಅಮಾನತ್ತುಗೊಂಡವರಲ್ಲಿ ಪ್ರತಿಪಕ್ಷದ ನಾಯಕ ಅವರೂ ಸೇರಿದ್ದಾರೆ. ಈ ರೀತಿ ಪ್ರತಿ ಪಕ್ಷದ ನಾಯಕರನ್ನು ಸಸ್ಪೆಂಡ್ ಮಾಡಿದ್ದು ಇದೇ ಮೊದಲು ಎನ್ನಲಾಗಿದೆ. ಕಾಂಗ್ರೆಸ್ ಸದಸ್ಯರು ಅಮಾನತ್ತುಗೊಂಡರೂ ಸದನದ ಬಾವಿಯನ್ನೂ ಬಿಟ್ಟು ಹೊರಹೋಗಲಿಲ್ಲ. ಕೊನೆಗೆ ಸದನದ ಕಲಾಪವನ್ನೇ ಮುಂದೂಡಲಾಯಿತು.

ಬೆಳೆಗ್ಗೆ ಕಲಾಪ ಪ್ರಾರಂಭವಾಗುತ್ತಿದ್ದಂತೆ ಒಬ್ಬರು ಸಚಿವರು, ಶಾಸಕರ ಭೂ ಕಬಳಿಕೆ ಪ್ರಕರಣವೊಂದಕ್ಕೆ ಸಂಬಂಧಿಸಿ ಕಾಂಗ್ರೆಸ್‌ನ ಎಂ.ನಾರಾಯಣಸ್ವಾಮಿ ನಿಲುವಳಿ ಸೂಚನೆ ಮಂಡನೆಗೆ ಪಟ್ಟು ಹಾಕಿದರು. ಪ್ರಶ್ನೋತ್ತರ, ಶೂನ್ಯ ವೇಳೆ ಬಳಿಕ ಅನುಮತಿ ನೀಡುವುದಾಗಿ ಸಭಾಪತಿಯವರು ಹೇಳಿದ್ದು ಪ್ರಯೋಜನವಾಗಲಿಲ್ಲ. ಒಂದು ಹಂತದಲ್ಲಿ ಕಾನೂನು ಸಚಿವರ ಮನವಿಯಂತೆ ತಮ್ಮ ಸದಸ್ಯರನ್ನು ಎಸ್.ಆರ್.ಪಾಟೀಲ್ ಮನವೊಲಿಸಿದ್ದರು. ಅದು ಹೆಚ್ಚು ಹೊತ್ತು ಉಪಯೋಗಕ್ಕೆ ಬರಲಿಲ್ಲ.

ನಿಲುವಳಿ ಮಂಡನೆಗೆ ಸರ್ಕಾರ ಆಕ್ಷೇಪಿಸಿತು. ಇದೊಂದು ಕ್ರಿಮಿನಲ್ ಕೇಸ್ ಕೋರ್ಟ್‌ನಲ್ಲಿ ವಿಚಾರಣೆ ನಡೆಯುತ್ತಿದೆ. ಚರ್ಚೆಗೆ ಅವಕಾಶ ನೀಡುವುದಿಲ್ಲವೆಂದು ಸಭಾಪತಿ ರೂಲಿಂಗ್ ಕೊಟ್ಟರು.

ಸಭಾಪತಿ ರೂಲಿಂಗ್ ವಿರೋಧಿಸಿ ಕಾಂಗ್ರೆಸ್ ಸದಸ್ಯರು ಧರಣಿ ನಡೆಸಿದರು. ಭೋಜನ ವಿರಾಮದ ಬಳಿಕವೂ ತಿಳಿಗೊಳ್ಳಲಿಲ್ಲ. ಈ ಮಧ್ಯೆ ಸದನದ ನಿಯಮಾವಳಿ 326, 327ರ ಅನುಸಾರ ಆಗ್ರಹಿಸಿದರು. ಸಭಾಪತಿ ಎಚ್ಚರಿಕೆಯನ್ನೂ ಹಗುರವಾಗಿ ಪರಿಗಣಿಸಿದ್ದರಿಂದ ಕಾಂಗ್ರೆಸ್‌ನ 14 ಸದಸ್ಯರನ್ನು ದಿನದ ಮಟ್ಟಿಗೆ ಅಮಾನತ್ತುಗೊಳಿಸಲಾಯಿತು. ಅಮಾನತ್ತಿನ ನಂತರ ಸದಸ್ಯರು ಕಲಾಪದಿಂದ ಹೊರಹೋಗುತ್ತಾರೆ. ಈ ಬಗ್ಗೆ ಸಭಾಪತಿ ಸೂಚಿಸಿದರೂ ಬಾವಿಯಲ್ಲೇ ಉಳಿದು ಘೋಷಣೆ ಕೂಗುತ್ತಲೇ ಇದ್ದರು. ಅನ್ಯಮಾರ್ಗವಿಲ್ಲದೇ ಸಭಾಪತಿ ಅವರು ಕಲಾಪವನ್ನು ಮುಂದೂಡಿದರು.

**ವಾದ–ಪ್ರತಿವಾದ:** ಒಬ್ಬರು ಸಚಿವರು, ಮತ್ತೊಬ್ಬರು ಶಾಸಕರ ವಿರುದ್ಧ ಭೂ ಕಬಳಿಕೆ ಪ್ರಕರಣದಲ್ಲಿ ಕೋರ್ಟ್ ಆದೇಶ ನೀಡಿದೆ. ಸೆಕ್ಷನ್ 120ಬಿ, 420, 467,477 ಅನ್ವಯ ಕ್ರಮಕ್ಕೆ ಕೋರ್ಟ್ ಸೂಚಿಸಿದೆ. ಈ ಬಗ್ಗೆ ಚರ್ಚೆಯಾಗಬೇಕು ಎಂದರು. ಮಧ್ಯ ಪ್ರವೇಶಿಸಿದ ಕಾನೂನು ಸಚಿವರು ಇದು ಕ್ರಿಮಿನಲ್ ಮೊಕದ್ದಮೆ ಇಂಥ ವಿಚಾರದ ಚರ್ಚೆಗೆ ಅವಕಾಶ ನೀಡಿದರೆ ಮುಂದೆ ಕೊಲೆ ಪ್ರಕರಣಗಳ ಬಗ್ಗೆ ಪ್ರಸ್ತಾಪಿಸುವ ಸನ್ನಿವೇಶ ಬರಬಹುದು ಎಂದು ವಿರೋಧಿಸಿದರು. ಕ್ರಿಮಿನಲ್ ಮೊಕದ್ದಮೆ ಹೊರತುಪಡಿಸಿದ ಪ್ರಕರಣ ನಿಲುವಳಿಗೆ ಯೋಗ್ಯ. ಆದರೆ, ಇಲ್ಲಿ ನೈತಿಕತೆ ಪ್ರಶ್ನೆ ಬರುತ್ತದೆ. ಈ ಬಗ್ಗೆ ಯೋಚಿಸಬೇಕು ಎಂದು ಎಸ್.ಆರ್.ಪಾಟೀಲ್ ಮಾರ್ಮಿಕವಾಗಿ ಹೇಳಿದರು. ಈ ಹೊಡೆದಾಟದಲ್ಲಿ ಆಡಳಿತ–ಪ್ರತಿಪಕ್ಷದ ಸದಸ್ಯರು ಪರಸ್ಪರ ದೋಷಾರೋಪಣೆ ಮಾಡಿಕೊಂಡರು. ಸೋಮಣ್ಣ ಕೂಡ ಪರಿಸ್ಥಿತಿ ನಿಯಂತ್ರಿಸಲು ಯತ್ನಿಸಿದರು. ಕಾಂಗ್ರೆಸ್ ಸದಸ್ಯರ ವಿರುದ್ಧ ಕ್ರಮಕ್ಕೆ ಬಿಜೆಪಿಯ ಎನ್.ರವಿಶಂಕರ್ ದೊಡ್ಡ ಧ್ವನಿಯಲ್ಲಿ ಆಗ್ರಹಿಸಿದರು. ಒಂದು ಹಂತದಲ್ಲಿ ಬೇಸತ್ತ ಸಭಾಪತಿ ಅವರು ಸಭಾಪತಿ ಸ್ಥಾನದಲ್ಲಿ ಸದಸ್ಯೆ ತೇಜಸ್ವಿ ಅವರನ್ನು ಕುಳ್ಳಿರಿಸಿ ಹೋದರು. ಕೋಟಾ ಶ್ರೀನಿವಾಸ ಪೂಜಾರಿ ಮತ್ತು ಎಸ್.ಆರ್.ಪಾಟೀಲ್ ಅವರನ್ನು ಕರೆಸಿಕೊಂಡ ಹೊರಟ್ಟಿ ಸಂಧಾನ ಮಾತುಕತೆ ನಡೆಸಿದರು. ಅದರಂತೆ ದಿನದ ಕಲಾಪವನ್ನು ಸಮಾಪ್ತಿಗೊಳಿಸಲಾಯಿತು.

**ಮಾರ್ಷಲ್‌ಗಳ ಎಂಟ್ರಿ:** ಅಮಾನತ್ತುಗೊಂಡ ಬಳಿಕವು ಕಾಂಗ್ರೆಸ್ ಹೊರ ಹೋಗದೆ ಪ್ರತಿಭಟನೆಯಲ್ಲಿ ನಿರತರಾದರು. ಆಗ ಮಾರ್ಷಲ್‌ಗಳು ಸದನದ ಒಳ ಪ್ರವೇಶಿಸಿದರು. ಇದನ್ನು ಬಿ.ಕೆ.ಹರಿಪ್ರಸಾದ್ ಸೇರಿದಂತೆ ಕಾಂಗ್ರೆಸ್ ಸದಸ್ಯರು ತೀವ್ರವಾಗಿ ವಿರೋಧಿಸಿದರು. ಆಗ ಮಾರ್ಷಲ್‌ಗಳು ಕೂಡ ಹೊರ ನಡೆದರು.

**ಆಕ್ಷೇಪ:** ತೇಜಸ್ವಿನಿಗೌಡ ಪೀಠದಲ್ಲಿದ್ದಾಗ ಭಗವದ್ಗೀತೆ ಆದರ್ಶದಂತೆ ನಡೆದುಕೊಳ್ಳಲು ಮನವಿ ಮಾಡಿಕೊಂಡರು. ಇದಕ್ಕೆ ಆಕ್ಷೇಪಿಸಿದ ಕಾಂಗ್ರೆಸ್, ಬಿ.ಕೆ.ಹರಿಪ್ರಸಾದ್ ಸಂವಿಧಾನವೇ ಈ ಸದನದ ಬೈಬಲ್, ಖುರಾನ್, ಭಗವದ್ಗೀತೆ ಎಲ್ಲ ಎಂದು ಏರುದನಿಯಲ್ಲಿ ಹೇಳಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:16.12.2021

## 93. ಹಕ್ಕುಚ್ಯುತಿ ತಂದ ಕೋಲಾಹಲ, ಧರಣಿ

ಸಂಡೂರು ತಹಶೀಲ್ದಾರ್ ಹೆಚ್.ಜಿ.ರಶ್ಮಿ ವಿರುದ್ಧ ಕಾಂಗ್ರೆಸ್‌ನ ಇ.ತುಕಾರಾಂ ಮಂಡಿಸಿದ ಹಕ್ಕುಚ್ಯುತಿಯು ವಿಧಾನಸಭೆಯಲ್ಲಿ ಕೋಲಾಹಲದ ಸ್ಥಿತಿ ನಿರ್ಮಿಸಿತು. ಕಾಂಗ್ರೆಸ್‌ನ ಒತ್ತಡಕ್ಕೆ ಮಣಿದ ಸರ್ಕಾರ ಅಧಿಕಾರಿಯನ್ನು ತಕ್ಷಣವೇ ಸೇವೆಯಿಂದ ಬಿಡುಗಡೆಗೊಳಿಸಿ ಯಾವುದೇ ಹುದ್ದೆ ತೋರಿಸದೆ ತನಿಖೆ ನಡೆಸುವುದಾಗಿ ಭರವಸೆ ನೀಡಿದ ನಂತರ ಗದ್ದಲಕ್ಕೆ ತೆರೆ ಬಿತ್ತು.

ಆರೋಪ–ಪ್ರತ್ಯಾರೋಪಗಳ ನಡುವೆ ಪ್ರತಿಪಕ್ಷಗಳ ಸದಸ್ಯರು ಸದನದ ಬಾವಿಗಿಳಿದು ಪ್ರತಿಭಟನೆ ನಡೆಸಿದ್ದರಿಂದ ಕಲಾಪವನ್ನು 10 ನಿಮಿಷ ಮುಂದೂಡಿದ ಪ್ರಸಂಗವು ನಡೆಯಿತು.

ಅಧಿಕಾರಿಯ ಹೆಸರು ಉಲ್ಲೇಖಿಸದೆ ಹಕ್ಕುಚ್ಯುತಿ ಪ್ರಸ್ತಾವ ಮಂಡಿಸಿದ ತುಕಾರಾಂ, ಎರಡು ವರ್ಷದಿಂದ ತಾಲ್ಲೂಕಿನಲ್ಲಿರುವ ತಹಶೀಲ್ದಾರ್ ಸಂವಿಧಾನಕ್ಕೆ ಅಗೌರವ, ಜನರಿಗೆ ದೊಣ್ಣೆ ಹಿಡಿದು ಹೆದರಿಸುವ ಕಾರ್ಯದಲ್ಲಿದ್ದಾರೆ. ಸಿಬ್ಬಂದಿಯೊಂದಿಗೆ ಸೀಟಿ ಹಾಕುತ್ತಾ ಪಾರ್ಟಿ ಮಾಡುತ್ತಿದ್ದಾರೆ. ಸರ್ಕಾರಿ ಕಾರ್ಯಕ್ರಮದ ಆಹ್ವಾನ ಪತ್ರಿಕೆಯಲ್ಲಿ ಶಾಸಕನಾದ ನನ್ನ ಹೆಸರು ಹಾಕದೇ ಕೇವಲ ಶಾಸಕ ಎಂದು ನಮೂದಿಸಿ ಅವಮಾನ ಮಾಡಿದ್ದಾರೆ. ಇದು ನನ್ನ ಹಕ್ಕುಚ್ಯುತಿಯಾಗಿದೆ ಎಂದು ಎಳೆಎಳೆಯಾಗಿ ವಿವರಿಸಿದರು.

ಮಾರ್ಚ್‌ನಿಂದ ಈವರೆಗೆ ಸಿಎಂ ಸೇರಿದಂತೆ ಹಲವರ ಗಮನಕ್ಕೆ ತಂದಿದ್ದೇನೆ. ವಾಲ್ಮೀಕಿ ಜಯಂತಿಗೂ ಆಮಂತ್ರಣವನ್ನು ಮೆಮೋ ರೀತಿ ಕಳುಹಿಸಿದ್ದರು. ಈ ಬಗ್ಗೆ ಕಛೇರಿಗೆ ಹೋಗಿ ಪ್ರಶ್ನಿಸಿದಾಗ ನನಗೆ ಆಡಳಿತ ಕಲಿಸುವ ಅಗತ್ಯವಿಲ್ಲ. ನನಗೆ ಹೇಳಲು ನೀವು ಯಾರು? ಎಂದು ಅವಮಾನಿಸಿದ್ದಾರೆ. ಕೂಡಲೇ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಬೇಕು ಎಂದು ಆಗ್ರಹಿಸಿದರು.

ಆಗ ಜೆ.ಸಿ.ಮಾಧುಸ್ವಾಮಿ ಈ ಬಗ್ಗೆ ತನಿಖೆ ನಡೆಸಿ ಕ್ರಮ ಜರುಗಿಸಲಾಗುವುದು ಎಂದಾಗ ಸಮಾಧಾನಗೊಳ್ಳದ ಪ್ರತಿಪಕ್ಷದ ನಾಯಕರು ನವೆಂಬರ್ 10 ರಂದು ನಾನು ಬರೆದ ಪತ್ರ ಸಂಬಂಧ, ಸಿಎಂ ತಹಶೀಲ್ದಾರ್ ವರ್ಗಾವಣೆಗೆ ಆದೇಶಿಸಿದ್ದಾರೆ. ಹಾಗೆಯೇ ಮಾಧುಸ್ವಾಮಿಯವರು ಶಿಸ್ತುಕ್ರಮಕ್ಕೆ ಶಿಫಾರಸ್ಸು ಮಾಡಿದ್ದಾರೆ. ಹಾಗಿದ್ದರೂ ಕ್ರಮವಾಗಿಲ್ಲ ಎಂದರೆ ಏನರ್ಥ? ಶಾಸಕರನ್ನು ಅವಮಾನಿಸುವ ಅಧಿಕಾರಿಯು ಸರ್ಕಾರಿ ನೌಕರ ಎಂಬುದನ್ನು ಮರೆತಂತಿದೆ. ಸರ್ಕಾರ ಇದನ್ನು ಪ್ರತಿಷ್ಠೆಯಾಗಿ ಸ್ವೀಕರಿಸದೆ ಅಮಾನತ್ತುಪಡಿಸಿ ತನಿಖೆಗೆ ಆದೇಶಿಸಬೇಕು. ಹಾಗೆಯೇ ಹಕ್ಕುಚ್ಯುತಿ ಸಮಿತಿಗೆ ಶಿಫಾರಸ್ಸು ಮಾಡಬೇಕು ಎಂದು ಒತ್ತಾಯಿಸಿದರು.

ಮಧ್ಯೆ ಪ್ರವೇಶಿಸಿದ ಬಸವರಾಜ ಬೊಮ್ಮಾಯಿ ಅವರು ತುಕಾರಾಂ ಒಳ್ಳೆಯ ಗೆಳೆಯ ಆಕ್ಟಿವ್ ಶಾಸಕರು. ಕೆಲವೊಮ್ಮೆ ಓವರ್ ಆಕ್ಟಿವ್ ಆಗುತ್ತಾರೆ ಎಂದಷ್ಟೇ ಹೇಳುತ್ತೇನೆ. ಸರ್ಕಾರ ಇದನ್ನು ಗಂಭೀರವಾಗಿ ಪರಿಗಣಿಸಿದ್ದು, ವರ್ಗಾವಣೆ ಮಾಡಿ ತನಿಖೆ ನಡೆಸಿ ಕ್ರಮ ಕೈಗೊಳ್ಳಲಾಗುವುದು ಎಂದು ಭರವಸೆ ನೀಡಿದರು.

**ಎರಡು ತನಿಖೆ ಬೇಡ:** ಈ ನಡುವೆ ಸಭಾಧ್ಯಕ್ಷರವರು ಹಕ್ಕುಚ್ಯುತಿ ಸಮಿತಿಗೂ ಶಿಫಾರಸು ಮಾಡುವೆ ಎಂದು ಹೇಳಿದರು. ಆಗ ಬೊಮ್ಮಾಯಿ ಅವರು ಎರಡು ತನಿಖೆ ಬೇಡ. ಒಂದು ತನಿಖೆಯಾಗಲಿ ಎಂದು ಅಭಿಪ್ರಾಯಪಟ್ಟರು. ಇದಕ್ಕೆ ದನಿಗೂಡಿಸಿದ ಮಾಧುಸ್ವಾಮಿ ಹಕ್ಕುಚ್ಯುತಿ ಸಮಿತಿಗೆ ಶಿಫಾರಸ್ಸು ಮಾಡಿದರೆ ನಾವು ತನಿಖೆಗೆ ಸೂಚಿಸುವುದಿಲ್ಲ ಎಂದು ಪಟ್ಟು ಹಿಡಿದರು. ಅದಕ್ಕೆ ಕೆ.ಆರ್.ರಮೇಶ್ ಕುಮಾರ್ ಮೇಲ್ನೋಟಕ್ಕೆ ಲೋಪವಾಗಿರುವುದು ಕಂಡುಬಂದರೆ ಅಧಿಕಾರಿಯನ್ನು ಅಮಾನತ್ತಿನಲ್ಲಿಡಬಹುದು ಎಂದು ಸಲಹೆ ನೀಡಿದರು.

ಸಿದ್ದರಾಮಯ್ಯ ಮಾತನಾಡಿ ಜುಜುಬಿ ತಹಶೀಲ್ದಾರ್ ವಿರುದ್ದ ಕ್ರಮ ಸಾಧ್ಯವಿಲ್ಲ ಎಂದರೆ ಏನರ್ಥ? ಕೂಡಲೇ ಅವರನ್ನು ಅಮಾನತ್ತುಪಡಿಸಿ ಶಿಸ್ತು ಕ್ರಮ ಜರುಗಿಸಬೇಕು ಎಂದು ಪುನರುಚ್ಚರಿಸಿದರು.

ಸರ್ಕಾರದ ಭರವಸೆಯಿಂದ ತೃಪ್ತರಾಗದ ತುಕಾರಾಂ ಧರಣಿಗೆ ಮುಂದಾದರು. ಆಗ ಕಾಂಗ್ರೆಸ್ ಜೊತೆಗೆ ಜೆಡಿಎಸ್ ಸದಸ್ಯರು ಸಾಥ್ ನೀಡಿದರು. ಬಾವಿಯಲ್ಲಿದ್ದ ಪ್ರಿಯಾಂಕ ಖರ್ಗೆ ಅಸಹಾಯಕ ಸಿಎಂ ಎಂದು ಕೆಣಕಿದರು. ಅದಕ್ಕೆ ಕೋಪಗೊಂಡ ಸಿಎಂ ನೀತಿ ಸಂಹಿತೆ ಜಾರಿಯಲ್ಲಿದ್ದ ಕಾರಣ ವರ್ಗಾವಣೆಯಾಗಿಲ್ಲ. ಇವರೇನು ಜ್ಞಾನ, ಪರಿಜ್ಞಾನವಿಲ್ಲದೆ ಮಾತನಾಡುತ್ತಿದ್ದಾರೆ. ನೀವು ಹೇಳುವುದನ್ನೆಲ್ಲಾ ಕೇಳಲಾಗದು ಎಂದು ಹೇಳಿದರು. ಇದರಿಂದ ಗದ್ದಲ ಹೆಚ್ಚಾಗುತ್ತಿದ್ದಂತೆ ಸಭಾಧ್ಯಕ್ಷರು ಕಲಾಪವನ್ನು 10 ನಿಮಿಷ ಮುಂದೂಡಿದರು. ನಂತರ ಸಭಾಧ್ಯಕ್ಷರು ಉಭಯ ಪಕ್ಷಗಳ ಹಿರಿಯ ನಾಯಕರೊಂದಿಗೆ ಸಭೆ ನಡೆಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:16.12.2021

## 94. ಭೈರತಿ ರಾಜೀನಾಮೆಗೆ ಕಾಂಗ್ರೆಸ್ ಆಗ್ರಹ

ನಗರಾಭಿವೃದ್ಧಿ ಸಚಿವರ ವಿರುದ್ಧ ಭೂಅಕ್ರಮ ಪ್ರಕರಣವೊಂದರಲ್ಲಿ ಎಫ್‌ಐಆರ್ ದಾಖಲಿಸಲು ನ್ಯಾಯಾಲಯ ಆದೇಶಿಸಿರುವ ಹಿನ್ನೆಲೆಯಲ್ಲಿ ಅವರು ಕೂಡಲೇ ತಮ್ಮ ಸ್ಥಾನಕ್ಕೆ ರಾಜೀನಾಮೆ

ನೀಡಬೇಕೆಂದು ವಿಧಾನ ಪರಿಷತ್ತಿನ ಕಾಂಗ್ರೆಸ್ ಸದಸ್ಯರಾದ ಎಂ.ನಾರಾಯಣಸ್ವಾಮಿ, ಬಿ.ಕೆ.ಹರಿಪ್ರಸಾದ್ ಹಾಗೂ ಪಿ.ಆರ್.ರಮೇಶ್ ಆಗ್ರಹಿಸಿದ್ದಾರೆ.

ಸುವರ್ಣಸೌಧದಲ್ಲಿ ಜಂಟಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಬೆಂಗಳೂರಿನ ಕಲ್ಕೆರೆ ಹೋಬಳಿಯ ಹಲವರು ಸರ್ವೆ ನಂಬರುಗಳ ಮಾಲೀಕರಾದ ಅಣ್ಣಯ್ಯಪ್ಪ ಅವರಿಗೆ ಸೇರಿದ 22.43 ಎಕರೆ ಜಮೀನಿನ ನಕಲಿ ದಾಖಲೆ ಸೃಷ್ಟಿಸಿ ಅಕ್ರಮವಾಗಿ ನೋಂದಣಿ ಮಾಡಿಸಿರುವ ಆರೋಪ ಭೈರತಿ ಬಸವರಾಜ ಮೇಲಿದೆ. ಈ ಸಂಬಂಧ ಅಣ್ಣಯ್ಯಪ್ಪ ಅವರ ದಾಖಲಿಸಿರುವ ದೂರಿನ ಪ್ರಕರಣದ ವಿಚಾರಣೆ ನಡೆಸಿರುವ ಮ್ಯಾಜಿಸ್ಟ್ರೇಟ್ ನ್ಯಾಯಾಲಯ ಸಚಿವರನ್ನು ಶಾಸಕರನ್ನು ಸೇರಿದಂತೆ ಐವರ ವಿರುದ್ಧ ಎಫ್ಐಆರ್ ದಾಖಲಿಸಲು ಆದೇಶಿಸಿದೆ. ಇದರಿಂದ ಈ ಭೂ ಅಕ್ರಮದಲ್ಲಿ ಸಚಿವರು ಭಾಗಿಯಾದಂತಾಗಿದೆ. ಕೂಡಲೇ ಅವರು ನೈತಿಕ ಹೊಣೆ ಹೊತ್ತು ಸಚಿವರು ರಾಜೀನಾಮೆ ನೀಡಬೇಕು. ಇಲ್ಲದಿದ್ದರೆ ಸರ್ಕಾರವೇ ಅವರನ್ನು ಸಂಪುಟದಿಂದ ವಜಾಗೊಳಿಸಬೇಕು ಎಂದು ಆಗ್ರಹಿಸಿದರು. ದುರುದ್ದೇಶದಿಂದ ತಮ್ಮ ಹೆಸರು ತಂದಿರುವವರ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡುವುದಾಗಿ ಸಚಿವರ ಹೇಳಿಕೆಗೆ ಪ್ರತಿಕ್ರಿಯಿಸಿದ ಎಂ.ನಾರಾಯಣಸ್ವಾಮಿ ಅವರು ನಾನು ನೇರವಾಗಿ ಆರೋಪ ಮಾಡಿಲ್ಲ. ನ್ಯಾಯಾಲಯದ ಆದೇಶವನ್ನು ಉಲ್ಲೇಖಿಸಿ ಹೇಳಿದ್ದೇನೆ. ಅವರು ಮೊಕದ್ದಮೆ ಹಾಕುವುದಾದರೆ ನ್ಯಾಯಾಲಯದ ವಿರುದ್ಧ ಹಾಕಬೇಕು ಎಂದರು.

**ಹೋರಾಟ ಮುಂದುವರಿಕೆ:** ಭೂ ಅಕ್ರಮ ಪ್ರಕರಣದಲ್ಲಿ ಆರೋಪಿಯಾಗಿರುವ ಸಚಿವರ ರಾಜೀನಾಮೆ ಪಡೆಯದಿದ್ದರೆ ಹೋರಾಟ ಮುಂದುವರಿಸಲಿದ್ದೇವೆ ಎಂದು ವಿಧಾನ ಪರಿಷತ್ ಕಾಂಗ್ರೆಸ್ ಮುಖ್ಯ ಸಚೇತಕರು ಹೇಳಿದ್ದಾರೆ.

ಸುದ್ದಿಗಾರರರೊಂದಿಗೆ ಮಾತನಾಡಿದ ಅವರು ಕೆ.ಆರ್.ಪುರಂ ಭೂ ಅಕ್ರಮ ಪ್ರಕರಣದಲ್ಲಿ ಸುಮಾರು ರೂ.400 ಕೋಟಿ ಭ್ರಷ್ಟಾಚಾರ ನಡೆದಿದೆ. ಹೀಗಾಗಿ ಮುಖ್ಯಮಂತ್ರಿಯವರು ಕೂಡಲೇ ಆ ಸಚಿವರ ರಾಜೀನಾಮೆ ಪಡೆಯಬೇಕು. ಇಲ್ಲವೇ ಸಚಿವ ಸ್ಥಾನದಿಂದ ವಜಾಗೊಳಿಸಬೇಕು. ಆದರೆ ಈ ಸರ್ಕಾರ ಈ ಭ್ರಷ್ಟಮಂತ್ರಿ ಬೆಂಬಲಕ್ಕೆ ಮುಂದಾಗಿರುವುದನ್ನು ನೋಡಿದರೆ ಸರ್ಕಾರ ಕಿಕ್‌ಬ್ಯಾಕ್ ಪಡೆದಿರುವ ಅನುಮಾನವಿದೆ ಎಂದು ಆರೋಪಿಸಿದರು.

ಆಧಾರ:ಕನ್ನಡ ಪ್ರಭ, ದಿನಾಂಕ:16.12.2021

## 95. ಪ್ರತಿಪಕ್ಷಗಳ ವಿರುದ್ಧ ಸಮರ್ಥ ದಾಳಿಗೆ ಮುಖ್ಯಮಂತ್ರಿ ಸೂಚನೆ

ಪ್ರತಿಪಕ್ಷಗಳ ವಿರುದ್ಧ ಸಮರ್ಥ ದಾಳಿ ಎದುರಿಸುವಂತೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಶಾಸಕರಿಗೆ ಸೂಚನೆ ನೀಡಿದ್ದಾರೆ.

ಬೆಳಗಾವಿ ತಾಲ್ಲೂಕಿನ ಕಾಕತಿಯಲ್ಲಿರುವ ಖಾಸಗಿ ಹೋಟೆಲ್‌ನಲ್ಲಿ ನಡೆದ ಬಿಜೆಪಿ ಶಾಸಕಾಂಗದ ಸಭೆಯಲ್ಲಿ ಅವರು ಮಾತನಾಡಿದರು. ಕೋವಿಡ್ ವೈರಸ್ ಸೋಂಕಿನ ಭೀತಿಯಿಂದ ಎರಡು ವರ್ಷಗಳ ನಂತರ ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ವಿಧಾನಮಂಡಲ ಚಳಿಗಾಲದ ಅಧಿವೇಶನ ನಡೆಯುತ್ತಿದೆ. ಈ ಅಧಿವೇಶನದಲ್ಲಿ ನಾವೆಲ್ಲರೂ ಪ್ರತಿಪಕ್ಷಗಳ ವಿರುದ್ಧ ನಿಲ್ಲಬೇಕು ಎಂದು ಸಿಎಂ ಶಾಸಕರಿಗೆ ಕರೆ ನೀಡಿದ್ದಾರೆ. ಇದೇ ವೇಳೆ ಶಾಸಕರು ತಮ್ಮ ಅನುದಾನವನ್ನು ಹೆಚ್ಚಳ ಮಾಡುವಂತೆ ಮುಖ್ಯಮಂತ್ರಿ ಬಳಿ ಮನವಿ ಮಾಡಿಕೊಂಡಿದ್ದಾರೆ ಎಂದು ಹೇಳಲಾಗುತ್ತಿದೆ. ಈಗಾಗಲೇ ಕೋವಿಡ್ ಹಿನ್ನೆಲೆಯಲ್ಲಿ ಶಾಸಕರ ಕ್ಷೇತ್ರಾಭಿವೃದ್ಧಿ ನಿಧಿಯನ್ನು ಕಡಿತಗೊಳಿಸಲಾಗಿತ್ತು. ಮತ್ತೆ ಅನುದಾನ ನೀಡುವಂತೆ ಇದೇ ವೇಳೆ ಎಲ್ಲ ಶಾಸಕರು ಪ್ರಸ್ತಾಪಿಸಿದರು ಎನ್ನಲಾಗಿದೆ. ಅಲ್ಲದೇ, ಗುತ್ತಿಗೆದಾರರಿಂದ ಶೇ. 40 ರಷ್ಟು ಕಮೀಷನ್ ಆರೋಪ, ಸ್ಥಳೀಯ ಸಂಸ್ಥೆಗಳಿಂದ ವಿಧಾನ ಪರಿಷತ್ತಿಗೆ ನಡೆದ ಚುನಾವಣಾ ಫಲಿತಾಂಶದ ಕುರಿತು

ಪರಾಮರ್ಶೆ ಮಾಡಲಾಗಿದೆ ಎನ್ನಲಾಗಿದೆ. ಅದರಲ್ಲಿಯೂ ವಿಶೇಷವಾಗಿ ಬೆಳಗಾವಿ ವಿಧಾನ ಪರಿಷತ್ ಚುನಾವಣೆ ಸೋಲಿನ ಆತ್ಮಾವಲೋಕನ ಮಾಡಲಾಗಿದೆ ಎಂದು ತಿಳಿದುಬಂದಿದೆ. ಸಭೆಯಲ್ಲಿ ಮಾಜಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ಜಗದೀಶ್ ಶೆಟ್ಟರ್, ಬಿಜೆಪಿ ರಾಜ್ಯ ಉಪಾಧ್ಯಕ್ಷ ನಿರ್ಮಲ್ ಕುಮಾರ ಸುರಾನ, ರಾಜ್ಯ ಸಂಘಟನಾ ಕಾರ್ಯದರ್ಶಿ ಅರುಣ ಕುಮಾರ, ರಾಷ್ಟ್ರೀಯ ಸಂಘಟನಾ ಕಾರ್ಯದರ್ಶಿ ಸಿ.ಟಿ.ರವಿ ಸೇರಿದಂತೆ ಸಚಿವರು, ಶಾಸಕರು, ವಿಧಾನ ಪರಿಷತ್ ಸದಸ್ಯರು ಉಪಸ್ಥಿತರಿದರು.

ಆಧಾರ:ಕನ್ನಡಪ್ರಭ, ದಿನಾಂಕ: 16.12.2021

## 96. ವಿವಿಧ ಕಾಯ್ದೆ ವಾಪಸ್‌ಗೆ ಕಾಂಗ್ರೆಸ್ ಒತ್ತಾಯ

ಎಪಿಎಂಸಿ, ಭೂ ಸುಧಾರಣೆ ತಿದ್ದುಪಡಿ ಹಾಗೂ ಗೋಹತ್ಯೆ ನಿಷೇಧ ಕಾಯ್ದೆ ಹಿಂದಕ್ಕೆ ಪಡೆಯಲು ಉಭಯ ಸದನಗಳಲ್ಲಿ ಒತ್ತಾಯಿಸಲು ಕಾಂಗ್ರೆಸ್ ಶಾಸಕಾಂಗ ಪಕ್ಷ ತೀರ್ಮಾನಿಸಿದೆ.

ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಹಾಗೂ ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್ ಅಧ್ಯಕ್ಷತೆಯಲ್ಲಿ ನಡೆದ ಶಾಸಕಾಂಗ ಪಕ್ಷದ ಸಭೆಯಲ್ಲಿ, ಈ ತೀರ್ಮಾನ ಕೈಗೊಂಡಿದ್ದು ಈ ಕುರಿತು ಎರಡೂ ಸದನಗಳಲ್ಲಿ ಪ್ರಸ್ತಾಪಿಸಲು ನಿರ್ಧರಿಸಲಾಗಿದೆ.

ಮತಾಂತರ ನಿಷೇಧ ಕಾಯ್ದೆ ಮಂಡನೆಯಾದರೆ ವಿರೋಧ ಮಾಡುವುದು, ಕೊರೋನಾದಿಂದ ಮೃತಪಟ್ಟ ಕುಟುಂಬಗಳಿಗೆ ಪರಿಹಾರಕ್ಕೆ ಒತ್ತಾಯಿಸಲು ಹಾಗೂ ಡಾ.ಡಿ.ಎಂ.ನಂಜುಂಡಪ್ಪ ವರದಿ ಅನುಷ್ಠಾನದ ಬಗ್ಗೆ ಚರ್ಚೆಗೆ ಅವಕಾಶ ಕೋರಲು ತೀರ್ಮಾನಿಸಲಾಗಿದೆ.

ಬಿಟ್‌ಕಾಯಿನ್ ಹಾಗೂ ಶೇ. 40 ಪರ್ಸೆಂಟೇಜ್ ಆರೋಪ ಕುರಿತು ಪ್ರಸ್ತಾಪಿಸಿ ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸುವ ಬಗ್ಗೆಯೂ ಚರ್ಚೆ ನಡೆಯಲಾಯಿತು. ಪರಿಷತ್ ಹಾಗೂ ವಿಧಾನಸಭೆಯಲ್ಲಿ ಯಾರ್‍ಯಾರು ಮಾತನಾಡಬೇಕು ಎಂದು ಸೂಚನೆ ನೀಡಲಾಗಿದೆ ಎಂದು ತಿಳಿದು ಬಂದಿದೆ.

ವಿಧಾನ ಪರಿಷತ್ ಚುನಾವಣೆಯಲ್ಲಿ ಬಳ್ಳಾರಿ, ಕಲಬುರಗಿ, ಚಿತ್ರದುರ್ಗ, ಚಿಕ್ಕಮಗಳೂರು ಕ್ಷೇತ್ರಗಳಲ್ಲಿ ಸೋಲಿನ ಬಗ್ಗೆ ಸಭೆಯಲ್ಲಿ ಬೇಸರ ವ್ಯಕ್ತಪಡಿಸಲಾಯಿತು. ಸಭೆಯ ನಂತರ ಮಾತನಾಡಿದ ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್, ಅಧಿವೇಶನದಲ್ಲಿ ಚರ್ಚಿಸಬೇಕಾದ ವಿಚಾರಗಳ ಬಗ್ಗೆ ಚರ್ಚಿಸಿದ್ದೇವೆ ಎಂದರು.

ರಾಜ್ಯ ಸರ್ಕಾರವು ಉದ್ದೇಶಪೂರ್ವಕವಾಗಿ ಅಂತಿಮ ಘಳಿಗೆಯಲ್ಲಿ ಮತಾಂತರ ನಿಷೇಧ ಕಾಯ್ದೆ ಮಂಡಿಸಲು ಮುಂದಾಗಿದೆ. ನಾವು ಅದಕ್ಕೆ ಸಿದ್ಧವಾಗಿದ್ದು ಸಂಪುಟದ ಅನುಮೋದನೆ ಪಡೆಯದೇ ಇದನ್ನು ತರಲು ಸಾಧ್ಯವಿಲ್ಲ. ಚುನಾವಣೆ ಹತ್ತಿರ ಬರುತ್ತಿರುವುದರಿಂದ ಬಿಜೆಪಿಯವರು ಜನರ ದಾರಿ ತಪ್ಪಿಸಲು ಏನೇನೋ ತಂತ್ರ ಮಾಡುತ್ತಿದ್ದಾರೆ ಎಂದರು. ಮತಾಂತರ ನಿಷೇಧ ಕಾಯ್ದೆ ವಿರುದ್ಧ ಕಾಂಗ್ರೆಸ್ ಸದನದ ಒಳಗೆ ಮತ್ತು ಹೊರಗೆ ಹೋರಾಟ ನಡೆಸಲಿದೆ. ಈಗಾಗಲೇ ಕಾನೂನು ಇದ್ದರೂ ಅದನ್ನು ಪಾಲಿಸುವ ಬದಲು ಒಂದೇ ವಿಚಾರ ಚುಚ್ಚಿ ಚುಚ್ಚಿ ಹೇಳುತ್ತಿದ್ದಾರೆ. ಒಂದೇ ಧರ್ಮ ಗುರಿ ಮಾಡಿಕೊಂಡು ಜಾರಿ ಸಾಧ್ಯವಿಲ್ಲ. ಬಿಜೆಪಿಯಲ್ಲೂ ಈ ವಿಚಾರವಾಗಿ ಆಂತರಿಕ ಭಿನ್ನಮತ ಇದೆ ಎಂದು ಹೇಳಿದರು.

ಬಿಟ್‌ಕಾಯಿನ್ ವಿಚಾರದಲ್ಲಿ ಕಾಂಗ್ರೆಸ್ ಹಿಟ್ ಅಂಡ್ ರನ್ ಮಾಡುತ್ತಿದೆಯಾ ಎಂಬ ಪ್ರಶ್ನೆಗೆ, ಹಿಟ್ ಅಂಡ್ ರನ್ ಪ್ರಶ್ನೆಯೇ ಇಲ್ಲ. ಅಧಿವೇಶನದಲ್ಲಿ ಹಲವು ವಿಷಯಗಳೊಂದಿಗೆ ಪ್ರಸ್ತಾಪಿಸುತ್ತೇವೆ ಎಂದು ತಿಳಿಸಿದರು.

ಪರಿಷತ್‌ನಲ್ಲಿ ಸಚಿವ ಕೆ.ಎಸ್.ಈಶ್ವರಪ್ಪ ಹಾಗೂ ಸಿ.ಎಂ.ಇಬ್ರಾಹಿಂ ನಡುವಿನ ಜಟಾಪಟಿಯೂ ಸಿಎಲ್‌ಪಿಯಲ್ಲಿ ಪ್ರಸ್ತಾಪವಾಯಿತು. ಆಗ ಸಿದ್ದರಾಮಯ್ಯ ಅವರು, ಸುಮ್ಮನೆ ಬಿಡಬೇಡಿ ಜಾಡಿಸಿ ಎಂದು ಹೇಳಿದರು. ಪರಿಷತ್‌ನಲ್ಲಿ ನಾವು ಇನ್ನೂ ಆ್ಯಕ್ಟಿವ್ ಆಗಬೇಕು ಎಂದು ಸೂಚನೆ ನೀಡಿದರು.

**ಸಹೋದರನ ಜತೆ ಆಗಮನ :** ವಿಧಾನ ಪರಿಷತ್ ಚುನಾವಣೆಯಲ್ಲಿ ಬೆಳಗಾವಿಯಿಂದ ಗೆಲುವು ಸಾಧಿಸಿದ ಚೆನ್ನರಾಜ್ ಹಟ್ಟಿಹೊಳಿ ಜೊತೆ ಶಾಸಕಿ ಲಕ್ಷ್ಮೀ ಹೆಬ್ಬಾಳ್ಕರ್ ಸುವರ್ಣ ವಿಧಾನಸೌಧಕ್ಕೆ ಆಗಮಿಸಿದ್ದರು. ಶಾಸಕಾಂಗ ಪಕ್ಷದ ಸಭೆಯಲ್ಲಿ ಚೆನ್ನರಾಜ್, ಸಲೀಂ ಅಹಮದ್ ಅವರಿಗೆ ಅಭಿನಂದನೆ ಸಲ್ಲಿಸಲಾಯಿತು.

ಆಧಾರ:ಉದಯವಾಣಿ,ದಿನಾಂಕ: 16.12.2021

## 97. ಪರ್ಸೆಂಟೇಜ್ ತಿರುಗುಬಾಣ

ರಾಜ್ಯದಲ್ಲಿ ಸಂಚಲನ ಸೃಷ್ಟಿಸಿರುವ ಇಲಾಖಾ ಕಾಮಗಾರಿಗಳಲ್ಲಿನ ಪರ್ಸಂಟೇಜ್ ಕಮಿಷನ್ ದಂಧೆಗೆ ಸಂಬಂಧಿಸಿದ ಗುರುತರ ಆರೋಪಕ್ಕೆ ತಾರ್ಕಿಕ ಅಂತ್ಯ ಕಾಣಿಸಲು ಮುಂದಾಗಿರುವ ರಾಜ್ಯ ಸರ್ಕಾರ ಸುಪ್ರೀಂಕೋರ್ಟ್ ಅಥವಾ ಹೈಕೋರ್ಟ್ ನಿವೃತ್ತ ನ್ಯಾಯಾಧೀಶರ ನೇತೃತ್ವದಲ್ಲಿ 2013ರ ಅವಧಿಯಿಂದಲೇ ತನಿಖೆ ನಡೆಸುವ ಚಿಂತನೆ ನಡೆಸಿದೆ. ಸರ್ಕಾರಿ ಕಾಮಗಾರಿಗಳಲ್ಲಿ ಪರ್ಸಂಟೇಜ್ ಶೇ.40ಕ್ಕೆ ತಲುಪಿದೆ ಎಂಬ ಆರೋಪದ ವಿಚಾರವನ್ನು ಬಿಜೆಪಿ ವರಿಷ್ಠರೂ ಗಂಭೀರವಾಗಿ ಪರಿಗಣಿಸಿದ್ದಾರೆ. ಬಿಜೆಪಿ ಮುಖ್ಯಮಂತ್ರಿಗಳ ಸಭೆಯಲ್ಲಿ ಪಾಲ್ಗೊಳ್ಳಲೆಂದು ವಾರಾಣಸಿಗೆ ತೆರಳಿದ್ದ ಬಸವರಾಜ ಬೊಮ್ಮಾಯಿ ಜೊತೆ ಈ ವಿಷಯವಾಗಿ ವಿಚಾರ ವಿನಿಮಯ ನಡೆಸಿರುವ ವರಿಷ್ಠರು ನ್ಯಾಯಾಂಗ ತನಿಖೆ ನಡೆಸುವಂತೆ ಸೂಚನೆ ನೀಡಿದ್ದಾರೆಂದು ತಿಳಿದು ಬಂದಿದೆ. ಪ್ರಧಾನಮಂತ್ರಿ ನರೇಂದ್ರ ಮೋದಿಯವರಿಂದಲೇ ಸ್ಪಷ್ಟ ಸಂದೇಶವೊಂದನ್ನು ಹೊತ್ತು ಬೊಮ್ಮಾಯಿ ರಾಜ್ಯಕ್ಕೆ ಮರಳಿದ್ದು, ಪರ್ಸೆಂಟೇಜ್ ದೂರು ಸೇರಿದಂತೆ ಕೆಲವು ವಿಚಾರಗಳಲ್ಲಿ ನಿರ್ದಿಷ್ಟ ಕ್ರಮಕೈಗೊಳ್ಳುವ ನಿರೀಕ್ಷೆಯಿದೆ.

**ಸಂದೇಹ ನಿವಾರಣೆ ಕಸರತ್ತು:** ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಆಡಳಿತಾವಧಿಯಲ್ಲಿ 10 ಪರ್ಸೆಂಟ್ ಸರ್ಕಾರವೆಂಬ ಆರೋಪಗಳಿದ್ದವು. ಮೋದಿ ಬಹಿರಂಗ ಭಾಷಣದಲ್ಲಿಯೇ ಈ ವಿಚಾರ ಉಲ್ಲೇಖಿಸಿ ಬಿಸಿ ಚರ್ಚೆಗೆ ಗ್ರಾಸ ಒದಗಿಸಿದ್ದರು. ಇದೀಗ ಸ್ವಪಕ್ಷದ ಸರ್ಕಾರದ ವಿರುದ್ಧವೇ 40 ಪರ್ಸೆಂಟ್ ಆಪಾದನೆಯನ್ನು ಹೊರಿಸಿ, ರಾಜ್ಯ ಗುತ್ತಿಗೆದಾರರ ಸಂಘ ನೇರವಾಗಿ ಪ್ರಧಾನಿಗೆ ದೂರಿತ್ತಿದೆ. ಗುತ್ತಿಗೆದಾರರ ಸಂಘದ ಅಧ್ಯಕ್ಷ ಕೆಂಪಣ್ಣ ಬರೆದ ಪತ್ರವನ್ನು ಬಳಸಿಕೊಂಡು ಕಾಂಗ್ರೆಸ್ ಮುಗಿಬಿದ್ದಿದೆ. ಈ ವಿವಾದ ತಣ್ಣಗಾಗಿಸಲು ಬೊಮ್ಮಾಯಿ ಕಸರತ್ತು ನಡೆಸಿದ್ದು, ಸಿಎಂ ಸೂಚನೆಯಂತೆ ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್, ಜಲಸಂಪನ್ಮೂಲ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ರಾಕೇಶ್‌ಸಿಂಗ್ ನೇತೃತ್ವದಲ್ಲಿ ತನಿಖೆಗೆ ಆದೇಶಿಸಿರುವುದನ್ನು ಪ್ರತಿಪಕ್ಷ ನಾಯಕರು ಆಕ್ಷೇಪಿಸಿದ್ದಾರೆ. ಅಲ್ಲದೆ, ಪತ್ರವನ್ನು ಮುಂದಿಟ್ಟುಕೊಂಡು ಸರ್ಕಾರವನ್ನು ಹಣಿಯಲು, ಸಾರ್ವಜನಿಕರ ಮನಸ್ಸಿನಲ್ಲಿ ಸಂಶಯದ ಬೀಜಬಿತ್ತಲು ಕಾಂಗ್ರೆಸ್ ಹವಣಿಸಿದೆ. ಪ್ರತಿಯೊಂದು ಬೆಳವಣಿಗೆಯನ್ನು ದೆಹಲಿ ನಾಯಕರು ಸೂಕ್ಷ್ಮವಾಗಿ ಅವಲೋಕಿಸಿ, ತಮ್ಮದೇ ಆದ ಮೂಲದಿಂದ ವಿವರವಾದ ಮಾಹಿತಿ ಸಂಗ್ರಹಿಸಿದ್ದು, ವಿಳಂಬ ಮಾಡಿದಷ್ಟು ಕಳಂಕ ತಟ್ಟಲಿದೆ ಎಂದು ಅರಿತು ಪರಿಹಾರೋಪಾಯದ ಸಂದೇಶ ನೀಡಿದ್ದಾರೆನ್ನಲಾಗಿದೆ. ಆರೋಪಕ್ಕೆ ಗುರಿಯಾದ ಇಲಾಖೆಗಳ ಪೈಕಿ ಜಲ ಸಂಪನ್ಮೂಲ ಇಲಾಖೆ ಮುಖ್ಯಸ್ಥರಿಗೆ ತನಿಖೆಗೆ ಆದೇಶಿಸಿದ್ದನ್ನು ಕಾಂಗ್ರೆಸ್ ಒಪ್ಪಿಲ್ಲ. ಸರ್ಕಾರ ಏನೋ ತಪ್ಪು ಮಾಡಿದ್ದು, ಮುಚ್ಚಿ ಹಾಕುವ ಸಂಚು ರೂಪಿಸಿದೆ ಎಂದು ಕಿಡಿಕಾರಿದೆ. ಗುತ್ತಿಗೆದಾರರ ಸಂಘದ ದೂರು, ಚಳವಳಿ ಎಚ್ಚರಿಕೆ, ಪ್ರತಿಪಕ್ಷ ಧ್ವನಿಗೂಡಿಸಿರುವ ಕಾರಣ ಜನಸಾಮಾನ್ಯರಿಗೆ ತಪ್ಪು ಸಂದೇಶ ರವಾನೆಯಾಗುವ ಸಾಧ್ಯತೆಯಿದೆ ಎಂಬ ಆತಂಕ ಪಕ್ಷದೊಳಗೆ ಮಡುಗಟ್ಟಿದೆ. ಈ ಹಿನ್ನೆಲೆಯಲ್ಲಿ ಸರ್ಕಾರ ನ್ಯಾಯಾಂಗ ತನಿಖೆಗೆ ಆದೇಶ ನೀಡಲು ಯೋಚಿಸಿದೆ ಎಂದು ಮೂಲಗಳು ಹೇಳಿವೆ.

**ಮಹತ್ವದ ಬದಲಾವಣೆ:** ಕಮಿಷನ್ ಪರ್ಸಂಟೇಜ್ ಶೇ.40ಕ್ಕೆ ಹೆಚ್ಚಿದೆ ಎಂಬ ದೂರು ಗದ್ದಲ, ವಿವಾದ ಸೃಷ್ಟಿಸಿರುವ ನಡುವೆಯೇ ಕರ್ನಾಟಕ ನೀರಾವರಿ, ಕೃಷ್ಣಾ ಜಲ ಭಾಗ್ಯ ನಿಗಮಗಳಲ್ಲಿ ನಕಲಿ ಬಿಲ್ ಸೃಷ್ಟಿಸಿ ಕೋಟ್ಯಂತರ ರೂ. ದುರ್ಬಳಕೆ ಪ್ರಕರಣಗಳು ಬಯಲಿಗೆ ಬಂದಿವೆ. ಮುಖ್ಯ ಲೆಕ್ಕಾಧಿಕಾರಿ ಸೇರಿದಂತೆ 20ಕ್ಕೂ ಹೆಚ್ಚು ಅಧಿಕಾರಿಗಳು ಸೇವೆಯಿಂದ ಅಮಾನತ್ತುಗೊಂಡಿದ್ದಾರೆ. ನಿಗಮಗಳ ಆಂತರಿಕ ತನಿಖಾ ತಂಡವು ಅಕ್ರಮ ರುಜುವಾತಾಗಿದೆ ಎಂದು ವರದಿ ಸಲ್ಲಿಸಿ ಅಮಾನತ್ತಾದ ಅಧಿಕಾರಿಗಳು ಹಾಗೂ ಶಾಮೀಲಾಗಿರುವ 10 ಗುತ್ತಿಗೆದಾರರ ವಿರುದ್ಧ ಕ್ರಿಮಿನಲ್ ದಾವೆ, ಖಾತೆ ಸ್ಥಗಿತ, ಹಲವರು ಬಿಗಿಕ್ರಮಗಳನ್ನು ಕೈಗೊಳ್ಳುವಂತೆ ಶಿಫಾರಸ್ಸು ಮಾಡಿದೆ. ಭ್ರಷ್ಟಾಚಾರ ಬಯಲಾದ ಬೆನ್ನಲ್ಲೇ ಕಾಮಗಾರಿಗಳ ವೆಚ್ಚ ಬಿಲ್ ಪಾವತಿ ವ್ಯವಸ್ಥೆಯಲ್ಲಿ ಕರ್ನಾಟಕ ನೀರಾವರಿ ನಿಗಮ ಮಹತ್ವದ ಬದಲಾವಣೆ ಮಾಡಿದೆ. ಇನ್ನು ಮುಂದೆ ಮುಖ್ಯ ಲೆಕ್ಕಾಧಿಕಾರಿಗಳ ಕಛೇರಿಯಲ್ಲಿರುವ ಕೇಂದ್ರೀಕೃತ ಪಾವತಿ ವ್ಯವಸ್ಥೆ ಬದಲಿಗೆ ಸಂಬಂಧಿಸಿದ ವಿಭಾಗದ ಕಾರ್ಯಪಾಲಕ ಕಛೇರಿಯಿಂದ ಪಾವತಿಯಾಗಲಿದೆ. ಕಾಮಗಾರಿ ಮತ್ತು ಇತರ ಆಡಳಿತಾತ್ಮಕ ವೆಚ್ಚಗಳ ಪಾವತಿ ನಿರ್ವಹಿಸುವ ವ್ಯವಸ್ಥೆಯನ್ನು ವಿಕೇಂದೀಕರಿಸಿದೆ.

ಹೊಸ ವ್ಯವಸ್ಥೆಯನ್ನು ತಕ್ಷಣದಿಂದ ಜಾರಿಗೊಳಿಸಲಾಗಿದೆ ಎಂದು ನಿಗಮದ ವ್ಯವಸ್ಥಾಪಕ ನಿರ್ದೇಶಕರು ಹೊರಡಿಸಿದ ಆದೇಶದಲ್ಲಿ ತಿಳಿಸಿದ್ದು, ಪೂರಕವಾಗಿ ಸಂಬಂಧಿಸಿದ ಕಾರ್ಯಪಾಲಕ ಇಂಜಿನಿಯರ್‌ಗಳಿಗೆ ಕೆವೈಸಿ ಕಳುಹಿಸಲು ಸೂಚಿಸಿದ್ದಾರೆ. ಹಾಗೆಯೇ ವಿಕೇಂದ್ರೀಕೃತ ಪಾವತಿ ವ್ಯೆವಸ್ಥೆಯ ಕುರಿತು ಪ್ರತ್ಯೇಕವಾಗಿ ಮಾರ್ಗಸೂಚಿ ಹೊರಡಿಸಲಾಗುವುದು ಎಂದು ಉಲ್ಲೇಖಿಸಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ: 16.12.2021

## 98. ಮತಾಂತರ ಕಾಯಿದೆಗೆ ಜೆಡಿಎಸ್ ಬೆಂಬಲ ಇಲ್ಲ

ಉದ್ದೇಶಿತ ಮತಾಂತರ ನಿಷೇಧ ವಿಧೇಯಕಕ್ಕೆ ಜೆಡಿಎಸ್ ಬೆಂಬಲ ನೀಡುವ ಪ್ರಶ್ನೆಯೇ ಇಲ್ಲ ಎಂದು ಮಾಜಿ ಸಿಎಂ ಎಚ್.ಡಿ.ಕುಮಾರಸ್ವಾಮಿ ಸ್ಪಷ್ಟಪಡಿಸಿದ್ದಾರೆ.

ದಿಲ್ಲಿಯಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಬೆಳಗಾವಿಯಲ್ಲಿ ವಿಧಾನಸಭೆ ಅಧಿವೇಶನ ಕರೆದಿರುವುದು ಉತ್ತರ ಕರ್ನಾಟಕ ಸೇರಿದಂತೆ ರಾಜ್ಯ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳ ಬಗ್ಗೆ ಚರ್ಚಿಸಲು, ಅಗತ್ಯವಿಲ್ಲದ ಮತಾಂತರ ನಿಷೇಧ ವಿಧೇಯಕದ ಬಗ್ಗೆ ಅಲ್ಲ. ಕಲಾಪದಲ್ಲಿ ಭಾಗಿಯಾಗುವ ನಮ್ಮ ಎಲ್ಲ ಶಾಸಕರು ಕೂಡ ಇದನ್ನು ಖಂಡಾತುಂಡವಾಗಿ ವಿರೋಧ ಮಾಡುತ್ತಾರೆ ಎಂದು ಕುಮಾರಸ್ವಾಮಿ ಹೇಳಿದರು.

ಬಿಟ್ ಕಾಯಿನ್ ಹಗರಣ ಹಾಗೂ ಗುತ್ತಿಗೆದಾರರಿಂದ 40% ಕಮಿಷನ್ ವಸೂಲಿ ಮಾಡುವ ಬಗ್ಗೆ ಜೆಡಿಎಸ್ ಮಾತನಾಡುತ್ತಿಲ್ಲ ಎನ್ನುವ ಆರೋಪವನ್ನು ತಳ್ಳಿಹಾಕಿದ ಅವರು, ಗುತ್ತಿಗೆದಾರ ಸಂಘದ ಒಬ್ಬರು ಪ್ರಧಾನ ಮಂತ್ರಿಗಳಿಗೆ ಬರೆದಿರುವ ಪತ್ರ ಇಟ್ಟುಕೊಂಡು ಕಾಂಗ್ರೆಸ್ ನಾಯಕರು 40% ಕಮಿಷನ್ ಅಂತ ಮಾತನಾಡುತ್ತಿದ್ದಾರೆ. ಈ ಪರ್ಸಂಟೇಜ್ ವ್ಯವಹಾರ ಬರಲು ಯಾರು ಕಾರಣ? 10%, 20% 30%, 40% ಕಮಿಷನ್ ಅಂತ ಹೇಳುವವರಿಗೆ ಆ ಬಗ್ಗೆ ಮಾತನಾಡುವ ನೈತಿಕತೆ ಇದೆಯಾ? ಎಲ್ಲರೂ ಗಾಜಿನ ಮನೆಯಲ್ಲಿ ಇರುವವರೇ. ಗಾಜಿನ ಮನೆಯಲ್ಲಿ ಕೂತು ಕಲ್ಲು ಯಾಕೆ ಹೊಡೆಯುತ್ತಾರೆ? ಎಂದು ಪ್ರಶ್ನಿಸಿದರು.

"ಕಮಿಷನ್ ಬಗ್ಗೆ ಮಾತನಾಡುವ ಇದೇ ಕಾಂಗ್ರೆಸ್ ಪಕ್ಷದ ನಾಯಕರು ಐದು ವರ್ಷ ಆಡಳಿತ ನಡೆಸಿದರಲ್ಲ, ಅವರ ಕಾಲದಲ್ಲಿ ಏನೇನಾಯ್ತು ಎಂದು ಹೇಳಬೇಕಲ್ಲ. ಅವರ ಕಾಲದಲ್ಲಿ ಎಷ್ಟು ಪರ್ಸಂಟೇಜ್ ಇತ್ತು ಎನ್ನುವುದು ಅವರಿಗೂ ಗೊತ್ತು. ಹೀಗಾಗಿ ಕಾಂಗ್ರೆಸ್ ನಾಯಕರಿಗೆ ಈ ಬಗ್ಗೆ ಮಾತನಾಡುವ ನೈತಿಕತೆ ಖಂಡಿತಾ ಇಲ್ಲ" ಎಂದು ಎಚ್.ಡಿ.ಕುಮಾರಸ್ವಾಮಿ ಟೀಕಾಪ್ರಹಾರ ನಡೆಸಿದರು.

"ನಿಮ್ಮ ಸರ್ಕಾರ ಇದ್ದಾಗ ಈ ಪರ್ಸೆಂಟೇಜ್ ವ್ಯವಹಾರದ ವಿರುದ್ಧ ಏಕೆ ಕ್ರಮ ಜರುಗಿಸಲು ಆಗಲಿಲ್ಲ ಎಂದು ಕೆಲವರು ಕೇಳುತ್ತಿದ್ದಾರೆ. ಸ್ವತಂತ್ರ ಸರಕಾರ ನನಗೆಂದು ಬರಲಿಲ್ಲ. ಆದರೆ ಯಾವುದೇ ಕಾರಣಕ್ಕೂ ಪರ್ಸಂಟೇಜ್ ವ್ಯವಸ್ಥೆಯನ್ನು ನನ್ನ ಕಛೇರಿಯಲ್ಲಿ ಇಟ್ಟಿರಲಿಲ್ಲ. ನನ್ನ ಕಾಲದಲ್ಲಿ ಎಲ್ಲಲ್ಲೆ ಪರ್ಸಂಟೇಜ್ ಹೋಗ್ತಾ ಇತ್ತು ಎನ್ನುವ ಮಾಹಿತಿ ನನಗೆ ಇತ್ತು. ಮುಂದೆ ನಮ್ಮ ಪಕ್ಷಕ್ಕೆ ಜನರು ಸ್ವತಂತ್ರ ಸರ್ಕಾರ ಕೊಟ್ಟರೆ, ಆಗ ಈ ಬಗ್ಗೆ ಚರ್ಚೆ ಮಾಡಬಹುದು" ಎಂದು ಮಾಜಿ ಮುಖ್ಯಮಂತ್ರಿಗಳು ಹೇಳಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ: 16.12.2021

## 99. ಮತಾಂತರ ನಿಷೇಧ: ಶಾಸಕರ ಚರ್ಚೆ

ಮತಾಂತರ ನಿಷೇಧ ಮಸೂದೆ ಇದೇ ಅಧಿವೇಶನದಲ್ಲಿ ಮಂಡಿಸುವ ಬಗ್ಗೆ ನಡೆದ ಬಿಜೆಪಿ ಶಾಸಕಾಂಗ ಪಕ್ಷದ ಸಭೆಯಲ್ಲಿ ಚರ್ಚೆ ನಡೆಯಿತು.

ಈ ವಿಷಯವನ್ನು ಸಾರ್ವಜನಿಕ ವಲಯದಲ್ಲಿ ಚರ್ಚೆಗೆ ಬಿಟ್ಟು ನಂತರ ಮಂಡಿಸುವುದು ಸೂಕ್ತ ಎಂಬ ಅಭಿಪ್ರಾಯ ಸಭೆಯಲ್ಲಿ ಕೇಳಿ ಬಂದಿತು. ಇನ್ನು ಕೆಲವು ಶಾಸಕರು ಸಾರ್ವಜನಿಕ ಚರ್ಚೆ ನಡೆಸದೇ ಮಂಡಿಸುವುದು ಸೂಕ್ತ ಎಂಬ ವಾದವನ್ನು ಮುಂದಿಟ್ಟರು. ಆ ರೀತಿ ಮಾಡುವುದೇ ಆದರೆ, ಕೆಲವು ತಿದ್ದುಪಡಿಗಳನ್ನು ಮಾಡಬೇಕು ಎಂಬ ಅಭಿಪ್ರಾಯ ಕೇಳಿ ಬಂದಿತು ಎಂದು ಮೂಲಗಳು ತಿಳಿಸಿವೆ.

ಮಸೂದೆ ಮಂಡಿಸುವುದೇ ಆದರೆ, ಮುಂದಿನ ವಾರ ವಿಧಾನಸಭೆಯಲ್ಲಿ ಮಂಡಿಸುವ ಸಾಧ್ಯತೆ ಇದೆ ಎಂದು ಬಿಜೆಪಿ ಮೂಲಗಳು ಹೇಳಿವೆ. ಈ ಮಸೂದೆಯ ಅಂಗೀಕಾರಕ್ಕೆ ವಿರೋಧ ಪಕ್ಷಗಳು ಅಡ್ಡಿ ಉಂಟು ಮಾಡುವ ಸಾಧ್ಯತೆ ಇದ್ದು, ವಿಧಾನಪರಿಷತ್ತಿನಲ್ಲಿ ಬಹುಮತ ಇಲ್ಲದ ಕಾರಣ ಜೆಡಿಎಸ್ ಅನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಬಗ್ಗೆಯೂ ಚರ್ಚಿಸಲಾಯಿತು.

ಅಲ್ಲದೆ, ಗುತ್ತಿಗೆ ನೀಡಿಕೆಯಲ್ಲಿ ಶೇ. 40ರಷ್ಟು ಕಮಿಷನ್ ಬಗ್ಗೆ ಕಾಂಗ್ರೆಸ್ ದೊಡ್ಡ ಮಟ್ಟದಲ್ಲಿ ಗದ್ದಲ ಎಬ್ಬಿಸಲಿದೆ. ಇದಕ್ಕೆ ಸಚಿವರು ಮತ್ತು ಶಾಸಕರು ತಕ್ಕ ಉತ್ತರ ನೀಡಲು ಸಿದ್ಧರಾಗಬೇಕು. ಯಾವುದೇ ಕಾರಣಕ್ಕೂ ಸರ್ಕಾರ ಮತ್ತು ಮುಖ್ಯಮಂತ್ರಿಯವರನ್ನು ಬಿಟ್ಟುಕೊಡಬಾರದು. ಕಾಂಗ್ರೆಸ್ ಅವಧಿಯಲ್ಲಿ ಕಮಿಷನ್ ಪಡೆಯುತ್ತಿದ್ದ ಬಗ್ಗೆಯೂ ಪ್ರಸ್ತಾಪಿಸಬೇಕು. ಅದಕ್ಕೆ ಪೂರಕ ದಾಖಲೆಗಳನ್ನು ಇಟ್ಟುಕೊಳ್ಳಬೇಕು ಎಂಬ ಸಲಹೆ ನೀಡಲಾಯಿತು ಎಂದು ಮೂಲಗಳು ಹೇಳಿವೆ.

ಕೆಲವು ಶಾಸಕರು ತಮ್ಮ ಕ್ಷೇತ್ರಗಳಿಗೆ ತಲಾ ರೂ. 50 ಕೋಟಿ ಅನುದಾನ ಮತ್ತು ದೇವಸ್ಥಾನಗಳ ಅಭಿವೃದ್ಧಿಗೆ ತಲಾ ರೂ. 2 ಕೋಟಿ ನೀಡಬೇಕು ಎಂಬ ಬೇಡಿಕೆ ಮುಂದಿಟ್ಟರು.

ಪ್ರಮುಖ ಇಲಾಖೆಗಳ ಉನ್ನತ ಅಧಿಕಾರಿಗಳ ಬದಲಾವಣೆಗೆ ಕೆಲವು ಶಾಸಕರು ಸಚಿವರ ಕಾರ್ಯವೈಖರಿ ಬಗ್ಗೆ ಆಕ್ಷೇಪ ವ್ಯಕ್ತಪಡಿಸಿದರು. ಸರ್ಕಾರ ನಿಂತಿರುವುದು ನಿಮ್ಮಿಂದಲೇ ಅಲ್ಲ. ವರ್ತನೆಯನ್ನು ಸರಿ ಮಾಡಿಕೊಳ್ಳಿ, ಕನಿಷ್ಠ ದೂರವಾಣಿ ಕರೆಯನ್ನು ಸ್ವೀಕರಿಸುವ ಸೌಜನ್ಯ ತೋರಿ ಎಂದು ಹೇಳಿದಾಗಿ ಮೂಲಗಳು ತಿಳಿಸಿವೆ.

ಆಧಾರ:ಪ್ರಜಾವಾಣಿ, ದಿನಾಂಕ:16.12.2021

## 100. ಮತಾಂತರ ನಿಷೇಧ ಕಾಯ್ದೆ ವಿರುದ್ಧ ಒಳ–ಹೊರಗೂ ಹೋರಾಟ

ಮತಾಂತರ ನಿಷೇಧ ಕಾಯ್ದೆ ತರಲು ಹೊರಟಿರುವ ಸರ್ಕಾರದ ವಿರುದ್ಧ ಸದನ ಒಳ ಹೊರಗೂ ಗಂಭೀರ ಸ್ವರೂಪದಲ್ಲಿ ಹೋರಾಟ ನಡೆಸಲು ಕಾಂಗ್ರೆಸ್ ಶಾಸಕಾಂಗ ಪಕ್ಷ ಸಭೆ ನಿರ್ಣಯಿಸಿತು. ಸುವರ್ಣ

ವಿಧಾನಸೌಧದಲ್ಲಿ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅಧ್ಯಕ್ಷತೆಯಲ್ಲಿ ನಡೆದ ಶಾಸಕಾಂಗ ಪಕ್ಷದ ಸಭೆಯಲ್ಲಿ ಮತಾಂತರ ನಿಷೇಧ ಕಾಯ್ದೆ ಕುರಿತಂತೆ ದೀರ್ಘ ಚರ್ಚೆ ನಡೆಯಿತು. ಇದು ಭಾವನಾತ್ಮಕ ವಿಷಯ. ಒಂದು ಜಾತಿ ಹಾಗೂ ಧರ್ಮವನ್ನು ಗುರಿಯಾಗಿಟ್ಟುಕೊಂಡು ಸರ್ಕಾರ ಕಾಯ್ದೆ ಜಾರಿಗೆ ತರಲು ಮುಂದಾಗಿದೆ. ಇದನ್ನು ತೀವ್ರವಾಗಿ ವಿರೋಧಿಸಬೇಕಾಗಿದೆ. ರಾಜಕೀಯ ಕಾರಣಕ್ಕಾಗಿ ಈ ಕಾಯ್ದೆ ಜಾರಿಗೊಳಿಸಲು ಹೊರಟಿದೆ ಎಂದು ಸಿದ್ದರಾಮಯ್ಯ ಹೇಳಿದರು. ಇದೂ ಸಹ ಆ ಪಕ್ಷದ ರಹಸ್ಯ ಕಾರ್ಯಸೂಚಿ. ಈ ಹಿನ್ನೆಲೆಯಲ್ಲಿ ಕಾಯ್ದೆಯನ್ನು ವಿರೋಧಿಸಬೇಕಿದೆ ಎಂದು ಕರೆಕೊಟ್ಟ ಅವರು ಎಲ್ಲರೂ ಸದನದಲ್ಲಿದ್ದು ಪ್ರತಿರೋಧ ತೋರಿಸಬೇಕೆಂದರು. ನೆರೆ ಪರಿಹಾರ ವಿಚಾರದಲ್ಲಿ ಕೇಂದ್ರ ಸರ್ಕಾರ ಈವರೆಗೆ ನಯಾ ಪೈಸೆ ಕೊಟ್ಟಿಲ್ಲ. ಈ ನಿಟ್ಟಿನಲ್ಲಿ ಹೋರಾಟ ನಡೆಸಬೇಕಾಗಿದೆ. ಹಾಗೆಯೇ ಪರಿಹಾರ ನೀಡುವ ವಿಚಾರದಲ್ಲಿ ರಾಜ್ಯ ಸರ್ಕಾರ ಸುಳ್ಳು ಹೇಳುತ್ತಿದೆ. ಸತ್ಯಾಂಶವನ್ನು ಜನರ ಮುಂದಿಡುವ ಕೆಲಸವನ್ನು ನಮ್ಮ ಶಾಸಕರು ಮಾಡಬೇಕಿದೆ ಎಂದು ಹೇಳಿದರು.

ಆಧಾರ:ವಿಜಯವಾಣಿ, ದಿನಾಂಕ:16.12.2021

## 101. ವರುಣ್‌ಸಿಂಗ್ ನಿಧನಕ್ಕೆ ಉಭಯ ಸದನದಲ್ಲಿ ಸದಸ್ಯರಿಂದ ಕಂಬನಿ

ಸೇನಾ ಹೆಲಿಕಾಪ್ಟರ್ ದುರಂತದಲ್ಲಿ ತೀವ್ರವಾಗಿ ಗಾಯಗೊಂಡು ಚಿಕಿತ್ಸೆ ಫಲಕಾರಿಯಾಗದೆ ಮೃತಪಟ್ಟ ಗ್ರೂಪ್ ಕ್ಯಾಪ್ಟನ್ ವರುಣ್ ಸಿಂಗ್ ಅವರಿಗೆ ಉಭಯ ಸದನದಲ್ಲಿ ಸಂತಾಪ ತಿಳಿಸಿ ಸಂತಾಪ ಸೂಚನ ನಿರ್ಣಯ ಅಂಗೀಕರಿಸಲಾಯಿತು. ವಿಧಾನಸಭೆಯಲ್ಲಿ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ಸಂತಾಪ ಸೂಚನೆ ಮಂಡಿಸಿ ಒಂದು ನಿಮಿಷ ಶ್ರದ್ಧಾಂಜಲಿ ಸಲ್ಲಿಸಿದ ಬಳಿಕ ಸಂತಾಪ ಸೂಚನೆ ನಿರ್ಣಯ ಅಂಗೀಕರಿಸಿ ಕುಟುಂಬಸ್ಥರಿಗೆ ಕಳುಹಿಸುವುದಾಗಿ ಮಾಹಿತಿ ನೀಡಿದರು. ಇನ್ನು ವಿಧಾನ ಪರಿಷತ್‌ನಲ್ಲಿ ಸಭಾಪತಿ ಬಸವರಾಜ ಹೊರಟ್ಟಿ ಅವರು ಸಂತಾಪ ಸೂಚನೆ ಪ್ರಸ್ತಾಪಿಸಿದರು. ಈ ವೇಳೆ ಮಾತನಾಡಿದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಸೇನಾಪಡೆಗಳ ಮುಖ್ಯಸ್ಥ ಬಿಪಿನ್ ರಾವತ್ ನಿಧನದ ನಂತರ ಇದೀಗ ವರುಣ್ ಸಿಂಗ್ ಅವರ ಮೃತಪಟ್ಟಿರುವುದು ಎರಡನೇ ಆಘಾತ. ಸಾವು ಬದುಕಿನ ನಡುವೆ ಹೋರಾಡುತ್ತಾ ಆಸ್ಪತ್ರೆಯಲ್ಲಿದ್ದಾಗ ನೋಡಲು ತಾವು ಹೋಗಿದ್ದೆ. ಸಾವು ಕಣ್ಣ ಮುಂದೆ ಇದ್ದರೂ ಅವರು ಧೃತಿಗೆಟ್ಟಿರಲಿಲ್ಲ. ಮುಖದಲ್ಲಿ ಸ್ವಲ್ಪವೂ ಆತಂಕ ಇರಲಿಲ್ಲ ಎಂದು ನೆನಪಿಸಿಕೊಂಡರು. ಅವರು ಬದುಕುತ್ತಾರೆ. ಘಟನೆ ಹೇಗಾಯಿತು ಎಂಬ ಸತ್ಯವನ್ನು ಅವರಾದರೂ ಹೇಳುತ್ತಾರೆ ಎಂಬ ಆಶಯವಿತ್ತು. ಆದರೆ, ಅದು ಆಗಲಿಲ್ಲ. ವರುಣ್ ಸಿಂಗ್ ನಿಧನ ತೀವ್ರ ಆಘಾತ ತಂದಿದೆ. ಅವರ ಆತ್ಮಕ್ಕೆ ಶಾಂತಿ ದೊರೆಯಲಿ' ಎಂದು ಪ್ರಾರ್ಥಿಸುತ್ತೇನೆ ಎಂದರು. ವಿರೋಧಪಕ್ಷದ ನಾಯಕ ಎಸ್.ಆರ್.ಪಾಟೀಲ್ ಸಹ ಸಂತಾಪ ಸೂಚಿಸಿದರು.

ಆಧಾರ:ಕನ್ನಡಪ್ರಭ, ದಿನಾಂಕ:17.12.2021

## 102. ಪರಿಷತ್: ಧರಣಿಯಲ್ಲೇ ಮುಗಿದ ಅರ್ಧ ದಿನ

15 ಸದಸ್ಯರ ಅಮಾನತ್ತು ಮತ್ತು ಟ್ರ್ಯಾಕ್ಟರ್‌ನಲ್ಲಿ ಅಧಿವೇಶನಕ್ಕೆ ಬರಲು ಪೊಲೀಸರು ಅಡ್ಡಿಪಡಿಸಿದ್ದನ್ನು ವಿರೋಧಿಸಿ ಕಾಂಗ್ರೆಸ್ ಸದಸ್ಯರು ಧರಣಿ ನಡೆಸಿದ್ದರಿಂದ ವಿಧಾನ ಪರಿಷತ್‌ನಲ್ಲಿ ಯಾವುದೇ ಕಲಾಪ ನಡೆಯಲಿಲ್ಲ.

ಬೆಳಿಗ್ಗೆ 11 ಗಂಟೆಗೆ ಕಲಾಪ ಆರಂಭವಾಗಬೇಕಿತ್ತು. 11.30ಕ್ಕೆ ಕೋರಂ ಬೆಲ್ ಹಾಕಲಾಯಿತು. ಸಭಾಪತಿಗಳಾದ ಬಸವರಾಜ ಹೊರಟ್ಟಿ ಪೀಠಕ್ಕೆ ಬರುವಾಗ ಕೋರಂ ಇರಲಿಲ್ಲ. ಮತ್ತೆ ಕಲಾಪ ಮುಂದೂಡಲಾಯಿತು. ಕಾಂಗ್ರೆಸ್ ಸದಸ್ಯರು ಧರಣಿ ನಡೆಸುವ ಸುಳಿವು ಹೊಂದಿದ ಸಭಾಪತಿ ಸರಣಿ ಸಭೆಗಳನ್ನು ನಡೆಸಿದರು. ಆದರೆ, ಫಲಪ್ರದವಾಗಲಿಲ್ಲ.

ಅರ್ಧ ಗಂಟೆ ಬಳಿಕ ಕಲಾಪ ಆರಂಭವಾಗುತ್ತಿದ್ದಂತೆಯೇ ಕಾಂಗ್ರೆಸ್ ಸದಸ್ಯರು ಸಭಾಪತಿ ಪೀಠದ ಎದುರು ಧರಣಿ ಆರಂಭಿಸಿದರು. 15 ಸದಸ್ಯರನ್ನು ಒಂದು ದಿನದ ಮಟ್ಟಿಗೆ ಅಮಾನತ್ತು ಮಾಡಿದ್ದರ ಹಿಂದೆ ದುರದ್ದೇಶವಿದೆ ಎಂದು ಆರೋಪಿಸಿದರು. ಪ್ರತಿಭಟನೆಯ ಭಾಗವಾಗಿ ಟ್ರ್ಯಾಕ್ಟರ್‌ನಲ್ಲಿ ಸುವರ್ಣ ವಿಧಾನಸೌಧಕ್ಕೆ ಬರುತ್ತಿದ್ದ ತಮ್ಮನ್ನು ಮೂರು ಗಂಟೆಗಳ ಕಾಲ ಪೊಲೀಸರು ತಡೆ ಹಿಡಿದಿದ್ದರು ಎಂದು ಆರೋಪಿದರು.

**ಇತಿಹಾಸದಲ್ಲೇ ಮೊದಲು:** ವಿಧಾನ ಪರಿಷತ್‌ಗೆ ಶತಮಾನದ ಇತಿಹಾಸವಿದೆ. ವಿರೋಧ ಪಕ್ಷದ ನಾಯಕರನ್ನು ಸದನದಿಂದ ಅಮಾನತ್ತು ಮಾಡಿದ ಉದಾಹರಣೆಯೇ ಇರಲಿಲ್ಲ. ಸಚಿವರ ವಿರುದ್ಧದ ಆರೋಪದ ಕುರಿತು ಚರ್ಚೆಗೆ ಆಗ್ರಹಿಸಿದ ವಿರೋಧ ಪಕ್ಷದ ಸದಸ್ಯರನ್ನು ಅಮಾನತ್ತು ಮಾಡುವ ಮೂಲಕ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ನೇತೃತ್ವದ ಸರ್ಕಾರ ನಾಚಿಕೆಗೇಡಿನ ವರ್ತನೆ ಪ್ರದರ್ಶಿಸಿದೆ' ಎಂದು ವಿರೋಧ ಪಕ್ಷದ ನಾಯಕ ಎಸ್.ಆರ್.ಪಾಟೀಲ ಆರೋಪಿಸಿದರು.

ಈ ದಿನ ಸದನಕ್ಕೆ ಬರದಂತೆ ಪೊಲೀಸರು ತಡೆದಿದ್ದಾರೆ. ಕಾನೂನು ಸುವ್ಯವಸ್ಥೆ ವಿಭಾಗದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಸೂಚನೆಯಂತೆ ಇಲ್ಲಿನ ಐಜಿಪಿ, ನಗರ ಪೊಲೀಸ್ ಕಮಿಷನರ್ ಮತ್ತು ಎಸ್‌ಪಿ ಕಾಂಗ್ರೆಸ್ ಶಾಸಕರು ಸದನಕ್ಕೆ ಬರುವುದಕ್ಕೆ ಅಡ್ಡಿಪಡಿಸಿದ್ದಾರೆ. ಸದನದ ರಕ್ಷಕರಾದ ಸಭಾಪತಿ ಈ ಪೊಲೀಸ್ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಬೇಕೆ ಎಂದು ಆಗ್ರಹಿಸಿದರು.

ಕಾಂಗ್ರೆಸ್ ಮತ್ತು ಬಿಜೆಪಿ ಸದಸ್ಯರ ನಡುವೆ ಕೆಲಕಾಲ ವಾಕ್ಸಮರ ನಡೆಯಿತು. ಧರಣಿ ಕೈಬಿಡುವಂತೆ ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ಮನವಿ ಮಾಡಿದರು. ಅದಕ್ಕೆ ಕಾಂಗ್ರೆಸ್ ಸದಸ್ಯರು ಮಣಿಯಲಿಲ್ಲ.

'ಪೊಲೀಸರು ನಿಮ್ಮನ್ನು ತಡೆದಿರುವ ಮಾಹಿತಿ ಇರಲಿಲ್ಲ. ನಮಗೆ ಮಾಹಿತಿ ಬರುತ್ತಿದ್ದಂತೆಯೇ ತಕ್ಷಣ ಪೊಲೀಸ್ ಅಧಿಕಾರಿಗಳಿಗೆ ನಿರ್ದೇಶನ ನೀಡಿದ್ದೇವೆ. ಸರ್ಕಾರದ ಅರಿವಿಗೆ ಬಾರದೇ ಹೀಗಾಗಿದೆ. ಪೊಲೀಸರು ಭದ್ರತಾ ದೃಷ್ಟಿಕೋನದಿಂದ ಹೀಗೆ ಮಾಡಿರಬಹುದು. ವಿಷಯವನ್ನು ಬೆಳೆಸದೇ ಧರಣಿ ಕೈಬಿಡಬೇಕು' ಎಂದು ಮಾಧುಸ್ವಾಮಿ ಮನವಿ ಮಾಡಿದರು.

ಆದರೆ, ಕಾಂಗ್ರೆಸ್ ಸದಸ್ಯರು ಸರ್ಕಾರದ ಮನವಿಯನ್ನು ತಿರಸ್ಕರಿಸಿದರು. ಮತ್ತೆ ಸದನವನ್ನು ಮುಂದೂಡಲಾಯಿತು. ಮಧ್ಯಾಹ್ನ ಭೋಜನ ವಿರಾಮದ ಬಳಿಕ ಕಲಾಪ ಆರಂಭವಾಗುತ್ತಿದ್ದಂತೆ ಕಾಂಗ್ರೆಸ್ ಸದಸ್ಯರು ಧರಣಿ ಮುಂದುವರಿಸಿದರು. ಸಚಿವರ ವಿರುದ್ಧದ ಭೂಕಬಳಿಕೆ ಆರೋಪದ ಕುರಿತು ಅನ್ಯ ರೂಪದಲ್ಲಿ ಚರ್ಚೆಗೆ ಅವಕಾಶ ನೀಡುವ ಸಭಾಪತಿಯವರ ಭರವಸೆ ಆಧರಿಸಿ ಧರಣಿ ಕೈಬಿಟ್ಟರು.

ಆಧಾರ:ಪ್ರಜಾವಾಣಿ, ದಿನಾಂಕ:17.12.2021

## 103. ಕನ್ನಡ ಬಾವುಟಕ್ಕೆ ಅಪಮಾನ : ಸದನದಲ್ಲಿ ಖಂಡನಾ ನಿರ್ಣಯ

ಮಹಾರಾಷ್ಟ್ರದಲ್ಲಿ ಕನ್ನಡ ಬಾವುಟ ಸುಟ್ಟು ಅಪಮಾನ ಮಾಡಿರುವ ಬಗ್ಗೆ ವಿಧಾನಸಭೆಯಲ್ಲಿ ಖಂಡನಾ ನಿರ್ಣಯ ತೆಗೆದುಕೊಳ್ಳಲಾಗಿದೆ. ಹಾಗೆಯೇ ಈ ನಿರ್ಧಾರವನ್ನು ಮಹಾರಾಷ್ಟ್ರ ಸರ್ಕಾರಕ್ಕೆ ಕಳುಹಿಸಿ ದುಷ್ಕೃತ್ಯ ನಡೆಸಿದ ಪುಂಡರಿಗೆ ಕಠಿಣ ಶಿಕ್ಷಣ ಶಿಕ್ಷೆ ನೀಡುವಂತೆ ಆಗ್ರಹಿಸಲು ತೀರ್ಮಾನಿಸಲಾಯಿತು. ಮಹಾರಾಷ್ಟ್ರದಲ್ಲಿ ಕನ್ನಡ ಬಾವುಟ ಸುಟ್ಟಿರುವ ಬಗ್ಗೆ ಸದನದಲ್ಲಿ ಆಕ್ರೋಶ ಹೊರಹಾಕಿದ ಜೆಡಿಎಸ್ ಸದಸ್ಯ ಅನ್ನದಾನಿ, ಇಂತಹ ಪುಂಡರ ವಿರುದ್ಧ ಸರ್ಕಾರ ಕಠಿಣ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸಿ, ಜೆಡಿಎಸ್ ಸದಸ್ಯರೊಂದಿಗೆ ಸದನದ ಬಾವಿಗೆ ಇಳಿದು ಪ್ರತಿಭಟಿಸಿದರು. ಪ್ರತಿ ಪಕ್ಷದ ನಾಯಕ ಸಿದ್ದರಾಮಯ್ಯ ಮಾತನಾಡಿ, ಕನ್ನಡ ಬಾವುಟ ಸುಟ್ಟಿರುವ ಮಹಾರಾಷ್ಟ್ರದ ಪುಂಡರು ಮತಿಹೀನರು. ಒಕ್ಕೂಟ ವ್ಯವಸ್ಥೆಯಲ್ಲಿ ಈ ರೀತಿ ಮಾಡುವುದು ಸರಿಯಲ್ಲ.

ಭಾಷಾವಾರು ಪ್ರಾಂತ್ಯ ಮಾಡಿಕೊಂಡಿರುವುದರಿಂದ ಸಾಮರಸ್ಯ ಅತೀ ಅಗತ್ಯ. ಭಾವನಾತ್ಮಕ ಸಂಬಂಧ, ಪರಸ್ಪರ ಗೌರವ ಇರಬೇಕಾಗುತ್ತದೆ. ಇಂತಹ ಘಟನೆ ರಾಜ್ಯ ರಾಜ್ಯಗಳ ನಡುವೆ ದ್ವೇಷ ಬೆಳೆಯುವಂತೆ ಮಾಡುತ್ತದೆ. ಇದಕ್ಕೆ ಅವಕಾಶ ನೀಡಬಾರದು. ಖಂಡನಾ ನಿರ್ಣಯ ತೆಗೆದುಕೊಳ್ಳಬೇಕು. ಕಾಂಗ್ರೆಸ್ ಪಕ್ಷ ಅದಕ್ಕೆ ಪೂರ್ಣ ಬೆಂಬಲ ಸೂಚಿಸಲಿದೆ ಎಂದರು. ಕಂದಾಯ ಸಚಿವ ಆರ್.ಅಶೋಕ್ ಮಾತನಾಡಿ, ಕನ್ನಡ ಬಾವುಟ ಸುಟ್ಟಿರುವ ಪುಂಡರಿಗೆ ಶಿಕ್ಷೆ ಆಗಲೇಬೇಕು. ಈ ಘಟನೆಯಿಂದ ನಮಗೆಲ್ಲರಿಗೂ ನೋವಾಗಿದೆ. ನೆಲ, ಜಲ, ಭಾಷೆ ರಕ್ಷಣೆ ಎಲ್ಲರ ಕರ್ತವ್ಯವಾಗಿದೆ. ಮಹಾರಾಷ್ಟ್ರದ ಶಿವಸೇನೆ, ಎಂಇಎಸ್ ಪುಂಡರು ಗಡಿ ಭಾಗದಲ್ಲಿ ಪುಂಡಾಟಿಕೆ ಮಾಡುತ್ತಿದ್ದಾರೆ. ಕಿಡಿಗೇಡಿಗಳನ್ನು ಪುಂಡರನ್ನು ಮಟ್ಟಹಾಕಬೇಕು. ಖಂಡನಾ ನಿರ್ಣಯ ತೆಗೆದುಕೊಳ್ಳಲು ನಮ್ಮದು ಸಹಮತವಿದೆ. ಭಾಷಾ ದಳ್ಳುರಿಗೆ ಕಾರಣವಾಗುವ ಇಂತಹ ದುಷ್ಟರನ್ನು ಮಟ್ಟಹಾಕಬೇಕು ಎಂದು ಹೇಳಿದರು.

ಆಧಾರ:ಉದಯವಾಣಿ, ದಿನಾಂಕ:17.12.2021

## 104. ಶಿಶುಪಾಲನಾ ರಜೆ ಕುರಿತು ಸ್ವಾರಸ್ಯದ ಚರ್ಚೆ

ಶಿಶುಪಾಲನಾ ರಜೆ, ಶಿಶು ಎಂದು ಪರಿಗಣಿಸುವ ವಯೋಮಿತಿ, ಡಿಲೆವರಿ ವಿಚಾರಗಳಿಗೆ ಸಂಬಂಧಿಸಿದಂತೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಮತ್ತು ಹಿರಿಯ ಸದಸ್ಯ ಆಯನೂರು ಮಂಜುನಾಥ್ ನಡುವೆ ಸ್ವಾರಸ್ಯಕರ ಚರ್ಚೆ ನಡೆದು ಸದನವನ್ನು ನಗೆಗಡಲಲ್ಲಿ ತೇಲುವಂತೆ ಮಾಡಿತು.

ಆಯನೂರು ಮಂಜುನಾಥ್ ಅವರು ಕೇಳಿದ್ದ ಶಿಶುಪಲನಾ ರಜೆ ವಿಚಾರದಲ್ಲಿ ತಾಯಿ ಮೃತಪಟ್ಟರೆ ಮಗುವಿನ ಪೋಷಣೆಗೆ ಆಕೆಯ ಪತಿಗೆ ರಜೆ ಅನ್ವಯಿಸುತ್ತದೆಯೇ? ಶಿಶು ಎಂದು ಪರಿಗಣಿಸುವ ವಯೋಮಿತಿ ಎಷ್ಟು ಎಂಬಿತ್ಯಾದಿ ಪ್ರಶ್ನೆಗಳಿಗೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ನೀಡಿದ ಉತ್ತರದಲ್ಲಿ, 'ಸರ್ಕಾರಿ ಮಹಿಳಾ ಅಧಿಕಾರಿ/ಸಿಬ್ಬಂದಿಗೆ 18 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಿದ್ದರೆ ಈ ನಿಯಮವನ್ನು ಬಳಸಿಕೊಳ್ಳಬಹುದು. ಇದಕ್ಕಾಗಿ ಯಾವುದೇ ಪ್ರತ್ಯೇಕ ದಾಖಲೆ ನೀಡುವ ಅಗತ್ಯವಿಲ್ಲ' ಎಂದು ಹೇಳಲಾಗಿತ್ತು.

ಇದಕ್ಕೆ ಮರು ಪ್ರಶ್ನೆ ಎತ್ತಿದ ಆಯನೂರು ಮಂಜುನಾಥ್, '18 ವರ್ಷದೊಳಗೆ ಇರುವ ಎಲ್ಲರೂ ಶಿಶುಗಳು ಎನ್ನುವುದಾದರೆ ಯೌವನವನ್ನು ಯಾವ ವಯಸ್ಸಿಗೆ ಹೇಳಬೇಕು? 18 ವರ್ಷದೊಳಗಿನ ಮಗು ಅತ್ಯಾಚಾರ ಮಾಡಿದರೆ ಅದನ್ನು ಶಿಶು ಅತ್ಯಾಚಾರ ಎನ್ನಬೇಕೆ' ಎಂದು ಪ್ರಶ್ನಿಸಿದರು.

ಇದಕ್ಕೆ ಮುಖ್ಯಮಂತ್ರಿ ಅವರು, 'ಆಯನೂರು ಪ್ರಶ್ನೆಗಳೇ ವಿಭಿನ್ನ. 18 ವರ್ಷದೊಳಗಿನ ಮಕ್ಕಳನ್ನು ಶಿಶುವೆಂದು ಕೇಂದ್ರ ಸರ್ಕಾರ ಹೇಳಿದೆ. ಆದರೆ, ದೈಹಿಕ ಬದಲಾವಣೆಗಳಿಗೂ ಇದಕ್ಕೂ ಸಂಬಂಧವಿಲ್ಲ' ಎಂದರು.

ಬಳಿಕ ಆಯನೂರು ಮಂಜುನಾಥ್ ಅವರು, 'ತಾಯಿ ಮೃತಪಟ್ಟಾಗ ಮಗುವಿನ ಪೋಷಣೆಗೆ ತಂದೆಗೆ ಏಕೆ ಈ ಶಿಶುಪಾಲನಾ ರಜೆ ಇರುವುದಿಲ್ಲ' ಎಂದು ಪ್ರಶ್ನಿಸಿದಾಗ, 'ಸಾಮಾನ್ಯವಾಗಿ ತಾಯಿ ಮಗುವಿನ ಪಾಲನೆ ಮಾಡುತ್ತಾಳೆ. ಆದ್ದರಿಂದ ಈ ರೀತಿ ರಜೆ ನೀಡಲಾಗಿದೆ. ವಿಧುರ ತಂದೆಯ ಬಗ್ಗೆ ಪ್ರಸ್ತಾಪವಿಲ್ಲ' ಎಂದು ಮುಖ್ಯಮಂತ್ರಿ ಸ್ಪಷ್ಟಪಡಿಸಿದರು. ಆದರೂ ಆಯನೂರು ಮಂಜುನಾಥ್ ತಮ್ಮ ವಾದ ಮುಂದುವರಿಸಿದ್ದರಿಂದ, ಮಂಜುನಾಥ್ ಅವರೊಂದಿಗೆ 'ವಿಶೇಷ ಸಭೆ ನಡೆಸಿ ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಮನವಿ ಮಾಡಲಾಗುವುದು ಎಂದು ಸಿಎಂ ಹೇಳಿದರು. ಸಚಿವ ಜೆ.ಸಿ.ಮಾಧುಸ್ವಾಮಿ, 'ಒಂದು ವೇಳೆ ತಂದೆ ತನ್ನ ಮಗುವಿಗೆ ಎದೆಹಾಲು ಕುಡಿಸುವುದಾದರೆ ಆರು ತಿಂಗಳು ರಜೆ ನೀಡಬಹುದು' ಎಂದಾಗ ಸಭೆ ನಗೆಗಡಲಲ್ಲಿ ತೇಲಿತು.

ಆಧಾರ:ಕನ್ನಡಪ್ರಭ, ದಿನಾಂಕ:17.12.2021

## 105. ಉಪನ್ಯಾಸಕರ ವರ್ಗ ಶೇ. 10 ಮೀರುವಂತಿಲ್ಲ

ಪದವಿಪೂರ್ವ ಕಾಲೇಜುಗಳ ಪ್ರಾಂಶುಪಾಲರು, ಉಪನ್ಯಾಸಕರ ವರ್ಗಾವಣೆಗೂ ಅನ್ವಯವಾಗುವಂತೆ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಕಾಯಿದೆಗೆ ತಿದ್ದುಪಡಿ ತರುವ ಉದ್ದೇಶದಿಂದ ವಿಧಾನಸಭೆಯಲ್ಲಿ ವಿಧೇಯಕ ಮಂಡಿಸಲಾಯಿತು. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವ ಬಿ.ಸಿ.ನಾಗೇಶ್ ಅವರು ತಿದ್ದುಪಡಿ ವಿಧೇಯಕವನ್ನು ಮಂಡಿಸಿದರು.

ಈ ತಿದ್ದುಪಡಿಯ ಪ್ರಕಾರ, "ಪ್ರಾಂಶುಪಾಲರ ಅಥವಾ ಉಪನ್ಯಾಸಕರ ಆರಂಭಿಕ ನೇಮಕಾತಿ ಅಥವಾ ಬಡ್ತಿಯು ವಲಯ 'ಸಿ'ಯಲ್ಲಿರುವ ಸರ್ಕಾರಿ ಪದವಿ ಪೂರ್ವ ಕಾಲೇಜು ಆಗಿರಬೇಕು. ಆದರೆ, ಪದವಿ ಪೂರ್ವ ಶಿಕ್ಷಣ ಇಲಾಖೆಗೆ ರಾಜ್ಯವು ಏಕ ಘಟಕ ಆಗಿರುವುದರಿಂದ ಉಪನ್ಯಾಸಕರಿಗೆ ವಲಯ ವರ್ಗಾವಣೆ ಅನ್ವಯಿಸುವುದಿಲ್ಲ. ಒಂದು ವರ್ಷದಲ್ಲಿ ಜೇಷ್ಠತಾ ಘಟಕವೊಂದರಲ್ಲಿ ಉಪನ್ಯಾಸಕರ ವರ್ಗಾವಣೆಯು ಶೇ.10 ಅಥವಾ ರಾಜ್ಯ ಸರ್ಕಾರ ನಿಗದಿಪಡಿಸುವ ಕನಿಷ್ಠ ಮಿತಿ ಮೀರಬಾರದು. ಅಲ್ಲದೆ, ಉಪನ್ಯಾಸಕರು 'ಆ' ವಲಯಕ್ಕೆ ವರ್ಗಾವಣೆಗೆ ಅರ್ಹರಾಗಿರುವ ಮತ್ತು 5 ವರ್ಷಗಳ ಬಾಕಿ ಉಳಿದ ಸೇವೆಯನ್ನು ಹೊಂದಿರುವ ಅಥವಾ ಕನಿಷ್ಠ 7 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುವ ಷರತ್ತಿಗೆ ಅನ್ವಯಿಸಿ ಒಮ್ಮೆ ಮಾತ್ರ ವರ್ಗಾವಣೆ ಅವಕಾಶ ಕಲ್ಪಿಸಬಹುದು.

ಹಾಲಿ ಕಾಯಿದೆ ಪ್ರಕಾರ, ಪರೀಕ್ಷೆ ನಡೆಸಿ, ಮೆರಿಟ್ ಆಧರಿಸಿ ಕೌನ್ಸೆಲಿಂಗ್ ಮೂಲಕ ಮಾತ್ರ ಸ್ಥಳ ನಿಯುಕ್ತಿಗೊಳಿಸಬೇಕು. ಅಂಥ ಹುದ್ದೆಗಳಿಗೆ ಕನಿಷ್ಠ ಮತ್ತು ಗರಿಷ್ಠ ಅವಧಿ ಕ್ರಮವಾಗಿ ಮೂರು ಮತ್ತು ಐದು ವರ್ಷಗಳು. ಆದರೆ, ಈ ನಿಯಮ ಉಪನ್ಯಾಸಕರಿಗೆ ಅನ್ವಯಿಸುವುದಿಲ್ಲ ಎಂದು ವಿಧೇಯಕದಲ್ಲಿ ಪ್ರಸ್ತಾಪಿಸಲಾಗಿದೆ.

2018–19ರಲ್ಲಿ ಕಡ್ಡಾಯ ವರ್ಗಾವಣೆಯಾಗಿ ಪದವಿಪೂರ್ವ ಕಾಲೇಜಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರಿಗೆ, ಖಾಲಿ ಹುದ್ದೆಗಳ ಲಭ್ಯತೆ ಆಧರಿಸಿ ಅವರು ಕಾರ್ಯನಿರ್ವಹಿಸುತ್ತಿರುವ ಜೇಷ್ಠತಾ ಘಟಕದೊಳಗೆ ಒಂದು ಬಾರಿ ವರ್ಗಾವಣೆಯ ಸ್ಥಳ ಆಯ್ಕೆ ಮಾಡಲು ಕೂಡ ಅವಕಾಶ ನೀಡಲಾಗಿದೆ. ವರ್ಗಾವಣೆಗೆ ಸಂಬಂಧಿಸಿದ ಕುಂದುಕೊರತೆಗಳ ಪರಿಶೀಲನೆಗೆ ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು, ಜಂಟಿ ನಿರ್ದೇಶಕರು (ಆಡಳಿತ) ಮತ್ತು ಉಪ ನಿರ್ದೇಶಕರು (ಆಡಳಿತ) ಅವರನ್ನು ಒಳಗೊಂಡ ಸಮಿತಿಯ ಮುಂದೆ ಅಂಥ ಕುಂದುಕೊರತೆಗಳ ನಿವಾರಣೆಗೆ ಅರ್ಜಿ ಸಲ್ಲಿಸಬಹುದು ಎಂದು ವಿಧೇಯಕದಲ್ಲಿ ವಿವರಿಸಲಾಗಿದೆ.

ಆಧಾರ:ವಿಜಯಕರ್ನಾಟಕ, ದಿನಾಂಕ:17.12.2021

## 106. ಕಾಂಗ್ರೆಸ್‌ನಿಂದ ರಣ ಕಹಳೆ

ಸಭಾಪತಿ ರೂಲಿಂಗ್ ಪ್ರಶ್ನಿಸಿ ಒಂದು ದಿನದ ಮಟ್ಟಿಗೆ ಅಮಾನತ್ತುಗೊಂಡ ಕಾಂಗ್ರೆಸ್ ಸದಸ್ಯರು ಮರುದಿನವೂ ಸದನದ ಬಾವಿಗಿಳಿದು ಪ್ರತಿಭಟನೆ ಮುಂದುವರಿಸಿದ ಹಿನ್ನೆಲೆಯಲ್ಲಿ ಆಡಳಿತ ಮತ್ತು ಪ್ರತಿಪಕ್ಷ ಸದಸ್ಯರ ನಡುವೆ ಅರ್ಧಗಂಟೆಗೂ ಹೆಚ್ಚು ಕಾಲ ಆರೋಪ ಪ್ರತ್ಯಾರೋಪ ನಡೆದು ಪರಿಷತ್‌ನಲ್ಲಿ ಗದ್ದಲಕ್ಕೆ ಅವಕಾಶ ಮಾಡಿಕೊಟ್ಟಿತು.

11 ಗಂಟೆಗೆ ಪ್ರಾರಂಭವಾಗಬೇಕಿದ್ದ ಕಲಾಪ ಮಧ್ಯಾಹ್ನ 1.30ಕ್ಕೆ ಆರಂಭವಾಯಿತು. ಭೂಕಬಳಿಕೆ ವಿಚಾರದಲ್ಲಿ ಸಚಿವರು ಮತ್ತು ಶಾಸಕರ ರಾಜೀನಾಮೆಗೆ ಕಾಂಗ್ರೆಸ್ ಶಾಸಕರು ಪಟ್ಟುಹಿಡಿದರು.

ಕಾಂಗ್ರೆಸ್ ಸದಸ್ಯರ ವಿರುದ್ಧ ಸಚಿವರಾದ ಜೆ.ಸಿ.ಮಾಧುಸ್ವಮಿ, ಕೋಟಾ ಶ್ರೀನಿವಾಸ ಪೂಜಾರಿ ಸೇರಿದಂತೆ ಅನೇಕರು ಮಾತಿನ ವಾಗ್ಬಾಣ ಹರಿಬಿಟ್ಟರು. ಈ ಸಂದರ್ಭದಲ್ಲಿ ಕಾಂಗ್ರೆಸ್‌ನ

ಎಂ.ನಾರಾಯಣಸ್ವಾಮಿ ಮತ್ತು ಕಾನೂನು ಸಚಿವ ಜೆ.ಸಿ.ಮಾಧುಸ್ವಾಮಿ ನಡುವೆ ವಾಗ್ವಾದ ನಡೆದಿದ್ದರಿಂದ ಸಭಾಪತಿ ಬಸವರಾಜ ಹೊರಟ್ಟಿ ಮಧ್ಯಪ್ರವೇಶಿಸುವ ಅನಿವಾರ್ಯತೆ ಸೃಷ್ಟಿಯಾಯಿತು. ನಿಲುವಳಿ ಸೂಚನೆ ತಿರಸ್ಕರಿಸಿದ್ದನ್ನು ಸಭಾಪತಿ ಬಸವರಾಜ ಹೊರಟ್ಟಿ ಮತ್ತೊಮ್ಮೆ ಸೂಚ್ಯವಾಗಿ ಎಚ್ಚರಿಸಿದರು.

ಆಗ ಸಚಿವ ಜೆ.ಸಿ.ಮಾಧುಸ್ವಾಮಿ, "ಸದನದ ನ್ಯಾಯಾಧೀಶ ಸ್ಥಾನದಲ್ಲಿರುವ ಸಭಾಪತಿಗಳ ರೂಲಿಂಗ್ ಧಿಕ್ಕರಿಸುವ ಸದಸ್ಯರ ನಡವಳಿಕೆ ಅಸಂಬದ್ಧ" ಎಂದು ಹರಿಹಾಯ್ದರು.

ವಿಪಕ್ಷ ಸದಸ್ಯರ ಆಗ್ರಹದಂತೆ ಸಿಎಂ ಬಸವರಾಜ ಬೊಮ್ಮಾಯಿ ಅವರ ಗಮನಕ್ಕೆ ಈ ವಿಷಯ ತರಲಾಗಿದೆ. ಮುಂದಿನ ಕ್ರಮ ಸಿಎಂ ತೆಗೆದುಕೊಳ್ಳಲಿದ್ದಾರೆ ಎಂದು ಮನವರಿಕೆ ಮಾಡಿಕೊಟ್ಟರು. ಆಗ ಸಿಎಂ ಉತ್ತರಿಸಲಿ ಎಂದು ಕಾಂಗ್ರೆಸ್ ಶಾಸಕರು ಪಟ್ಟು ಹಾಕಿದರು. ಗದ್ದಲ ಮಿತಿ ಮೀರುತ್ತಿದ್ದಂತೆಯೇ ಸದನವನ್ನು ಮಧ್ಯಾಹ್ನ 3ಕ್ಕೆ ಮುಂದೂಡಲಾಯಿತು.

ಭೋಜನ ವಿರಾಮದ ನಂತರವೂ ಪ್ರತಿಭಟನೆ ಮುಂದುವರಿಸಿದ ಸದಸ್ಯರಿಗೆ ವಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಧರಣಿ ಕೈಬಿಡುವಂತೆ ಮನವಿ ಮಾಡಿಕೊಂಡರು. ಈ ಹಿನ್ನೆಲೆಯಲ್ಲಿ ಸದಸ್ಯರು ಪ್ರತಿಭಟನೆ ಕೈಬಿಟ್ಟು ತಮ್ಮ ಆಸನಗಳಿಗೆ ತೆರಳಿದರು.

**ತಡವಾಗಿ ಆರಂಭವಾದ ಕಲಾಪ:** ಗುತ್ತಿಗೆ ಕಾಮಗಾರಿಯಲ್ಲಿ ಕಮಿಷನ್ ವಿರುದ್ಧದ ಪ್ರತಿಭಟನೆಯ ಹಿನ್ನೆಲೆಯಲ್ಲಿ ವಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಮಧ್ಯಾಹ್ನ 1.25ಕ್ಕೆ ಪರಿಷತ್ ಸದನಕ್ಕೆ ಆಗಮಿಸಿದರು. ಇದರಿಂದ ಕಲಾಪ ವಿಳಂಬವಾಗಿ ಆರಂಭವಾಯಿತು.

ಆಧಾರ:ವಿಜಯ ಕರ್ನಾಟಕ,ದಿನಾಂಕ:17.12.2021

## 107. Stringent anti-conversion Bill being given final touches

The proposed anti-conversion law, The Karnataka Right to Freedom of Religion Bill, 2021, that has stringent provisions for forced or induced conversion, is likely to come before the State Cabinet.

Government sources said the draft Bill is "almost ready", and is likely to be discussed in the Cabinet before it is piloted in the Assembly later next week.

As per the draft of the Bill, forced conversion will be non-bailable and non-cognisable. It has some stringent provisions, including imprisonment for not less than three years and minimum fine of ₹25,000. The burden of proof as to whether conversion was by force lies with the religious converter.

The draft of the Bill says that the Law Commission of Karnataka, after studying various laws on the subject and considering the situation in the State in its 30th report, has made recommendation to the Government to enact a suitable law.

**1977 Judgement**

The statement of objects and reasons cites the 1977 judgement of the Supreme Court in Rev. Stanislaus vs. State of Madhya Pradesh and Orissa that said that the right to propagate religion under Article 25 does not include the right to convert another person. It said, "In recent times the State has noticed many instances of conversion by means of allurement, coercion, force, fraudulent means, and also mass conversion. These instances caused disturbance of public

order in the State. To prevent such instances which cause disturbance to public order and to punish persons indulging in such acts no legislation is in existence in the State.”

Courtesy: The Hindu , dt:17.12.2021

## 108. ಹಕ್ಕುಚ್ಯುತಿ ಸಮಿತಿಗೆ ವಹಿಸಿ ಸಭಾಪತಿ ರೂಲಿಂಗ್

ವಿಧಾನ ಮಂಡಲ ಕಲಾಪ ನಡೆಯುವಾಗಲೇ ಪ್ರತಿಪಕ್ಷ ನಾಯಕರು ಸೇರಿ ಸದಸ್ಯರನ್ನು ವಿಧಾನಸೌಧ ಪ್ರವೇಶಿಸಲು ಅಡ್ಡಿ ಮಾಡಿದ ಆರೋಪದ ಮೇಲೆ ಇಬ್ಬರು ಹಿರಿಯ ಪೊಲೀಸ್ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಕುರಿತು ಹಕ್ಕುಚ್ಯುತಿ ಸಮಿತಿಗೆ ವಹಿಸಿ ಸಭಾಪತಿ ಬಸವರಾಜ ಹೊರಟ್ಟಿ ರೂಲಿಂಗ್ ನೀಡಿದರು.

ವಿಧಾನ ಪರಿಷತ್ತಿನಲ್ಲಿ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಹಕ್ಕುಚ್ಯುತಿ ಪ್ರಸ್ತಾವ ಮಂಡಿಸಿ, ಸರ್ಕಾರದ ಕಾರ್ಯವೈಖರಿಯನ್ನು ಪ್ರಶ್ನಿಸುವ ಮತ್ತು ಆ ಬಗ್ಗೆ ರಾಜ್ಯದ ಜನರ ಗಮನ ಸೆಳೆಯಲು ಪ್ರತಿಪಕ್ಷಗಳು ಕೆಲಸ ಮಾಡಬೇಕಾಗುತ್ತದೆ. ಟ್ರಾಕ್ಟರ್‌ನೊಂದಿಗೆ ಬಂದ ನಮ್ಮನ್ನು ಸುವರ್ಣಸೌಧ ಒಳಬಿಡಲು ಇಬ್ಬರು ಹಿರಿಯ ಪೊಲೀಸ್ ಅಧಿಕಾರಿಗಳಾದ ತ್ಯಾಗರಾಜನ್ ಮತ್ತು ಸತೀಶ್‌ಕುಮಾರ್ ಉದ್ಧಟತನ ಪ್ರದರ್ಶಿಸಿದರು. ಇದರಿಂದ ಮೂರು ಗಂಟೆ ವಿಳಂಬವಾಗಿ ನಾವು ಕಲಾಪಕ್ಕೆ ಬರಬೇಕಾಯಿತು ಎಂದು ಆಪಾದಿಸಿದರು.

ವಿಧಾನಮಂಡಲ ಕಲಾಪ ನಡೆಯುವ ಸಂದರ್ಭದಲ್ಲಿ ಶಾಸಕರು ಸಭಾಪತಿಗಳ ಸುಪರ್ದಿನಲ್ಲಿರುತ್ತಾರೆ. ಶಾಸಕರ ಹಕ್ಕುಗಳ ಕುರಿತು ಈ ಅಧಿಕಾರಿಗಳಿಗೆ ಮನವರಿಕೆ ಮಾಡಿಕೊಟ್ಟರೂ ಪ್ರಯೋಜನವಾಗಲಿಲ್ಲ. ಹೀಗಾದರೆ ಹೇಗೆ? ಕೂಡಲೇ ಈ ಅಧಿಕಾರಿಗಳ ವಿರುದ್ಧ ಕಠಿಣ ಕ್ರಮಕೈಗೊಳ್ಳಬೇಕು ಎಂದು ಆಗ್ರಹಿಸಿದರು.

**ಮಾತಿನ ಚಕಮಕಿ :** ಹಕ್ಕುಚ್ಯುತಿ ಮಂಡನೆ ವೇಳೆ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಅವರು, ಟ್ರ್ಯಾಕ್ಟರ್ ಈ ದೇಶದ ರೈತರ ವಾಹನ. ಇದನ್ನು ಒಳಗೆ ಬಿಡುವುದಿಲ್ಲ ಎಂದರೆ ಹೇಗೆ ಎಂದು ಪ್ರಶ್ನಿಸಿದರು. ಇದಕ್ಕೆ ಸಚಿವ ನಾರಾಯಣಗೌಡ ನೀವು ದಿನಾಲು ಟ್ರ್ಯಾಕ್ಟರ್‌ನಲ್ಲೇ ಬರಬೇಕಾಗಿತ್ತು ಎಂದು ವ್ಯಂಗ್ಯವಾಗಿ ಪ್ರಶ್ನಿಸಿದರು. ಕಾಂಗ್ರೆಸ್ ಸದಸ್ಯರು ಕೆಂಡಾಮಂಡಲರಾಗಿ ಸಚಿವ ನಾರಾಯಣಗೌಡ ವಿರುದ್ಧ ಹರಿಹಾಯ್ದರು. ಹಕ್ಕುಚ್ಯುತಿ ಮಂಡಿಸುವಾಗ ಹುಚ್ಚರಂತೆ ಮಾತನಾಡಿದ ನೀವು ಸಚಿವರಾಗಲು ಯೋಗ್ಯರಲ್ಲ. ರಾಜೀನಾಮೆ ಕೊಟ್ಟು ಹೋಗಿ, ನೀವೊಬ್ಬ ಅಯೋಗ್ಯಮಂತ್ರಿ ನಿಮಗೆ ಸೌಜನ್ಯವೇ ಇಲ್ಲ ಎಂದು ಕೂಗಾಡತೊಡಗಿದರು. ಈ ವೇಳೆ ಆಡಳಿತಪಕ್ಷ ಮತ್ತು ಪ್ರತಿಪಕ್ಷ ಸದಸ್ಯರ ನಡುವೆ ಮಾತಿನ ಚಕಮಕಿ ನಡೆಯಿತು.

ಅಂತಿಮವಾಗಿ ಸಭಾಪತಿಗಳು ಮಧ್ಯಪ್ರವೇಶಿಸಿ ಸಚಿವ ನಾರಾಯಣಗೌಡ ಅವರಿಗೆ ಈ ರೀತಿ ಸೌಜನ್ಯ ರಹಿತ ವರ್ತನೆ ಕೊನೆಯಾಗಲಿ, ಇದು ಇನ್ನೊಮ್ಮೆ ಪುನರಾವರ್ತನೆಯಾಗದಂತೆ ನೋಡಿಕೊಳ್ಳಿ ಎಂದು ಎಚ್ಚರಿಸಿದರು.

ಈ ಘಟನೆ ಬಗ್ಗೆ ನನಗೆ ಖೇದವಿದೆ. ನಾನು ಮೊಬೈಲ್ ಕರೆ ಮಾಡಿ ಪ್ರತಿಪಕ್ಷ ನಾಯಕರನ್ನು ಒಳಗೆ ಬಿಡಬೇಕು ಎಂದು ಹೇಳಿದ ಮೇಲೂ ಅವರು ಬಿಟ್ಟಿಲ್ಲ. ಹೀಗಾಗಿ, ಈ ವಿಚಾರವನ್ನು ಹಕ್ಕುಚ್ಯುತಿ ಸಮಿತಿಗೆ ಮುಂದಿನ ಕ್ರಮಕ್ಕಾಗಿ ವಹಿಸಲಾಗುವುದು. ಮೊದಲ ಸಭೆಯಲ್ಲೇ ಈ ಕುರಿತು ನಿರ್ಣಯಿಸಿ ಎಂದು ಸಭಾಪತಿ ರೂಲಿಂಗ್ ನೀಡಿದರು.

ಆಧಾರ:ಉದಯವಾಣಿ,ದಿನಾಂಕ 18.12.2021

## 109. ರಾಜೀನಾಮೆಗೆ ಪಟ್ಟು ಹಿಡಿದು ಕೈ ಧರಣಿ, ಕಲಾಪ ಮುಂದೂಡಿಕೆ

ಸಚಿವ ಭೈರತಿ ಬಸವರಾಜ್ ಹಾಗೂ ಪರಿಷತ್ ಸದಸ್ಯ ಆರ್.ಶಂಕರ್ ವಿರುದ್ಧದ ಭೂಕಬಳಿಕೆ ಆರೋಪ ಕುರಿತಂತೆ ನಿಯಮ 60ರ ನಿಲುವಳಿ ಸೂಚನೆಯಡಿ ಚರ್ಚೆ ವಿಚಾರವಾಗಿ ಕಾಂಗ್ರೆಸ್ ಹಾಗೂ ಬಿಜೆಪಿ ಶಾಸಕರ ವಾಕ್ಸಮರ, ಧಿಕ್ಕಾರ ಘೋಷಣೆಯಿಂದ ವಿಧಾನಸಭೆಯಲ್ಲಿ ಕೋಲಾಹಲದ ಸ್ಥಿತಿ ಸೃಷ್ಟಿಯಾಗಿದ್ದರಿಂದ ಈ ಕಲಾಪವನ್ನು ಮುಂದೂಡಲಾಯಿತು.

ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ, ನಿಲುವಳಿ ಸೂಚನೆಯಡಿ ಪ್ರಸ್ತಾಪಿಸಿದ್ದ ಈ ವಿಚಾರದ ಚರ್ಚೆಗೆ ನಿಯಮಾವಳಿಯಡಿ ಅವಕಾಶವಿಲ್ಲದ ಕಾರಣ ತಿರಸ್ಕರಿಸುವುದಾಗಿ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ ಕಾಗೇರಿ, ರೂಲಿಂಗ್ ನೀಡುತ್ತಿದ್ದಂತೆ ಕಾಂಗ್ರೆಸ್ ಚರ್ಚೆಗೆ ಪಟ್ಟು ಹಿಡಿಯಿತು. ಸಭಾಧ್ಯಕ್ಷರ ನಿರ್ಧಾರವನ್ನು ಸರ್ಕಾರ ಬೆಂಬಲಿಸಿದ್ದು ಬಿಜೆಪಿ – ಕಾಂಗ್ರೆಸ್ ಶಾಸಕರ ನಡುವೆ ಜಟಾಪಟಿಗೆ ಕಾರಣವಾಯಿತು.

"ಭೂಕಬಳಿಕೆ ಪ್ರಕರಣದಲ್ಲಿ ಎಫ್.ಐ.ಆರ್. ದಾಖಲಾಗಿರುವ ಹಿನ್ನೆಲೆಯಲ್ಲಿ ನಿಯಮ 60ರ ನಿಲುವಳಿ ಸೂಚನೆಯಡಿ ಚರ್ಚೆಗೆ ಅವಕಾಶ ನೀಡುವಂತೆ ಸಿದ್ದರಾಮಯ್ಯ ಮನವಿ ಮಾಡಿದರು. ಆಗ ಸ್ಪೀಕರ್, "ನಿಯಮ 60ರ ವ್ಯಾಪ್ತಿಯಲ್ಲಿ ಬರುವುದಿಲ್ಲ" ಎಂದು ರೂಲಿಂಗ್ ನೀಡಿದರು.

**ಗಣಪತಿ ಪ್ರಕರಣ ಪ್ರಸ್ತಾಪ :** ಇದಕ್ಕೆ ಕೋಪಗೊಂಡ ಸಿದ್ದರಾಮಯ್ಯ, "ನಾನು ಪ್ರಸ್ತಾಪಿಸುವ ವಿಚಾರ ಆಲಿಸದೆ ತಿರಸ್ಕರಿಸುವುದು ಎಷ್ಟು ಸರಿ. ಹಿಂದೆ ಇದೇ ಸದನದಲ್ಲಿ ಡಿವೈಎಸ್ಪಿ ಎಂ.ಕೆ.ಗಣಪತಿ ಆತ್ಮಹತ್ಯೆ ಡಿ.ಕೆ.ರವಿ ಪ್ರಕರಣದ ಬಗ್ಗೆಯೂ ಚರ್ಚೆ ನಡೆದಿದೆ. ಆಗ ಕೆ.ಜೆ.ಜಾರ್ಜ್ ರಾಜೀನಾಮೆಗೆ ಆಗ್ರಹಿಸಲಾಗಿತ್ತು. ಇದು ಅದಕ್ಕಿಂತಲೂ ಗಂಭೀರ ಪ್ರಕರಣ ಸಚಿವರು, ಶಾಸಕರ ಮೇಲೆ ಪ್ರಕರಣ ದಾಖಲಾಗಿದ್ದರೂ ರಾಜೀನಾಮೆ ನೀಡಿಲ್ಲ" ಎಂದು ಪ್ರತಿಪಾದನೆ ಮಾಡಿದರು.

"ಗಣಪತಿ ಪ್ರಕರಣದಲ್ಲಿ ಎಫ್ಐಆರ್ ದಾಖಲಾಗದಿದ್ದರೂ ಜಾರ್ಜ್ ರಾಜೀನಾಮೆ ನೀಡಿದ್ದರು. ಅವರ ಪಾತ್ರವಿಲ್ಲದಿರುವುದು ಸಾಬೀತಾದ ಬಳಿಕ ಮತ್ತೆ ಸಚಿವರಾದರು. ಹಾಗೆಯೇ ಸಚಿವರ ರಾಜೀನಾಮೆ ಪಡೆಯಲಿ" ಎಂದು ಸಿದ್ದರಾಮಯ್ಯ ಒತ್ತಡ ಹಾಕಿದರು.

"ಇದೇ ನಿಲುವನ್ನು ನಾನು ಸಿಎಂ ಆಗಿದ್ದಾಗಲೂ ತೆಗೆದುಕೊಂಡಿದ್ದೆ. ಆದರೆ ಅಂದಿನ ಪ್ರತಿಪಕ್ಷದ ನಾಯಕರಾಗಿದ್ದ ಜಗದೀಶ ಶೆಟ್ಟರ್ ನಿಯಮ 60ರಡಿ ವಿಷಯ ಮಂಡಿಸಲು ಕೋರಿದರು. ಸ್ಪೀಕರ್ ಅವಕಾಶ ನೀಡದಿದ್ದಾಗ ಧರಣಿ ನಡೆಸಿದರು. ಆಗ ಬೊಮ್ಮಾಯಿ ಅವರೂ ರಾಜೀನಾಮೆಗೆ ಆಗ್ರಹಿಸಿದ್ದರು. ಗಣಪತಿ ಆತ್ಮಹತ್ಯೆ ಕೊಲೆಯಲ್ಲ ಆತ್ಮಹತ್ಯೆ ಎಂದು ಅಂದು ಹೇಳಿದ್ದು ನ್ಯಾಯಾಲಯದ ಮೇಲೆ ಪ್ರಭಾವ ಬೀರಲಿಲ್ಲವೆ" ಎಂದು ಪ್ರಶ್ನಿಸಿದರು.

ಆಗ ಬೊಮ್ಮಾಯಿ "20 ವರ್ಷಗಳ ಹಿಂದಿನ ಖಾಸಗಿ ಪ್ರಕರಣವನ್ನು ಆತ್ಮಹತ್ಯೆ ಪ್ರಕರಣಕ್ಕೆ ಹೋಲಿಸುವುದು ಸರಿಯಲ್ಲ" ಎಂದು ಹೇಳಿದರೂ ಸಮಾಧಾನಗೊಳ್ಳದ ಸಿದ್ದರಾಮಯ್ಯ, "ನಾನು ಸಿಎಂ ಆಗಿದ್ದ ಅವಧಿಯಲ್ಲಿ ಡಿ.ಕೆ.ರವಿ ಪ್ರಕರಣ ಸೇರಿದಂತೆ 5 ಪ್ರಕರಣಗಳು ಸಿಬಿಐಗೆ ಶಿಫಾರಸಾಗಿತ್ತು. ಆದರೆ ಈ ಪ್ರಕರಣದಲ್ಲಿ ಒಂದು ತಿಂಗಳಾದರೂ ರಾಜೀನಾಮೆ ಪಡೆದಿಲ್ಲ. ನಿಮಗೆ ಸ್ವಲ್ಪವಾದರೂ ಮಾನ ಮರ್ಯಾದೆ ಇದೆಯೇ? ಕೂಡಲೇ ರಾಜೀನಾಮೆ ಪಡೆಯಬೇಕು," ಎಂದು ಆಗ್ರಹಿಸಿದರು.

ಈ ನಡುವೆ ಸ್ಪೀಕರ ಎರಡು ಬಾರಿ ನಿಲುವಳಿ ಸೂಚನೆ ಪ್ರಸ್ತಾಪ ತಿರಸ್ಕರಿಸುವದಾಗಿ ರೂಲಿಂಗ್ ನೀಡಿದರು. ಆಗ ಸಿದ್ದರಾಮಯ್ಯ ಸೇರಿದಂತೆ ಕಾಂಗ್ರೆಸ್ ಸದಸ್ಯರೆಲ್ಲಾ ಸದನದ ಬಾವಿಗಿಳಿದು ಧಿಕ್ಕಾರ ಕೂಗಲಾರಂಭಿಸಿದರು. ಅದಕ್ಕೆ ಪ್ರತಿಯಾಗಿ ಬಿಜೆಪಿ ಶಾಸಕರು ಧಿಕ್ಕಾರ ಘೋಷಣೆ ಹಾಕಲಾರಂಭಿಸಿದರು.

ಸಚಿವ ಬಿ.ಸಿ.ಪಾಟೀಲ್, "ರೈತರ ಸಮಸ್ಯೆಗಳಿಗೆ ಸರ್ಕಾರ ಉತ್ತರ ನೀಡುವುದು ಕಾಂಗ್ರೆಸ್ ಬೇಕಿಲ್ಲ" ಎಂದು ಕುಟುಕಿದರು. ನೆರೆ, ಮಳೆ ಹಾನಿ ಕುರಿತ ಚರ್ಚೆಗೆ ಸರ್ಕಾರದ ಉತ್ತರ ನೀಡುವುದಾಗಿ ಸಚಿವ ಆರ್.ಅಶೋಕ್ ಮುಂದಾದರೂ ಗದ್ದಲದಿಂದ ಉತ್ತರ ನೀಡಲು ಸಾಧ್ಯವಾಗಿಲಿಲ್ಲ.

**ಮಾಧುಸ್ವಾಮಿ ಮಾತಿಗೆ ಆಕ್ಷೇಪ**

ಕಾನೂನು, ನಿಯಮಾವಳಿಯಲ್ಲಿ ಅವಕಾಶವಿಲ್ಲದಿದ್ದರೆ ಚರ್ಚೆಗೆ ಆಸ್ಪದವಿರದು. ಯಾರೋ ಮಾಡಿ ಹೋಗಿದ್ದರೆಂಬ ಕಾರಣಕ್ಕೆ ನಿಯಮ ಪಾಲನೆಯಲ್ಲಿ ವ್ಯತ್ಯಾಸವಾಗಬಾರದು. ನ್ಯಾಯಾಲಯದಲ್ಲಿ ಪ್ರಕರಣವಿರುವುದರಿಂದ ಸದನದಲ್ಲಿ ಚರ್ಚೆಗೆ ಅವಕಾಶ ನೀಡಬಾರದು ಎಂದು ಸಚಿವ ಜೆ.ಸಿ.ಮಾಧುಸ್ವಾಮಿ ಹೇಳಿದರು.

ಆಗ ಮಾಜಿ ಸ್ಪೀಕರ್ ಕೆ.ಆರ್.ರಮೇಶ್‌ಕುಮಾರ್, "ಯಾರೋ, ಎಲ್ಲೋ ಹೇಳಿದ್ದಲ್ಲ, ಹುಣಸೆಮರದ ಕೆಳಗೆ, ಸಂತೆಯಲ್ಲಿ ನಡೆದಿದ್ದಲ್ಲ. ಇದೇ ಸದನದಲ್ಲಿ ಅಶೋಕ್, ಬೊಮ್ಮಾಯಿ, ಶೆಟ್ಟರ್, ಅಪ್ಪಚ್ಚು ರಂಜನ್, ಸುರೇಶ್‌ಕುಮಾರ್ ಎಲ್ಲರೂ ಚರ್ಚಿಸಿದ್ದಾರೆ." ಎಂದು ಮಾರ್ಮಿಕವಾಗಿ ಹೇಳಿದರು. ಬಳಿಕ ಮಾಧುಸ್ವಾಮಿ, "ಎಲ್ಲೋ ನಡೆದಿದು ಎಂದಿಲ್ಲ, ಯಾರದ್ದೋ ಕಾಲದಲ್ಲಿ ಆಗಿದೆ" ಎಂದು ನೆನಪಿಸಿದರು.

ಆಧಾರ:ವಿಜಯ ಕರ್ನಾಟಕ,ದಿನಾಂಕ: 18.12.2021

## 110. ಸರ್ಕಾರಕ್ಕೆ ಚಾಟಿ ಬೀಸಿದ ಸಭಾಧ್ಯಕ್ಷರು

'ಸರ್ಕಾರದಲ್ಲಿ ಕೆಲಸಗಳು ಆಗುತ್ತಿಲ್ಲ, ಆಡಳಿತದಲ್ಲಿ ಹಿಡಿತ ತಪ್ಪುತ್ತಿರುವ ಭಾವನೆ ಮೂಡುತ್ತಿದೆ. ನಮ್ಮ ಕೆಲಸಗಳೇ ಆಗುತ್ತಿಲ್ಲ' ಎಂದು ವಿಧಾನಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಆಕ್ರೋಶ ವ್ಯಕ್ತಪಡಿಸಿದರು.

ನಗರೋತ್ಥಾನ ಮೂರನೇ ಹಂತದ ಯೋಜನೆಗಳಲ್ಲಿ ಕೆಲಸ ಬದಲಾವಣೆಗೆ ಸಂಬಂಧಿಸಿ ಶಾಸಕರ ಬೇಡಿಕೆಗಳನ್ನು ಕಡೆಗಣಿಸುತ್ತಿರುವ ಬಗ್ಗೆ ಅವರು ಸಚಿವರು ಮತ್ತು ಅಧಿಕಾರಿಗಳನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡರು.

ವಿಧಾನಸಭೆಯಲ್ಲಿ ಪ್ರಶ್ನೋತ್ತರ ಅವಧಿಯಲ್ಲಿ ಜೆಡಿಎಸ್‌ನ ಕೆ.ಎಂ.ಶಿವಲಿಂಗೇಗೌಡ ಅವರ ಪ್ರಶ್ನೆಗೆ ಪೌರಾಡಳಿತ ಸಚಿವ ಎಂ.ಟಿ.ಬಿ.ನಾಗರಾಜ್ ಅವರು ಉತ್ತರಿಸುವಾಗ ಸಭಾಧ್ಯಕ್ಷರು ಅಧಿಕಾರಿಗಳ ಕಾರ್ಯವೈಖರಿಯನ್ನು ಕಟುವಾಗಿ ಟೀಕಿಸಿದರು. 'ಸಚಿವರು ಈ ಬಗ್ಗೆ ಏಕೆ ಗಮನಹರಿಸುತ್ತಿಲ್ಲ' ಎಂದೂ ಪ್ರಶ್ನಿಸಿದರು.

'ಎರಡು ವರ್ಷಗಳಿಂದ ಕೆಲಸ ಬದಲಾವಣೆಗೆ ಸಂಬಂಧಿಸಿದ ಕಡತಗಳು ನಮ್ಮ ಕ್ಷೇತ್ರದಿಂದ ಜಿಲ್ಲಾಧಿಕಾರಿ ಕಛೇರಿಗೂ, ಅಲ್ಲಿಂದ ವಿಧಾನಸೌಧಕ್ಕೂ ಬರುತ್ತವೆ. ಆದರೆ, ಕೆಲಸ ಆಗುವುದಿಲ್ಲ. ವಿಧಾನಸೌಧದಿಂದ ಮತ್ತೆ ವಾಪಸ್ ಬರುತ್ತವೆ. ಎರಡು ವರ್ಷದಿಂದ ಇದೇ ನಡೆಯುತ್ತಿದೆ. ಬೆಂಗಳೂರಿನಲ್ಲಿ ಕೊಕ್ಕೆ ಹಾಕಿ ಕೂರುತ್ತಾರೆ. ಸಚಿವರ ಗಮನಕ್ಕೂ ಇದು ಬರುವುದಿಲ್ಲ' ಎಂದು ಕಾಗೇರಿ ಸಿಟ್ಟಿನಿಂದ ನುಡಿದರು. ಪಕ್ಷಭೇದ ಮರೆತು ಸದಸ್ಯರು ಧ್ವನಿಗೂಡಿಸಿದರು.

ಆಧಾರ:ಪ್ರಜಾವಾಣಿ, ದಿನಾಂಕ:18.12.2021

## 111. Construct quarters for gram panchayat officials: Horatti to Government

After Legislative Council members complained about panchayat development officers (PDOs) not residing at their headquarters, Council Chairman Basavaraj Horatti suggested to the government to construct staff quarters for gram panchayat officials.

MLC Dr Sabanna Talavar pointed out that as per the government order in 2016, all PDOs should reside in their workplace, but no one is following it. "With the government giving charge of multiple GPs to a few PDOs, officers are hardly found in their office or at the workplace. In a few cases, PDOs stay in cities, forcing people to run around to get their work done," he added.

Minister for Rural Development and Panchayat Raj KS Eshwarappa said, "I have not received any such complaints. I will take a decision on constructing staff quarters for every gram panchayat after discussing it with the Chief Minister and Finance department. I also believe that the staff quarters will help PDOs stay within GP limits and address grievances of the people."

To a question as to when vacant posts in gram panchayats will be filled, Eshwarappa said, "There is also a shortage of other staff, including village accountants, in many village panchayats in Kalyana Karnataka. We have given powers to the Zilla panchayat CEOs and Deputy Commissioner to appoint people directly to GP posts. We will take steps to fill vacant posts after discussing it with the finance department."

Courtesy: Indian Express ,dt:18.12.2021

## 112. ರೂ.3752 ಕೋಟಿ ವೆಚ್ಚಕ್ಕೆ ಪೂರಕ ಅಂದಾಜು

ರಾಜ್ಯದಲ್ಲಿ ಕೊರೋನಾದಿಂದ ಮೃತಪಟ್ಟವರಿಗೆ ಪರಿಹಾರ ನೀಡಲು ಹಾಗೂ ನೈಸರ್ಗಿಕ ವಿಪತ್ತು ಪರಿಹಾರ ನಿಧಿಗೆ ಅನುದಾನ ಒದಗಿಸಲು ಕಂದಾಯ ಇಲಾಖೆಗೆ ರೂ. 947.10 ಕೋಟಿ ಹಾಗೂ ರೈತರ ಮಕ್ಕಳಿಗೆ ವಿದ್ಯಾರ್ಥಿ ವೇತನ ನೀಡುವ ಮುಖ್ಯಮಂತ್ರಿಗಳ ವಿದ್ಯಾನಿಧಿ ಯೋಜನೆಗೆ ರೂ.200 ಕೋಟಿ ಸೇರಿದಂತೆ ವಿವಿಧ ಇಲಾಖೆಗಳ ಬಳಕೆಗೆ 2021–22ನೇ ಸಾಲಿನ ರೂ.3,576.67 ಪೂರಕ ಅಂದಾಜುಗಳನ್ನು (2ನೇ ಕಂತು) ರಾಜ್ಯ ಸರ್ಕಾರ ಉಭಯ ಸದನಗಳಲ್ಲಿ ಮಂಡನೆ ಮಾಡಿದೆ.

ರಾಜ್ಯದಲ್ಲಿ ಕೊರೋನಾದಿಂದ ಮೃತಪಟ್ಟ ಬಿಪಿಎಲ್ ವ್ಯಕ್ತಿಯ ಕುಟುಂಬ ಸದಸ್ಯರಿಗೆ 1 ಲಕ್ಷ ಪರಿಹಾರ ಘೋಷಿಸಲಾಗಿದೆ. ಈ ಪೈಕಿ ತಲಾ ರೂ.50 ಸಾವಿರಗಳನ್ನು ಕೇಂದ್ರ ಸರ್ಕಾರ ನೀಡಲಿದ್ದು, ರಾಜ್ಯದಿಂದ ಪ್ರತಿ ವ್ಯಕ್ತಿಗೆ ರೂ. 50 ಸಾವಿರ ಪರಿಹಾರ ಒದಗಿಸಲು ರೂ.224.73 ಕೋಟಿ ಹೆಚ್ಚುವರಿಯಾಗಿ ನೀಡಲು ಪೂರಕ ಅಂದಾಜುಗಳಲ್ಲಿ ಪ್ರಸ್ತಾಪಿಸಲಾಗಿದೆ.

ಇನ್ನು 2021ನೇ ಸಾಲಿಗೆ ಜುಲೈ ಹಾಗೂ ಆಗಸ್ಟ್ ತಿಂಗಳಲ್ಲಿ ಉಂಟಾದ ಪ್ರವಾಹದಿಂದ ಹಾನಿಗೊಳಗಾದ ಮನೆಗಳಿಗೆ ಪರಿಹಾರ ಒದಗಿಸಲು ಕೇಂದ್ರ ಮಾರ್ಗಸೂಚಿ ದರ ಹೊರತುಪಡಿಸಿ ಹೆಚ್ಚುವರಿ ದರ ಪಾವತಿಸಲು ರೂ.352.99 ಕೋಟಿ ಹೆಚ್ಚುವರಿ ಅನುದಾನ ನೀಡುವುದು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಕೊರೋನಾ ನಿಯಂತ್ರಣ ಕಾರ್ಯಗಳಿಗೆ ಹೆಚ್ಚುವರಿ ಅನುದಾನ ಬಿಡುಗಡೆಯಿಂದ

ಪ್ರವಾಹ ಪರಿಹಾರ ಕಾರ್ಯಗಳಿಗೆ ಕೊರತೆಯಾಗಿರುವುದರಿಂದ ರೂ. 224 ಕೋಟಿಗಳನ್ನು ಒದಗಿಸಲು ಸೇರಿಸಲಾಗಿದೆ.

ಇನ್ನು ಲೋಕೋಪಯೋಗಿ ಇಲಾಖೆ ವ್ಯಾಪ್ತಿಗೆ ಬರುವ ಕಾಮಗಾರಿಗಳಿಗೆ ರೂ.83.90 ಕೋಟಿ ಹಾಗೂ ಜಿಲ್ಲಾ ಕಛೇರಿ ಕಟ್ಟಡಗಳ ನಿರ್ಮಾಣಕ್ಕಾಗಿ ರೂ.41.71 ಕೋಟಿಗಳನ್ನು ಪೂರಕ ಅಂದಾಜುಗಳಲ್ಲಿ ಒದಗಿಸಲಾಗಿದೆ.

**ರೈತರ ಮಕ್ಕಳಿಗೆ ವಿದ್ಯಾರ್ಥಿ ವೇತನ :** ರೈತರ ಮಕ್ಕಳಿಗೆ ವಿದ್ಯಾರ್ಥಿವೇತನ ನೀಡುವ ಮುಖ್ಯಮಂತ್ರಿಗಳ ವಿದ್ಯಾನಿಧಿ ಯೋಜನೆಗೆ ಕೃಷಿ ಇಲಾಖೆಗೆ ರೂ.200 ಕೋಟಿ ಒದಗಿಸಿದ್ದು, ಕೃಷಿ ಇಲಾಖೆಗೆ ಒಟ್ಟು ರೂ. 208.64 ಕೋಟಿ ಹೆಚ್ಚುವರಿ ಅನುದಾನ ಒದಗಿಸಲಾಗಿದೆ.

ಇನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಅಂತರ್ ಜಾತಿ ಹಾಗೂ ಇತರೆ ವಿವಾಹಗಳಿಗೆ ಪ್ರೋತ್ಸಾಹ ಧನ ನೀಡಲು ಅರ್ಜಿಗಳು ಬಾಕಿ ಇರುವುದರಿಂದ ರೂ. 31 ಕೋಟಿ ಒದಗಿಸಲು ನಿರ್ಧರಿಸಲಾಗಿದೆ. ಅಂಗನವಾಡಿ ನಿರ್ವಹಣೆಗೆ ರೂ. 7.5 ಕೋಟಿ, ಸ್ತ್ರೀಶಕ್ತಿ ಯೋಜನೆಗೆ ರೂ.75 ಕೋಟಿ ಪೂರಕ ಅಂದಾಜಿಗೆ ಪ್ರಸ್ತಾವನೆ ಮಂಡಿಸಲಾಗಿದೆ.

ಕೊರೋನಾ ಹಿನ್ನೆಲೆಯಲ್ಲಿ ವಿವಿಧ ಆಸ್ಪತ್ರೆಗಳಿಗೆ ಅಭಿವೃದ್ಧಿ ಹಾಗೂ ಚಿಕ್ಕಬಳ್ಳಾಪುರ ವೈದ್ಯಕೀಯ ಕಾಲೇಜು ನಿರ್ಮಾಣಕ್ಕೆ ರೂ. 58 ಕೋಟಿ ಸೇರಿದಂತೆ ರೂ. 217 ಕೋಟಿ ಆರೋಗ್ಯ ಇಲಾಖೆಗೆ ಒದಗಿಸಲು ಪ್ರಸ್ತಾಪಿಸಲಾಗಿದೆ.

ಆಧಾರ:ಕನ್ನಡಪ್ರಭ, ದಿನಾಂಕ:18.12.2021

## 113. ಪರ್ಸೆಂಟೇಜ್‌ಗೆ ಬ್ರೇಕ್

ರಾಜ್ಯ ರಾಜಕಾರಣದಲ್ಲಿ ಭಾರಿ ಸದ್ದು ಮಾಡುತ್ತಿರುವ ಪರ್ಸೆಂಟೇಜ್ ವ್ಯವಹಾರಕ್ಕೆ ಅಂತ್ಯ ಹಾಡುವ ನಿರ್ಧಾರಕ್ಕೆ ಬಂದಿರುವ ರಾಜ್ಯ ಸರ್ಕಾರ, ಎಲ್ಲ ವ್ಯವಹಾರಗಳಿಗೆ ಕಡಿವಾಣ ಹಾಕುವುದಕ್ಕಾಗಿ ಕಾಮಗಾರಿಗಳ ಬಿಲ್ ಪಾವತಿ ವ್ಯವಸ್ಥೆಗೆ ಪ್ರತ್ಯೇಕ ಕಾಯ್ದೆಯನ್ನೇ ತರಲು ಮುಂದಾಗಿದೆ.

ರಾಜ್ಯ ಗುತ್ತಿಗೆದಾರರ ಸಂಘ ಸರ್ಕಾರದ ವಿರುದ್ಧ ಶೇ.40 ಪರ್ಸೆಂಟೇಜ್ ಆರೋಪ ಮಾಡಿ ಪ್ರಧಾನಿವರೆಗೆ ದೂರು ತೆಗೆದುಕೊಂಡು ಹೋಗಿದೆ. ಒಂದು ವರ್ಷದಲ್ಲಿ ವಿಧಾನಸಭಾ ಚುನಾವಣೆಗೆ ಹೋಗಬೇಕಾಗಿರುವ ಹಿನ್ನೆಲೆಯಲ್ಲಿ ಹಲವು ಬಿಗಿ ಕ್ರಮಗಳನ್ನು ಕೈಗೊಳ್ಳಲು ಗಂಭೀರವಾಗಿ ಪರಿಶೀಲನೆ ನಡೆದಿದೆ.

**ಪಾರದರ್ಶಕ ವ್ಯವಸ್ಥೆ:** ಟೆಂಡರ್ ಆಹ್ವಾನದಿಂದ ಹಿಡಿದು ಬಿಲ್ ಪಾವತಿಯ ತನಕ ಭ್ರಷ್ಟಾಚಾರ ಮಿತಿ ಮೀರಿದೆ. ಇದರಿಂದ ಕಾಮಗಾರಿಗಳ ಗುಣಮಟ್ಟ ಕಳಪೆಗಾಗಿ ಜನರ ತೆರಿಗೆ ಹಣ ಪೋಲಾಗುತ್ತಿದೆ. ಹಿಂದಿನ ಕಾಂಗ್ರೆಸ್ ಸರ್ಕಾರದಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯಲ್ಲಿ ಬಿಲ್ ಪಾವತಿಗೆ ಒಂದಷ್ಟು ಕಠಿಣ ಕ್ರಮ ಕೈಗೊಳ್ಳಲಾಗಿತ್ತು. ಈಗ ಇನ್ನಷ್ಟು ಬಿಗಿ ಕ್ರಮ ಕೈಗೊಂಡು ಪಾರದರ್ಶಕ, ತಂತ್ರಜ್ಞಾನ ಆಧಾರಿತ ವ್ಯವಸ್ಥೆ ತರಲಾಗುತ್ತಿದೆ. ಗುತ್ತಿಗೆದಾರರು ಹಾಗೂ ಅಧಿಕಾರಿಗಳ ನಡುವೆ ನಡೆಯುವ ಕಳ್ಳವ್ಯವಹಾರಗಳಿಗೆ ಕಾಯ್ದೆಯ ಮೂಲಕ ಕಡಿವಾಣ ಹಾಕಲಾಗುತ್ತದೆ. ಪರ್ಸೆಂಟೇಜ್ ಆರೋಪದ ಹಿನ್ನೆಲೆಯಲ್ಲಿ, ಯಾವ ರೀತಿಯಲ್ಲಿ ಇಂತಹ ಅಕ್ರಮಗಳಿಗೆ ಕಡಿವಾಣ ಹಾಕಬಹುದೆಂದು ಮುಖ್ಯ ಕಾರ್ಯದರ್ಶಿ ರವಿಕುಮಾರ್ ಹಾಗೂ ಹಣಕಾಸು ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಐಎಸ್‌ಎನ್ ಪ್ರಸಾದ್ ಅಧಿಕಾರಿಗಳ ಜೊತೆ ಚರ್ಚೆ ನಡೆಸಿದ್ದಾರೆ.

ಗುತ್ತಿಗೆದಾರರಿಗೆ ಬಿಲ್ ಪಾವತಿ ವ್ಯವಸ್ಥೆಯಲ್ಲಿ ಪಾರದರ್ಶಕತೆ ತರಲು ಪ್ರತ್ಯೇಕ ಕಾಯ್ದೆ ರೂಪಿಸಲಾಗುತ್ತದೆ. ಬಹುತೇಕ ಮುಂದಿನ ಬಜೆಟ್ ಅಧಿವೇಶನದ ವೇಳೆಗೆ ಕಾಯ್ದೆ ರೂಪುಗೊಳ್ಳಲಿದೆ. ಆ ನಂತರ ಸಾಫ್ಟ್‌ವೇರ್ ರೂಪಿಸಿ ಸಂಪೂರ್ಣ ಆನ್‌ಲೈನ್ ಮಾಡಿ ಹಿರಿತನದ ಆಧಾರದಲ್ಲಿ ಹಣ ಪಾವತಿ ವ್ಯವಸ್ಥೆ ತರಲಾಗುತ್ತದೆ. ಯಾವುದೇ ರೀತಿಯ ಕೈಬರಹದ ದಾಖಲೆ ಇರುವುದಿಲ್ಲ. ಕಾಮಗಾರಿ ಪರಿಶೀಲನೆಗೂ ಜಿಪಿಎಸ್ ವ್ಯವಸ್ಥೆ ತರಲಾಗುತ್ತದೆ. ಆಗ ಗುತ್ತಿಗೆದಾರರು ರಾಜಕಾರಣಿಗಳು, ಅಧಿಕಾರಿಗಳ ಕೈಬಿಸಿ ಮಾಡಿ ಹಣ ಬಿಡುಗಡೆ ಮಾಡಿಸಿಕೊಳ್ಳುವ ವ್ಯವಸ್ಥೆ ಇರುವುದಿಲ್ಲ ಎಂದು ಮೂಲಗಳು ಹೇಳುತ್ತವೆ.

**ಹೊಸ ವ್ಯವಸ್ಥೆ ರೂಪ**

- ಗುತ್ತಿಗೆದಾರರಿಗೆ ಹಿರಿತನದ ಆಧಾರದಲ್ಲಿ ಬಿಲ್ ಪಾವತಿ.
- ಗುತ್ತಿಗೆದಾರರ ಮನೆಯಲ್ಲಿ ಮದುವೆಯಂತಹ ಸಮಾರಂಭ ಇದ್ದು ದಾಖಲೆ ನೀಡಿದರೆ ರೂ.25 ಲಕ್ಷಗಳ ತನಕ ಮೊತ್ತ ಪಾವತಿ ವಿವೇಚನಾಧಿಕಾರ ಸಚಿವರಿಗೆ.
- ಆನ್‌ಲೈನ್ ಮೂಲಕ ಬಿಲ್ ಸಲ್ಲಿಕೆ, ಪಾವತಿಗೆ ಪ್ರತ್ಯೇಕ ಸಾಫ್ಟ್‌ವೇರ್.
- ಮ್ಯಾನುಯಲ್ ಬಿಲ್ ವ್ಯವಸ್ಥೆ ಸಂಪೂರ್ಣ ರದ್ದು.
- ಮೆಜರ್‌ಮೆಂಟ್ ಬುಕ್ ರಿಜಿಸ್ಟ್ರಾರ್ (ಎಂಡಿ ಬುಕ್) ಸಹ ಆನ್‌ಲೈನ್ ವ್ಯವಸ್ಥೆ. ಗುಣಮಟ್ಟ ಕಾಪಾಡಲು ಸಲ್ಲಿಸುವ ಪ್ರಮಾಣಪತ್ರಕ್ಕೂ ವಿಡಿಯೋ ವ್ಯವಸ್ಥೆ.
- ಎಂಡಿ ಬುಕ್‌ಗೆ ರಿಜಿಸ್ಟ್ರಾರ್ ಮಾಡಲು ಜಿಪಿಎಸ್ ವ್ಯವಸ್ಥೆ.
- ಕಾಮಗಾರಿಗಳ ಫೋಟೋ ಮತ್ತು ವಿಡಿಯೋ ಅಪ್‌ಲೋಡ್ ವ್ಯವಸ್ಥೆ.
- ಕಾಮಗಾರಿಗಳಿಗೆ ಬಳಸಿರುವ ವಸ್ತುಗಳ ವಿಡಿಯೋ ಮಾಡುವುದು ಕಡ್ಡಾಯ.

**ಎಷ್ಟಿದೆ ಬಾಕಿ**

- ಲೋಕೋಪಯೋಗಿ ಇಲಾಖೆ–ರೂ. 5,000 ಕೋಟಿ.
- ಜಲಸಂಪನ್ಮೂಲ ಇಲಾಖೆ–ರೂ. 8,000 ಕೋಟಿ.
- ಬಿಬಿಎಂಪಿ–ರೂ. 3,000 ಕೋಟಿ.
- ಗ್ರಾಮೀಣಾಭಿವೃದ್ಧಿ ಇಲಾಖೆ–ರೂ. 1,000 ಕೋಟಿ.
- ಉಳಿದ ಇಲಾಖೆಗಳು–ರೂ. 5,000 ಕೋಟಿ (ಅಂದಾಜು)

ಆಧಾರ:ವಿಜಯವಾಣಿ,ದಿನಾಂಕ:18.12.2021

## 114. ಬೆಳಗಾವಿಯಲ್ಲಿ ತಡರಾತ್ರಿ ಪ್ರತಿಭಟನೆ

ಬೆಂಗಳೂರಿನಲ್ಲಿ ಶಿವಾಜಿ ಮಹಾರಾಜರ ಮೂರ್ತಿಗೆ ಕಿಡಿಗೇಡಿಗಳು ಕಪ್ಪು ಮಸಿ ಬಳಿದ ಸುದ್ದಿ ತಿಳಿಯುತ್ತಿದ್ದಂತೆ ಹಿಂದೂ ಪರ ಮತ್ತು ಮರಾಠಾ ಸಂಘಟನೆಗಳ ಕಾರ್ಯಕರ್ತರು ತಡರಾತ್ರಿ ಬೃಹತ್ ಪ್ರತಿಭಟನೆ ನಡೆಸಿದ್ದಾರೆ.

ನಗರದ ಧರ್ಮವೀರ ಸಂಭಾಜಿ ವೃತ್ತದಲ್ಲಿ ಸೇರಿದ ನೂರಾರು ಜನರು ಬೆಂಗಳೂರಿನ ಸದಾಶಿವ ನಗರದ ಸ್ಯಾಂಕಿ ಕೆರೆಯ ಬಳಿ ಇರುವ ಶಿವಾಜಿ ಮಹಾರಾಜರ ಮೂರ್ತಿಗೆ ಮಸಿ ಬಳಿದ ಕಿಡಿಗೇಡಿಗಳ ವಿರುದ್ಧ ಕ್ರಮಕ್ಕೆ ಆಗ್ರಹಿಸಿದರು. ಇದೇ ವೇಳೆ ಕೆಲವರು ಕಲ್ಲು ತೂರಾಟ ನಡೆಸಿದ್ದು ಇದರಿಂದ ರಸ್ತೆ ಬದಿ ನಿಂತಿದ್ದ ಕೆಲ ಕಾರುಗಳು ಹಾಗೂ ಪೊಲೀಸ್ ವಾಹನದ ಗಾಜುಗಳು ಒಡೆದಿವೆ.

ತಪ್ಪಿತಸ್ಥರ ವಿರುದ್ಧ ಕಠಿಣ ಕ್ರಮಕೈಗೊಳ್ಳುವವರೆಗೂ ಪ್ರತಿಭಟನೆ ಸ್ಥಗಿತಗೊಳಿಸುವುದಿಲ್ಲ ಎಂದು ಪ್ರತಿಭಟನಕಾರರು ಪಟ್ಟುಹಿಡಿದಿದ್ದಾರೆ.

ಪ್ರತಿಭಟನೆ ನೇತೃತ್ವ ವಹಿಸಿರುವ ಶ್ರೀ ರಾಮಸೇನೆ ಹಿಂದೂಸ್ತಾನ ಸಂಘಟನೆ ಮುಖ್ಯಸ್ಥ ರಮಾಕಾಂತ ಕೊಂಡುಸ್ಕರ್, ಎಂಇಎಸ್ ಮುಖಂಡರಾದ ಮಾಜಿ ಮೇಯರ್ ಸರಿತಾ ಪಾಟೀಲ, ಶುಭಂ ಶೇಳಕೆ, ಶಿವಸೇನಾ ಜಿಲ್ಲಾಧ್ಯಕ್ಷ ಪ್ರಕಾಶ ಶಿರೋಳಕರ ಸೇರಿದಂತೆ ನೂರಾರು ಕಾರ್ಯಕರ್ತರು ಪ್ರತಿಭಟನೆಯಲ್ಲಿ ಪಾಲ್ಗೊಂಡಿದ್ದಾರೆ.

ಆಧಾರ:ವಿಜಯ ಕರ್ನಾಟಕ,ದಿನಾಂಕ:18.12.2021

## 115. ಪ್ರತಿಭಟನೆ... ಪ್ರತಿಭಟನೆ...

ಮುಷ್ಕರದ ಸಂದರ್ಭದಲ್ಲಿ ಮಾಡಿದ ವಜಾ, ಅಮಾನತ್ತು ವರ್ಗಾವಣೆ ಪ್ರಕರಣಗಳನ್ನು ರದ್ದುಪಡಿಸುವಂತೆ ಆಗ್ರಹಿಸಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನೌಕರರು ಸುವರ್ಣ ವಿಧಾನಸೌಧದ ಸಮೀಪ ಕೊಂಡಸಕೊಪ್ಪ ಗ್ರಾಮದ ಪ್ರತಿಭಟನಾ ವೇದಿಕೆಯಲ್ಲಿ ಪ್ರತಿಭಟಿಸಿದರು.

ಮುಷ್ಕರದ ಸಂದರ್ಭದಲ್ಲಿ ನೌಕರರ ಮೇಲೆ ದಾಖಲಿಸಿರುವ ಪೊಲೀಸ್ ಪ್ರಕರಣಗಳನ್ನು ಹಿಂಪಡೆಯುವುದು, ಸಾರಿಗೆ ನೌಕರರ ಸಮಸ್ಯೆಗಳ ಶಾಶ್ವತ ಪರಿಹಾರಕ್ಕೆ ಕ್ರಮ ಕೈಗೊಳ್ಳುವಂತೆ ಒತ್ತಾಯಿಸಿದರು.

ಮುಷ್ಕರದ ಸಂದರ್ಭದಲ್ಲಿ ಆಡಳಿತಾತ್ಮಕ ಕಾರಣ ನೀಡಿ ಅಂತರ ವಿಭಾಗ ಹಾಗೂ ವಿಭಾಗ ಮಟ್ಟದಲ್ಲಿ ಮಾಡಿರುವ ವರ್ಗಾವಣೆಗಳನ್ನು ರದ್ದು ಮಾಡಬೇಕು, ಆಡಳಿತಾತ್ಮಕ ಆದೇಶದ ಮೂಲಕ ಮಾತ್ರ ಕಾರ್ಯ ಸ್ಥಳಗಳಿಗೆ ಮರು ವರ್ಗಾವಣೆ ಮಾಡಬೇಕು. ನಿಗದಿತ ಸಮಯದಲ್ಲಿ ಪೂರ್ಣ ಪ್ರಮಾಣದಲ್ಲಿ ವೇತನ ಪಾವತಿ ಮಾಡಬೇಕು ಎಂದು ಸಾರಿಗೆ ನೌಕರರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಒತ್ತಾಯಿಸಿದ್ದಾರೆ.

**ಅಂಗನವಾಡಿಯಲ್ಲೇ ಎಲ್‌ಕೆಜಿ, ಯುಕೆಜಿ ಆರಂಭಿಸಿ**

ಎಲ್‌ಕೆಜಿ ಹಾಗೂ ಯುಕೆಜಿ ತರಗತಿಗಳನ್ನು ಅಂಗನವಾಡಿ ಕೇಂದ್ರಗಳಲ್ಲೇ ಆರಂಭಿಸುವುದು ಸೇರಿದಂತೆ ಇತರ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಿ ಕರ್ನಾಟಕ ರಾಜ್ಯ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರ ಫೆಡರೇಶನ್ (ಎಐಟಿಯುಸಿ) ನಿಂದ ಪ್ರತಿಭಟನೆ ನಡೆಸಿ, ಸರ್ಕಾರಕ್ಕೆ ಮನವಿ ಸಲ್ಲಿಸಿದರು.

ರಾಜ್ಯದಲ್ಲಿ ಶಿಶು ಅಭಿವೃದ್ಧಿ ಯೋಜನೆಯಡಿ ಜಾರಿಗೊಳಿಸಿ 46 ವರ್ಷಗಳು ಕಳೆದಿವೆ. ಈ ಯೋಜನೆಯಲ್ಲಿ ಕಾರ್ಯನಿರ್ವಹಿಸುವ ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಸಹಾಯಕರಿಯರು ಕೇವಲ ಗೌರವಧನದ ಆಧಾರದಲ್ಲಿ ಸೇವಾ ಭದ್ರತೆಯಿಲ್ಲದೆ ದುಡಿಯುತ್ತಿದ್ದಾರೆ. ನಿವೃತ್ತಿಯಾದವರಿಗೆ ಇಡಿಗಂಟು ಹಣ ಬಿಡುಗಡೆ ಮಾಡಬೇಕು. ಮರಣ ಹಾಗೂ ವೈದ್ಯಕೀಯ ಪರಿಹಾರ ಧನ ಬಿಡುಗಡೆ ಮಾಡಬೇಕು. ಸೇವಾ ಹಿರಿತನದ ಆಧಾರದಲ್ಲಿ ಗೌರವಧನ ಹೆಚ್ಚಳ ಮಾಡಬೇಕು. ಮೊಬೈಲ್ ಬಳಕೆಯಿಂದ ಉಂಟಾಗುವ ಸಮಸ್ಯೆಗಳನ್ನು ಪರಿಹರಿಸಿ, ಮಿನಿ ಟ್ಯಾಬ್ ವಿತರಿಸುವುದು ಸೇರಿದಂತೆ ಇತರೆ ಬೇಡಿಕೆಗಳನ್ನು

ಈಡೇರಿಸುವಂತೆ ಒತ್ತಾಯಿಸಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಚಿವ ಹಾಲಪ್ಪ ಅವರಿಗೆ ಮನವಿ ಸಲ್ಲಿಸಲಾಯಿತು.

ಮನವಿ ಸ್ವೀಕರಿಸಿ ಮಾತನಾಡಿದ ಸಚಿವರು, ತಮ್ಮ ಎಲ್ಲ ಬೇಡಿಕೆಗಳನ್ನು ಸರ್ಕಾರದ ಗಮನಕ್ಕೆ ತಂದು ಅಗತ್ಯ ಕ್ರಮಕೈಗೊಳ್ಳಲಾಗುವುದು ಎಂದರು.

**ವಾಲ್ಮೀಕಿ ಸಮುದಾಯಕ್ಕೆ ಮೀಸಲಾತಿ ನೀಡಿ**

ಕರ್ನಾಟಕ ಪರಿಶಿಷ್ಟ ಪಂಗಡ ವಾಲ್ಮೀಕಿ ನೌಕರರ ಒಕ್ಕೂಟದ ಯುವ ಘಟಕದ ಪದಾಧಿಕಾರಿಗಳು ಸುವರ್ಣ ವಿಧಾನಸೌಧದ ಬಳಿ ಪ್ರತಿಭಟನೆ ನಡೆಸಿ ವಿವಿಧ ಬೇಡಿಕೆ ಈಡೇರಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿದರು.

ನಾಗಮೋಹನದಾಸ್ ವರದಿಯಂತೆ ವಾಲ್ಮೀಕಿ ಸಮುದಾಯಕ್ಕೆ ಶೇ.7.5 ರಷ್ಟು ಮೀಸಲಾತಿ ನೀಡಬೇಕು. ಗಂಡುಗಲಿ ಕುಮಾರ ರಾಮನ ಕುಮ್ಮಟ ದುರ್ಗ ಅಭಿವೃದ್ಧಿಗೊಳಿಸಿ, ಸ್ಥಳವನ್ನು ಪ್ರವಾಸಿ ತಾಣವನ್ನಾಗಿ ಪರಿವರ್ತಿಸಬೇಕು. ಬೆಳಗಾವಿ ರೈಲ್ವೆ ನಿಲ್ದಾಣಕ್ಕೆ ವೀರ ಸಿಂಧೂರ ಲಕ್ಷ್ಮಣ ನಾಮಕರಣ ಮಾಡಿ, ಸಿಂಧೂರ ಲಕ್ಷ್ಮಣರ ಪುತ್ಥಳಿ ಸ್ಥಾಪಿಸಬೇಕು. ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದು ಸರ್ಕಾರಿ ನೌಕರಿ, ಸೌಲಭ್ಯ ಪಡೆಯುತ್ತಿರುವವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳುವುದು ಸೇರಿದಂತೆ ಮುಂತಾದ ಬೇಡಿಕೆಗಳನ್ನು ಈಡೇರಿಸಬೇಕೆಂದು ಆಗ್ರಹಿಸಿದರು.

**ಎಲ್ಲ ಬೆಳೆಗಳಿಗೆ ವಿಮೆ ಸೌಲಭ್ಯ ಕಲ್ಪಿಸಿ**

ರೈತರ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಆಗ್ರಹಿಸಿ ಭಾರತೀಯ ಕೃಷಿಕ ಸಮಾಜದ ಪದಾಧಿಕಾರಿಗಳು ಸುವರ್ಣ ವಿಧಾನಸೌಧದ ಬಳಿ ಪ್ರತಿಭಟನೆ ನಡೆಸಿ ಕಾರ್ಮಿಕ ಸಚಿವ ಶಿವರಾಂ ಹೆಬ್ಬಾರ ಅವರಿಗೆ ಮನವಿ ಸಲ್ಲಿಸಿದರು.

ರೈತರ ಸಾಲ ಮನ್ನಾ ಮಾಡಬೇಕು. ರೈತರ ಪಂಪ್‌ಸೆಟ್‌ಗಳಿಗೆ ಉಚಿತ ವಿದ್ಯುತ್ ಸೌಲಭ್ಯ ಮುಂದುವರಿಸಬೇಕು. ಅತಿವೃಷ್ಟಿ ಹಾಗೂ ಅನಾವೃಷ್ಟಿಯಿಂದ ಹಾನಿಯಾದ ಬೆಳೆಗಳಿಗೆ ಕೂಡಲೇ ಪರಿಹಾರ ನೀಡಬೇಕು. ಎಲ್ಲ ಬೆಳೆಗಳಿಗೆ ಫಸಲ್ ಭೀಮಾ ಸೌಲಭ್ಯ ಕಲ್ಪಿಸಬೇಕು. ಭೂಸುಧಾರಣಾ ಕಾಯ್ದೆ ತಿದ್ದುಪಡಿ ಮಾಡಬೇಕು. ಎಲ್ಲ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ ನಿಗದಿಪಡಿಸಬೇಕು. ಬೆಳಗಾವಿಯನ್ನು ಎರಡನೇ ರಾಜಧಾನಿಯನ್ನಾಗಿ ಘೋಷಿಸಬೇಕು. ಸವದತ್ತಿ ತಾಲ್ಲೂಕಿನ ಸುತಗಟ್ಟಿ ಹಿಟ್ಟಣಗಿ ಗ್ರಾಮಗಳನ್ನು ಸವದತ್ತಿ ಹೋಬಳಿಗೆ ಸೇರಿಸಬೇಕು. ಕಾಗವಾಡ ತಾಲ್ಲೂಕಿನ ಮಂಗಾವತಿ, ಜುಗುಳ ಹಾಗೂ ಶಹಪುರ ಗ್ರಾಮಗಳನ್ನು ಮುಳಗಡೆ ಪ್ರದೇಶವೆಂದು ಘೋಷಿಸಬೇಕು ಸೇರಿದಂತೆ ಮುಂತಾದ ಇತರ ಬೇಡಿಕೆಗಳನ್ನು ಈಡೇರಿಸುವಂತೆ ಕಾರ್ಮಿಕ ಸಚಿವ ಶಿವರಾಂ ಹೆಬ್ಬಾರ ಅವರಿಗೆ ಮನವಿ ಸಲ್ಲಿಸಿದರು.

**ಪದೋನ್ನತಿಯಲ್ಲಿ ಅನ್ಯಾಯ**

ಉತ್ತರ ಕನ್ನಡ ಜಿಲ್ಲೆಯ ಪೊಲೀಸ್ ಇಲಾಖೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಅನ್ಯಾಯ ಮಾಡಲಾಗುತ್ತಿದೆ ಎಂದು ಆರೋಪಿಸಿ ಕರ್ನಾಟಕ ದಲಿತ ರಕ್ಷಣಾ ವೇದಿಕೆಯ ಪದಾಧಿಕಾರಿಗಳು ಸುವರ್ಣ ವಿಧಾನಸೌಧದ ಬಳಿ ಪ್ರತಿಭಟನೆ ನಡೆಸಿ, ಕಾರ್ಮಿಕ ಸಚಿವ ಶಿವರಾಂ ಹೆಬ್ಬಾರ್ ಅವರಿಗೆ ಮನವಿ ಸಲ್ಲಿಸಿದರು.

ಉತ್ತರ ಕನ್ನಡ ಜಿಲ್ಲಾ ಪೊಲೀಸ್ ಇಲಾಖೆಯಿಂದ 2017 ರಿಂದ ಈವರೆಗೆ 169 ಕಾನ್‌ಸ್ಟೇಬಲ್‌ಗಳಿಗೆ ಪದೋನ್ನತಿ ನೀಡಲಾಗಿದೆ. ಅದರಲ್ಲಿ 25 ಎಸ್ಸಿ ಹಾಗೂ 6 ಎಸ್ಟಿ ಕಾನ್‌ಸ್ಟೇಬಲ್‌ಗಳಿಗೆ ಪದೋನ್ನತಿ ನೀಡಬೇಕಾಗಿತ್ತು. ಆದರೆ, 1 ಎಸ್ಸಿ ಹಾಗೂ 3 ಎಸ್‌ಟಿ ಸಿಬ್ಬಂದಿಗೆ ಮಾತ್ರ ಪದೋನ್ನತಿ

ನೀಡಲಾಗಿದೆ. ಕೆಲವರು ಇಲಾಖೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗದೇ ಇದ್ದರೂ ಅವರಿಗೆ ಅರ್ಹತೆ ದಿನಾಂಕ ನೀಡಿ ಪದೋನ್ನತಿ ನೀಡಲಾಗಿದೆ. ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮಕೈಗೊಳ್ಳಬೇಕು ಎಂದು ಸಚಿವರಿಗೆ ಮನವಿ ಸಲ್ಲಿಸಿದರು.

**ತಿದ್ದುಪಡಿ ಮಸೂದೆ ಅಂಗೀಕರಿಸಲು ಆಗ್ರಹ**

ಕರ್ನಾಟಕ ಎಸ್‌ಸಿ ಮತ್ತು ಎಸ್‌ಟಿ ಭೂ ಪರಭಾರೆ ನಿಷೇಧ (ಪಿಟಿಸಿಎಲ್) ಕಾಯ್ದೆಗೆ ತಿದ್ದುಪಡಿ ಮಸೂದೆ ಅಂಗೀಕರಿಸುವಂತೆ ಒತ್ತಾಯಿಸಿ ದಲಿತ ಸಂಘಟನೆಗಳ ಒಕ್ಕೂಟದ ನೇತೃತ್ವದಲ್ಲಿ ಸುವರ್ಣ ವಿಧಾನಸೌಧದ ಬಳಿ ಪ್ರತಿಭಟನೆ ನಡೆಸಿ, ಸರ್ಕಾರಕ್ಕೆ ಮನವಿ ಸಲ್ಲಿಸಲಾಯಿತು.

ದಲಿತರಿಗೆ ಸರ್ಕಾರದಿಂದ ಮಂಜೂರಾದ ಭೂಮಿಯು ಬೇರೆಯವರಿಗೆ ಪರಭಾರೆ ಆಗಬಾರದೆಂದು 1978ರಲ್ಲಿ ಪಿಟಿಸಿಎಲ್ ಕಾಯ್ದೆ ಜಾರಿಗೆ ತರಲಾಗಿದೆ. ಆದರೆ ಇದನ್ನು ಸಹಿಸಲಾರದ ಕೆಲವರು ಈ ಕಾಯ್ದೆ ವಿರುದ್ಧ ನಿಂತಿದ್ದಾರೆ. ಹೀಗಾಗಿ ಸರ್ಕಾರ ಕಾಯ್ದೆಗೆ ಸಮಗ್ರ ತಿದ್ದುಪಡಿ ತರುವಂತೆ ಒತ್ತಾಯಿಸಿದರು.

**ನಿವೃತ್ತ ನೌಕರರಿಗೆ ಸೌಲಭ್ಯ ನೀಡಿ**

ರಾಜ್ಯ ಸಾರಿಗೆ ಸಂಸ್ಥೆಯ ನಿವೃತ್ತ ಸಿಬ್ಬಂದಿಗೆ ನಿವೃತ್ತಿ ವೇತನ, ವೈದ್ಯಕೀಯ ವೆಚ್ಚ, ಬಿಪಿಎಲ್ ಕಾರ್ಡ್ ನೀಡುವುದು ಸೇರಿದಂತೆ ನಾನಾ ಬೇಡಿಕೆ ಈಡೇರಿಸುವಂತೆ ಆಗ್ರಹಿಸಿ ರಸ್ತೆ ಸಾರಿಗೆ ಸಂಸ್ಥೆ ನಿವೃತ್ತ ನೌಕರರ ಕ್ಷೇಮಾಭಿವೃದ್ಧಿ ಸಂಘವು ಗದಗ ಜಿಲ್ಲಾ ಘಟಕದಿಂದ ಸುವರ್ಣ ವಿಧಾನಸೌಧ ಬಳಿ ಪ್ರತಿಭಟನೆ ನಡೆಸಿ ಸರ್ಕಾರಕ್ಕೆ ಮನವಿ ಸಲ್ಲಿಸಲಾಯಿತು. ಹಿಂದಿನ ಮುಖ್ಯಮಂತ್ರಿ ಯಡಿಯೂರಪ್ಪ ಭರವಸೆ ನೀಡಿದಂತೆ ರೂ.10 ಸಾವಿರ ಪಿಂಚಣಿ, ವೈದ್ಯಕೀಯ ಸೌಲಭ್ಯ, ಬಿಪಿಎಲ್ ಕಾರ್ಡ್ ಒದಗಿಸಬೇಕು. ಸಾರಿಗೆ ಸಚಿವ ಬಿ.ಶ್ರೀರಾಮುಲು ಅವರು ನಮ್ಮ ಬೇಡಿಕೆಗೆ ಸ್ಪಂದಿಸಿ ನ್ಯಾಯ ಒದಗಿಸಿಕೊಡಬೇಕೆಂದು ಆಗ್ರಹಿಸಿದರು.

ಆಧಾರ:ವಿಜಯಕರ್ನಾಟಕ, ದಿನಾಂಕ:18.12.2021

## 116. ರಾಯಣ್ಣ ಪ್ರತಿಮೆ ಭಗ್ನ : ವಿವಿಧೆಡೆ ಪ್ರತಿಭಟನೆ

ಅನಗೋಳದ ಕನಕದಾಸ ಕಾಲೋನಿಯಲ್ಲಿರುವ ರಾಯಣ್ಣನ ಪ್ರತಿಮೆ ಭಗ್ನಗೊಳಿಸಿದವರ ವಿರುದ್ಧ ಕ್ರಮ ಜರುಗಿಸಬೇಕು ಎಂದು ಒತ್ತಾಯಿಸಿ ವಿವಿಧ ಸಂಘಟನೆಗಳು ನಗರದಲ್ಲಿ ಪ್ರತಿಭಟನೆ ನಡೆಸಿದವು.

ಪ್ರತಿಮೆ ಭಗ್ನಗೊಂಡಿರುವ ವಿಷಯ ತಿಳಿಯುತ್ತಿದ್ದಂತೆ ಬೆಳಿಗ್ಗೆ ತಿಲಕವಾಡಿ ಪೊಲೀಸ್ ಠಾಣೆಗೆ ದೌಡಾಯಿಸಿದ ಕನ್ನಡ ಪರ ಹೋರಟಗಾರರು ಈ ಕೃತ್ಯ ಎಸಗಿದ ದುಷ್ಕರ್ಮಿಗಳನ್ನು ತಕ್ಷಣ ಬಂಧಿಸಬೇಕು. ಕಠಿಣ ಶಿಕ್ಷೆಗೆ ಒಳಪಡಿಸಬೇಕು ಎಂದು ಆಗ್ರಹಿಸಿ ಪ್ರತಿಭಟಿಸಿದರು. ಮಹಾರಾಷ್ಟ್ರದ ವಿರುದ್ಧ ಘೋಷಣೆ ಕೂಗಿದರು.

ಪೊಲೀಸರು ಮನವೊಲಿಸಿದರೂ ಸ್ಥಳ ಬಿಟ್ಟು ಕದಲಲಿಲ್ಲ. ನಾಡದ್ರೋಹಿಗಳ ವಿರುದ್ಧ ಕ್ರಮ ಜರುಗಿಸುವವರೆಗೂ ಹೋರಾಟದಿಂದ ಹಿಂದಕ್ಕೆ ಸರಿಯುವುದಿಲ್ಲ ಎಂದು ಪಟ್ಟು ಹಿಡಿದರು. ಇದರಿಂದ ಸ್ಥಳದಲ್ಲಿ ಬಿಗುವಿನ ವಾತಾವರಣ ನಿರ್ಮಾಣವಾಗಿತ್ತು. ಅರೋಪಿಗಳನ್ನು ತ್ವರಿತವಾಗಿ ಬಂಧಿಸುವುದಾಗಿ ಪೊಲೀಸರು ಭರವಸೆ ನೀಡಿದ್ದರಿಂದ ಪ್ರತಿಭಟನೆ ಹಿಂಪಡೆದರು.

ಮಹಾರಾಷ್ಟ್ರ ಏಕೀಕರಣ ಸಮಿತಿ (ಎಂಇಎಸ್) ನಿಷೇಧಿಸಬೇಕು ಎಂದು ಆಗ್ರಹಿಸಿ ಕರ್ನಾಟಕ ರಕ್ಷಣಾ ವೇದಿಕೆ (ಶಿವರಾಮೇಗೌಡ ಬಣ) ಕಾರ್ಯಕರ್ತರು ರಾಣಿ ಚನ್ನಮ್ಮ ವೃತ್ತದ ಬಳಿ ಪ್ರತಿಭಟನೆಗೆ ಯತ್ನಿಸಿದರು.

ಇದಕ್ಕೆ ಅವಕಾಶ ನೀಡದ ಪೊಲೀಸರೊಂದಿಗೆ ವಾಗ್ವಾದ ನಡೆಸಿದರು. ನಾವು ಪ್ರತಿಭಟನೆ ಮಾಡುತ್ತೇವೆ ಎಂದು ಪಟ್ಟು ಹಿಡಿದರು. ಪೊಲೀಸರು ಕನ್ನಡ ಸಾಹಿತ್ಯ ಭವನದ ಪ್ರವೇಶದ್ವಾರ ಮುಚ್ಚಿ ಚನ್ನಮ್ಮ ವೃತ್ತಕ್ಕೆ ಹೋಗದಂತೆ ತಡೆದರು. ಈ ವೇಳೆ ಪರಸ್ಪರ ತಳ್ಳಾಟವು ನಡೆಯಿತು. ಕೊನೆಗೆ ಸಾಹಿತ್ಯ ಭವನ ಅವರಣದಲ್ಲೇ ಕೆಲಕಾಲ ಪ್ರತಿಭಟಿಸಿ ಎಂಇಎಸ್ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದರು.

ಸಂಘಟನೆಯ ಜಿಲ್ಲಾ ಘಟಕದ ಅಧ್ಯಕ್ಷ ವಾಜೀದ್ ಹಿರೇಕೋಡಿ ಗಡಿಯಲ್ಲಿ ಶಾಂತಿ ಕದಡುವ ಮೂಲಕ ಎಂಇಎಸ್ ಕನ್ನಡಿಗರನ್ನು ಕೆರಳಿಸುತ್ತಿದೆ. ಸಮಾಜದಲ್ಲಿ ಆತಂಕದ ವಾತಾವರಣ ನಿರ್ಮಿಸುತ್ತಿದೆ. ಸರ್ಕಾರ ಕಡಿವಾಣ ಹಾಕದಿದ್ದರೆ ಹೋರಾಟ ತೀವ್ರಗೊಳಿಸಬೇಕಾಗುತ್ತದೆ ಎಂದರು. ಮಹಾಂತೇಶ್ ರಣಗಟ್ಟಿಮಠ ಗೌಸ್ ಸನದಿ, ಯೂನೂಸ್ ಹಿರೇಕೋಡಿ ಅಕ್ಬರ್ ಶೇಡೇಕರ್ ಇತರರಿದ್ದರು.

ಆಧಾರ:ಪ್ರಜಾವಾಣಿ, ದಿನಾಂಕ:19.12.2021

## 117. ಕನ್ನಡಿಗರ ವಾಹನ, ಅಂಗಡಿ ಮೇಲೆ ಪುಂಡರ ದಾಳಿ

ಬೆಂಗಳೂರಿನಲ್ಲಿ ಶಿವಾಜಿ ಮಹಾರಾಜರ ಪ್ರತಿಮೆಗೆ ಮಸಿ ಬಳಿದ ಪ್ರಕರಣಕ್ಕೆ ಪ್ರತೀಕಾರವಾಗಿ ಬೆಳಗಾವಿಯಲ್ಲಿ ರಾತ್ರಿ ಸುಮಾರು ನಾಲ್ಕೈದು ಗಂಟೆಗಳ ಕಾಲ ಎಂಇಎಸ್, ಶಿವಸೇನೆ ಮತ್ತಿತರ ಮರಾಠಿ ಸಂಘಟನೆಗಳ ಕಾರ್ಯಕರ್ತರು ದಾಂಧಲೆ ನಡೆಸಿದ್ದಾರೆ. ಕನ್ನಡಿಗರ ವಾಹನಗಳಿಗೆ ಕಲ್ಲು ತೂರಿದ್ದಲ್ಲದೆ, ಬೆಂಕಿ ಹಚ್ಚುವ ಯತ್ನವನ್ನು ನಡೆಸಿದ್ದಾರೆ.

ಬೆಳಗಾವಿಯಲ್ಲಿ ಡಿಸೆಂಬರ್ 13 ರಂದು ಅಧಿವೇಶನಕ್ಕೆ ಪರ್ಯಾಯವಾಗಿ ಎಂಇಎಸ್ ಪುಂಡರು ಮಹಾಮೇಳಾವ್ ಆಯೋಜಿಸಿದ್ದರು. ಈ ವೇಳೆ ಕನ್ನಡ ಸಂಘಟನೆ ಕಾರ್ಯಕರ್ತರು ಎಂಇಎಸ್ ಮುಖಂಡರಿಗೆ ಮಸಿ ಎರಚಿದ್ದರು. ಜೊತೆಗೆ ಮಹಾಮೇಳಾವ್ ಅನ್ನು ರದ್ದು ಮಾಡಿಸಿದ್ದರು. ಇದರಿಂದ ಒಳಗೊಳಗೆ ಕುದಿಯುತ್ತಿದ್ದ ಶಿವಸೇನೆ, ಎಂಇಎಸ್ ಪುಂಡರು ಕೊಲ್ಲಾಪುರದಲ್ಲಿ ಕನ್ನಡ ಧ್ವಜಕ್ಕೆ ಬೆಂಕಿ ಇಟ್ಟು ಕನ್ನಡಿಗರನ್ನು ಕೆರಳಿಸುವ ದುಸ್ಸಾಹಸಕ್ಕೆ ಕೈ ಹಾಕಿದರು. ಇದರ ಬೆನ್ನಲ್ಲೇ ಬೆಂಗಳೂರಿನಲ್ಲಿ ರಾತ್ರಿ ಕೆಲ ಕಿಡಿಗೇಡಿಗಳು ಶಿವಾಜಿ ಮಹಾರಾಜರ ಮೂರ್ತಿಗೆ ಮಸಿ ಎರಚಿದ್ದನ್ನೇ ನೆಪ ಮಾಡಿಕೊಂಡ ಪುಂಡರು ಬೆಳಗಾವಿಯಲ್ಲಿ ಬಾರೀ ದಾಂಧಲೆ ನಡೆಸಿದ್ದಾರೆ.

**ರಾತ್ರಿ 10.30 ರಿಂದ ಆರಂಭ:** ನಗರದ ಸಂಭಾಜಿ ವೃತ್ತ ಬಳಿ ದಿಢೀರ್ ರಾತ್ರಿ 10.30ರ ವೇಳೆಗೆ ಎಂ.ಇಎಸ್, ಶಿವಸೇನೆ ಮತ್ತಿತರ ಸಂಘಟನೆಗಳ ಕಾರ್ಯಕರ್ತರು ಜಮಾಯಿಸಿ ದಿಢೀರ್ ಪ್ರತಿಭಟನೆ ಆರಂಭಿಸಿದ್ದು, ಪೊಲೀಸರು ಸ್ಥಳಕ್ಕೆ ಭೇಟಿ ನೀಡಿ ಮನವೊಲಿಸಲು ಪ್ರಯತ್ನಿಸಿದರೂ ಪಟ್ಟುಬಿಡದೆ ಪ್ರತಿಭಟನೆ ಮುಂದುವರಿಸಿದರು. ಈ ವೇಳೆ ಪ್ರತಿಭಟನಾಕಾರರು ಮತ್ತು ಪೊಲೀಸರ ಮಧ್ಯೆ ಮಾತಿನ ಚಕಮಕಿ ನಡೆದಿದ್ದು ಪರಿಸ್ಥಿತಿ ಕೈ ಮೀರಿ ಹೋಗುವುದನ್ನು ಅರಿತ ಪೊಲೀಸರು ರಾಮಲಿಂಗ ಕಿಂಡಗಲ್ಲಿ, ಕುಲಕರ್ಣಿ ಗಲ್ಲಿ, ಪಾಟೀಲ ಗಲ್ಲಿಗಳಲ್ಲಿ ಲಾಠಿ ಚಾರ್ಜ್ ಮಾಡಿ, ಉದ್ರಿಕ್ತರ ಗುಂಪು ಚದುರಿಸಿದರು. ಇದೇ ಸಂದರ್ಭದಲ್ಲಿ ಪುಂಡರು ಕಲ್ಲು ತೂರಾಟಕ್ಕಿಳಿದಿದ್ದು, ಘಟನೆಯಲ್ಲಿ 6 ಸರ್ಕಾರಿ ವಾಹನಗಳು ಪೊಲೀಸರ ವಾಹನಗಳು ಸೇರಿ 20ಕ್ಕೂ ಹೆಚ್ಚು ವಾಹನಗಳಿಗೆ ಹಾನಿಯಾಗಿದೆ.

ಪೊಲೀಸರ ಲಾಠಿಚಾರ್ಜ್ ಬೆನ್ನಲ್ಲೇ ಪ್ರತಿಭಟನಾಕಾರರು ಕನ್ನಡಿಗರು ಮತ್ತು ಕರ್ನಾಟಕ ಸರ್ಕಾರದ ವಾಹನಗಳು, ಕನ್ನಡ ನಾಮಫಲಕಗಳು ಸೇರಿ ಕನ್ನಡಿಗರ ಆಸ್ತಿ–ಪಾಸ್ತಿಗಳನ್ನು ಗುರಿಯಾಗಿರಿಸಿ ದಾಂಧಲೆ ಶುರು ಮಾಡಿದರು. ಕನ್ನಡಗರ ಹೋಟೆಲ್ ಕನ್ನಡ ನಾಮಫಲಕ ಇರುವ ಅಂಗಡಿಗಳ ಬೋರ್ಡ್‌ಗಳ ಮೇಲೆಲ್ಲ ಕಲ್ಲೆಸೆದರು. ಬೆಳಗಾವಿ ಅಧಿವೇಶನದ ಹಿನ್ನೆಲೆಯಲ್ಲಿ ಆಗಮಿಸಿದ್ದ ಸರ್ಕಾರದ ವಾಹನಗಳ ಮೇಲೆ ಕಲ್ಲೆಸೆದಿದ್ದಲ್ಲದೆ, ಕೆಲ ವಾಹನಗಳ ಮೇಲೆ ಬರೆದಿದ್ದ ಕರ್ನಾಟಕ ಸರ್ಕಾರ ಎಂಬ ಬೋರ್ಡ್‌ಗಳನ್ನು ಹೋಟೆಲ್‌ಗಳ ಎದುರು ನಿಲ್ಲಿಸಿದ ಕನ್ನಡ ಫಲಕಗಳನ್ನು ಕೂಡ ಕಿತ್ತೆಸೆದಿದ್ದಾರೆ. ಮನೆ ಮುಂದೆ ಹೋಟೆಲ್‌ಗಳ ಮುಂದೆ ನಿಲ್ಲಿಸಲಾಗಿದ್ದ ಕಾರುಗಳ ಮೇಲೂ ಕಲ್ಲು ತೂರಿದರು.

ಇನ್ನು ಕೆಲ ಪುಂಡರು ಮಧ್ಯರಾತ್ರಿ ಮಾಸ್ಕ್‌ಗಳನ್ನು ತೊಟ್ಟು ಬೆಳಗಾವಿ ತಾಲ್ಲೂಕಿನ ಸುಳಗಾ ಗ್ರಾಮದ ಸಂಭಾಜಿ ಗಲ್ಲಿಯಲ್ಲಿದ್ದ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಹೆಸರಿನ ಕನ್ನಡ ಸಂಘಟನೆ ಫಲಕ ಮತ್ತು ಅದರಲ್ಲಿದ್ದ ರಾಯಣ್ಣನ ಚಿತ್ರಕ್ಕೆ ಕೇಸರು ಮಸಿ ಬಳಿದು ವಿಕೃತಿ ಮೆರೆದರು. ಗಲ್ಲಿ ಗಲ್ಲಿಗಳಲ್ಲಿ ಗುಂಪು ಗುಂಪಾಗಿ ನಿಂತಿದ್ದ ಯವಕರು ರಸ್ತೆ ಸೇರಿ ಎಲ್ಲೆಂದರಲ್ಲಿ ಬಿಯರ್ ಬಾಟಲ್‌ಗಳನ್ನು ಒಡೆದು ದಾಂಧಲೆ ನಡೆಸಿದರು.

ಆಧಾರ:ಕನ್ನಡಪ್ರಭ, ದಿನಾಂಕ:19.12.2021

## 118. ಬೆಳಗಾವಿ ಗದ್ದಲವೇ ಇಂದಿನ ಕಲಾಪದ ಚರ್ಚೆ

ಬೆಳಗಾವಿಯ ಸುವರ್ಣಸೌಧದಲ್ಲಿ ಚಳಿಗಾಲದ ಅಧಿವೇಶನ ನಡೆಯುತ್ತಿರುವ ಸಮಯದಲ್ಲಿಯೇ ಬೆಳಗಾವಿಯಲ್ಲಿ ಭುಗಿಲೆದಿರುವ ಶಿವಾಜಿ–ರಾಯಣ್ಣ ಮೂರ್ತಿ ಧ್ವಂಸದ ವಿವಾದ ಉಭಯ ಸದನದಲ್ಲಿ ಚರ್ಚೆಗೆ ಎತ್ತಲು ಪ್ರತಿಪಕ್ಷಗಳು ಸಜ್ಜಾಗಿದೆ.

ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಲು ವಿಷಯಕ್ಕಾಗಿ ಕಾಯುತ್ತಿದ್ದ ಪ್ರತಿ ಪಕ್ಷಗಳಿಗೆ ಬೆಳಗಾವಿ ಗದ್ದಲ ಪ್ರಮುಖ ಅಸ್ತ್ರವಾಗಲಿದೆ. ಈಗಾಗಲೇ ಭೈರತಿ ಬಸವರಾಜ್ ಪ್ರಕರಣ ಮತಾಂತರ ನಿಷೇಧ ಕಾಯಿದೆ, ಬಿಟ್ ಕಾಯಿನ್ ಸೇರಿದಂತೆ ಹಲವು ವಿಷಯಗಳಿದ್ದರೂ ಅವುಗಳನ್ನಿಟ್ಟುಕೊಂಡು ಧರಣಿ ಮಾಡಿದರೆ ಉತ್ತರ ಕರ್ನಾಟಕ ಭಾಗದ ಜನರಿಗೆ ಕೆಟ್ಟ ಸಂದೇಶ ರವಾನೆಯಾಗಲಿದೆ ಎನ್ನುವ ಆತಂಕವಿತ್ತು. ಆದರೆ ಇದೀಗ ಬೆಳಗಾವಿ ಗಲಾಟೆ ವಿಷಯದಲ್ಲಿ ಸರ್ಕಾರದ ವಿರುದ್ಧ ಮಾತನಾಡಿದರೆ ಈ ಸಂದೇಶ ರವಾನೆಯಾಗುವುದಿಲ್ಲ. ಅದ್ದರಿಂದ ಈ ವಿಷಯವನ್ನಿಟ್ಟುಕೊಂಡೇ ಹೋರಾಟ ಮಾಡಲು ತೀರ್ಮಾನಿಸಿದೆ ಎಂದು ತಿಳಿದು ಬಂದಿದೆ.

ಮತಾಂತರ ನಿಷೇಧ ವಿಧೇಯಕ ಮಂಡಿಸುವ ಮೊದಲೇ, ಈ ಘಟನೆ ಕಾಂಗ್ರೆಸ್‌ಗೆ ಪ್ರಮುಖ ಅಸ್ತ್ರವಾಗಿದೆ. ಈ ವಿಷಯದಲ್ಲಿ ಸರ್ಕಾರ ನಿರ್ಲಕ್ಷ್ಯವನ್ನು ಎತ್ತಿ ಹಿಡಿದು ಇಕ್ಕಟ್ಟಿಗೆ ಸಿಲುಕಿಸುವ ಲೆಕ್ಕಾಚಾರದಲ್ಲಿ ಕಾಂಗ್ರೆಸ್ ಇದೆ.

ಕ್ರೆಡಿಟ್ ಪಡೆಯಲು ಜಿಡಿಎಸ್ ಪ್ಲಾನ್" ಆದರೆ, ಅಧಿವೇಶನ ಮೊದಲ ದಿನವೇ ಎಂಇಎಸ್‌ನ ಮಹಾಮೇಳವ್‌ನಲ್ಲಿ ಕನ್ನಡ ಬಾವುಟ ಸುಟ್ಟ ಪುಂಡಾಟಿಕೆಯನ್ನು ಮೊದಲು ಕಲಾಪದಲ್ಲಿ ಗಮನ ಸೆಳೆದಿದ್ದು ಜೆಡಿಎಸ್ ಶಾಸಕ ಅನ್ನದಾನಿ ಅವರು ಇದಾದ ಬಳಿಕವೇ ಈ ಎಲ್ಲ ಗದ್ದಲ ಗಲಾಟೆ ನಡೆದು ರಾಜ್ಯ ಮಟ್ಟದಲ್ಲಿ ಸದ್ದು ಮಾಡಿದೆ. ಅನ್ನದಾನಿ ಅವರ ಬಗ್ಗೆ ಸಾಮಾಜಿಕ ಜಾಲತಾಣಗಳಲ್ಲಿ ಕನ್ನಡ ಪರ ಹೋರಾಟಗಾರರಿಂದ ಪ್ರಶಂಸೆ ವ್ಯಕ್ತವಾಗಿದೆ. ಈ ವಿಷಯದಲ್ಲಿ ಜೆಡಿಎಸ್ ಕ್ರೆಡಿಟ್ ಪಡೆಯಲು ಚಿಂತನೆ ನಡೆಸಿದೆ. ಒಂದು ವೇಳೆ ಕಾಂಗ್ರೆಸ್ ಈ ವಿಷಯವನ್ನು ನಿರ್ಲಕ್ಷ್ಯ ಮಾಡಿದರೆ ಸದನದಲ್ಲಿ ತಾವೇ ಮಂಡಿಸಲು ತೀರ್ಮಾನಿಸಿದೆ ಎಂದು ತಿಳಿದುಬಂದಿದೆ.

**ಮಂಡನೆಗೆ ಸೀಮಿತವಾಗಲಿರುವ ವಿಧೇಯಕ:** ಇಡೀ ಅಧಿವೇಶನದಲ್ಲಿ ಮಹತ್ವಾಕಾಂಕ್ಷೆಯ ವಿಧೇಯಕ ಮಂಡಿಸಲು ಅನುಮೋದನೆ ನೀಡಿ ಕಲಾಪದಲ್ಲಿ ಮಂಡಿಸಲು ಸರ್ಕಾರ ತೀರ್ಮಾನಿಸಿದೆ. ಮೂಲಗಳ ಪ್ರಕಾರ ಈ ಅಧಿವೇಶನದಲ್ಲಿ ಮತಾಂತರ ನಿಷೇಧ ವಿಧೇಯಕ ಮಂಡಿಸಿ ಚರ್ಚೆಗೆ ಮಾತ್ರ ಅವಕಾಶ ನೀಡಲಾಗುತ್ತದೆ. ಬಳಿಕ ಮುಂಬರಲಿರುವ ಬಜೆಟ್ ಅಧಿವೇಶನದಲ್ಲಿ ಅನುಮೋದನೆ ಪಡೆಯಲು ನಿರ್ಧರಿಸಲಾಗಿದೆ ಎಂದು ತಿಳಿದುಬಂದಿದೆ.

ಆಧಾರ:ವಿಶ್ವವಾಣಿ, ದಿನಾಂಕ:20.12.2021

## 119. ಉತ್ತರ ಕನ್ನಡ ಸಮಸ್ಯೆ ಚರ್ಚೆಗೆ ಮುಹೂರ್ತ

ಕಳೆದೊಂದು ವಾರದಿಂದ ಬೆಳಗಾವಿಯ ಸುವರ್ಣಸೌಧದಲ್ಲಿ ಅಧಿವೇಶನ ನಡೆಯುತ್ತಿದ್ದರೂ ಉತ್ತರ ಕರ್ನಾಟಕದ ಗಂಭೀರ ಸಮಸ್ಯೆಗಳ ಬಗ್ಗೆ ಒಂದು ದಿನವು ಚರ್ಚೆಯಾಗದೆ ಇರುವುದರ ಬಗ್ಗೆ

ಆಕ್ಷೇಪ ವ್ಯಕ್ತವಾಗಿರುವ ಹಿನ್ನೆಲೆಯಲ್ಲಿ ಎಚ್ಚೆತ್ತ ಸದನದ ಸದಸ್ಯರು ಪಕ್ಷ ಬೇಧ ಮರೆತು ಉತ್ತರ ಕರ್ನಾಟಕದ ಗಂಭೀರ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರ ಕಂಡುಕೊಳ್ಳುವಂತೆ ಒತ್ತಾಯಿಸಿದ ಪ್ರಸಂಗ ವಿಧಾನ ಪರಿಷತ್‌ನಲ್ಲಿ ನಡೆಯಿತು.

ಕಲಾಪದ ಆರಂಭದಲ್ಲಿಯೇ ಪರಿಷತ್ ಪ್ರತಿಪಕ್ಷ ನಾಯಕ ಎಸ್. ಆರ್. ಪಾಟೀಲ್ ಅವರು ಮಹದಾಯಿ ಯೋಜನೆ ಅಧಿಸೂಚನೆ ಆಗಿದೆಯಾದರೂ ಕೆಲಸ ಆರಂಭವಾಗಿಲ್ಲ. ತುಂಗಾಭದ್ರ ಜಲಾಶಯದಲ್ಲಿ ಹೂಳು ತುಂಬಿದ್ದು, ನವಲಿ ಬಳಿ ಸಮಾನಾಂತರ ಜಲಾಶಯ ನಿರ್ಮಾಣ ಮಾಡುವುದಕ್ಕೆ ಡಿಪಿಎಆರ್ ಸಿದ್ಧಪಡಿಸಿದರೂ ನಂತರದ ಪ್ರಗತಿ ಶೂನ್ಯವಾಗಿದೆ. 371ಜೆ ಪರಿಣಾಮಕಾರಿಯಾಗಿ ಅನುಷ್ಠಾನವಾಗುತ್ತಿಲ್ಲ. ಈ ಭಾಗದ ಬಹುತೇಕ ಯೋಜನೆಗಳು ನೆನಗುದಿಗೆ ಬಿದಿವೆ. ಜನರು ಈ ಭಾಗದ ಸಮಸ್ಯೆಗಳು ಚರ್ಚೆಯಾಗ್ಬೇಕು ಮತ್ತು ಅವುಗಳಿಗೆ ಪರಿಹಾರ ಸಿಗುವುದಕ್ಕೆ ಜಾತಕ ಪಕ್ಷಿಯಂತೆ ಕಾಯುತ್ತಿದ್ದಾರೆ ಎಂದು ವಿವರಿಸಿದರು.

ಸಂಗೊಳ್ಳಿ ರಾಯಣ್ಣರ ಪ್ರತಿಮೆ ಭಗ್ನವಾಗಿದೆ ಮತ್ತು ಶಿವಾಜಿ ಮಹಾರಾಜರ ಪ್ರತಿಮೆಗೆ ಮಸಿ ಬಳಿಯಲಾಗಿದೆ. ಈ ರೀತಿಯ ಘಟನೆಗಳು ನಡೆಯದಂತೆ ಸರ್ಕಾರ ಮುಂಜಾಗ್ರತೆ ವಹಿಸಬೇಕು ಮತ್ತು ಎಂಇಎಸ್ ಪುಂಡರ ವಿರುದ್ಧ ನಿರ್ದಾಕ್ಷಣ್ಯ ಕ್ರಮ ಕೈಗೊಳ್ಳಬೇಕು ಎಂದು ಅವರು ಒತ್ತಾಯಿಸಿದರು.

ಹಿರಿಯ ಸದಸ್ಯ ಲಕ್ಷ್ಮಣ್ ಸವದಿ ಅವರು 3 ವರ್ಷಗಳ ನಂತರ ಬೆಳಗಾವಿಯಲ್ಲಿ ಅಧಿವೇಶನ ನಡೆಯುತ್ತಿದ್ದು, ಅಧಿವೇಶನ ಆರಂಭವಾಗಿ ಒಂದು ವಾರವಾದರೂ ಈ ಭಾಗದ ಒಂದೇ ಒಂದು ಸಮಸ್ಯೆ ಬಗ್ಗೆಯೂ ಚರ್ಚೆಯಾಗುತ್ತಿಲ್ಲ. ಶಾಸಕರು ಮತ್ತು ಅಧಿಕಾರಿಗಳು ಬೆಳಗಾವಿಗೆ ಪಿಕ್‌ನಿಕ್ ಮಾಡಲು ಮತ್ತು ಗೋವಾ ಟೂರ್ ಮಾಡಲು ಬಂದಿದ್ದಾರೆಂದು ಜನರು ಮಾತನಾಡಿಕೊಳ್ಳುತ್ತಿದ್ದಾರೆ. ಈ ಭಾಗದಿಂದ ಪ್ರತಿನಿಧಿಸುತ್ತಿರುವ ನಾವು ಜನರೆದುರು ತಲೆತಗ್ಗಿಸುವಂತಾಗಿದೆ ಎಂದರು.

ಹಿರಿಯ ಸದಸ್ಯ ಶ್ರೀಕಂಠೇಗೌಡ ಅವರು ಉತ್ತರ ಕರ್ನಾಟಕದ ಅಭಿವೃದ್ಧಿ ಜೊತೆಗೆ ಎಂಇಎಸ್ ಪುಂಡಾಟದ ಬಗ್ಗೆಯೂ ಚರ್ಚೆಯಾಗಬೇಕು. ಕನ್ನಡಿಗರ ಮೇಲೆ ಕೊಲೆ ಪ್ರಕರಣ ದಾಖಲಿಸುವ ಪೊಲೀಸರು ಪುಂಡರ ಮೇಲೆ ಸಾದಾ ಕೇಸ್ ಹಾಕುತ್ತಿದ್ದಾರೆ. ಇದ್ಯಾವ ಸೀಮೆ ನ್ಯಾಯ ಎಂದು ಆಕ್ರೋಶ ವ್ಯಕ್ತಪಡಿಸಿದರು. ಸಭಾನಾಯಕರು ಆಗಿರುವ ಸಮಾಜ ಕಲ್ಯಾಣ ಸಚಿವ ಕೋಟ ಶ್ರೀನಿವಾಸ ಪೂಜಾರಿ ಹಾಗೂ ಜಲಸಂಪನ್ಮೂಲ ಸಚಿವ ಗೋವಿಂದ ಕಾರಜೋಳ ಅವರು ಉತ್ತರ ಕರ್ನಾಟಕದ ಮಹತ್ವ ವಿಷಯಗಳ ಕುರಿತು ಚರ್ಚೆ ನಡೆಸಿ ಪರಿಹಾರ ಕಂಡುಕೊಳ್ಳಲು ಸರ್ಕಾರ ಸಿದ್ಧವಿದೆ ಎಂದರು.

ನಂತರ ಮಾತನಾಡಿದ ಸಭಾಪತಿಯವರು ನಾಳೆ ಬೆಳಿಗ್ಗೆ 10.30ಕ್ಕೆ ಪರಿಷತ್ ಶುರುವಾಗಲಿದ್ದು, ಪ್ರಶ್ನೋತ್ತರ ಮುಗಿದ ನಂತರ ಸಂಪೂರ್ಣ ಉತ್ತರ ಕರ್ನಾಟಕದ ಗಂಭೀರ ಸಮಸ್ಯೆಗಳ ಬಗ್ಗೆ ಚರ್ಚಿಸುವುದಕ್ಕಾಗಿಯೇ ಸಮಯ ಮೀಸಲಿಡಲಾಗುವುದು ಎಂದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:21.12.2021

## 120. ಒಂದು ವಾರ ಅಧಿವೇಶನ ವಿಸ್ತರಿಸಲು ಮುಖ್ಯಮಂತ್ರಿ, ಸ್ಪೀಕರ್‌ಗೆ ಸಿದ್ದು ಪತ್ರ

ಡಿಸೆಂಬರ್ 24ರವರೆಗೆ ನಿಗದಿಯಾಗಿರುವ ರಾಜ್ಯ ವಿಧಾನ ಮಂಡಲ ಅಧಿವೇಶನವನ್ನು ಕನಿಷ್ಠ ಇನ್ನೂ ಒಂದು ವಾರ ವಿಸ್ತಾರಗೊಳಿಸಬೇಕು ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅವರು ಸರ್ಕಾರಕ್ಕೆ ಒತ್ತಾಯಿಸಿದ್ದಾರೆ. ಮುಖ್ಯಮಂತ್ರಿಯವರಿಗೆ ಮತ್ತು ಸಭಾಧ್ಯಕ್ಷರಿಗೆ ಪತ್ರ ಬರೆದಿರುವ ಅವರು 3 ವರ್ಷಗಳ ಬಳಿಕ ಬೆಳಗಾವಿಯಲ್ಲಿ 10 ದಿನಗಳ ಅಧಿವೇಶನ ನಡೆಯುತ್ತಿದೆ. ಪ್ರವಾಹ, ಅತಿವೃಷ್ಟಿ, ಉತ್ತರ ಕರ್ನಾಟಕ ನೀರಾವರಿ ವಿಷಯ, ಕೃಷಿ ಬಿಕ್ಕಟ್ಟು ಕಲ್ಯಾಣ ಕರ್ನಾಟಕ, ಕಿತ್ತೂರು ಕರ್ನಾಟಕ ಭಾಗದ ಸಮಸ್ಯೆಗಳು ನಿರುದ್ಯೋಗ ಮತ್ತಿತರ ವಿಷಯ ಚರ್ಚಿಸಬೇಕಾಗಿದೆ. ಈ ಸಂದರ್ಭದಲ್ಲೇ ಕೆಲವು ದುಷ್ಟ

ಶಕ್ತಿಗಳು ಪ್ರತಿಮೆಗೆ ಹಾನಿ ಮಾಡುವ, ನಾಡಧ್ವಜ ಸುಡುವ ಮೂಲಕ ಜನರ ಗಮನ ಬೇರೆಡೆ ಸೆಳೆವ ಕೆಲಸ ಮಾಡುತ್ತಿವೆ ಎಂದಿದ್ದಾರೆ.

ಆಧಾರ:ಕನ್ನಡಪ್ರಭ, ದಿನಾಂಕ:21.12.2021

## 121. ಎಂಇಎಸ್ ನಿಷೇಧಕ್ಕೆ ಪಕ್ಷಾತೀತ ಒತ್ತಾಸೆ

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಮೂರ್ತಿ ಭಗ್ನಗೊಳಿಸಿದ್ದನ್ನು ಹಾಗೂ ಕನ್ನಡಿಗರ ವಾಹನಗಳ ಮೇಲೆ ದಾಳಿ ನಡೆಸಿದ್ದನ್ನು ಆಡಳಿತ ಮತ್ತು ವಿರೋಧ ಪಕ್ಷದ ಸದಸ್ಯರು ವಿಧಾನ ಪರಿಷತ್‌ನಲ್ಲಿ ಪಕ್ಷಾತೀತವಾಗಿ ಖಂಡಿಸಿದರು.

ಶ್ರೀಕಂಠೇಗೌಡರ ನಿಯಮ 68ರ ಅಡಿಯಲ್ಲಿ ಪರಿವರ್ತಿಸಲಾದ ಸಾರ್ವಜನಿಕ ಮಹತ್ವದ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚೆಯಲ್ಲಿ ಪಾಲ್ಗೊಂಡ ಸದಸ್ಯರು ಎಂಇಎಸ್ ನಿಷೇಧಿಸುವಂತೆ ಆಗ್ರಹಿಸಿದರು. ಶ್ರೀಕಂಠೇಗೌಡರು ಮಾತನಾಡಿ ನಮ್ಮ ರಾಜ್ಯದಲ್ಲಿಯೇ ನೆಲೆಸಿದ, ಇಲ್ಲಿನ ಊಟ ಉಂಡು, ನೀರು ಕುಡಿದು ನಮ್ಮ ನೆಲಕ್ಕೆ ದ್ರೋಹ ಮಾಡುವವರ ಮೇಲೆ ನಿರ್ದಾಕ್ಷಣ್ಯ ಕ್ರಮ ತೆಗೆದುಕೊಳ್ಳಬೇಕು ಎಂದರು. ಕೊಲ್ಲಾಪುರದಲ್ಲಿ ನಮ್ಮ ಕನ್ನಡ ಬಾವುಟಕ್ಕೆ ಬೆಂಕಿ ಇಟ್ಟು ಅಪಮಾನ ಮಾಡಲಾಗಿದೆ. ಸರ್ಕಾರದ ಆಸ್ತಿಗೆ ಹಾನಿ ಉಂಟು ಮಾಡಲಾಗಿದೆ ನಮ್ಮ ರಾಜ್ಯದ ಪೊಲೀಸರು ಮಹಾರಾಷ್ಟ್ರ ರಾಜ್ಯದ ಪೊಲೀಸರ ಭದ್ರತೆಯಲ್ಲಿ ಮರಳಬೇಕಾದ ಸ್ಥಿತಿ ಬಂದಿರುವುದು ದುರದೃಷ್ಟಕರ ಎಂದರು.

ಕನ್ನಡಿಗರ ಮೇಲೆ ನಿರಂತರ ದೌರ್ಜನ್ಯ ಎಸಗುತ್ತಿರುವ ಎಂಇಎಸ್ ಸಂಘಟನೆಯನ್ನು ನಿಷೇಧಿಸಲು ಸರ್ಕಾರ ಯಾಕೆ ಹಿಂದೇಟು ಹಾಕುತ್ತಿದೆ ಎಂಬುದನ್ನು ಸ್ಪಷ್ಟಪಡಿಸಬೇಕೆಂದರು. ಸರ್ಕಾರ ಕೂಡಲೇ ಕನ್ನಡ ಹೋರಾಟಗಾರ ಸಂಪತ್‌ಕುಮಾರ್ ಅವರ ಮೇಲೆ ಹಾಕಿದ ಕೊಲೆಯತ್ನ ಪ್ರಕರಣವನ್ನು ಹಿಂದಕ್ಕೆ ಪಡೆಯಬೇಕು ಎಂದು ಆಗ್ರಹಿಸಿದರು.

ಪ್ರತಿಪಕ್ಷ ನಾಯಕ ಎಸ್. ಆರ್. ಪಾಟೀಲ್ ಮಾತನಾಡಿ, ಕನ್ನಡ ನೆಲ, ಜಲದ ಪ್ರಶ್ನೆ ಬಂದಾಗ ಎಲ್ಲ ಪಕ್ಷದವರು ಒಂದಾಗಿ ಹೋರಾಟ ಮಾಡುವುದು ಅಗತ್ಯವಾಗಿದೆ. ಕನ್ನಡ ಪರ ಸಂಘಟನೆಗಳ ಹೋರಾಟಗಾರ ಸಂಪತ್‌ಕುಮಾರ್ ಮೇಲೆ ಕೊಲೆ ಯತ್ನ ಪ್ರಕರಣ ದಾಖಲಿಸಿದ್ದು ಖಂಡನೀಯ. ಅದನ್ನು ಕೂಡಲೇ ಹಿಂದಕ್ಕೆ ಪಡೆಯಬೇಕು ಎಂದರು. ಎಂಇಎಸ್ ಸಂಘಟನೆಯನ್ನು ನಿಷೇಧಿಸಬೇಕಲ್ಲದೇ, ಎಂಇಎಸ್ ಪುಂಡರನ್ನು ಗಡಿಪಾರು ಮಾಡಬೇಕು ಎಂದು ಒತ್ತಾಯಿಸಿದರು.

ಬಿಜೆಪಿ ಸದಸ್ಯ ಪುಟ್ಟಣ್ಣ ಮಾತನಾಡಿ, ಎಂಇಎಸ್ ಪುಂಡರ ಮೇಲೆ ಕೋಕಾ ನಿಯಮದಡಿ ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿದರು. ನಾರಾಯಣಸ್ವಾಮಿ ಮಾತನಾಡಿ, ವಿಧಾನ ಪರಿಷತ್‌ಗೆ ಸೇರಿದ 6 ವಾಹನಗಳು ಸೇರಿದಂತೆ ಸುಮಾರು 40 ವಾಹನಗಳನ್ನು ಜಖಂಗೊಳಿಸಲಾಗಿದೆ. ಕೇಂದ್ರ ಸರ್ಕಾರ ಕೂಡಲೇ ಮಹಾರಾಷ್ಟ್ರದಲ್ಲಿ ಕನ್ನಡಿಗರ ಮೇಲೆ ಹಲ್ಲೆ ನಡೆಸಿದವರ ಮೇಲೆ ಕ್ರಮ ಕೈಗೊಳ್ಳಬೇಕು ಎಂದರು.

ಬಿಜೆಪಿಯ ಸದಸ್ಯ ರವಿಕುಮಾರ್ ಮಾತನಾಡಿ ಬೆಳಗಾವಿ ಅಧಿವೇಶನ ನಡೆಸುವ ಮುನ್ನ ಪೂರ್ವಭಾವಿ ಸಭೆ ನಡೆಸಿ ಕನ್ನಡಿಗರ ಮೇಲೆ ದೌರ್ಜನ್ಯ ನಡೆಸುವವರ ಮೇಲೆ ಕಠಿಣ ಕ್ರಮ ಕೈಗೊಳ್ಳಲಾಗುವುದು ಎಂದು ಎಚ್ಚರಿಕೆ ನೀಡಬೇಕು ಎಂದರು. ಕಾಂಗ್ರೆಸ್ ಸದಸ್ಯರಾದ ತಿಪ್ಪೇಸ್ವಾಮಿ, ಬಿ.ಕೆ. ಹರಿಪ್ರಸಾದ್, ಬಿಜೆಪಿಯ ತೇಜಸ್ವಿನಿಗೌಡ ಮಾತನಾಡಿ ಎಂಇಎಸ್ ಪುಂಡಾಟಿಕೆ ಖಂಡಿಸಿದರು.

ಆಧಾರ:ಸಂಯುಕ್ತ ಕರ್ನಾಟಕ,ದಿನಾಂಕ:21.12.2021

## 122. ದೇಶದ್ರೋಹ ಕೇಸ್ ಪ್ರಯೋಗ

ಬೆಂಗಳೂರಿನಲ್ಲಿ ಛತ್ರಪತಿ ಶಿವಾಜಿ ಪ್ರತಿಮೆಗೆ ಮಸಿ ಹಾಗೂ ಬೆಳಗಾವಿಯಲ್ಲಿ ವೀರ ಸೇನಾನಿ ಸಂಗೊಳ್ಳಿ ರಾಯಣ್ಣ ಪ್ರತಿಮೆ ಭಗ್ನಗೊಳಿಸಿದ ಪುಂಡರ ವಿರುದ್ಧ ದೇಶದ್ರೋಹ ಪ್ರಕರಣ ದಾಖಲಿಸುವುದರ

ಜೊತೆಗೆ ಕುಕೃತ್ಯಕ್ಕೆ ಪ್ರಚೋದನೆ ನೀಡಿದವರ ವಿರುದ್ಧವು ಗೂಂಡಾ ಕಾಯಿದೆಯಡಿ ಮೊಕದ್ದಮೆ ದಾಖಲಿಸಲು ವಿಧಾನ ಸಭೆಯಲ್ಲಿ ಸರ್ವಾನುಮತದ ನಿರ್ಣಯ ಅಂಗೀಕರಿಸಲಾಗಿದೆ. ಪದೇಪದೇ ಗಡಿ ತಂಟೆ ಕೆದಕಿ ಸಾಮರಸ್ಯ ಕದಡಲು ಪ್ರಯತ್ನಿಸುತ್ತಿರುವ ಎಂಇಎಸ್ ಸಂಘಟನೆಯನ್ನು ಕಾನೂನು ಚೌಕಟ್ಟಿನಲ್ಲಿ ನಿಷೇಧಿಸಲು ಪರಿಶೀಲನೆ ನಡೆಸಲಾಗುವುದು ಎಂದು ಮುಖ್ಯಮಂತ್ರಿಯವರು ವಿಧಾನ ಸಭೆಯಲ್ಲಿ ಪ್ರಕಟಿಸಿದರು.

ಸಚಿವ ಭೈರತಿ ಬಸವರಾಜು ರಾಜೀನಾಮೆಗೆ ಒತ್ತಾಯಿಸಿ ಕಾಂಗ್ರೆಸ್ ಧರಣಿ ನಡೆಸಿದ್ದರಿಂದ ಬೆಳಿಗ್ಗೆ ಕಲಾಪ ಬಲಿಯಾದರೆ, ಮಧ್ಯಾಹ್ನ ಇಡೀ ಸದನ ಪಕ್ಷ ಭೇದ ಮರೆತು ಕೊಲ್ಲಾಪುರದಲ್ಲಿ ಕನ್ನಡ ಬಾವುಟ ಸುಟ್ಟಿದ್ದು, ಶಿವಾಜಿ ಪ್ರತಿಮೆಗೆ ಮಸಿ ಬಳಿದದ್ದು ಹಾಗೂ ಬೆಳಗಾವಿಯಲ್ಲಿ ಸಂಗೊಳ್ಳಿ ರಾಯಣ್ಣನ ಪ್ರತಿಮೆ ಭಗ್ನಗೊಳಿಸಿದ ಪ್ರಕರಣವನ್ನು ಒಕ್ಕೊರಲಿನಿಂದ ಖಂಡಿಸಿತು.

ಎಲ್ಲೆಲ್ಲಿ ಏನಾಯಿತು:–

- ಎಂಇಎಸ್ ಶಿವಸೇನೆ ನಿಷೇಧಕ್ಕೆ ಆಗ್ರಹಿಸಿ ರಾಜ್ಯದ ವಿವಿಧೆಡೆ ಪ್ರತಿಭಟನೆ.
- ಬೆಳಗಾವಿಯ ಸುವರ್ಣಸೌಧಕ್ಕೆ ಕನ್ನಡಪರ ಸಂಘಟನೆಗಳಿಂದ ಮುತ್ತಿಗೆ ಯತ್ನ.
- ಖಾನಾಪುರದಲ್ಲಿ ಕಿಡಿಗೇಡಿಗಳಿಂದ ಬಸವಣ್ಣನ ಭಾವಚಿತ್ರಕ್ಕೆ ಮಸಿ.
- ಕನ್ನಡ ಧ್ವಜಕ್ಕೂ ಬೆಂಕಿ ಹಚ್ಚಿ ಪುಂಡಾಟ ಮುಂದುವರಿಕೆ.
- ರಾಜ್ಯದ ಬಸ್‌ಗಳಿಗೆ ಎಂಇಎಸ್ ಕಾರ್ಯಕರ್ತರಿಂದ ಮಸಿ, ಮರಾಠಿ ಘೋಷಣೆ ಬರೆದು ಪ್ರಚೋದನೆ.
- ಸೌಹಾರ್ದ, ಸಮನ್ವಯತೆಗೆ ಹಿರಿಯರ ಸಮಿತಿ ರಚಿಸಲು ಮುಂದಾದ ಕಸಾಪ.
- ನಾಡದ್ರೋಹಿಗಳ ಗಡಿಪಾರಿಗೆ ಕುಮಾರಸ್ವಾಮಿ ಆಗ್ರಹ.

ಆಧಾರ:ವಿಜಯ ಕರ್ನಾಟಕ, ದಿನಾಂಕ:21.12.2021

## 123. ಭೈರತಿ ಪ್ರಕರಣ ಬಗ್ಗೆ ಮತ್ತೆ ಗದ್ದಲ, ಸಭಾತ್ಯಾಗ

ನಗರಾಭಿವೃದ್ಧಿ ಸಚಿವ ಭೈರತಿ ಬಸವರಾಜು ವಿರುದ್ಧದ ಭೂ ಕಬಳಿಕೆ ಆರೋಪ ಪ್ರಕರಣ ವಿಧಾನಮಂಡಲದ ಉಭಯ ಸದನಗಳಲ್ಲಿ ಪ್ರತಿಧ್ವನಿಸಿ ಪ್ರತಿಭಟನೆ, ಧರಣಿ, ಅಂತಿಮವಾಗಿ ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರ ಸಭಾತ್ಯಾಗಕ್ಕೂ ಕಾರಣವಾಯಿತು. ಪರಿಣಾಮ ಕಲಾಪ ಸರಿಯಾಗಿ ನಡೆಯಲಿಲ್ಲ. ಇದರಿಂದಾಗಿ, ಬೆಳಗಾವಿಯಲ್ಲಿ ಅಧಿವೇಶನ ನಡೆಯುತ್ತಿದ್ದರೂ, ಉತ್ತರ ಕರ್ನಾಟಕ ಕುರಿತು ಸರ್ಕಾರ ಮುಜುಗರ ಅನುಭವಿಸುವಂತಾಯಿತು.

ಭೈರತಿ ವಿಷಯದ ಬಗ್ಗೆ ಚರ್ಚೆಗೆ ಅವಕಾಶ ನೀಡುವಂತೆ ಆಗ್ರಹಿಸಿ ಕಾಂಗ್ರೆಸ್ ಸದಸ್ಯರು ಉಭಯ ಸದನಗಳಲ್ಲಿ ತೀವ್ರ ಪ್ರತಿಭಟನೆ ಧರಣಿ ನಡೆಸಿದರು, ಚರ್ಚೆಗೆ ಅವಕಾಶ ಕೊಡದೇ ಇರುವುದು ಖಂಡಿಸಿ, ಸಭಾತ್ಯಾಗ ಮಾಡಿದರು. ಪರಿಷತ್ತಿನಲ್ಲಿ ಕಾಂಗ್ರೆಸ್ ಸದಸ್ಯರ ಧರಣಿ, ಘೋಷಣೆಗಳ ನಡುವೆ ಪ್ರಶ್ನೋತ್ತರ, ಶೂನ್ಯವೇಳೆ ಕಲಾಪಗಳು ನಡೆದರೆ, ವಿಧಾನಸಭೆಯಲ್ಲಿ ಪ್ರಶ್ನೋತ್ತರ ಕಲಾಪ ಜರುಗಿತ್ತು.

**ವಾಕ್ಸಮರ:** ವಿಧಾನಸಭೆಯಲ್ಲಿ ಕೇಂದ್ರದ ಮಾಜಿ ಸಚಿವ ಆರ್.ಎಲ್.ಜಾಲಪ್ಪ ನಿಧನದ ಸಂತಾಪ ಸೂಚನೆ ಬಳಿಕ ಕಲಾಪ ಶುರುವಾಗುತ್ತಿದ್ದಂತೆ ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ಅವರು ಸಚಿವ ಭೈರತಿ

ಬಸವರಾಜು ವಿರುದ್ಧ ಕೋರ್ಟ್ ಕ್ರಿಮಿನಲ್ ಮೊಕದ್ದಮೆ ದಾಖಲಿಸುವಂತೆ ಸೂಚಿಸಿದೆ. ಆದ ಕಾರಣ ಚರ್ಚೆಗೆ ಅವಕಾಶ ನೀಡಬೇಕೆಂದು ಆಗ್ರಹಿಸಿದರು.

ಈ ವೇಳೆ ಕಾಂಗ್ರೆಸ್ ಸದಸ್ಯರೆಲ್ಲರೂ ಬಾವಿಗಿಳಿದು ಪ್ರತಿಭಟನೆ ಶುರು ಮಾಡಿದರು. ಆಡಳಿತ ಮತ್ತು ವಿಪಕ್ಷ ಸದಸ್ಯರ ನಡುವೆ ಆರೋಪ–ಪ್ರತ್ಯಾರೋಪ ನಡೆದವು. ಧಿಕ್ಕಾರದ ಘೋಷಣೆ ನಡುವೆಯೇ ಪ್ರಶ್ನೋತ್ತರ ಅವಧಿ ಪೂರ್ಣಗೊಳಿಸಿ ಕಲಾಪವನ್ನು ಮುಂದೂಡಲಾಯಿತು.

ಊಟದ ವಿರಾಮದ ಬಳಿಕ ಶುರುವಾದ ಕಲಾಪದಲ್ಲಿ ಕಾಂಗ್ರೆಸ್ ಬಾವಿಗಿಳಿದು ಮತ್ತೆ ಪ್ರತಿಭಟನೆ ಮುಂದುವರಿಸಿತು. ಈ ವೇಳೆ ಮಾತನಾಡಿದ ಸಿದ್ದರಾಮಯ್ಯ ಈ ಸರ್ಕಾರ ಭಂಡ ಸರ್ಕಾರ ಭ್ರಷ್ಟತೆ ತುಂಬಿ ತುಳುಕುತ್ತಿದೆ. ಆದರೆ ಚರ್ಚಿಸಲು ಅವಕಾಶ ನೀಡುತ್ತಿಲ್ಲ ಎಂದು ಕಿಡಿಕಾರಿ ನಾವು ಸಭಾತ್ಯಾಗ ಮಾಡುತ್ತೇವೆ ಎಂದು ಹೇಳಿ ಇತರ ಸದಸ್ಯರೊಂದಿಗೆ ಹೊರನಡೆದರು.

**ಮೇಲ್ಮನೆಯಲ್ಲಿ ಧರಣಿ:** ವಿಧಾನ ಪರಿಷತ್ತಿನಲ್ಲೂ ಸಂತಾಪ ಬಳಿಕ ಕಾಂಗ್ರೆಸ್ ಸದಸ್ಯರು ಹಾಲಿ ಸಚಿವರೊಬ್ಬರ ಭೂ ಕಬಳಿಕೆ ಆರೋಪ ಪ್ರಕರಣದ ಬಗ್ಗೆ ಚರ್ಚಿಸಲು ಅವಕಾಶ ನೀಡುವಂತೆ ಒತ್ತಾಯಿಸಿ ಸಭಾಪತಿಗಳ ಮುಂದೆ ಬಂದು ಧರಣಿ ಆರಂಭಿಸಿದರು.

ಪ್ರತಿಪಕ್ಷದ ನಾಯಕ ಎಸ್. ಆರ್. ಪಾಟೀಲ್ ಮಾತನಾಡಿ, ಅಧಿವೇಶನದಲ್ಲಿ ಉತ್ತರ ಕರ್ನಾಟಕದ ಸಮಸ್ಯೆಗಳ ಬಗ್ಗೆ ಚರ್ಚೆ ಆಗಬೇಕಾಗಿದೆ. ಚರ್ಚಿಸಲು ಅವಕಾಶ ಕಲ್ಪಿಸಬೇಕು ಎಂದು ಮನವಿ ಮಾಡಿದರು. ಆಗ ಕಾಂಗ್ರೆಸ್ ಸದಸ್ಯರಾದ ಬಿ.ಕೆ. ಹರಿಪ್ರಸಾದ್ ಮತ್ತಿತರರು ನಿಯಮ 68ರ ಅಡಿ ಸಲ್ಲಿಸಿರುವ ಪ್ರಸ್ತಾವನೆಗೆ ಚರ್ಚಿಸಲು ಯಾವಾಗ ಅವಕಾಶ ಕೊಡುತ್ತೀರಿ ಎಂದು ಆಗ್ರಹಿಸಿದರು. ಈ ಬಗ್ಗೆ ಪರಿಶೀಲಿಸಿ ನಂತರ ತೀರ್ಮಾನಿಸುವುದಾಗಿ ಸಭಾಪತಿ ಹೇಳಿದಾಗ ಅದಕ್ಕೆ ಒಪ್ಪದ ಕಾಂಗ್ರೆಸ್ ಸದಸ್ಯರು ಧರಣಿ ಮುಂದುವರಿಸಿದರು. ಸಂಧಾನ ಸಭೆ ನಡೆಸಿದರೂ ಸಮಸ್ಯೆ ಬಗೆಹರಿಯಲಿಲ್ಲ. ಪುನ: ಸದನ ಆರಂಭಗೊಳ್ಳುತ್ತಿದ್ದಂತೆ ಕಾಂಗ್ರೆಸ್ ಸದಸ್ಯರು ಪುನ: ಸದಸ್ಯರು ಧರಣಿ ಆರಂಭಿಸಿದರು. ಭೋಜನ ವಿರಾಮದ ನಂತರ ಸಹ ಕಾಂಗ್ರೆಸ್ ಸದಸ್ಯರು ಸಚಿವರ ಭೂ ಕಬಳಿಕೆ ವಿಷಯ ಚರ್ಚಿಸಲು ಅವಕಾಶ ನೀಡಬೇಕೆಂಬ ಮನವಿಗೆ ಸಭಾಪತಿ ಒಪ್ಪದೇ ಇದ್ದಾಗ ಕಾಂಗ್ರೆಸ್ ಸದಸ್ಯರು ಸಭಾತ್ಯಾಗ ಮಾಡಿದರು.

ಆಧಾರ:ಕನ್ನಡ ಪ್ರಭ,ದಿನಾಂಕ:21.12.2021

## 124. ಮತಾಂತರ ನಿಷೇಧ ವಿಧೇಯಕಕ್ಕೆ ಸಂಪುಟ ಒಪ್ಪಿಗೆ

ನಿರೀಕ್ಷೆಯಂತೆ ಮತಾಂತರ ನಿಷೇಧ ವಿಧೇಯಕ ಮಂಡಿಸಲು ಸರ್ಕಾರ ಸಿದ್ಧತೆ ನಡೆಸಿಕೊಂಡಿದ್ದು, ಅದಕ್ಕೆ ಬೇಕಿರುವ ಸಂಪುಟ ಅನುಮೋದನೆಯನ್ನು ಪಡೆದುಕೊಂಡಿದೆ.

ವಿಧೇಯಕವನ್ನು ಮಂಡಿಸಲು ತೀರ್ಮಾನಿಸಲಾಗಿದೆ. ಬಳಿಕ ವಿಧಾನ ಪರಿಷತ್ತಿನಲ್ಲಿ ಮಂಡಿಸಬೇಕು. ಸುವರ್ಣಸೌಧದಲ್ಲಿ ನಡೆದ ಸಂಪುಟ ಸಭೆಯಲ್ಲಿ ಚರ್ಚಿಸಲಾಗಿದೆ. ಬೆಳಗಾವಿಯ ಸುವರ್ಣಸೌಧದಲ್ಲಿ ನಡೆದ ಸಂಪುಟ ಸಭೆಯಲ್ಲಿ ಚಳಿಗಾಲದ ಅಧಿವೇಶನದಲ್ಲಿ ಮತಾಂತರ ನಿಷೇಧ ವಿಧೇಯಕ ಮಂಡಿಸಿ ಜಾರಿಗೊಳಿಸಲು ತೀರ್ಮಾನಿಸಲಾಗಿದೆ. ವಿಧಾನಸಭೆಯಲ್ಲಿ ಈ ವಿಧೇಯಕ ಮಂಡಿಸಿ, ಚರ್ಚೆಗೆ ಬೀಡುವ ಸಾಧ್ಯತೆಯಿದೆ.

ಒಂದು ವೇಳೆ ಚಳಿಗಾಲದ ಅಧಿವೇಶನದಲ್ಲಿ ವಿಧೇಯಕಕ್ಕೆ ಅನುಮೋದನೆ ಸಿಗದಿದ್ದರೆ, ಮುಂದಿನ ವರ್ಷ ಜನವರಿಯಲ್ಲಿ ಬೆಂಗಳೂರಿನಲ್ಲಿ ನಡೆಯುವ ಅಧಿವೇಶನದಲ್ಲಿ ಒಪ್ಪಿಗೆ ಪಡೆಯಲು ತೀರ್ಮಾನಿಸಲಾಗಿದೆ. ವಿಧೇಯಕಕ್ಕೆ ವಿಧಾನಸಭೆಯಲ್ಲಿ ಒಪ್ಪಿಗೆ ಪಡೆಯಲು ಸಮಸ್ಯೆಯಿಲ್ಲ. ಆದರೆ, ಮೇಲ್ಮನೆಯಲ್ಲಿ ಬಿಜೆಪಿಗೆ ಬಹುಮತದ ಕೊರತೆಯಿದೆ. ಮತಾಂತರ ನಿಷೇಧ ವಿಧೇಯಕ

ಮಂಡನೆಯಾಗುತ್ತಿದ್ದಂತೆ ಕಾಂಗ್ರೆಸ್‌ನಿಂದ ಬಾರಿ ವಿರೋಧ ವ್ಯಕ್ತವಾಗುವುದು ನಿಶ್ಚಿತವಾಗಿರುವುದರಿಂದ ಪ್ರತಿಭಟನೆಯ ನಡುವೆ ವಿಧೇಯಕ ಕುರಿತು ಚರ್ಚೆಗೂ ಅನುವು ಮಾಡಿಕೊಡುವ ಸಾಧ್ಯತೆಯಿದೆ.

**ಪ್ರಮುಖಾಂಶ:**

- ಹೆಸ್ಕಾಂ ಹಾಗೂ ಚೆಸ್ಕಾಂ ಹಣಕಾಸು ಸುಸ್ಥಿತಿಗೆ ಬಡ್ಡಿ ರಹಿತ ಸಾಲಗಳನ್ನು ಷೇರು ಬಂಡವಾಳವಾಗಿ ಪರಿವರ್ತಿಸಲು ಒಪ್ಪಿಗೆ.
- ಕರ್ನಾಟಕ ದ್ರಾಕ್ಷಿ ಹಾಗೂ ವೈನ್ ಬೋರ್ಡ್ ಪುನರ್ ರಚಿಸಲು ಒಪ್ಪಿಗೆ.
- ಕೈಗಾರಿಕಾ ಉದ್ದೇಶಕ್ಕೆ ಕುಕ್ಕನೂರು ತಾಲ್ಲೂಕಿನ ತಳಬಾಳು ಗ್ರಾಮದ 24 ಎಕರೆ ಜಮೀನು.
- ಹಾವೇರಿ ಜಿಲ್ಲೆಯ 285 ಗ್ರಾಮಗಳ ಬಹುಗ್ರಾಮ ಕುಡಿಯುವ ನೀರಿಗೆ ರೂ.645 ಕೋಟಿ ಅಂದಾಜು ವೆಚ್ಚಕ್ಕೆ ಒಪ್ಪಿಗೆ.
- ಆಲಮಟ್ಟಿ ಎಡದಂಡೆ ಕಾಲುವೆ ಅಧುನೀಕರಣ ಕಾರ್ಯಕ್ಕೆ ರೂ.75 ಕೋಟಿ.
- ಸೇಡಂ ತಾಲ್ಲೂಕಿನ ಕಾಗಿಣಾ ನದಿ ನೀರು ಬಳಸಿ ನೀರಾವರಿ ಸೌಲಭ್ಯಕ್ಕೆ ರೂ.143 ಕೋಟಿ.
- ವಿಶ್ವೇಶ್ವರಯ್ಯ ಜಲ ನಿಗಮ ಕಾವೇರಿ ನೀರಾವರಿ ನಿಗಮ, ಕೃಷ್ಣಾ ಭಾಗ್ಯ ಜಲ ನಿಗಮಗಳಿಗೆ ರೂ.1650 ಕೋಟಿ ಅವಧಿ ಸಾಲ ಪಡೆಯಲು ಒಪ್ಪಿಗೆ.

**ವಿಧೇಯಕದಲ್ಲಿ ಏನಿರಲಿದೆ:**

- ಸಂವಿಧಾನದ ಪರಿಚ್ಛೇದ 26ರ ಅನ್ವಯದಂತೆ ಸಿದ್ಧಗೊಂಡಿರುವ ವಿಧೇಯಕ ಇದಾಗಿರಲಿದೆ.
- ಬಲವಂತದ ಮತಾಂತರ ಶಿಕ್ಷಾರ್ಹ ಅನ್ನೋ ಪರಿಚ್ಛೇದ ಪ್ರಕಾರವೇ ವಿಧೇಯಕ ಸಿದ್ಧ.
- ಕಾನೂನು ಬಾಹಿರ ಮತಾಂತರ ನಿಷಿದ್ಧ ಬಲವಂತವಾಗಿ ಮತಾಂತರ ಮಾಡುವಂತಿಲ್ಲ.
- ಮತಾಂತರಗೊಳ್ಳಲು ಸಕ್ಷಮ ಪ್ರಾಧಿಕಾರವಾಗಿರುವ ಜಿಲ್ಲಾಧಿಕಾರಿಗಳಿಗೆ ಅರ್ಜಿ.
- ಮತಾಂತರ ಪ್ರಕ್ರಿಯೆ ನಡೆಸಬೇಕಾದ ವ್ಯಕ್ತಿಯೂ ಜಿಲ್ಲಾಧಿಕಾರಿಗಳ ಮುಂದೆ 2 ತಿಂಗಳ ಮುಂಚೆ ಅರ್ಜಿ.
- ಬಲವಂತದ ಮತಾಂತರ ಮಾಡುವ ಇಲ್ಲವೆ ಮತಾಂತರಕ್ಕೆ ಪ್ರಚೋದಿಸುವ ವ್ಯಕ್ತಿ ಬಂದನಕ್ಕೆ ಅವಕಾಶ.
- ಮತಾಂತರಗೊಳ್ಳುವ ಪ್ರಕ್ರಿಯೆ ಯಾವುದೇ ಧಾರ್ಮಿಕ ಕಟ್ಟಡಗಳು, ಪ್ರಾರ್ಥನಾ ಕೇಂದ್ರಗಳಲ್ಲಿ ಮಾಡುವಂತಿಲ್ಲ.
- ಇಡಿ ಪ್ರಕ್ರಿಯೇ ತಟಸ್ಥ ಪ್ರದೇಶದಲ್ಲಿ ಮಾಡುವುದು ಕಡ್ಡಾಯ.

- ಪ್ರೀತಿಸಿ ಬಳಿಕ ವಿವಾಹವಾಗಿ ನಂತರ ಮತಾಂತರ ಮಾಡುವುದಕ್ಕೂ ಕಡಿವಾಣ ಸಾಧ್ಯತೆ.
- ವಿವಾಹದ ಬಳಿಕ ಮತಾಂತರ ಮಾಡುವುದಕ್ಕೆ ಅವಕಾಶವಿಲ್ಲ.
- ಎಸ್.ಸಿ. ವ್ಯಕ್ತಿ ಮತಾಂತರವಾದರೆ, ಆ ಕ್ಷಣದಿಂದ ಸರಳ ಮೀಸಲು ಸೇವೆ ಕಡಿತ.
- ಕಾನೂನು ಬಾಹಿರ ಮತಾಂತರ ಮಾಡಿದರೆ 1–5 ವರ್ಷ ಸೆರೆಮನೆ ವಾಸ ಶಿಕ್ಷೆಗೆ ಅವಕಾಶ.

**ಕಿತ್ತೂರು ಕರ್ನಾಟಕಕ್ಕೆ ಬಂಪರ್ ಕೊಡುಗೆ:**

ಸುವರ್ಣಸೌಧದಲ್ಲಿ ಅಧಿವೇಶನ ನಡೆಯುವಾಗ ಉತ್ತರ ಕರ್ನಾಟಕ ಭಾಗಕ್ಕೆ ಯೋಜನೆಗಳನ್ನು ಘೋಷಿಸಬೇಕು ಎನ್ನುವ ಆಗ್ರಹವಿತ್ತು. ಇದಕ್ಕೆ ಪೂರಕ ಎನ್ನುವಂತೆ ರಾಜ್ಯ ಸರ್ಕಾರ ಈ ಬಾರಿಯ ಸಂಪುಟದಲ್ಲಿ ಕಿತ್ತೂರು ಕರ್ನಾಟಕದ ಹಲವು ಯೋಜನೆಗಳಿಗೆ ಅನುಮೋದನೆ ನೀಡಿದೆ. ಪ್ರಮುಖವಾಗಿ ಧಾರವಾಡ–ಕಿತ್ತೂರು–ಬೆಳಗಾವಿಯ ನೂತನ ರೈಲು ಮಾರ್ಗ ನಿರ್ಮಾಣಕ್ಕೆ ರೂ.927 ಕೋಟಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಇನ್ನು ನಂಜುಡಪ್ಪ ವರದಿಯನ್ನು ಪ್ರಾದೇಶಿಕ ಸಮತೋಲನ ಯೋಜನೆ ಎಂದೂ ಮರುನಾಮಕರಣ ಮಾಡಿ ಅನುಷ್ಠಾನಗೊಳಿಸಲು ಹಾಗೂ ನೀತಿ ಆಯೋಗದ 49 ಸೂಚಕಗಳನ್ನು ಅಳವಡಿಸಲು ಒಪ್ಪಿಗೆ ನೀಡಲಾಗಿದೆ.

ಆಧಾರ:ವಿಶ್ವವಾಣಿ, ದಿನಾಂಕ:21.12.2021

## 125. ಕೆಎಎಸ್ 2011ನೇ ಬ್ಯಾಚ್ ನವರ ವಿಶೇಷ ನೇಮಕ

ಕಲಬುರಗಿ, ಬಾಗಿಲಕೋಟೆ ಜಿಲ್ಲೆಗಳ 47,710 ಹೆಕ್ಟೇರ್ ಪ್ರದೇಶಗಳಿಗೆ ರೂ.637 ಕೋಟಿ ವೆಚ್ಚದಲ್ಲಿ ನೀರುಣಿಸುವ ಮೂರು ನೀರಾವರಿ ಯೋಜನೆಗಳಿಗೆ ಒಪ್ಪಿಗೆ ಹಾಗೂ ವಿವಿಧ ನೀರಾವರಿ ನಿಗಮಗಳಿಗೆ ಸರ್ಕಾರಿ ಖಾತರಿ ಅಡಿ ರೂ.1,650 ಕೋಟಿ ಸಾಲ ಪಡೆಯಲು ಅವಕಾಶ ನೀಡುವುದು ಸೇರಿದಂತೆ ಹಲವು ವಿಷಯಗಳಿಗೆ ನಡೆದ ಸಚಿವ ಸಂಪುಟ ಸಭೆ ಒಪ್ಪಿಗೆ ನೀಡಿದೆ.

2011ನೇ ಸಾಲಿನ ಕೆಎಎಸ್ ಪರೀಕ್ಷೆಯಲ್ಲಿ ಆಯ್ಕೆಯಾಗಿ ನ್ಯಾಯಾಲಯಗಳ ತೀರ್ಪಿನಿಂದ ನೇಮಕಾತಿ ರದ್ದಾಗಿರುವ 362 ಅಭ್ಯರ್ಥಿಗಳಿಗೆ ವಿಶೇಷ ನೇಮಕಾತಿ ಅಡಿ ಅವಕಾಶ ಒದಗಿಸುವ ಕುರಿತು ಸಹ ಚರ್ಚಿಸಲಾಗಿದೆ. ಆದರೆ, ಈ ಬಗ್ಗೆ ಮುಂದಿನ ಸಚಿವ ಸಂಪುಟದಲ್ಲಿ ಅಂತಿಮ ನಿರ್ಧಾರ ತೆಗೆದುಕೊಳ್ಳಲು ತೀರ್ಮಾನಿಸಲಾಗಿದೆ.

ಸಚಿವ ಸಂಪುಟ ಸಭೆ ನಂತರ ಮುಖ್ಯಮಂತ್ರಿಯವರು ಈ ಬಗ್ಗೆ ನಿರೀಕ್ಷೆಯಿಂದ ಕಾಯುತ್ತಿದ್ದ 2011ನೇ ಬ್ಯಾಚ್‌ನ ಅಭ್ಯರ್ಥಿಗಳೊಂದಿಗೆ ಮಾತುಕತೆ ನಡೆಸಿದರು. ಕೆಲ ಕಾನೂನು ತಿದ್ದುಪಡಿ ಅಗತ್ಯವಿದ್ದು, ಮುಂದಿನ ಸಂಪುಟ ಸಭೆಯಲ್ಲಿ ಅಂತಿಮ ನಿರ್ಧಾರ ಮಾಡುವುದಾಗಿ ತಿಳಿಸಿದರು.

**ಏನಿದು ನೇಮಕಾತಿ ಸಮಸ್ಯೆ:** 2011ರ ಬ್ಯಾಚ್‌ನ ಕೆಎಎಸ್ ನೇಮಕಾತಿ ಪರೀಕ್ಷೆಯಲ್ಲಿ ಆಯ್ಕೆಯಾಗಿದ್ದವರ ಪೈಕಿ ಕೆಲವರು ಹಣ ನೀಡಿ ಅಕ್ರಮ ಎಸಗಿರುವುದು ಸಾಬೀತಾಗಿತ್ತು. ಈ ಹಿನ್ನೆಲೆಯಲ್ಲಿ 2014ರ ಆಗಸ್ಟ್ 14ರಂದು 2011ನೇ ಸಾಲಿನ ಕೆಎಎಸ್ ನೇಮಕ ಸಂಬಂಧ ಹೊರಡಿಸಿದ್ದ ಅಧಿಸೂಚನೆ ರದ್ದುಗೊಳಿಸಿ 362 ಜನರ ನೇಮಕಾತಿ ರದ್ದುಗೊಳಿಸಲಾಗಿತ್ತು. ನಂತರ ಹೈಕೋರ್ಟ್, ಸುಪ್ರೀಂಕೋರ್ಟ್ ಸಹ ಸಂಪೂರ್ಣ ನೇಮಕ ಪ್ರಕ್ರಿಯೆ ರದ್ದುಗೊಳಿಸಿದ್ದವು. ಈ ರೀತಿ ನೇಮಕಾತಿಯಿಂದ ವಂಚಿತರಾಗಿದ್ದ 362 ಮಂದಿಗೆ ವಿಶೇಷ ನೇಮಕ ಪ್ರಕ್ರಿಯೆ ನಡೆಸಿ ಅವಕಾಶ ನೀಡಲು ಈಗ ಚರ್ಚಿಸಲಾಗಿದೆ.

**ನೀರಾವರಿ ಯೋಜನೆಗೆ ಒಪ್ಪಿಗೆ:** ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕಿನ ಕಾಗಿಣಾ ನದಿಯಿಂದ ನೀರನ್ನೆತ್ತಿ 3,150 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸುವ ರೂ.143.80 ಕೋಟಿಗಳ ಯಡ್ಡಳ್ಳಿ ಏತ ನೀರಾವರಿ ಹಾಗೂ ತೆರ್ನಳ್ಳಿ ಏತ ನೀರಾವರಿ ಯೋಜನೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಯಿತು.

ಬಾಗಲಕೋಟೆಯ ರಬಕವಿ–ಬನಹಟ್ಟಿ ತಾಲ್ಲೂಕಿನ ಹಳ್ಳಿಗಳ ಗ್ರಾಮದ ಬಳಿ ರೂ.266 ಕೋಟಿ ವೆಚ್ಚದ ಮಂಟೂರ ಮಹಾಲಕ್ಷ್ಮಿ ಏತ ನೀರಾವರಿ ಯೋಜನೆಗಳಿಗ ಅನುಮೋದನೆ ನೀಡಲಾಯಿತು.

ಹಾವೇರಿ ಜಿಲ್ಲೆಯ 285 ಗ್ರಾಮಗಳಿಗೆ ರೂ.645 ಕೋಟಿ ವೆಚ್ಚದಲ್ಲಿ ಬಹುಗ್ರಾಮ ಕುಡಿಯುವ ನೀರಿನ ಯೋಜನೆ, ಬೆಂಗಳೂರು ವಿಶ್ವವಿದ್ಯಾಲಯದ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜು (ಯುವಿಸಿಇ) ಮೆಕ್ಯಾನಿಕಲ್ ವಿಭಾಗದ ಹೊಸ ಕಟ್ಟಡ ನಿರ್ಮಾಣಕ್ಕೆ ರೂ.85 ಕೋಟಿ ನೀಡಲು ಅನುಮೋದನೆ ನೀಡಲಾಯಿತು.

ಕರ್ನಾಟಕ ವೈನ್ ಬೋರ್ಡ್‌ನ್ನು ಕರ್ನಾಟಕ ದ್ರಾಕ್ಷಿ ಮತ್ತು ವೈನ್ ಬೋರ್ಡ್ ಎಂಬುದಾಗಿ ಪುನರ್ ರಚಿಸಲು ಧಾರವಾಡ–ಕಿತ್ತೂರು ಬೆಳಗಾವಿ ನೂತನ ರೈಲು ಮಾರ್ಗ (73 ಕಿ.ಮಿ) ನಿರ್ಮಾಣಕ್ಕೆ ರೂ.927 ಕೋಟಿ ಮೊತ್ತದ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿತ್ತು. ಡಾ:ಡಿ.ಎಂ.ನಂಜುಂಡಪ್ಪ ಸಮಿತಿ ವರದಿಯ ಶಿಪಾರಸ್ಸಿನಂತೆ ಪ್ರಾದೇಶಿಕ ಅಸಮಾತೋಲನ ನಿವಾರಿಸಲು ಜಾರಿಯಲ್ಲಿರುವ ವಿಶೇಷ ಅಭಿವೃದ್ಧಿ ಯೋಜನೆಯನ್ನು ಪ್ರಾದೇಶಿಕ ಸಮತೋಲನ ಯೋಜನೆ ಎಂದು ಮರುನಾಮಕರಣ ಮಾಡಿ ಅನುಷ್ಠಾನಗೊಳಿಸಲು ಹಾಗೂ ನೀತಿ ಆಯೋಗವು ಸೂಚಿಸಿರುವ 49ಸೂಚಕಗಳನ್ನು ಅಳವಡಿಸುವ ಬಗ್ಗೆ ನಿರ್ಧರಿಸಲಾಯಿತು.

ಆಧಾರ:ಕನ್ನಡಪ್ರಭ, ದಿನಾಂಕ:21.12.2021

## 126. ಮತಾಂತರ + ಲವ್ ಜಿಹಾದ್

ಮತಾಂತರ ನಿಷೇದ ಹಾಗೂ ಲವ್ ಜಿಹಾದ್ ತಡೆಗೆ ಪ್ರತ್ಯೇಕ ಕಾಯ್ದೆ ಜಾರಿಗೆ ತರುವ ಬದಲು ಒಂದೇ ಕಾಯ್ದೆಯೊಳಗೆ ಎರಡನ್ನು ಸೇರಿಸುವ ಗಂಭೀರ ಚಿಂತನೆ ರಾಜ್ಯ ಸರ್ಕಾರದ ಮುಂದಿದೆ.

ಎರಡು ವಿಚಾರದಲ್ಲಿ ಪ್ರತ್ಯೇಕ ಮಸೂದೆ ಮಂಡಿಸುವ ಬಗ್ಗೆ ಗೃಹ ಸಚಿವ ಆರಗ ಜ್ಞಾನೇಂದ್ರ, ಇಂಧನ ಸಚಿವ ವಿ.ಸುನಿಲ್ ಕುಮಾರ್ ಇಂಗಿತ ವ್ಯಕ್ತಪಡಿಸಿದರು. ಬಹಳಷ್ಟು ಸಚಿವರು ಇದಕ್ಕೆ ಸಹಮತ ಸೂಚಿಸಿದ್ದರು. ಆದರೆ, ಕಾನೂನು ತಜ್ಞರು ಸಾಮಾಜಿಕ ಚಿಂತಕರು ಹಲವು ವಿಭಾಗಗಳ ತಜ್ಞರು ಹಿರಿಯ ಸಚಿವರ ನೇತೃತ್ವದಲ್ಲಿ ರಾಜ್ಯ ಸರ್ಕಾರ ಈ ಕುರಿತು ಚರ್ಚಿಸಲು ಸಭೆ ನಡೆಸಿತ್ತು. ಎರಡನ್ನೂ ಪ್ರತ್ಯೇಕಿಸುವ ಬದಲು ಒಂದೇ ಕಾಯ್ದೆಯೊಳಗೆ ಸೇರಿಸಿ ಜಾರಿಗೆ ತರುವ ಕುರಿತು ಮಾಹಿತಿ ವಿನಿಮಯವಾಗಿದೆ ಎಂದು ಹೇಳಲಾಗಿದೆ. ಹಣ ಆಮಿಷವೊಡ್ಡುವುದು, ಬಡತನ ಪರಿಸ್ಥಿತಿ ದುರ್ಲಾಭ ಪಡೆಯುವುದು ಮತಾಂತರದ ತಂತ್ರವಾಗಿದೆ. ಕೆಡವಿ ಮತಾಂತರ ಮಾಡುವುದು ಲವ್ ಜಿಹಾದ್‌ನ ಸಂಚು ಎನ್ನುವ ಆರೋಪ ಸಾರ್ವಜನಿಕ ವಲಯದಲ್ಲಿದೆ. ಮತಾಂತರ ಮತ್ತು ಲವ್ ಜಿಹಾದ್ ಎರಡು ಯಾವುದೇ ಸ್ವರೂಪದಲ್ಲಿದ್ದರೂ ಸಾಮಾಜಿಕ ಸ್ವಾಸ್ಥ್ಯ, ಜಾತಿ ಸಮೀಕರಣದ ಚೌಕಟ್ಟು ಕೌಟುಂಬಿಕ ಸಂಬಂಧ ಹಾಳು ಮಾಡಬಾರದು ಎಂಬುದು ರಾಜ್ಯ ಸರ್ಕಾರದ ನಿಲುವು. ಇದೇ ವಿಷಯವನ್ನು ಮುಂದಿಟ್ಟುಕೊಂಡು ಮತಾಂತರ ತಡೆ ಮಸೂದೆ ಕರಡು ತಯಾರಿಸಿದ್ದು, ಕೆಲ ಸಂವಿಧಾನಾತ್ಮಕ ಅಡೆತಡೆ ನಿವಾರಣೆ ಸಂದರ್ಭದಲ್ಲಿ ಲವ್ ಜಿಹಾದ್ ತಡೆ ಹಾಕುವಂತಹ ಅಂಶಗಳನ್ನು ಈ ಮಸೂದೆಯೊಳಗೆ ಅಡಗಿಸಲು ಚಿಂತನೆ ನಡೆಸಿದೆ. ಈ ನಿಟ್ಟಿನಲ್ಲಿ ಮತ್ತಷ್ಟು ಚರ್ಚೆ, ಅಭಿಪ್ರಾಯ ಸಂಗ್ರಹ, ಕಾನೂನು ತಜ್ಞರೊಂದಿಗೆ ವಿಚಾರ ವಿನಿಮಯ ನಡೆಸಲಾಗುತ್ತಿದೆ ಎಂದು ಉನ್ನತ ಮೂಲಗಳು ತಿಳಿಸಿವೆ.

**ಕರಾವಳಿ ಭಾಗದಲ್ಲಿ ಹೆಚ್ಚು:** ಮತಾಂತರ ಮಾಡುವುದಕ್ಕಾಗಿಯೇ ಲವ್ ಜಿಹಾದ್ ನಡೆಯುತ್ತಿದ್ದು, ಕರಾವಳಿ ಭಾಗದಲ್ಲಿ ಈ ಹಾವಳಿ ಹೆಚ್ಚಿದೆ ಎಂಬ ಆರೋಪವಿದೆ. ಲಭ್ಯ ಮಾಹಿತಿ ಪ್ರಕಾರ ಉತ್ತರ ಪ್ರದೇಶದಲ್ಲಿ ಲವ್ ಜಿಹಾದ್ ಪ್ರಕರಣ ಜಾಸ್ತಿ. ಕರ್ನಾಟಕದಲ್ಲಿ ಕಡಿಮೆ. ಪ್ರತ್ಯೇಕ ಕಾಯ್ದೆ ಬದಲು ಮತಾಂತರ ನಿಷೇಧ ಕಾಯ್ದೆಯೊಳಗಿನ ಅಂಶಗಳನ್ನು ಲವ್ ಜಿಹಾದ್ ತಡೆಗೆ ಸೇರಿಸುವ ಕುರಿತು ಸರ್ಕಾರ ಸದ್ದಿಲ್ಲದೇ ತಯಾರಿ ನಡೆಸಿದೆ. ಪ್ರಸ್ತಾವಿತ ಮತಾಂತರ ಮಸೂದೆ ಪ್ರಕಾರ ಎಸ್ಸಿ–ಎಸ್ಟಿ ಸಮುದಾಯದವರು, ಅಪ್ರಾಪ್ತರು, ಮಹಿಳೆಯರು ಬುದ್ಧಿ ಮಾಂಧ್ಯರನ್ನು ಮತಾಂತರ ಮಾಡಿದವರಿಗೆ ಕನಿಷ್ಟ 3 ವರ್ಷದಿಂದ 10 ವರ್ಷದವರೆಗೆ ಜೈಲು, ರೂ.50 ಸಾವಿರ ದಂಡ ವಿಧಿಸಲು ಅವಕಾಶ ಕಲ್ಪಿಸಲಾಗಿದೆ. ಮತಾಂತರಕ್ಕಾಗಿಯೇ ಲವ್ ಜಿಹಾದ್ ನಡೆದಿರುವುದು ಸಾಬೀತಾದರೆ ಯಾವ ಶಿಕ್ಷೆ ನೀಡಬೇಕು ಇದಕ್ಕಾಗಿ ಪ್ರತ್ಯೇಕ ಸೆಕ್ಷನ್ ಸೇರಿಸಬೇಕೇ ಎಂಬುದರ ಕುರಿತು ರಾಜ್ಯ ಸರ್ಕಾರ ತಜ್ಞರೊಂದಿಗೆ ಚರ್ಚೆ ನಡೆಸಿದೆ.

**ಸಿಂಧುತ್ವದ ಜಿಜ್ಞಾಸೆ:** ಮತಾಂತರವಾದರೆ ಸರ್ಕಾರಿ ಸವಲತ್ತುಗಳ ಕಡಿತ, ಶಿಕ್ಷೆ ಜಾತಿ–ವರ್ಗವಾರು ಪ್ರಕಾರ ದಂಡನಾ ಕ್ರಮಗಳು ಪ್ರಸ್ತಾವಿತ ವಿಧೇಯಕದ ಕರಡು ಒಳಗೊಂಡಿದೆ ಎಂದು ಹೇಳಲಾಗಿದೆ. ಇಂತಹ ಕಠಿಣ ಅಂಶವು ಕೋರ್ಟ್‌ಗಳಲ್ಲಿ ಸಿಂಧುವಾಗಲಿದೆಯೇ ಎಂಬ ಜಿಜ್ಞಾಸೆಯ ಸುಳಿಗೆ ಸರ್ಕಾರ ಸಿಲುಕಿದೆ ಎಂದು ಮೂಲಗಳು ತಿಳಿಸಿವೆ. ಸ್ವಲ್ಪ ಎಡವಿದರೂ ನ್ಯಾಯಾಲಯಗಳಲ್ಲಿ ಬಿದ್ದು ಹೋಗುವ ಸಾಧ್ಯತೆಯಿದ್ದು, ಮತಾಂತರ ನಿಯಂತ್ರಣ ಪ್ರಯತ್ನಕ್ಕೆ ಹಿನ್ನೆಡೆಯಾಗಲಿದೆ. ಈ ಕಾರಣಕ್ಕೆ ಉಭಯ ಸದನಗಳಲ್ಲಿ ಮಂಡಿಸುವ ತನಕ ಮಸೂದೆ ವಿಚಾರ ಗೌಪ್ಯತೆ ಕಾಯ್ದುಕೊಳ್ಳುತ್ತಿದ್ದು, ಪ್ರತಿಪಕ್ಷಗಳು ಹಾಗೂ ಜನರ ಗಮನ ಬೇರೆಡೆಯಿಂದ ಕಾಯ್ದೆಯತ್ತ ಸೆಳೆಯುವ ತಂತ್ರಗಾರಿಕೆಯೆ ಆಗಿರಬಹುದು ಎಂಬ ತರ್ಕವಿದೆ.

ಆಧಾರ ವಿಜಯವಾಣಿ, ದಿನಾಂಕ:22.12.2021

## 127. ಹಣಕಾಸು ಪರಿಸ್ಥಿತಿ ಅವಲೋಕಿಸಿ ಖಾಸಗಿ ಶಾಲೆಗಳ ವೇತನಾನುದಾನ

ರಾಜ್ಯದ ಹಣಕಾಸು ಪರಿಸ್ಥಿತಿ ಅವಲೋಕಿಸಿ 1995 ಕ್ಕೂ ಮುನ್ನ ಹಾಗೂ ನಂತರದ ಖಾಸಗಿ ಶಾಲೆಗಳನ್ನು ಸರ್ಕಾರದ ವೇತನಾನುದಾನಕ್ಕೆ ಒಳಪಡಿಸಲು ಕ್ರಮ ಕೈಗೊಳ್ಳುವುದಾಗಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಭರವಸೆ ನೀಡಿದ್ದಾರೆ.

ಸುವರ್ಣ ಸೌಧ ಸಮಿತಿ ಸಭಾಂಗಣದಲ್ಲಿ ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರ ಅಧ್ಯಕ್ಷತೆಯಲ್ಲಿ ನಡೆದ ಖಾಸಗಿ ಅನುದಾನಿತ ಅನುದಾನ ರಹಿತ ಶಿಕ್ಷಣ ಸಂಸ್ಥೆಗಳ ಕುರಿತಾದ ಸಭೆಯಲ್ಲಿ ಅವರು ಮಾತನಾಡಿದರು. 1995ಕ್ಕೂ ಮುನ್ನ ಸ್ಥಾಪಿಸಿದ ಖಾಸಗಿ ಶಾಲೆಗಳನ್ನು ಸರ್ಕಾರದ ಸಹಾಯಧನಕ್ಕೆ ಒಳಪಡಿಸಲು ಹಣಕಾಸು ಇಲಾಖೆಗೆ ಸೂಕ್ತ ದಾಖಲೆ ಹಾಗೂ ಅಂಕಿ ಸಂಖ್ಯೆಗಳೊಂದಿಗೆ ಜನವರಿ 30ರ ಒಳಗಾಗಿ ಪ್ರಸ್ತಾವನೆ ಸಲ್ಲಿಸಲು ಶಿಕ್ಷಣ ಇಲಾಖೆ ಅಧಿಕಾರಿಗಳು ಕ್ರಮ ಕೈಗೊಳ್ಳಬೇಕು. ರಾಜ್ಯದಲ್ಲಿ ಶ್ವಾಶ್ವತ ಅನುದಾನ ರಹಿತ ಖಾಸಗಿ ಶಾಲೆಗಳಿವೆ, ಹಣಕಾಸು ಪರಿಸ್ಥಿತಿ ಸುಧಾರಿಸಿದರೆ ಇವುಗಳಿಗೂ ಸಹ ಸಹಾಯಧನ ನೀಡಲಾಗುವುದು ಎಂದರು.

ರಾಜ್ಯದಲ್ಲಿ ಅನುದಾನಿತ ಶಾಲೆಗಳ 500ಕ್ಕೂ ಹೆಚ್ಚು ಶಿಕ್ಷಕರ ನೇಮಕಾತಿ ಪ್ರಕ್ರಿಯೆಯಲ್ಲಿ ಜಾಹೀರಾತು ನೀತಿ ನಿಯಮ ಪಾಲನೆಯಾಗಿಲ್ಲ ಎಂದು ಶಿಕ್ಷಣ ಇಲಾಖೆ ತಡೆ ಹಿಡಿದಿದೆ. ಶಾಲೆ ಆಡಳಿತ ಮಂಡಳಿ ರಾಜ್ಯ ಮಟ್ಟ ಹಾಗೂ ಜಿಲ್ಲಾ ಮಟ್ಟದ ಒಂದೊಂದು ಪತ್ರಿಕೆಯಲ್ಲಿ ನೇಮಕಾತಿ ಕುರಿತು ಜಾಹೀರಾತು ನೀಡಿವೆ. ಆದರೆ, ಪತ್ರಿಕೆಗಳ ರಾಜ್ಯ ಮಟ್ಟಗಳಲ್ಲಿಯೇ ಜಾಹೀರಾತು ಪ್ರಕಟವಾಗಬೇಕು

ಎಂದು ಅಧಿಕಾರಿಗಳು ಕಡ್ಡಾಯ ಮಾಡಿ ನೇಮಕಾತಿಗೆ ತಡೆ ನೀಡಿದ್ದಾರೆ. ಇದನ್ನು ತಕ್ಷಣವೇ ಸರಿಪಡಿಸಬೇಕು ಎಂದು ಸಭಾಪತಿಗಳು ಮುಖ್ಯಮಂತ್ರಿಗಳಿಗೆ ತಿಳಿಸಿದರು.

ಸಭಾಪತಿಗಳ ಮಾತಿಗೆ ತಕ್ಷಣ ಸ್ಪಂದಿಸಿದ ಮುಖ್ಯಮಂತ್ರಿಗಳು, ರಾಜ್ಯ ಹಾಗೂ ಜಿಲ್ಲಾ ಮಟ್ಟದ ಪತ್ರಿಕೆಗಳಲ್ಲಿ ನೇಮಕಾತಿ ಜಾಹೀರಾತು ನೀಡಿರುವ ಶಾಲಾ ಆಡಳಿತ ಮಂಡಳಿಗಳ ನೇಮಕಾತಿ ಪ್ರಕ್ರಿಯೇ ಮುಂದುವರಿಸಲು ಅನುಮತಿ ನೀಡಿ ಇಂತಹದೇ ಪುಟದಲ್ಲಿ ಜಾಹೀರಾತು ಪ್ರಕಟಗೊಂಡರೂ ಅದನ್ನು ಪರಿಗಣಿಸಬೇಕೆಂದು ಅಧಿಕಾರಿಗಳಿಗೆ ಸೂಚನೆ ನೀಡಿದರು.

**ಖಾಯಂಗೊಳಿಸಲು ಕ್ರಮ**: ಶಿಕ್ಷಣ ಇಲಾಖೆಯಲ್ಲಿ 1997–98ನೇ ಸಾಲಿನಲ್ಲಿ ಗುತ್ತಿಗೆ ಆಧಾರದ ಮೇಲೆ ಡಿಪಿಇಪಿ ಯೋಜನೆಯಡಿ ನೇಮಕಗೊಂಡ 150 ಸಿಬ್ಬಂದಿಯನ್ನು ಸಕ್ರಮಗೊಳಿಸುವ ಕುರಿತು ಖಾಯಂಗೊಳಿಸಲು ಕ್ರಮ ಕೈಗೊಳ್ಳುವಂತೆ ಹಣಕಾಸು ಇಲಾಖೆ ಅಧಿಕಾರಿಗಳಿಗೆ ಮುಖ್ಯಮಂತ್ರಿಯವರು ಸೂಚನೆ ನೀಡಿದರು.

ಆಧಾರ:ಉದಯವಾಣಿ, ದಿನಾಂಕ:22.12.2021

## 128. ಶಾಸಕರ ನಿಧಿ ವಾಪಸ್ಸು : ಆದೇಶಕ್ಕೆ ತಡೆ

ಶಾಸಕರ ನಿಧಿಯಡಿ ಬಳಕೆಯಾಗದ ಅನುದಾನ, ಹಣಕಾಸು ಇಲಾಖೆಗೆ ವಾಪಸ್ಸು ಕಳುಹಿಸಲು ಯೋಜನಾ ಇಲಾಖೆ ಮಾಡಿರುವ ಆದೇಶ ವಾಪಸ್ ಪಡೆಯಲು ಸೂಚನೆ ನೀಡಲಾಗುವುದು ಎಂದು ಕಾನೂನು ಸಚಿವ ಜೆ.ಸಿ. ಮಾಧುಸ್ವಾಮಿ ಹೇಳಿದರು.

ವಿಧಾನ ಸಭೆಯಲ್ಲಿ ಸಭಾಧ್ಯಕ್ಷರು ವಿಷಯ ಪ್ರಸ್ತಾಪಿಸಿ, ಎಲ್ಲ ಶಾಸಕರು ತಮ್ಮ ಕ್ಷೇತ್ರಗಳ ಬಳಕೆಯಾಗದ ಅನುದಾನ ವಾಪಸ್ ಹೋಗುವುದನ್ನು ತಡೆ ಹಿಡಿಯಬೇಕು ಎಂದು ಮನವಿ ಮಾಡಿದ್ದಾರೆ. ಈ ಬಗ್ಗೆ ಯೋಜನಾ ಇಲಾಖೆಗೆ ಶಾಸಕರ ನಿಧಿ ವಾಪಸ್ ತೆಗೆದುಕೊಳ್ಳುವ ಆದೇಶ ತಡೆ ಹಿಡಿಯುವಂತೆ ಸೂಚಿಸಿದ್ದೇನೆ. ಸಚಿವರು ಕೂಡ ಈ ಆದೇಶ ತಡೆ ಹಿಡಿಯಲು ಸೂಚಿಸಿ ಎಂದು ಸಲಹೆ ನೀಡಿದರು. ಸಚಿವ ಮಾಧುಸ್ವಾಮಿ ಮಾತನಾಡಿ 2018–19ನೇ ಸಾಲಿನ ಶಾಸಕರ ನಿಧಿಯಡಿ ಬಳಕೆಯಾಗದ ಅನುದಾನವನ್ನು ವಾಪಸ್ ಕಳುಹಿಸುವ ಆದೇಶದ ಕುರಿತು ಮುಖ್ಯಮಂತ್ರಿಯವರ ಜೊತೆ ಚರ್ಚೆ ಮಾಡಿದ್ದೇನೆ. ಆ ಆದೇಶವನ್ನು ವಾಪಸ್ ಪಡೆಯಲು ಸೂಚಿಸಲಾಗುವುದು ಎಂದು ಹೇಳಿದರು.

ಆಧಾರ:ಉದಯವಾಣಿ, ದಿನಾಂಕ:22.12.2021

## 129. ಪ್ರತಿ ಯೋಜನೆಗೂ ತಮಿಳುನಾಡು ಕ್ಯಾತೆ

ಮೇಕೆದಾಟು ಯೋಜನೆಗೆ ಅನುಮೋದನೆ ನೀಡುವ ಸಂಬಂಧ ಕೇಂದ್ರ ಜಲ ಆಯೋಗದಲ್ಲಿ ಈ ಹಿಂದೆ ಎರಡು ಸಭೆಗಳು ನಡೆದಿದ್ದು ಮುಂದಿನ ಸಭೆಯಲ್ಲಿ ಅನುಮೋದನೆ ಸಿಗುವ ನಿರೀಕ್ಷೆ ಇದೆ ಎಂದು ಮುಖ್ಯಮಂತ್ರಿಯವರು ವಿಶ್ವಾಸ ವ್ಯಕ್ತಪಡಿಸಿದರು.

ವಿಧಾನಸಭೆಯಲ್ಲಿ ಕಾಂಗ್ರೆಸ್‌ನ ಶರತ್ ಬಚ್ಚೇಗೌಡ ಪ್ರಶ್ನೆಗೆ ಉತ್ತರಿಸಿ, ರಾಜ್ಯದ ಪ್ರತಿ ಯೋಜನೆಗೂ ತಮಿಳುನಾಡು ಕ್ಯಾತೆ ತೆಗೆಯುತ್ತದೆ. ಯೋಜನೆಗೆ ಪರಿಸರ ಅನುಮೋದನೆ ಪ್ರಕ್ರಿಯೆಯು ಶೀಘ್ರವೇ ಪೂರ್ಣಗೊಳ್ಳುವ ವಿಶ್ವಾಸವಿದೆ. ಈ ಎರಡು ಒಪ್ಪಿಗೆ ಸಿಕ್ಕ ಬಳಿಕ ಯೋಜನೆಗೆ ಚಾಲನೆ ನೀಡಲಾಗುವುದು ಎಂದು ಹೇಳಿದರು.

ಇದಕ್ಕೂ ಮೊದಲು ಶರತ್ ಬಚ್ಚೇಗೌಡ ವಿಷಯ ಪ್ರಸ್ತಾಪಿಸಲು ಮುಂದಾದರು. ಆಗ ಸಚಿವ ಗೋವಿಂದ ಕಾರಜೋಳ "ಇದು ಸೂಕ್ಷ್ಮ ವಿಚಾರವಾಗಿದ್ದು, ಸದನದಲ್ಲಿ ಚರ್ಚೆ ಬೇಡ. ನನ್ನ ಕಛೇರಿಗೆ

ಬಂದರೆ ಹೆಚ್ಚಿನ ಮಾಹಿತಿ ನೀಡಲಾಗುವುದು" ಎಂದು ಹೇಳಿದರು. ಇದಕ್ಕೆ ದನಿಗೂಡಿಸಿದ ಸಭಾಧ್ಯಕ್ಷರು ನಾನಾ ವಿಚಾರಗಳಿರುವುದರಿಂದ ಇಲ್ಲಿ ಚರ್ಚೆ ಬೇಡ ಎಂದು ಸಲಹೆ ನೀಡಿದರು. ಆಗ ಕಾಂಗ್ರೆಸ್‌ನ ಕೃಷ್ಣ ಬೈರೇಗೌಡ ಯೋಜನೆ ಜಾರಿಯಲ್ಲಿ ವಿಳಂಬವಾಗುತ್ತಿದೆ ರಾಜ್ಯ ಸರ್ಕಾರ ಅನುಮತಿ ಪಡೆಯಲು ಅರ್ಜಿ ಸಲ್ಲಿಸಿ ಸುಮ್ಮನೆ ಕುಳಿತಿದೆ ಅರ್ಜಿ ಹಾಕಿ ಕುಳಿತರೆ ಕೆಲಸ ಆಗುವುದೇ ಎಂದು ಕುಟುಕಿದರು.

ಆಗ ಸಮರ್ಥನೆ ನೀಡಿದ ಗೋವಿಂದ ಕಾರಜೋಳ ಹಿಂದಿನ ಜಲಸಂಪನ್ಮೂಲ ಸಚಿವರೊಬ್ಬರು ಯೋಜನಾ ಪ್ರದೇಶಕ್ಕೆ ಕೇವಲ ಭೇಟಿ ನೀಡಿದ ವರದಿ ಆಧರಿಸಿ ಚೆನ್ನೈನ ಹಸಿರು ನ್ಯಾಯಾಪೀಠ ಸ್ವಯಂ ಪ್ರೇರಿತ ಪ್ರಕರಣ ದಾಖಲಿಸಿ ಕೊಂಡಿತ್ತು. ದಿಲ್ಲಿ ಪೀಠದಲ್ಲಿ ಅರ್ಜಿ ಸಲ್ಲಿಸಿ ಪ್ರಕರಣ ತೆರವುಗೊಳಿಸಲಾಗಿತ್ತು. ಅದನ್ನು ಸುಪ್ರೀಂ ಕೋರ್ಟ್‌ನಲ್ಲಿ ಪ್ರಶ್ನಿಸಿದೆ ಎಂದು ಹೇಳಿದರು.

ಅದಕ್ಕೆ ಸಮಾಧಾನಗೊಳ್ಳದ ಕಾಂಗ್ರೆಸ್‌ನ ಡಿ.ಕೆ ಶಿವಕುಮಾರ್ ಸುಪ್ರೀಂಕೋರ್ಟ್ ರಾಜ್ಯದ ಪರ ತೀರ್ಪು ನೀಡಿದ್ದು, ಪರಿಸರ ಅನುಮೋದನೆ ಪಡೆಯುವುದು ರಾಜ್ಯ ಸರ್ಕಾರದ ಜವಾಬ್ದಾರಿ. ಆರಂಭದಲ್ಲಿ ಯೋಜನಾ ಮೊತ್ತ ರೂ.4000 ಕೋಟಿ ಇದ್ದುದು ಈಗ ರೂ.900 ಕೋಟಿ ಏರಿಕೆಯಾಗಿದೆ ಯೋಜನೆ ಜಾರಿಗಾಗಿ ಜನವರಿ 9 ರಿಂದ 19ರವರೆಗೆ ಪಾದಯಾತ್ರೆ ಹಮ್ಮಿಕೊಳ್ಳಲಾಗಿದೆ ಎಂದು ಹೇಳಿದರು. ಆಗ ಸ್ಪೀಕರ್ ಪತ್ರಿಕಾಗೋಷ್ಠಿಯಲ್ಲಿ ಹೇಳುವುದು ಇಲ್ಲಿ ಬೇಡ ಎಂದು ಹೇಳಿದರು. ಹಾಗೆಯೇ ಮಾತು ಮುಂದುವರಿಸಿ ಸಿಎಂ ಸಮರ್ಪಕ ಉತ್ತರ ನೀಡಿದ್ದಾರೆ ಹಾಗಾಗಿ ಪಾದಯಾತ್ರೆ ಕೈಬಿಡಬಹುದು ಎಂದು ನಗುತ್ತಾ ಹೇಳಿದರು. ಕಾಂಗ್ರೆಸ್‌ನ ಡಾ: ರಂಗನಾಥ್ ನಾವು ನಡೆಸುವ ಪಾದಯಾತ್ರೆಗೆ ಮುಖ್ಯಮಂತ್ರಿಯವರೇ ಬರಲಿ ಎಂದು ಹಾಸ್ಯ ಚಟಾಕಿ ಹಾರಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:22.12.2021

## 130. ಅತಿವೃಷ್ಟಿ ಬೆಳೆ ಹಾನಿ ಪರಿಹಾರ ಏರಿಕೆ

ರಾಜ್ಯದಲ್ಲಿ ಅತಿವೃಷ್ಟಿಯಿಂದ ಬೆಳೆ ಹಾನಿಗೀಡಾಗಿ ಸಂಕಷ್ಟಕ್ಕೆ ಸಿಲುಕಿದ ರೈತರ ನೆರವಿಗೆ ರಾಜ್ಯ ಸರ್ಕಾರ ಧಾವಿಸಿದೆ. ಬೆಳೆ ಪರಿಹಾರ ಮೊತ್ತವನ್ನು ಹೆಚ್ಚಿಸುವ ಮೂಲಕ ಅನ್ನದಾತರ ಸಂಕಷ್ಟಕ್ಕೆ ಸ್ಪಂದಿಸಿದೆ.

ವಿಧಾನಸಭೆಯಲ್ಲಿ ಅತಿವೃಷ್ಟಿಯಿಂದಾಗಿರುವ ಆಸ್ತಿ ಪಾಸ್ತಿ, ಬೆಳೆ ನಷ್ಟದ ಬಗ್ಗೆ ಸುದೀರ್ಘ ಚರ್ಚೆ ನಂತರ ಉತ್ತರಿಸಿದ ಮುಖ್ಯಮಂತ್ರಿಯವರು ಎನ್‌ಡಿಆರ್‌ಎಫ್ ಮಾರ್ಗಸೂಚಿ ಪ್ರಕಾರ ಒಣ ಬೇಸಾಯದ ಜಮೀನಿನಲ್ಲಿ ಸಂಭವಿಸಿದ ಬೆಳೆ ಹಾನಿಗೆ ಪ್ರತಿ ಹೆಕ್ಟೇರ್‌ಗೆ ರೂ.6,800 ಪರಿಹಾರ ನಿಗದಿಪಡಿಸಲಾಗಿದೆ. ರಾಜ್ಯ ಸರ್ಕಾರ ಇನ್ನು ರೂ.6,800 ಸೇರಿಸಿ ಒಟ್ಟು ರೂ.13,600 ಪರಿಹಾರ ನೀಡಲಿದೆ ಎಂದರು.

ಹಾಗೆಯೇ ನೀರಾವರಿ ಪ್ರದೇಶದಲ್ಲಿ ಬೆಳೆ ಹಾನಿಗೀಡಾದ ರೈತರಿಗೆ ಹೆಕ್ಟೇರ್‌ಗೆ ರೂ.13,600/– ನೀಡಲಾಗುತ್ತಿದೆ. ಅದಕ್ಕೆ ರೂ.11,500 ಸೇರಿಸಿ ಪರಿಹಾರ ಮೊತ್ತವನ್ನು ಹೆಕ್ಟೇರ್‌ಗೆ 25.000/–ಗಳಿಗೆ ಹೆಚ್ಚಿಸಲಾಗಿದೆ. ತೋಟಗಾರಿಕೆ ಬೆಳೆಗಳ ಹಾನಿಗೆ ಹೆಕ್ಟೇರ್‌ಗೆ ರೂ.18 ಸಾವಿರ ನೀಡಲಾಗುತ್ತಿತ್ತು. ಅದಕ್ಕೆ ಇನ್ನು ರೂ.10 ಸಾವಿರ ಸೇರಿಸುವ ಮೂಲಕ ಪರಿಹಾರ ಮೊತ್ತವನ್ನು ರೂ.28 ಸಾವಿರಕ್ಕೆ ಹೆಚ್ಚುವರಿಯಾಗಿ ರೂ.1,200 ಕೋಟಿ ಹೊರೆ ಬೀಳಲಿದೆ. ಇದರಿಂದ ರೂ.10 ಲಕ್ಷಕ್ಕೂ ಅಧಿಕ ರೈತರಿಗೆ ಅನುಕೂಲವಾಗಲಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು.

**7600 ಮನೆಗಳಿಗೆ ಪರಿಹಾರ:** ಬೆಳಗಾವಿ ಜಿಲ್ಲೆಯಲ್ಲಿ 2019–20ನೇ ಸಾಲಿನಲ್ಲಿ ಅತಿವೃಷ್ಟಿಯಿಂದ ಹಾನಿಯಾಗಿ ತಂತ್ರಾಂಶದಲ್ಲಿ ಅಪ್‌ಲೋಡ್ ಮಾಡಲು ಬಿಟ್ಟು ಹೋದ 7600 ಮನೆಗಳಿಗೆ ಪರಿಹಾರ ವಿತರಿಸಲು ಕ್ರಮ ಕೈಗೊಳ್ಳಲಾಗಿದೆ. 2020–21ರಲ್ಲಿ ಜಿಲ್ಲೆಯಲ್ಲಿ ಇಂತಹ ಯಾವುದೇ ಪರಿಸ್ಥಿತಿ ಉದ್ಭವಿಸಿಲ್ಲ. ತಹಸೀಲ್ದಾರರ ವರದಿ ಆಧರಿಸಿ ಅನುಮೋದನೆ ನೀಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು.

**48 ಗಂಟೆಗಳಲ್ಲೇ ಪರಿಹಾರ**: ಈ ವರ್ಷ ಬೆಳೆದು ನಿಂತ ಪೈರಿಗೆ ಹಾನಿಯಾಗಿ ಬೆಳೆ ಕೈಗೆ ಸಿಗುವ ಕಾಲದಲ್ಲಿ ರೈತರಿಗೆ ನಷ್ಟವಾಗಿದೆ. ರೈತರ ಸಂಕಷ್ಟಕ್ಕೆ ತಕ್ಷಣ ಸ್ಪಂದಿಸಿದ ಸರ್ಕಾರ ಕೂಡಲೇ ಜಂಟಿ ಸಮೀಕ್ಷೆ ಕೈಗೊಂಡು ವರದಿಯನ್ನು ಆ್ಯಪ್‌ನಲ್ಲಿ ಅಪ್‌ಲೋಡ್ ಮಾಡಲು ಹಾಗೂ ಮಾಹಿತಿ ಅಪ್‌ಲೋಡ್ ಮಾಡಿದ 48 ಗಂಟೆಯೊಳಗೆ ರೈತರಿಗೆ ಪರಿಹಾರ ವಿತರಿಸಲು ಅಧಿಕಾರಿಗಳಿಗೆ ಸೂಚಿಸಲಾಯಿತು. ಇದರ ಪರಿಣಾಮವಾಗಿ ಇದುವರೆಗೆ ರೂ.10 ಲಕ್ಷಕ್ಕೂ ಅಧಿಕ ರೈತರಿಗೆ ರೂ.969 ಕೋಟಿ ಪರಿಹಾರ ತಲುಪಿರುವುದು ಒಂದು ದಾಖಲೆ ಎಂದು ಮುಖ್ಯಮಂತ್ರಿಯವರು ವಿವರಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:22.12.2021

## 131. ಮತಾಂತರ ನಿಷೇಧ : ಕಾಂಗ್ರೆಸ್ ಪ್ರತಿರೋಧ

ಪ್ರತಿಪಕ್ಷ ಕಾಂಗ್ರೆಸ್‌ನ ತೀವ್ರ ವಿರೋಧ ಸಭಾತ್ಯಾಗದ ನಡುವೆಯೇ ಮತಾಂತರಕ್ಕೆ ಕಡಿವಾಣ ಹಾಕುವ ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ವಿಧೇಯಕ–2021 ಅನ್ನು ರಾಜ್ಯ ಸರ್ಕಾರ ವಿಧಾನಸಭೆಯಲ್ಲಿ ಮಂಡಿಸಿತು. ವಿಧೇಯಕ ಮಂಡನೆ ಬೆನ್ನಲ್ಲೇ ಸದನದ ಹೊರಗೆ ಹಾಗೂ ಒಳಗೆ ಪರ–ವಿರೋಧ ಚರ್ಚೆ ಬಿರುಸಾಗಿದೆ.

ಈ ನಡುವೆ ವಿಧೇಯಕದ ಬಗ್ಗೆ ವಿಸ್ತೃತ ಚರ್ಚೆಗೆ ಅವಕಾಶ ನೀಡಿ ಅಂಗೀಕಾರ ಪಡೆಯಲು ಸರ್ಕಾರ ನಿರ್ಧರಿಸಿದೆ. ಆದರೆ, ವಿಧೇಯಕ ಮಂಡನೆಯ ಪ್ರಸ್ತಾವನೆಯನ್ನೇ ವಿರೋಧಿಸಿರುವ ಕಾಂಗ್ರೆಸ್, ತೀವ್ರವಾಗಿ ವಿರೋಧಿಸಲು ತೀರ್ಮಾನಿಸಿದೆ. ಈ ಹಿನ್ನೆಲೆಯಲ್ಲಿ, ಆಡಳಿತಾರೂಢ ಬಿಜೆಪಿ ಹಾಗೂ ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರ ನಡುವೆ ತೀವ್ರ ವಾಗ್ವಾದ ಕೋಲಾಹಲ ನಡೆಯುವ ಸಾಧ್ಯತೆಯಿದೆ.

**ಜೆಡಿಎಸ್‌ನಿಂದಲೂ ವಿರೋಧ**: ಜೆಡಿಎಸ್ ಕೂಡ ಮತಾಂತರ ನಿಷೇಧ ವಿಧೇಯಕಕ್ಕೆ ವಿರುದ್ಧವಾಗಿದೆ ಎಂದು ಬಂಡೆಪ್ಪ ಕಾಶಂಪುರ ಸದನದಲ್ಲಿ ಹೇಳಿದರು. ನಿಮಗೆ ಉತ್ತರ ಕರ್ನಾಟಕ ಸಮಸ್ಯೆಗಳ ಬಗ್ಗೆ ಚರ್ಚೆ ಬೇಡ. ಮತಾಂತರ ನಿಷೇಧ ಉದ್ದೇಶ ಈಡೇರಬೇಕು ಎಂದು ಮಾಜಿ ಮುಖ್ಯಮಂತ್ರಿ ಕುಮಾರಸ್ವಾಮಿ ಟೀಕಿಸಿದರು.

ಭೋಜನ ವಿರಾಮದ ನಂತರ ಮಧ್ಯಾಹ್ನ 3 ಗಂಟೆಗೆ ಕಲಾಪ ಆರಂಭವಾಗುತ್ತಿದ್ದಂತೆಯೇ ಕಂದಾಯ ಸಚಿವ ಆರ್. ಅಶೋಕ್ ಅವರು ಅತಿವೃಷ್ಟಿ ಪರಿಹಾರದ ಬಗ್ಗೆ ಉತ್ತರ ನೀಡಬೇಕಿತ್ತು. ಆಗ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಸೇರಿದಂತೆ ಕಾಂಗ್ರೆಸ್‌ನ ಹೆಚ್ಚಿನ ಸದಸ್ಯರು ಸದನಕ್ಕೆ ಆಗಮಿಸಿರಲಿಲ್ಲ. ಈ ವೇಳೆ ಗೃಹ ಸಚಿವ ಆರಗ ಜ್ಞಾನೇಂದ್ರ ವಿಧೇಯಕವನ್ನು ಮಂಡಿಸಿದರು. ನಂತರ ಸದನಕ್ಕೆ ಆಗಮಿಸಿದ ಕಾಂಗ್ರೆಸ್ ಸದಸ್ಯರು ಏಕಪಕ್ಷೀಯವಾಗಿ ಮತ್ತು ತರಾತುರಿಯಲ್ಲಿ ವಾಮಮಾರ್ಗದ ಮೂಲಕ ಬಿಜೆಪಿ ವಿಧೇಯಕ ಮಂಡಿಸಿದೆ ಎಂದು ತೀವ್ರವಾಗಿ ಆಕ್ಷೇಪಿಸಿದರು. ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಮಾತನಾಡಿ ರಾಜ್ಯ ಸರ್ಕಾರ ಕದ್ದುಮುಚ್ಚಿ ವಿಧೇಯಕ ಮಂಡಿಸಿದೆ. ವಿಧೇಯಕ ಮಂಡನೆ ಪ್ರಸ್ತಾವನೆಗೆ ನಮ್ಮ ವಿರೋಧವಿದೆ. ಇದು ಸಂವಿಧಾನದ ಮೂಲಭೂತ ಹಕ್ಕಿನ ಉಲ್ಲಂಘನೆ ಎಂದು ಆಕ್ಷೇಪಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:22.12.2021

## 132. ಬಲವಂತ ಮತಾಂತರಕ್ಕೆ ಜೈಲು, ಲವ್ ಜಿಹಾದ್‌ಗೂ ಪರೋಕ್ಷ ಬ್ರೇಕ್

ಬಹು ಚರ್ಚಿತ ಮತಾಂತರ ನಿಷೇಧ ಕುರಿತಂತೆ ರಾಜ್ಯದ ಬಿಜೆಪಿ ಸರ್ಕಾರ ವಿಧಾನಸಭೆಯಲ್ಲಿ ವಿಧೇಯಕವೊಂದನ್ನು ಮಂಡಿಸಿದ್ದು, ಮತಾಂತರಕ್ಕೆ ಕಡಿವಾಣ ಹಾಕುವ ನಿಟ್ಟಿನಲ್ಲಿ ಹಲವಾರು ಕಠಿಣ ಕ್ರಮಗಳನ್ನು ಒಳಗೊಂಡಿದೆ.

'ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ವಿಧೇಯಕ–2021 ಎಂಬ ಹೆಸರಿನ ಈ ವಿಧೇಯಕ ಕುರಿತಂತೆ ಸದನದಲ್ಲಿ ಚರ್ಚೆ ನಡೆಯಲಿದ್ದು, ಪ್ರತಿಪಕ್ಷಗಳಾದ ಕಾಂಗ್ರೆಸ್ ಮತ್ತು ಜೆಡಿಎಸ್ ತೀವ್ರವಾಗಿ ವಿರೋಧ ವ್ಯಕ್ತಪಡಿಸಲು ನಿರ್ಧರಿಸಿವೆ. ವಿಧೇಯಕವು ಈ ಕೆಳಕಂಡ ಅಂಶಗಳನ್ನು ಒಳಗೊಂಡಿದೆ.

**ಮತಾಂತರಕ್ಕೆ ಪ್ರಕ್ರಿಯೆ ಹೇಗೆ:** ಯಾವುದೇ ವ್ಯಕ್ತಿ ಧರ್ಮ ಬದಲಿಸುವುದಾದರೆ ಜಿಲ್ಲಾಧಿಕಾರಿಗಳಿಗೆ 30 ದಿನಗಳ ಮೊದಲು ನಮೂನೆ–1ರಲ್ಲಿ ಅರ್ಜಿ ಸಲ್ಲಿಸಬೇಕು. ಅರ್ಜಿ ಸಮೇತ ಮತಾಂತರಗೊಳ್ಳುವವರ ಮಾಹಿತಿಯನ್ನು ತಹಶೀಲ್ದಾರ್ ಕಚೇರಿಯಲ್ಲಿ ಆಕ್ಷೇಪಣೆ ಅಹ್ವಾನಿಸಿ 30 ದಿನಗಳ ಕಾಲ ನೋಟಿಸ್ ಫಲಕದಲ್ಲಿ ಹಾಕಬೇಕು. ಇದೇ ವೇಳೆ ಜಿಲ್ಲಾಧಿಕಾರಿಯು ಮತಾಂತರಗೊಳ್ಳುವವನನ್ನು ಮತ್ತು ಮತಾಂತರ ಮಾಡುವವನನ್ನು ಪೊಲೀಸರ ನೆರವಿನಿಂದ ವಿಚಾರಣೆ ನಡೆಸಬೇಕು. ವಿಚಾರಣೆ ವೇಳೆ ಕಾನೂನು ಬಾಹಿರ ಎಂದು ಗೊತ್ತಾದರೆ ಕ್ರಿಮಿನಲ್ ಪ್ರಕರಣ ದಾಖಲಿಸಬೇಕು. ಬಳಿಕ ಜಿಲ್ಲಾಧಿಕಾರಿಗಳು ಮತಾಂತರಗೊಂಡ ವ್ಯಕ್ತಿಯ ಶಾಲೆ, ಕಾಲೇಜುಗಳ ಸಕ್ಷಮ ಪ್ರಾಧಿಕಾರಕ್ಕೆ ಮತ ಬದಲಾವಣೆಗೆ ಸೂಚಿಸಬೇಕು.

**ಯಾವುದು ಕಾನೂನು ಬಾಹಿರ:** ಮಸೂದೆಯ ಪ್ರಕಾರ, ಯಾವುದೇ ಒತ್ತಡ(ಶಾರೀರಿಕ ಹಾನಿ, ಮಾನಸಿಕ ಒತ್ತಡ, ಬೆದರಿಕೆ, ದೈಹಿಕ ಬಲ ಪ್ರಯೋಗ) ಹಾಗೂ ಯಾವುದೇ ರೀತಿಯ ವಸ್ತು ಅಥವಾ ಹಣದ ರೂಪದಲ್ಲಿ ಉಡುಗೊರೆ, ಯಾವುದೇ ಧರ್ಮದ ಪ್ರತಿಷ್ಠಿತ ಸಂಸ್ಥೆಯಲ್ಲಿ ಉದ್ಯೋಗ, ಉಚಿತ ಶಿಕ್ಷಣ, ವಿವಾಹವಾಗುವುದಾಗಿ ಆಮಿಷ ಅಥವಾ ಉತ್ತಮ ಜೀವನ ಶೈಲಿ, ಭಾವನಾತ್ಮಕವಾಗಿ ಮತಾಂತರ ಮಾಡುವುದು ಕಾನೂನು ಬಾಹಿರ.

**ಶಿಕ್ಷೆ ಏನು:** ಕಾನೂನು ಬಾಹಿರ ಮತಾಂತರಕ್ಕೆ ಪ್ರಸ್ತಾವಿತ ಮಸೂದೆಯಲ್ಲಿ ಒತ್ತಾಯ, ಆಮಿಷ ಒಡ್ಡಿ ಮತಾಂತರ ಮಾಡುವುದನ್ನು ನಿಷೇಧಿಸುವ ಪ್ರಸ್ತಾಪ ಇದೆ. ಪರಿಶಿಷ್ಟ ಜಾತಿ, ಪಂಗಡ, ಅಪ್ರಾಪ್ತರು, ಮಹಿಳೆಯರು, ಬುದ್ಧಿ ಮಾಂದ್ಯರನ್ನು ಮತಾಂತರ ಮಾಡಿದವರಿಗೆ ಕನಿಷ್ಠ 3 ರಿಂದ 10 ವರ್ಷದವರೆಗೆ ಜೈಲು, ರೂ. 50 ಸಾವಿರ ದಂಡ ವಿಧಿಸಲು ಅವಕಾಶ ಕಲ್ಪಿಸಲಾಗಿದೆ.

**'ಲವ್ ಜಿಹಾದ್' ಮತಾಂತರ ನಿಷಿದ್ಧ:** ತಪ್ಪು ಮಾಹಿತಿ ಅಥವಾ ನಿರೂಪಣೆ, ಬಲವಂತ, ವಂಚನೆ, ಆಮಿಷ, ಮದುವೆಯ ವಾಗ್ದಾನದ ಮೂಲಕ ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಮತಾಂತರ ನಿಷೇಧ, ವಿಧೇಯಕದಲ್ಲಿ ಲವ್ ಜಿಹಾದ್ ಕುರಿತು ಪ್ರಸ್ತಾಪವಿಲ್ಲದಿದ್ದರೂ ಮದುವೆ ಭರವಸೆ ನೀಡಿ ನಡೆಯುವ ಅಂತರ್ ಧರ್ಮೀಯ ವಿವಾಹ ನಿಷೇಧ ಪ್ರಸ್ತಾಪವಿದೆ. ಮದುವೆಯ ವಾಗ್ದಾನದ ಮೂಲಕ ಯಾರೇ ವ್ಯಕ್ತಿಯನ್ನು ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಮತಾಂತರ ಮಾಡುವಂತಿಲ್ಲ.

**ಮದುವೆ ಅನೂರ್ಜಿತಕ್ಕೂ ಅವಕಾಶ:** ಮತಾಂತರದ ಏಕ ಮಾತ್ರ ಉದ್ದೇಶಕ್ಕಾಗಿ ಮಾಡಿದ ಮದುವೆಯನ್ನು ಅಸಿಂಧುವೆಂದು ಘೋಷಿಸಲಾಗುವುದು. ಅಂತಹ ಉದ್ದೇಶಕ್ಕಾಗಿ ಮತಾಂತರ ನಡೆದಿರುವ ಯಾವುದೇ ಮದುವೆಯನ್ನು ಕೌಟಂಬಿಕ ನ್ಯಾಯಾಲಯವು ರದ್ದುಪಡಿಸಬೇಕು.

**ಸರ್ಕಾರಿ ಹಣಕಾಸು ಸೌಲಭ್ಯ, ಸಾಮಾಜಿಕ ಸ್ಥಾನಮಾನ ಬದಲು:** ನಿಯಮ ಬದ್ಧ ಮತಾಂತರದ ಬಳಿಕ ಪ್ರಾಧಿಕಾರವು ಮತಾಂತರದ ಬಗ್ಗೆ ಸಂಬಂಧ ಪಟ್ಟ ಇಲಾಖೆಗಳ ಅಧಿಕೃತ ದಾಖಲೆಗಳನ್ನು ನಮೂದಿಸುವಂತೆ ಮಾಡಬೇಕು. ಜೊತೆಗೆ ಮತಾಂತರಗೊಂಡ ವ್ಯಕ್ತಿಯ ಮತಾಂತರಕ್ಕೆ ಮೊದಲು ಪಡೆಯುತ್ತಿದ್ದ ಸಾಮಾಜಿಕ ಸ್ಥಾನಮಾನ, ಸರ್ಕಾರದಿಂದ ಪಡೆಯುತ್ತಿದ್ದ ಹಣಕಾಸಿನ ಪ್ರಯೋಜನ ಸ್ವೀಕರಿಸುವ ಹಕ್ಕು ಕಳೆದುಕೊಳ್ಳುತ್ತಾನೆ.

ಆಧಾರ:ಕನ್ನಡಪ್ರಭ, ದಿನಾಂಕ:22.12.2021.

## 133. ಜನವರಿ 9–19ರವರೆಗೆ ಮೇಕೆದಾಟು ಪಾದಯಾತ್ರೆ

ಮೇಕೆದಾಟು ಯೋಜನೆ ಜಾರಿ ಸಂಬಂಧ ಒತ್ತಡ ತರಲು ಜನವರಿ 9 ರಿಂದ 19 ರವರೆಗೆ ಪಾದಯಾತ್ರೆ ನಡೆಸಲು ಕಾಂಗ್ರೆಸ್ ನಿರ್ಧರಿಸಿದೆ. ಪ್ರತಿ ಪಕ್ಷ ನಾಯಕ ಸಿದ್ದರಾಮಯ್ಯ ಹಾಗೂ ಕೆಪಿಸಿಸಿ ಅಧ್ಯಕ್ಷ ಡಿಕೆ.ಶಿವಕುಮಾರ್ ನೇತೃತ್ವದಲ್ಲಿ ಈ ಪಾದಯಾತ್ರೆ ನಡೆಯಲಿದೆ. ಸುವರ್ಣ ಸೌಧದಲ್ಲಿ ನಡೆದ ಕಾಂಗ್ರೆಸ್ ಶಾಸಕಾಂಗ ಪಕ್ಷದ (ಸಿಎಲ್‌ಪಿ) ಸಭೆಯಲ್ಲಿ ಈ ನಿರ್ಧಾರ ತೆಗೆದುಕೊಳ್ಳಲಾಯಿತು. ಸಭೆ ಬಳಿಕ ಮಾತನಾಡಿದ ಸಿದ್ದರಾಮಯ್ಯ ಹಾಗೂ ಶಿವಕುಮಾರ್ ಪಾದಯಾತ್ರೆ ಬಗ್ಗೆ ಘೋಷಿಸಿದರು.

ಜನವರಿ 9 ರಂದು ಬೆಳಗ್ಗೆ 9.30ಕ್ಕೆ ಮೇಕೆದಾಟಿನಿಂದ ಪಾದಯಾತ್ರೆ ಪ್ರಾರಂಭವಾಗಲಿದೆ. 5 ದಿನದ ಅವಧಿಯಲ್ಲಿ ಗ್ರಾಮಾಂತರ ಪ್ರದೇಶ ದಾಟಿಕೊಂಡು ಸುಮಾರು 75ಕಿ.ಮೀ ಕ್ರಮಿಸಿ ಕೆಂಗೇರಿ ಉಪನಗರಕ್ಕೆ  ಬರಲಿದೆ. ನಂತರ ಮುಂದಿನ 5 ದಿನಗಳಲ್ಲಿ ನಗರ ಭಾಗದಲ್ಲಿ ಪಾದಯತ್ರೆ ಮುಂದುವರಿಯಲಿದೆ ಎಂದು ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್ ತಿಳಿಸಿದರು.

**ಎಲ್ಲರಿಗೂ ಆಹ್ವಾನ:** ಈ ಹೋರಾಟದ ಮುಂದಾಳತ್ವ ಕಾಂಗ್ರೆಸ್‌ನದ್ದಾದರೂ ಪಕ್ಷಾತೀತವಾಗಿ ನಡೆಯಲಿದೆ ಎಲ್ಲ ವರ್ಗ, ಸಮುದಾಯಕ್ಕೆ ಸೇರಿದ ಹೋರಾಟ ಇದಾಗಿದೆ. ಕೈಗಾರಿಕೆಯಿಂದ ಹಿಡಿದು ರೈತರು, ಕಾರ್ಮಿಕರು, ಕಲಾವಿದರು, ಇನ್ನಿತರರು ಪಾಲ್ಗೊಳ್ಳಬಹುದು ಎಂದು ಶಿವಕುಮಾರ್ ಆಹ್ವಾನ ನೀಡಿದರು.

ಸಿದ್ದರಾಮಯ್ಯ ಮಾತನಾಡಿ, "ಮೇಕೆದಾಟು ಯೋಜನೆಯಿಂದ ಎರಡೂ ರಾಜ್ಯಗಳಿಗೆ ಅನುಕೂಲವಾಗಲಿದೆ. 66 ಟಿಎಂಸಿ ನೀರು ಶೇಖರಿಸಿ 440 ಮೆಗಾ ವ್ಯಾಟ್ ವಿದ್ಯುತ್ ಉತ್ಪಾದಿಸಲು ಸಾಧ್ಯವಾಗಲಿದೆ. ಬೆಂಗಳೂರು ನಗರ ಸೇರಿದಂತೆ ಕೋಲಾರ, ಬೆಂಗಳೂರು ನಗರ ಸೇರಿದಂತೆ ಕೋಲಾರ, ಬೆಂಗಳೂರು ಗ್ರಾಮಂತರ, ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಕುಡಿಯುವ ನೀರು ಒದಗಿಸಬಹುದಾಗಿದೆ," ಎಂದರು. ವಿಧಾನ ಪರಿಷತ್‌ಗೆ  ಹೊಸದಾಗಿ ಆಯ್ಕೆಯಾಗಿರುವ ಮಂಜುನಾಥ ಭಂಡಾರಿ, ಸುನೀಲ್ ಗೌಡ ಪಾಟೀಲ್, ಶರಣಗೌಡ ಬಯ್ಯಾಪುರ ಅವರನ್ನು ಶಾಸಕಾಂಗ ಪಕ್ಷದ ಸಭೆಗೆ ಸ್ವಾಗತಿಸಿ ಅಭಿನಂದಿಸಲಾಯಿತು.

ಆಧಾರ:ವಿಜಯ ಕರ್ನಾಟಕ, ದಿನಾಂಕ:22.12.2021.

## 134. ಭೈರತಿ ಕೇಸ್ ವಿಚಾರಣೆಗೆ ಹೈಕೋರ್ಟ್ ತಡೆ

ಭೂಕಬಳಿಕೆ ಆರೋಪ ಸಂಬಂಧ ಸಚಿವ ಭೈರತಿ ಬಸವರಾಜ್ ಮತ್ತು ಶಾಸಕ ಆರ್. ಶಂಕರ್ ವಿರುದ್ಧ ನಗರದ 42ನೇ ಎಸಿಎಂಎಂ ನ್ಯಾಯಾಲಯ ನಡೆಸುತ್ತಿರುವ ವಿಚಾರಣೆಗೆ ಮಧ್ಯಂತರ ತಡೆಯಾಜ್ಞೆ ನೀಡಿ ಹೈಕೋರ್ಟ್ ಆದೇಶಿಸಿದೆ.

ಪ್ರಕರಣ ಕುರಿತ ಕೆ.ಆರ್.ಪುರ ಪೊಲೀಸರ ಬಿ ರಿಪೋರ್ಟ್ ತಿರಸ್ಕರಿಸಿದ 82ನೇ ಹೆಚ್ಚುವರಿ ಸಿವಿಟಿಸಿವಿಲ್ ಮತ್ತು ಸೆಷನ್ಸ್ ನ್ಯಾಯಾಲಯದ ಆದೇಶ ಮತ್ತು ಖಾಸಗಿ ದೂರನ್ನು ವಿಚಾರಣೆಗೆ ಅಂಗೀಕರಿಸಿ ಸಮನ್ಸ್ ಜಾರಿಗೊಳಿಸಿದ 42ನೇ ಎಸಿಎಂಎಂ ನ್ಯಾಯಾಲಯದ ಆದೇಶ ರದ್ದುಪಡಿಸುವಂತೆ, ಕೋರಿ ಸಚಿವ ಭೈರತಿ ಬಸವರಾಜ್, ಶಾಸಕ ಆರ್.ಶಂಕರ್ ಮತ್ತು ಎ.ಎಂ.ಮಾದಪ್ಪ ಎಂಬುವರು ಹೈಕೋರ್ಟ್‌ಗೆ ಕ್ರಿಮಿನಲ್ ಅರ್ಜಿ ಸಲ್ಲಿಸಿದ್ದರು.

ಅರ್ಜಿ ಕುರಿತು ಹೈಕೋರ್ಟ್ ಧಾರವಾಡ ಪೀಠದಲ್ಲಿ ಕೆಲ ಕಾಲ ವಾದ ಆಲಿಸಿದ ನ್ಯಾಯಾಧೀಶರಾದ ಸುನಿಲ್ ದತ್ ಯಾದವ್ ಅವರು, ಅರ್ಜಿದಾರರ ವಿರುದ್ಧ 42ನೇ ಎಸಿಎಂಎಂ ನ್ಯಾಯಾಲಯದ ವಿಚಾರಣಾ ಪ್ರಕ್ರಿಯೆಗೆ ತಡೆ ನೀಡಿದರು. ಅರ್ಜಿಯಲ್ಲಿ ಪ್ರತಿವಾದಿಗಳಾದ ರಾಜ್ಯ

ಸರ್ಕಾರ(ಕೆ.ಆರ್.ಪುರ ಠಾಣಾ ಪೊಲೀಸರು)ಮತ್ತು ಮೂಲ ದೂರುದಾರ ಎ.ಮಾದಪ್ಪಗೆ ನೋಟಿಸ್ ಜಾರಿಗೊಳಿಸಿ ವಿಚಾರಣೆಯನ್ನು 2022ರ ಜನವರಿ ಎರಡನೇ ವಾರಕ್ಕೆ ಮುಂದೂಡಿದರು.

ಬೆಂಗಳೂರು ಪೂರ್ವ ತಾಲ್ಲೂಕಿನ ಕೆ.ಆರ್.ಪುರ ಹೋಬಳಿಯ ಕಲ್ಕೆರೆ ಗ್ರಾಮದ ಸರ್ವೇ ನಂಬರ್ 375/2 ರಲ್ಲಿನ 22.43 ಎಕರೆ ಜಾಗ ಅದೂರ್ ಅಣ್ಣೈಯಪ್ಪ ಎಂಬುವರಿಗೆ ಸೇರಿದೆ. 2003 ಮೇ 21 ರಂದು ಸಂಬಂಧಿಕರಾದ ಮಾದಪ್ಪ ಮತ್ತು ಪಿಳ್ಳಮಾದಪ್ಪ ಅವರು ಖಾಲಿ ಕಾಗದಗಳ ಮೇಲೆ ಅದೂರ್ ಅಣ್ಣೈಯಪ್ಪ ಅವರ ಸಹಿ ಮತ್ತು ಹೆಬ್ಬೆಟ್ಟು ಪಡೆದುಕೊಂಡರು. ನಂತರ ಆ ಜಮೀನನ್ನು 2003ರ ಮೇ 21 ರಂದು ಅಕ್ರಮವಾಗಿ ಸಚಿವ ಭೈರತಿ ಬಸವರಾಜ್ ಅವರಿಗೆ ಮಾರಾಟ ಮಾಡಿದ್ದಾರೆ. ಈ ಪ್ರಕರಣದಲ್ಲಿ ಶಾಸಕ ಆರ್.ಶಂಕರ್ ಭಾಗಿಯಾಗಿದ್ದಾರೆ ಎಂದು ಆರೋಪಿಸಿ ಅಣ್ಣೈಯಪ್ಪ ಪುತ್ರ ಎ.ಮಾದಪ್ಪ ಖಾಸಗಿ ದೂರು ದಾಖಲಿಸಿದ್ದರು.

ಈ ದೂರಿನ ಕುರಿತು 2018ರ ಡಿಸೆಂಬರ್ 13 ರಂದು ಎಸಿಎಂಎಂ ಕೋರ್ಟ್ ನೀಡಿದ ಆದೇಶಾನುಸಾರ ತನಿಖೆ ನಡೆಸಿದ್ದ ಕೆ.ಆರ್.ಪುರ ಪೊಲೀಸರು ಬಿ ರಿಪೋರ್ಟ್ ಸಲ್ಲಿಸಿದ್ದರು. 82ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸೆಷನ್ಸ್ ವಿಶೇಷ ನ್ಯಾಯಾಲಯ(ಜನಪ್ರತಿನಿಧಿಗಳ ನ್ಯಾಯಾಲಯ) 2021 ರ ಸೆಪ್ಟೆಂಬರ್ 9 ರಂದು ಬಿ ರಿಪೋರ್ಟ್ ಅನ್ನು ತಿರಸ್ಕರಿಸಿತ್ತು. ನಂತರ ಪ್ರಕರಣ 42ನೇ ಎಸಿಎಂ ನ್ಯಾಯಾಲಯಕ್ಕೆ ವರ್ಗಾವಣೆಯಾಗಿತ್ತು. ಈ ನ್ಯಾಯಾಲಯ ಖಾಸಗಿ ದೂರನ್ನು ವಿಚಾರಣೆಗೆ ಅಂಗೀಕರಿಸಿ 2021ರ ನವೆಂಬರ್ 25 ರಂದು ಭೈರತಿ ಬಸವರಾಜ್, ಆರ್.ಶಂಕರ್, ಮಾದಪ್ಪ ಮತ್ತು ಪಿಳ್ಳಮಾದಪ್ಪ ಅವರಿಗೆ ಸಮನ್ಸ್ ಜಾರಿ ಮಾಡಿತ್ತು. ಈ ಎರಡು ಕೋರ್ಟ್‌ಗಳ ಆದೇಶ ರದ್ದು ಕೋರಿ ಅರ್ಜಿದಾರರು ಹೈಕೋರ್ಟ್ ಮೆಟ್ಟಿಲೇರಿದ್ದಾರೆ.

ಆಧಾರ:ಕನ್ನಡಪ್ರಭ, ದಿನಾಂಕ:22.12.2021.

## 135. Child marriages, rapes increased during Covid-19

Reports of rape against minors and child marriages increased sharply from 2018 to 2021 in the state. According to data tabled in the legislative council during question hour, cases of rape against children have increased from 1,410 to 1,761 (25%) from 2018 to 2021,

Activists say the actual number is more as many cases go unreported in rural areas. Activists say with schools closed, many parents felt it was safer to get their daughters married.

**Cases of minors' rape increase 25% in Karnataka, child marriages 200%**

. Activists say the actual number is more as many cases go unreported in rural areas. Cases of child marriage have jumped 200% (from 74 to 223) in the state in the corresponding period, raising questions about functioning of child protection units in districts and the Women and Child Welfare Department.

Activists say kids became more vulnerable during the pandemic due to the lockdown, assaults( other than rape) against kids increased by 8% Rapes against women saw a 4% rise, going up from 486 in 2018 to 507 in 2021.

Child marriage incidents have been on the rise since 2018 with 74 cases registered that year, 108 in 2019, 180 in 2020 and 223 in 2021. The increase during the pandemic has

not been addressed. The data also shows that cases under Juvenile Justice Act increased from 50 in 2018 to 67 in 2021.

Syed Hafizullah, an education activist who works for welfare of children, said kids have become vulnerable to both sexual assault and child marriage following closure of schools for nearly 18 months due to Covid. “It’s unfortunate that the government has not taken any special measures to safeguard children, especially in rural areas,” he added.

Abhay, a child rights activist from North Karnataka who’s leading a campaign to ban liquor in the state, said Karnataka was the first state to open liquor shops during the pandemic, and that is a major reason for the sharp increase in rape cases. “Children were confined to houses even after the lockdown due to closure of schools. Liquor simply blinds the senses, resulting in rapes and other incidents. Most rape cases, including the Nirbhaya cases in Delhi, have a liquor angle,” he added.

Courtesy:Times of India, Dated:22.12.2021

## 136. ಡೀಮ್ಡ್ ವ್ಯಾಜ್ಯ ಸುಖಾಂತ್ಯ

ರಾಜ್ಯಾದ್ಯಂತ ಅರಣ್ಯ ಪ್ರದೇಶವೆಂದು ಗುರುತಿಸಿಕೊಳ್ಳುವ ಡೀಮ್ಡ್ ಭೂಮಿಯನ್ನು ಕಂದಾಯ ಇಲಾಖೆಗೆ ಮರಳಿಸಲು ರಾಜ್ಯ ಸರ್ಕಾರ ತೀರ್ಮಾನಿಸಿದೆ. ಹೀಗಾದರೆ ಭೂಮಾಲೀಕರಿಗೆ ಉಳುಮೆ ಹಾಗೂ ವಸತಿಗಾಗಿ ಹಕ್ಕುಪತ್ರ ವಿತರಣೆಗೆ ಅವಕಾಶ ಕಲ್ಪಿಸಿದಂತಾಗುತ್ತದೆ. ಹಲವು ದಶಕಗಳಿಂದ ಭೂ ದಾಖಲೆ ಪಡೆಯಲು ಪರದಾಡುತ್ತಿದ್ದ ರೈತರ ಸಮಸ್ಯೆಗೆ ಪರಿಹಾರ ಸಿಗಲಿದೆ.

ವಿಧಾನ ಪರಿಷತ್‌ಗೆ ಈ ಬಗ್ಗೆ ಮಾಹಿತಿ ನೀಡಿದ ಕಂದಾಯ ಸಚಿವ ಆರ್.ಅಶೋಕ್ “ಅಧಿಕಾರಿಗಳ ನಿರ್ಲಕ್ಷ್ಯದಿಂದ ತಪ್ಪಾಗಿ ನಮೂದಿಸಲಾಗಿದ್ದ ರಾಜ್ಯದ 6.44 ಲಕ್ಷ ಹೆಕ್ಟೇರ್ ಡೀಮ್ಡ್ ಅರಣ್ಯ ಪ್ರದೇಶವನ್ನು ಅರಣ್ಯ ಇಲಾಖೆಯು ಕಂದಾಯ ಇಲಾಖೆಗೆ ಮರಳಿಸಲಿದೆ. ಈ ಭೂಮಿಯ ಉಳುಮೆ ಮತ್ತು ವಸತಿಗಾಗಿ ಮಾಲೀಕರಿಗೆ ಹಕ್ಕುಪತ್ರ ವಿತರಿಸಲಾಗುವುದು,” ಎಂದರು.

ಡೀಮ್ಡ್ ಅರಣ್ಯ ಸಮಸ್ಯೆ ಕುರಿತು ಪರಿಷತ್ತಿನಲ್ಲಿ ಆಡಳಿತ ಮತ್ತು ಪ್ರತಿಪಕ್ಷಗಳ ನಡುವೆ ಕೆಲಹೊತ್ತು ಜೋರಾಗಿಯೇ ಮಾತಿನ ಚಕಮಕಿ ಜರುಗಿತು. ಈ ವಿಷಯದ ಬಗ್ಗೆ ಕಾಂಗ್ರೆಸ್‌ನ ಪ್ರತಾಪಚಂದ್ರ ಶೆಟ್ಟಿ ಕೇಳಿದ ಪ್ರಶ್ನೆಗೆ ಉತ್ತರಿಸಿದ ಅಶೋಕ್ “ರಾಜ್ಯದಲ್ಲಿ 10.11 ಲಕ್ಷ ಹೆಕ್ಟೇರ್ ಮೀಸಲು ಅರಣ್ಯವಿದೆ. 1993–94ರಲ್ಲಿ ಅಂದಿನ ಅಧಿಕಾರಿಗಳು ಖಾಲಿ ಜಾಗವನ್ನು ಅವೈಜ್ಞಾನಿಕ ರೀತಿಯಲ್ಲಿ ಅರಣ್ಯ ಇಲಾಖೆ ಎಂದು ನಮೂದಿಸಿದ ಪರಿಣಾಮ ಮಾಲೀಕರಿಗೆ ಹಕ್ಕು ಪತ್ರ ವಿತರಣೆಗೆ ಸಮಸ್ಯೆಯಾಗಿದೆ,” ಎಂದು ವಿವರಿಸಿದರು.

ಸಚಿವರ ಉತ್ತರದಿಂದ ಅಸಮಾಧಾನಗೊಂಡ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಮತ್ತು ಪ್ರತಾಪಚಂದ್ರ ಶೆಟ್ಟಿ “ನಿಯಮ 53, 94(ಸಿ)ಅಡಿಯಲ್ಲಿ ಮಂಜೂರು ಮಾಡಿದ ಭೂಮಿಯನ್ನು ಅರಣ್ಯ ಇಲಾಖೆ ಹಲವಡೆ ಮರಳಿ ಪಡೆದಿದೆ. ಸ್ಥಳೀಯ ಕಂದಾಯ ಹಾಗೂ ಗ್ರಾಮಪಂಚಾಯಿತಿ ಅಧಿಕಾರಿಗಳು ಜಂಟಿ ಸಮೀಕ್ಷೆ ನಡೆಸಿ ಹಕ್ಕು ಪತ್ರ ನೀಡಿದ್ದರೂ ಅರಣ್ಯ ಇಲಾಖೆ ಮಧ್ಯ ಪ್ರವೇಶಿಸಿ ಜಮೀನು, ಮನೆ ಮರಳಿ ಪಡೆಯುತ್ತಿವೆ, “ ಎಂದು ಆರೋಪಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:23.12.2021.

## 137. ಹಾದಿ ತಪ್ಪಿದ ಕಲಾಪ: ಸದಸ್ಯರ ಕಳಕಳಿ

ವಿಧಾನ ಸಭೆಯ ಕಲಾಪದ ಚಟುವಟಿಕೆಗಳು ಹಾದಿ ತಪ್ಪುತ್ತಿರುವ ಬಗ್ಗೆ ವಿಧಾನ ಸಭಾಧ್ಯಕ್ಷರು ಹಾಗೂ ಹಲವು ಸದಸ್ಯರು ಕಳವಳ ವ್ಯಕ್ತಪಡಿಸಿದರು. ಶೂನ್ಯ ವೇಳೆಯಲ್ಲಿ ಜೆಡಿಎಸ್‌ನ ಕೆ.ಎಂ.ಶಿವಲಿಂಗೇಗೌಡ ಅವರು ಕ್ಷೇತ್ರದ ವಿದ್ಯುತ್ ಬಿಲ್ ಸಮಸ್ಯೆ ಬಗ್ಗೆ ದೀರ್ಘವಾಗಿ ವಿಷಯ ಪ್ರಸ್ತಾಪಿಸಿದರು. ಇದಕ್ಕೆ ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ, 'ಶೂನ್ಯ ವೇಳೆಯಲ್ಲಿ ಈ ರೀತಿ ಸುದೀರ್ಘವಾಗಿ ಚರ್ಚಿಸುವುದು ಸರಿಯಲ್ಲ. ವಿಧಾನ ಸಭಾಧ್ಯಕ್ಷರು ಇದಕ್ಕೆಲ್ಲ ಅವಕಾಶ ಮಾಡಿಕೊಡಬಾರದು' ಎಂದು ಆಗ್ರಹಿಸಿದರು. 'ನಾನು ಅಸಹಾಯಕ' ಎಂದು ವಿಧಾನ ಸಭಾಧ್ಯಕ್ಷರು ಅಳಲು ತೋಡಿಕೊಂಡರು.

ಈ ವೇಳೆ ಕಾಂಗ್ರೆಸ್ ಕೆ.ಆರ್.ರಮೇಶ್ ಕುಮಾರ್, 'ಸಭಾಧ್ಯಕ್ಷರದ್ದು ಹೆಸರಿಗೆ ಮಾತ್ರ ಎತ್ತರದ ಪೀಠ. ಅತೀ ಹೆಚ್ಚು ಅಪವಾದ ಹಾಗೂ ಮಾನಸಿಕ ಹಿಂಸೆಗೆ ಗುರಿಯಾಗುವುದು ಈ ಪೀಠ. ಅವರ ನೆರವಿಗೆ ಯಾರು ಬರುವುದಿಲ್ಲ' ಎಂದರು.

10 ದಿನಗಳ ಅಧಿವೇಶನದಲ್ಲಿ ಪ್ರಮುಖ ವಿಚಾರಗಳ ಬಗ್ಗೆಯೇ ಚರ್ಚೆ ಆಗುತ್ತಿಲ್ಲ. ಉತ್ತರ ಕರ್ನಾಟಕದ ಜ್ವಲಂತ ಸಮಸ್ಯೆಗಳ ಬಗ್ಗೆ ಗಂಭೀರ ಚರ್ಚೆಯೇ ಆಗಿಲ್ಲ. ಶೇ.40 ಕಮಿಷನ್ ಬಗ್ಗೆ ಪ್ರಸ್ತಾಪ ಮಾಡದಿದ್ದರೆ ವಿರೋಧ ಪಕ್ಷದವರಿಗೆ ಕಮಿಷನ್ ಸಿಕ್ಕಿದೆಯಾ ಎಂಬ ಮಾತು ಬರುತ್ತದೆ' ಎಂದರು. ಜೆ.ಸಿ.ಮಾಧುಸ್ವಾಮಿ, 'ಪ್ರಶ್ನೋತ್ತರ ಅವಧಿಯಲ್ಲಿ ಪ್ರಸ್ತಾಪವಾದ ವಿಚಾರವೇ ಶೂನ್ಯ ವೇಳೆಯಲ್ಲಿ ಗಮನ ಸೆಳೆಯುವ ಸೂಚನೆ ರೂಪದಲ್ಲೂ ಪ್ರಸ್ತಾಪ ಆಗುತ್ತಿದೆ. ಇದರಿಂದಾಗಿ, ಶಾಸನ ರಚನೆ, ನೀತಿ ನಿರೂಪಣೆ ಕೆಲಸಕ್ಕೆ ಸಮಯ ಕೊಡಲು ಆಗುತ್ತಿಲ್ಲ. ಪ್ರಮುಖ ವಿಚಾರಗಳ ಬಗ್ಗೆ ಚರ್ಚೆಯೇ ಆಗುತ್ತಿಲ್ಲ. ಹಾಗಿದ್ದರೆ ಈ ಮನೆ ಏಕೆ' ಎಂದು ಕಟುವಾಗಿ ಪ್ರಶ್ನಿಸಿದರು.

ಮೌಲ್ಯಧಾರಿತ ಚರ್ಚೆಗೆ ನಮ್ಮ ಪಕ್ಷ ವಿರೋಧ ವ್ಯಕ್ತಪಡಿಸುತ್ತಿಲ್ಲ' ಎಂದು ಜೆಡಿಎಸ್ ಶಾಸಕಾಂಗ ಪಕ್ಷದ ನಾಯಕ ಹೆಚ್.ಡಿ.ಕುಮಾರಸ್ವಾಮಿ ಸಮಜಾಯಿಷಿ ನೀಡಿದರು. 'ಜೆಡಿಎಸ್ ಸದಸ್ಯರನ್ನು ಉದ್ದೇಶಿಸಿ ನಾವು ಮಾತನಾಡಿಲ್ಲ. ಮೂರು ದಿನಗಳಿಂದ ಕಲಾಪ ಹಾದಿ ತಪ್ಪುತ್ತಿರುವ ಬಗ್ಗೆ ಬೇಸರ ವ್ಯಕ್ತಪಡಿಸಿದೆವು' ಎಂದು ಮಾಧುಸ್ವಾಮಿ ಸ್ಪಷ್ಟಪಡಿಸಿದರು.

ಕಾಂಗ್ರೆಸ್‌ನ ಕೃಷ್ಣ ಭೈರೇಗೌಡ, 'ಕ್ಷೇತ್ರದ ನಾನಾ ಸಮಸ್ಯೆ ಹೇಳಿಕೊಳ್ಳಬಹುದು ಎಂದು ಶಾಸಕರು ಬರುತ್ತಾರೆ. ಚರ್ಚಿಸಲು ಅವಕಾಶ ಸಿಗದಿದ್ದರೆ ಯಾಕೆ ಬರಬೇಕು ಎಂಬ ಭಾವನೆ ಬರುತ್ತದೆ. ವರ್ಷಕ್ಕೆ ಕನಿಷ್ಠ 60 ದಿನ ಅಧಿವೇಶನ ನಡೆಸಬೇಕು. ಈಗ 30–35 ದಿನ ಮಾತ್ರ ನಡೆಯುತ್ತಿದೆ. ಅಧಿವೇಶನದ ಅವಧಿ ವಿಸ್ತರಿಸಿದರೆ ಎಲ್ಲ ವಿಷಯಗಳ ಚರ್ಚೆಗೆ ಅವಕಾಶ ಸಿಗುತ್ತದೆ. ಜಂಟಿ ಅಧಿವೇಶನವನ್ನು ಮೂರು ವಾರ ಹಾಗೂ ಬಜೆಟ್ ಅಧಿವೇಶನವನ್ನು ಒಂದು ತಿಂಗಳು ನಡೆಸಲು ತೀರ್ಮಾನ ಕೈಗೊಳ್ಳಿ' ಎಂದು ಸಲಹೆ ನೀಡಿದರು.

ಜೆಡಿಎಸ್‌ನ ಜಿ.ಟಿ.ದೇವೇಗೌಡ, 'ಶಾಸಕರ ಸಂಖ್ಯೆಯ ಆಧಾರದಲ್ಲಿ ಆಯಾ ಪಕ್ಷಗಳಿಗೆ ಸಮಯ ನಿಗದಿ ಮಾಡಿ' ಎಂದರು. ಕಾಂಗ್ರೆಸ್‌ನ ರಾಮಲಿಂಗಾರೆಡ್ಡಿ, 'ಲೋಕಸಭೆಯ ಮಾದರಿಯನ್ನೇ ಇಲ್ಲೂ ಅನುಸರಿಸಿ. ವಿರೋಧ ಪಕ್ಷದ ನಾಯಕರಿಗೆ ಬಿಟ್ಟು ಉಳಿದ ಸದಸ್ಯರಿಗೆ ಮೂರು ನಿಮಿಷಕ್ಕಿಂತ ಹೆಚ್ಚು ಮಾತನಾಡಲು ಅವಕಾಶ ನೀಡಬೇಡಿ' ಎಂದರು.

ಜೆಡಿಎಸ್‌ನ ಎ.ಟಿ.ರಾಮಸ್ವಾಮಿ, 'ಸದನ ರಾಜಕೀಯ ಮೇಲಾಟಕ್ಕೆ ಸಾಕ್ಷಿಯಾಗುತ್ತಿದೆ. ಅಭಿವೃದ್ಧಿ, ಆಡಳಿತ ವ್ಯವಸ್ಥೆ ಸುಧಾರಣೆ, ತೆರಿಗೆ ಸೋರಿಕೆ ಹಾಗೂ ಭ್ರಷ್ಟಾಚಾರ ವಿಷಯಗಳ ಬಗ್ಗೆ ಚರ್ಚೆ ಆಗುತ್ತಿಲ್ಲ' ಎಂದು ಬೇಸರ ವ್ಯಕ್ತಪಡಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:23.12.2021.

## 138. ಬಾರದ ಸಚಿವರ ಮೇಲೆ ಸಭಾಪತಿ ಗರಂ

ಅಧಿವೇಶನ ಪ್ರಾರಂಭವಾದಾಗ 8 ದಿನ ಕಳೆದರೂ ಕೆಲ ಸಚಿವರು ವಿಧಾನ ಪರಿಷತ್ತಿನ ಕಡೆಗೆ ತಲೆ ಹಾಕಿಲ್ಲ. ಅವರನ್ನು ಕರೆ ತನ್ನಿ ಎಂದು ಸರ್ಕಾರಕ್ಕೆ ವಿಧಾನ ಪರಿಷತ್ತು ಸಭಾಪತಿಯವರು ಸೂಚನೆ ನೀಡಿದರು. ಪರಿಷತ್ತಿನಲ್ಲಿ ಪ್ರಶ್ನೋತ್ತರ, ಶೂನ್ಯ ವೇಳೆಯ ನಂತರ ಸದನದಲ್ಲಿ ಕಡ್ಡಾಯವಾಗಿ ಹಾಜರಿರಬೇಕಿದ್ದ ಸಚಿವರ ಪಟ್ಟಿಯನ್ನು ಓದುತ್ತಿದ್ದ ವೇಳೆ ವಸತಿ ಸಚಿವ ವಿ. ಸೋಮಣ್ಣ ಅವರನ್ನು ಕುರಿತು, ಅಧಿವೇಶನ ಆರಂಭವಾಗಿ ಇಷ್ಟೊಂದು ದಿನಗಳೇ ಕಳೆದರೂ ಕೆಲವು ಸಚಿವರು ಈ ಕಡೆ ಬಂದಿಲ್ಲ. ಅವರನ್ನು ಕರೆಸಿ, ಸಚಿವರಿಗೆ ಎಲ್ಲವನ್ನು ತಿಳಿಸಿ ಹೇಳಬೇಕಿಲ್ಲವಲ್ಲ, ಅವರ ಹೆಸರು ಹೇಳುವುದು ಅನಗತ್ಯ ಎಂದು ಭಾವಿಸುತ್ತೇನೆ ಎಂದು ತಮ್ಮ ಅಸಮಧಾನ ವ್ಯಕ್ತಪಡಿಸಿದರು.

ಪರಿಷತ್ತಿಗೆ ಬಾರದೆ ಇರುವ ಸಚಿವರಿಗೆ ಈ ಬಗ್ಗೆ ಮಾಹಿತಿ ನೀಡುವುದಾಗಿ ಸಚಿವ ಸೋಮಣ್ಣ ' ಸಭಾಪತಿಯವರಿಗೆ ಭರವಸೆ ನೀಡಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:23.12.2021.

## 139. ಡೀಮ್ಡ್ ಅರಣ್ಯ ಕಂದಾಯ ಇಲಾಖೆಗೆ

ಅರಣ್ಯಾಧಿಕಾರಿಗಳು ವಶಪಡಿಸಿಕೊಂಡಿರುವ ಡೀಮ್ಡ್ ಅರಣ್ಯ ಪ್ರದೇಶದಲ್ಲಿ 6.44ಲಕ್ಷ ಹೇಕ್ಟೆರ್ ಪ್ರದೇಶವನ್ನು ಕಂದಾಯ ಇಲಾಖೆಗೆ ಪಡೆದುಕೊಳ್ಳುತ್ತಿದ್ದು, ಇಲ್ಲಿ ಮನೆ ನಿರ್ಮಾಣ ಮಾಡಿಕೊಂಡು ಕೃಷಿಯಲ್ಲಿ ತೊಡಗಿರುವವರಿಗೆ ಹಕ್ಕು ಪತ್ರ ವಿತರಿಸುತ್ತೇವೆ ಎಂದು ಕಂದಾಯ ಸಚಿವ ಆರ್.ಅಶೋಕ್ ಹೇಳಿದರು.

ಕಾಂಗ್ರೆಸ್ ಪ್ರತಾಪಚಂದ್ರ ಶೆಟ್ಟಿ ಮಾತನಾಡಿ, ಡೀಮ್ಡ್ ಫಾರೆಸ್ಟ್ ಹೆಸರಿನಲ್ಲಿ ಬಡವರ ಮೇಲೆ ದಬ್ಬಾಳಿಕೆ ನಡೆಸಲಾಗುತ್ತಿದೆ. 2016ರಿಂದ ಇದಕ್ಕಾಗಿ ಹೋರಾಟ ನಡೆಸಿದರೂ ಪರಿಹಾರ ಸಿಗುತ್ತಿಲ್ಲ. ಸೂಕ್ತ ಉತ್ತರ ನೀಡದ ಹೊರತು ನಾನು ಸದನದಲ್ಲೇ ಮಲಗುತ್ತೇನೆ. ಅದಕ್ಕಾಗಿ ಶಾಲು ತಂದಿದ್ದೇನೆ ಎಂದರು.

ಇದಕ್ಕೆ ಉತ್ತರಿಸಿದ ಸಚಿವ ಆರ್.ಅಶೋಕ್, ಇದು ನಮ್ಮ ಅವಧಿಯಲ್ಲಿ ನಡೆದಿದ್ದು ಅಲ್ಲ. ಆದರೂ, ಸಮಸ್ಯೆಗೆ ಪರಿಹಾರ ಕಲ್ಪಿಸುವುದು ನಮ್ಮ ಕರ್ತವ್ಯವಾಗಿದೆ. ಈಗಾಗಲೇ ಅರಣ್ಯ ಇಲಾಖೆ ಅಧಿಕಾರಿಗಳ ಜೊತೆಗೆ ಎರಡು ಸುತ್ತಿನ ಸಭೆ ನಡೆಸಿದ್ದೇವೆ. ಈ ಹಿಂದೆ ಬೇಕಾಬಿಟ್ಟಿಯಾಗಿ ಅಧಿಕಾರಿಗಳು ಅವೈಜ್ಞಾನಿಕವಾಗಿ ಡೀಮ್ಡ್ ಫಾರೆಸ್ಟ್‌ಗೆ ಸ್ಥಳ ನೀಡಿದ್ದಾರೆ. 10ಲಕ್ಷ ಹೆಕ್ಟೇರ್ ಪ್ರದೇಶವು ಡೀಮ್ಡ್ ಫಾರಸ್ಟ್ ವ್ಯಾಪ್ತಿಯಲ್ಲಿದೆ. ಇದರಲ್ಲಿ ಕುಂದಾಪುರ, ಉಡುಪಿ, ಕಾರ್ಕಳ, ಬೈಂದೂರು, ಬ್ರಹ್ಮಾವರ, ಕಾಪು, ಹೆಬ್ರಿ ಈ ಪ್ರದೇಶದಲ್ಲಿರುವ ಜನರು ಮನೆ ನಿರ್ಮಾಣ ಮಾಡಿಕೊಂಡು ಕೃಷಿ ಆರಂಭಿಸಿದ್ದು, ಅವರಿಗೆ ಹಕ್ಕು ಪತ್ರ ಸಿಕ್ಕಿಲ್ಲ. ಈ ಹಿನ್ನೆಲೆಯಲ್ಲಿ ಅಫಿಡಿವಿಟ್ ಸಲ್ಲಿಸುವ ಬಗ್ಗೆ ಕಾನೂನು ಇಲಾಖೆ ಜೊತೆ ಚರ್ಚಿಸಲಾಗಿದೆ. ಈ ಮೂಲಕ ಅರಣ್ಯ ಇಲಾಖೆಯಿಂದ ಜಮೀನು ಮರಳಿ ಪಡೆಯಲಿದ್ದೇವೆ ಎಂದರು.

ಸಚಿವರ ಉತ್ತರದಿಂದ ಅಸಮಧಾನ ವ್ಯಕ್ತಪಡಿಸಿದ ಪ್ರತಿಪಕ್ಷ ನಾಯಕ ಎಸ್.ಆರ್. ಪಾಟೀಲ್ ಮತ್ತು ಪ್ರತಾಪಚಂದ್ರ ಶೆಟ್ಟಿ, ನಿಯಮ 53,94(ಸಿ) ಅಡಿಯಲ್ಲಿ ಮಂಜೂರು ಮಾಡಿದ ಭೂಮಿಯನ್ನು ಅರಣ್ಯ ಇಲಾಖೆ ಹಲವೆಡೆ ಮರಳಿ ಪಡೆದಿದೆ. ಸ್ಥಳೀಯ ಗ್ರಾಮಪಂಚಾಯಿತಿ ಅಧಿಕಾರಿಗಳು ಮಾಲೀಕರಿಗೆ ಕಿರುಕುಳ ನೀಡುತ್ತಿದ್ದಾರೆ. ಕಂದಾಯ ಇಲಾಖೆ ಮತ್ತು ಗ್ರಾಮಪಂಚಾಯಿತಿ ಅಧಿಕಾರಿಗಳು ಜಂಟಿ ಸಮೀಕ್ಷೆ ನಡೆಸಿ ಹಕ್ಕು ಪತ್ರ ನೀಡಿದೆ. ಆದರು ಅರಣ್ಯ ಇಲಾಖೆ ಮಧ್ಯಪ್ರವೇಶಿಸಿ ಜಮೀನು. ಮನೆ ಮರಳಿ ಪಡೆಯುತ್ತಿವೆ ಎಂದು ಆರೋಪಿಸಿದರು. ಈ ವೇಳೆ ಏರು ಧ್ವನಿಯಲ್ಲಿ ಪ್ರತಾಪಚಂದ್ರ ಶೆಟ್ಟಿ ಮಾತನಾಡಿ, ನನಗೆ ನ್ಯಾಯ ಬೇಕು . ಇಲ್ಲವಾದರೆ, ನಾನು ಇಲ್ಲೇ ಮಲಗುತ್ತೇನೆ ಎಂದರು. ಇದಕ್ಕೆ ಈ

ವಿಚಾರವನ್ನು ಅರ್ಧಗಂಟೆ ಚರ್ಚೆಗೆ ಅವಕಾಶ ಕಲ್ಪಿಸುವುದು ಸಭಾಪತಿ ಹೇಳಿದ ಬಳಿಕ ಸಭಾಧ್ಯಕ್ಷ ಪೀಠದ ಮುಂದಿನ ಸ್ಥಳದಿಂದ ತಮ್ಮ ಆಸನದತ್ತ ಬಂದರು.

**ನಿಮ್ಮ ಭಿಕ್ಷೆ ನಮಗೆ ಬೇಡ:** ಸಚಿವ ಆರ್. ಅಶೋಕ್ ಉತ್ತರಿಸುತ್ತಿದ್ದ ಸಂದರ್ಭದಲ್ಲಿ ಉತ್ತರ ಪೂರ್ಣಗೊಳ್ಳುವ ಮೊದಲೇ ಶೆಟ್ಟಿ ಪ್ರಶ್ನೆ ಮಾಡುತ್ತಿದ್ದರು. ಇದನ್ನು ಸುನೀಲ್‌ಕುಮಾರ್ ಖಂಡಿಸಿದರು. ಈ ಸಂದರ್ಭದಲ್ಲಿ ಅಶೋಕ, 'ಮಾತನಾಡಲಿ ಬಿಡಿ. ಅವರ ಕೊನೆ ಭಾಷಣ' ಎಂದು ಮೊದಲೇ ತಿಳಿಸಿದ್ದಾರೆ ಎಂದು ವ್ಯಂಗವಾಡಿದರು. ಇದಕ್ಕೆ ಸಿಟ್ಟಾದ ಪ್ರತಾಪಚಂದ್ರ ಶೆಟ್ಟಿ, ನಿಮ್ಮ ಭಿಕ್ಷೆ ನಮಗೆ ಬೇಡ, ಯಾರ ಭಿಕ್ಷೆಯಲ್ಲೂ ನಾನು ರಾಜಕೀಯಕ್ಕೆ ಬಂದಿಲ್ಲ ಎಂದು ನೇರ ನುಡಿದರು. ನೀವು ಏನೂ ಅನ್ನೋದು ನನಗೆ ಗೊತ್ತು. ರಾಜಕಾರಣ ನನಗೂ ಗೊತ್ತು ಎಂದು ಸುನೀಲ್‌ಕುಮಾರ್ ಮರು ಉತ್ತರಿಸಿದರು.

**2,483 ಕೋಟಿ ರೂ. ಸಾಲ ಮನ್ನಾ:** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ರಾಜ್ಯದ ಯೋಜನೆಗಳಲ್ಲಿ ಪಡೆದಿದ್ದ ಒಟ್ಟು ರೂ.2,483 ಕೋಟಿ ಸಾಲ ಮನ್ನಾ ಮಾಡಲಾಗಿದೆ ಎಂದು ವಸತಿ ಸಚಿವ ವಿ. ಸೋಮಣ್ಣ ತಿಳಿಸಿದರು. ಪರಿಷತ್ ಪ್ರಶ್ನೋತ್ತರ ವೇಳೆಯಲ್ಲಿ ಕಾಂಗ್ರೆಸ್‌ನ ಆರ್.ಬಿ.ತಿಮ್ಮಾಪುರ ಅವರು, ಸರ್ಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮನೆ ನಿರ್ಮಾಣ ಮಾಡಿಕೊಳ್ಳಲು ಹೆಚ್ಚಿನ ಸಹಾಯ ಧನ ನೀಡಬೇಕು. ಸಬ್ಸಿಡಿ ನೀಡಬೇಕೆಂದು ಆಗ್ರಹಿಸಿದರು. ಇದಕ್ಕೆ ಉತ್ತರಿಸಿದ ಸಚಿವ ಸೋಮಣ್ಣ, ನಮ್ಮ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಸಾಲಕ್ಕಾಗಿ ಇಡಲಾಗಿದ್ದ ಅಡಮಾನ ತೆಗೆದು ಹಾಕಿದ್ದೇವೆ ಎಂದರು.

ಸಾಲ ಇಲ್ಲದೆ, ಮನೆ ನಿರ್ಮಾಣವೇ ನಮ್ಮ ಗುರಿಯಾಗಿದೆ. 2000ನೇ ಸಾಲಿನಿಂದ 2009–10ನೇ ಸಾಲಿನವರೆಗೆ ರಾಜ್ಯದಲ್ಲಿ ಅಕ್ರಮ ಮತ್ತು ವಿವಿಧ ವಸತಿ ಯೋಜನೆಗಳ ಅಡಿಯಲ್ಲಿ ಗ್ರಾಮೀಣ ಪ್ರದೇಶದ ಸಾಮಾನ್ಯ ವರ್ಗದವರಿಗೆ ಘಟಕದ ವೆಚ್ಚದ ಶೇ.50 ಸಾಲ ಮತ್ತು ಉಳಿದ ಶೇ.50 ಸಹಾಯಧನ ರೂಪದಲ್ಲಿ ನೀಡಲಾಗುತ್ತಿದೆ. ನಗರ ಪ್ರದೇಶದ ಸಾಮಾನ್ಯ ವರ್ಗದವರಿಗೆ ಘಟಕದ ವೆಚ್ಚದ ಪೂರ್ಣ ಮೊತ್ತವನ್ನು ಸಾಲದ ರೂಪದಲ್ಲಿ ನೀಡಲಾಗುತಿತ್ತು. ಆದರೆ, ಎಸ್‌ಸಿ–ಎಸ್.ಟಿ. ವರ್ಗದ ಫಲಾನುಭವಿಗಳಿಗೆ ಘಟಕದ ವೆಚ್ಚದ ಪೂರ್ಣ ಮೊತ್ತವನ್ನು ಸಹಾಯಧನ ರೂಪದಲ್ಲಿ ನೀಡಲಾಗುತ್ತಿದೆ. ಆದರೆ, ಸಾಲ ಪಡೆದಿರುವ ಪ್ರಕರಣಗಳೂ ಸದ್ಯಕ್ಕಿಲ್ಲ ಎಂದರು.

ಇದೇ ವೇಳೆ ಕಾಂಗ್ರೆಸ್ಸಿನ ಸಿ.ಎಂ ಇಬ್ರಾಹಿಂ ಮಾತನಾಡಿ, ಬೇಡ ಮತ್ತು ಜಂಗಮ ವರ್ಗದವರಿಗೆ ಏನು ನೀಡಿದ್ದೀರಾ ಎಂದು ಪ್ರಶ್ನಿಸಿದರು. ಇದಕ್ಕೆ ಪ್ರತಿಕ್ರಿಯಿಸಿದ ಸೋಮಣ್ಣ, ಬೇಡ, ಜಂಗಮ ಸಮುದಾಯಕ್ಕೆ ದೇವರಾಜ್‌ಅರಸ್ ನಿಗಮದಿಂದ 35 ಸಾವಿರ ಮನೆಗಳನ್ನು ನಿರ್ಮಾಣ ಮಾಡಿ ಹಂಚಿಕೆ ಮಾಡಲಾಗಿದೆ ಎಂದರು.

ಆಧಾರ: ವಿಜಯವಾಣಿ, ದಿನಾಂಕ:23.12.2021.

## 140. ಪ್ರತಿ ಪಕ್ಷಗಳ ಸಭಾತ್ಯಾಗದ ಮಧ್ಯೆ ವಿಧೇಯಕಕ್ಕೆ ಅಂಗೀಕಾರ

ಬಿಬಿಎಂಪಿ ಸೇರಿದಂತೆ ಮಹಾನಗರ ಪಾಲಿಕೆಗಳಲ್ಲಿ ಈಗಾಗಲೇ ಸಂಗ್ರಹಿಸಿರುವ ವಿವಿಧ ಶುಲ್ಕಗಳನ್ನು ವಾಪಸ್ ನೀಡದೇ ಇರಲು ಅವಕಾಶ ಕಲ್ಪಿಸುವ ಮಹಾನಗರ ಪಾಲಿಕೆ ಮತ್ತು ಇತರ ಕಾನೂನು ವಿಧೇಯಕಕ್ಕೆ ಪ್ರತಿಪಕ್ಷ ಸದಸ್ಯರ ಸಭಾತ್ಯಾಗದ ಮಧ್ಯೆ ಅನುಮೋದನೆ ಪಡೆಯಲಾಯಿತು.

ಕಾನೂನು ಪರಿಮಿತಿ ಮೀರಿ ವಿಧೇಯಕ ಸಿದ್ಧಪಡಿಸಲಾಗಿದೆ. ಇದಕ್ಕೆ ಒಪ್ಪಿಗೆ ನೀಡಲು ಸಾಧ್ಯವಿಲ್ಲ ಎಂದು ಹೇಳಿದ ಪ್ರತಿಪಕ್ಷ ಸದಸ್ಯರು ಎಸ್.ಆರ್.ಪಾಟೀಲ್ ನೇತೃತ್ವದಲ್ಲಿ ಸಭಾತ್ಯಾಗ ಮಾಡಿದರು. ಬಳಿಕ ಧ್ವನಿಮತದ ಮೂಲಕ ವಿಧೇಯಕಕ್ಕೆ ಒಪ್ಪಿಗೆ ಪಡೆಯಲಾಯಿತು.

ವಿಧಾನಸಭೆಯಲ್ಲಿ ಅಂಗೀಕಾರದ ಮಹಾನಗರ ಪಾಲಿಕೆ ಮತ್ತು ಇತರ ಕಾನೂನು ವಿಧೇಯಕವನ್ನು ನಗರಾಭಿವೃದ್ಧಿ ಸಚಿವ ಭೈರತಿ ಬಸವರಾಜು ಪರವಾಗಿ ಮಂಡಿಸಿದ ಸಚಿವ ಡಾ.ಸಿ.ಎನ್.ಅಶ್ವತ್ಥನಾರಾಯಣ, ಸರ್ಕಾರ ಕಾಯಿದೆ ರೂಪಿಸಿದೆ ಲೈಸೆನ್ಸ್ ಶುಲ್ಕ, ಕಟ್ಟಡ ಸುರಕ್ಷತಾ ಶುಲ್ಕ ಸೇರಿದಂತೆ ಜನರಿಂದ ಈಗಾಗಲೇ ಹಲವಾರು ಶುಲ್ಕಗಳನ್ನು ಸಂಗ್ರಹಿಸಿದ್ದರಿಂದ ಕೋರ್ಟ್ ಮಧ್ಯೆ ಪ್ರವೇಶಿಸಿ ಶುಲ್ಕವನ್ನು ಜನರಿಗೆ ವಾಪಸ್ ಮಾಡುವಂತೆ ಆದೇಶಿಸಿದೆ. ಸರ್ಕಾರ ಅರ್ಹವಾಗಿಯೇ ಈ ಶುಲ್ಕ ಸಂಗ್ರಹಿಸಿದ್ದರಿಂದ ಅದನ್ನು ಮರಳಿಸಲು ಸಾಧ್ಯವಿಲ್ಲ. ಅದಕ್ಕಾಗಿ ಈ ವಿಧೇಯಕ ಮಂಡಿಸಲಾಗುತ್ತಿದೆ ಎಂದು ಹೇಳಿದರು.

ಇದಕ್ಕೆ ವಿರೋಧ ವ್ಯಕ್ತಪಡಿಸಿದ, ಪ್ರತಿಪಕ್ಷದ ನಾಯಕ ಎಸ್.ಆರ್.ಪಾಟೀಲ್, ಇದು ಹಗಲು ದರೋಡೆಯಾಗುತ್ತದೆ. ಅಂದಿರುವ ಕಾನೂನು ಇಂದ್ಯಾಕೆ ನಮ್ಮಲ್ಲಿ ಅನ್ವಯವಾಗುತ್ತಿಲ್ಲ. ಕಾನೂನು ಪ್ರಕಾರ ಇರುವವರನ್ನು ಲೂಟಿ ಮಾಡಿ ಕಳ್ಳರಿಗೆ ರಕ್ಷಣೆ ನೀಡುತ್ತೀರಿ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಕಾಂಗ್ರೆಸ್ಸಿನ ತಿಪ್ಪೇಸ್ವಾಮಿ ಮಾತನಾಡಿ, ಕರ್ನಾಟಕ ಮುನ್ಸಿಪಲ್ ಕಾಯಿದೆಗೆ ತಿದ್ದುಪಡಿ ತಂದು ಅದನ್ನು ಬಿಬಿಎಂಪಿ ವ್ಯಾಪ್ತಿಯಲ್ಲಿ ಜಾರಿಗೊಳಿಸಲು ಸಾಧ್ಯವಾಗುತ್ತಿಲ್ಲ ಎಂದು ಹೇಳಿದಾಗ, ಧ್ವನಿ ಗೂಡಿಸಿದ ಬಿ.ಕೆ.ಹರಿಪ್ರಸಾದ್, ಬೆಂಗಳೂರಿನ ಭವಿಷ್ಯದ ವಿಚಾರವಾದ್ದರಿಂದ ವಿಧೇಯಕ ವಾಪಸ್ ಪಡೆಯಿರಿ ಎಂದು ಆಗ್ರಹಿಸಿದರು.

ಬಿಬಿಎಂಪಿಗೆ ತೊಂದರೆ ನೀಡಬೇಕು ಎಂಬುದು ನಮ್ಮ ಉದ್ದೇಶವಲ್ಲ. ಆದರೆ, ತೆರಿಗೆ ಸಂಗ್ರಹ ಸರಿಯಾಗಿ ಮತ್ತು ಕಾನೂನು ಬದ್ಧವಾಗಿ ಇರುಬೇಕು. ಆದ್ದರಿಂದ ಈ ವಿಧೇಯಕ ವಾಪಸ್ ಪಡೆದು ಇನ್ನಷ್ಟು ತಿದ್ದುಪಡಿ ಮಾಡಿಕೊಂಡು ಬನ್ನಿ ಎಂದು ಸಲಹೆ ಮಾಡಿದರು.

ಸಚಿವ ಅಶ್ವತ್ಥ್‌ನಾರಾಯಣ್ ಉತ್ತರಿಸಿ, ಸಣ್ಣ ಪುಟ್ಟ ಗೊಂದಲವನ್ನು ಬಗೆಹರಿಸಿ ಇದನ್ನು ಜಾರಿಗೆ ತರುವುದೇ ನಮ್ಮ ಉದ್ದೇಶ. ಬೈಲಾ ಪ್ರಕಾರ ಮಾಡಿದ ತೆರಿಗೆ ಸಂಗ್ರಹಕ್ಕೆ ಕಾನೂನು ಬಲ ನೀಡುವ ಉದ್ದೇಶದಿಂದ ವಿಧೇಯಕ ತರಲಾಗಿದೆ. ಆದ್ದರಿಂದ ಇದಕ್ಕೆ ಒಪ್ಪಿಗೆ ನೀಡಿ ಎಂದು ಮನವಿ ಮಾಡಿದರು. ಅಲ್ಲದೆ, ವಿಧೇಯಕವನ್ನು ಅಂಗೀಕರಿಸುವ ಪ್ರಸ್ತಾಪವನ್ನು ಮಂಡಿಸಿದರು.

ಇದಕ್ಕೆ ಆಕ್ರೋಶ ವ್ಯಕ್ತಪಡಿಸಿದ ಪ್ರತಿಪಕ್ಷ ಸದಸ್ಯರು ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತಾ ಸಭಾತ್ಯಾಗ ಮಾಡಿದರು. ಬಳಿಕ ವಿಧೇಯಕಕ್ಕೆ ಅನುಮೋದನೆ ಪಡೆಯಲಾಯಿತು.

ಈ ಮಧ್ಯೆಯೆ ಪ್ರತಿಪಕ್ಷನಾಯಕ ಎಸ್.ಆರ್.ಪಾಟೀಲ್ ಸರ್ಕಾರದ ಕುರಿತು ಡಕಾಯಿತಿ ಎಂಬ ಪದ ಬಳಸಿದ್ದು, ಇದು ಅವರ ಘನತೆಗೆ ಶೋಭೆ ತರುವುದಿಲ್ಲ. ಈ ಪದದ ಬಗ್ಗೆ ತಮ್ಮ ಆಕ್ಷೇಪವಿದ್ದು, ಕಡತದಿಂದ ತೆಗೆದುಹಾಕಬೇಕು ಎಂದು ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ ಆಗ್ರಹಿಸಿದರು.

ಆಧಾರ:ವಿಶ್ವವಾಣಿ, ದಿನಾಂಕ:23.12.2021.

## 141. ಸುವರ್ಣಸೌಧ ಬಳಿ ಪ್ರತಿಭಟನೆಗಳ ಸುರಿಮಳೆ

ವಿಧಾನಮಂಡಲ ಚಳಿಗಾಲ ಅಧಿವೇಶನದ 8ನೇ ದಿನ ವಿವಿಧ ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿ ನಾನಾ ಸಂಘಟನೆಗಳ ಕಾರ್ಯಕರ್ತರು ಸುವರ್ಣ ವಿಧಾನ ಸೌಧದ ಬಳಿ ಪ್ರತಿಭಟನೆ ನಡೆಸಿದರು.

**ಉದ್ಯೋಗದಲ್ಲಿ ಮೀಸಲಾತಿ ನೀಡಿ:** 'ಕೇಂದ್ರ ಸರ್ಕಾರದ ಮಾದರಿಯಲ್ಲಿ ರಾಜ್ಯ ಸರ್ಕಾರದ ಮಾದರಿಯಲ್ಲಿ ರಾಜ್ಯ ಸರ್ಕಾರವೂ ವಿವಿಧ ಹುದ್ದೆಗಳ ನೇಮಕಾತಿ ವೇಳೆ ಮೀಸಲಾತಿ ನೀಡಬೇಕು' ಎಂದು ಒತ್ತಾಯಿಸಿ ಎನ್‌ಸಿಸಿ ಕೆಡೆಟ್‌ಗಳು ಪ್ರತಿಭಟಿಸಿದರು. 'ನೆರೆ ಹಾಗೂ ಕೋವಿಡ್–19 ನಿರ್ವಹಣೆಗೆ

ಸರ್ಕಾರ ನಮ್ಮ ಸೇವೆ ಬಳಸಿಕೊಳ್ಳುತ್ತದೆ. ಹಲವು ಸಾಮಾಜಿಕ ಕೆಲಸಗಳಲ್ಲೂ ನಮ್ಮನ್ನೂ ತೊಡಗಿಸಿಕೊಂಡಿದ್ದೇವೆ. ಹಾಗಾಗಿ ರಾಜ್ಯ ಸರ್ಕಾರ ನೇಮಕಾತಿ ವೇಳೆ ನಮಗೆ ಆದ್ಯತೆ ನೀಡಬೇಕು' ಎಂದು ಕೋರಿದರು. ಭೀರಪ್ಪ ಹೆಗ್ಗಮ್ಮನವರ, ರಾಹುಲ್ ಕುರಿಸಂಕಣ್ಣವರ, ಮಲ್ಲಿಕಾರ್ಜುನ ಮೂಲಿಮನಿ, ಪೂಜಾ ಆರೇರ, ಕೋಮಲ್ ಕಳ್ಳಿಮನಿ ಇದ್ದರು.

**ಸಹಾಯ ಧನ ಹೆಚ್ಚಿಸಿ:** ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಿ ಸ್ಲಂ ಜನಾಂದೋಲನ–ಕರ್ನಾಟಕ ಕಾರ್ಯಕರ್ತರು ಪ್ರತಿಭಟನೆ ನಡೆಸಿದರು. 'ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ಮನೆ ನಿರ್ಮಿಸಿಕೊಂಡ ಕೊಳಚೆ ಪ್ರದೇಶದ ನಿವಾಸಿಗಳಿಗೆ ನೀಡಲಾಗುವ ಸಬ್ಸಿಡಿಯನ್ನು 6 ಲಕ್ಷ ಹೆಚ್ಚಿಸಬೇಕು. ಯೋಜನೆ ಫಲಾನುಭವಿಗಳಿಗೆ ಹಕ್ಕುಪತ್ರ ವಿತರಿಸಬೇಕು. ರಾಜ್ಯದಲ್ಲಿರುವ 70 ಲಕ್ಷ ಜನ ನಿವೇಶನ ರಹಿತರಿಗೆ ಸೂರು ಒದಗಿಸಲು ಸಮಗ್ರ ವಸತಿ ಹಕ್ಕು ಕಾಯ್ದೆ ಜಾರಿಗೊಳಿಸಬೇಕು' ಎಂದು ಒತ್ತಾಯಿಸಿದರು. ರಾಜ್ಯ ಘಟಕದ ಸಂಚಾಲಕ ಎ.ನರಸಿಂಹಮೂರ್ತಿ, ಜಿಲ್ಲಾ ಘಟಕದ ಸಂಚಾಲಕ ಫಕ್ಕೀರಪ್ಪ ತಳವಾರ, ಶೋಭಾ ಕಮತಾರ, ರೇಣುಕಾ ಸರಡಗಿ, ಅಕ್ರಂ ಮಾಶಾಳ್ಕರ್ ಇದ್ದರು.

**ಸೀಟಿ ಊದಿ ಪ್ರತಿಭಟನೆ:** 'ಸರ್ಕಾರಿ ಪ್ರಾಥಮಿಕ, ಪ್ರೌಢಶಾಲೆ ಹಾಗೂ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ದೈಹಿಕ ಶಿಕ್ಷಣ ಶಿಕ್ಷಕರು ಮತ್ತು ಉಪನ್ಯಾಸಕರ ಹುದ್ದೆಗಳನ್ನು ತ್ವರಿತವಾಗಿ ಭರ್ತಿಗೊಳಿಸಬೇಕು' ಎಂದು ಒತ್ತಾಯಿಸಿ ರಾಜ್ಯ ನಿರುದ್ಯೋಗ ದೈಹಿಕ ಶಿಕ್ಷಣ ಶಿಕ್ಷಕರು ಮತ್ತು ಉಪನ್ಯಾಸಕರ ಹುದ್ದೆಗಳನ್ನು ತ್ವರಿತವಾಗಿ ಭರ್ತಿಗೊಳಿಸಬೇಕು' ಎಂದು ಒತ್ತಯಿಸಿ ರಾಜ್ಯ ನಿರುದ್ಯೋಗ ದೈಹಿಕ ಶಿಕ್ಷಣ ಶಿಕ್ಷಕರು ಸಂಘದವರು ಸೀಟಿ ಊದಿ ವಿನೂತನವಾಗಿ ಪ್ರತಿಭಟಿಸಿದರು.

'ಪ್ರತಿ ಶಾಲೆ ಹಾಗೂ ಕಾಲೇಜಿನಲ್ಲಿ ಕನಿಷ್ಠ ವಿದ್ಯಾರ್ಥಿಗಳಿದ್ದರೂ ಸಹ ದೈಹಿಕ ಶಿಕ್ಷಣ ಶಿಕ್ಷಕರು ಮತ್ತು ಉಪಾನ್ಯಾಸಕರನ್ನು ನೇಮಿಸಿಕೊಳ್ಳಬೇಕು. ನೇರ ನೇಮಕಾತಿ ಮಾಡಿಕೊಳ್ಳದಿದ್ದರೆ, ಸಮಾನ ವೇತನ ನೀಡಿ ನೇಮಕ ಮಾಡಿಕೊಳ್ಳಬೇಕು. ಬ್ಯಾಕ್ ಲಾಗ್ ಹುದ್ದೆ ಭರ್ತಿಗೊಳಿಸುವಾಗ ಸ್ಪರ್ಧಾತ್ಮಕ ಪರೀಕ್ಷೆ ಮಾತ್ರ ಪರಿಗಣಿಸಬೇಕು' ಎಂದು ಒತ್ತಾಯಿಸಿದರು. ಬಿ.ವೆಂಕಟೇಶ, ಮಹಾಂತೇಶ ವಡ್ಡಿನ, ಸುನೀಲ್ ಗೋಲಾ, ಅಪ್ಪಣ್ಣ ತಳವಾರ, ಮೌನೇಶ ಚಂದನಕೇರಿ ಇದ್ದರು.

**ಬಾಕಿ ಸಂಬಳ ಪಾವತಿಸಿ:** 'ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕು. ಲಾಕ್ ಡೌನ್ ಅವಧಿಯಲ್ಲಿ ಬಾಕಿ ಉಳಿಸಿ ಕೊಂಡಿರುವ ಸಂಬಳ ಪಾವತಿಸಬೇಕು' ಎಂದು ಆಗ್ರಹಿಸಿ ಕಸ್ತೂರಬಾ ಗಾಂಧಿ ಬಾಲಿಕಾ ವಿದ್ಯಾಲಯದ ಗುತ್ತಿಗೆ ನೌಕರರ ಸಂಘದವರು ಪ್ರತಿಭಟನೆ ನಡೆಸಿದರು. 'ಸೇವಾಭದ್ರತೆ ಒದಗಿಸಬೇಕು. ಸರ್ಕಾರದಿಂದ ನೇರವಾಗಿ ನೌಕರರ ಬ್ಯಾಂಕ್ ಖಾತೆಗೆ ವೇತನ ಸಂದಾಯವಾಗಬೇಕು' ಎಂದು ಒತ್ತಾಯಿಸಿದರು. ರಾಜ್ಯ ಘಟಕದ ಅಧ್ಯಕ್ಷ ಎನ್.ಎಸ್.ವೀರೇಶ್, ಮಂಜುಳಾ ನಂದಿ, ನೀಲಮ್ಮ ತಸದ, ಬಿ.ಜಿ.ಸುಕಾಲಿ ಇದ್ದರು.

**ದಲಿತ ಸಂಘರ್ಷ ಸಮಿತಿ ಪ್ರತಿಭಟನೆ:** ವಿವಿಧ ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿ ದಲಿತ ಸಂಘರ್ಷ ಸಮಿತಿ ಹಾಗೂ ಕರ್ನಾಟಕ ಜೈಭೀಮ್ ಸಂಘರ್ಷ ಸಮಿತಿಯವರು ಪ್ರತಿಭಟಿಸಿದರು. 'ಬೈಲಹೊಂಗಲ ತಾಲ್ಲೂಕಿನ 95 ಜನರು ಬೇಡ–ಜಂಗಮ ಖೋಟ್ಟಿ ಜಾತಿ ಪ್ರಮಾಣಪತ್ರ ಪಡೆದಿರುವುದು ಬೆಳಕಿಗೆ ಬಂದಿದೆ. ಆ ಪ್ರಮಾಣ ಪತ್ರಗಳನ್ನು ರದ್ದುಪಡಿಸಬೇಕು. ಅವುಗಳನ್ನು ನೀಡಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಬೇಕು. ಮಾಜಿ ದೇವದಾಸಿಯರ ಮಕ್ಕಳು ಮತ್ತು ಮೊಮ್ಮಕ್ಕಳಿಗೆ ಪುನರ್ವಸತಿ ಕಲ್ಪಿಸಬೇಕು. ದಲಿತರ ಅಭಿವೃದ್ಧಿಗೆ ಸರ್ಕಾರ ಹೆಚ್ಚಿನ ಅನುದಾನ ಮೀಸಲಿಡಬೇಕು' ಎಂದು ಒತ್ತಾಯಿಸಿದರು. ರಮೇಶ ರಾಯಪ್ಪ ಗೋಳ, ಶಂಕರ ಕೋರಿಕೊಪ್ಪ, ಸುರೇಶ ಕೆಳಗೇರಿ, ಪ್ರಕಾಶ ಮಾದಿಗರ, ಕಾಡಪ್ಪ ಮೇಸ್ತ್ರಿ, ಬಾಳೇಶ ಸಂತವ್ವಗೋಳ, ವಿಠ್ಠಲ ಸಣ್ಣಕ್ಕಿ ಇತರರಿದ್ದರು.

**ಅನುದಾನದಕ್ಕೆ ಒಳಪಡಿಸಿ:** '1987 ರಿಂದ 1995ರ ಅವಧಿಯಲ್ಲಿ ಆರಂಭಗೊಂಡ ಸಾಮಾನ್ಯ ಆಡಳಿತ ಮಂಡಳಿಗಳಿಗೆ ಸೇರಿದ 93 ಅನುದಾನ ರಹಿತ ಪದವಿ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಬೇಕು' ಎಂದು ಒತ್ತಾಯಿಸಿ ರಾಜ್ಯ ಅನುದಾನ ರಹಿತ ಪದವಿ ಕಾಲೇಜುಗಳ ನೌಕರರ ಕ್ಷೇಮಾಭಿವೃದ್ಧಿ ಸಂಘದ ಪದಾಧಿಕಾರಿಗಳು ಪ್ರತಿಭಟನೆ ನಡೆಸಿದರು.

'93 ಕಾಲೇಜುಗಳ ಪೈಕಿ 56 ಉತ್ತರ ಕರ್ನಾಟಕದಲ್ಲೇ ಇವೆ. 2 ಸಾವಿರಕ್ಕೂ ಅಧಿಕ ನೌಕರರಿದ್ದು. ಇಂದಿನ ದುಬಾರಿಯುಗದಲ್ಲಿ ಅತ್ಯಲ್ಪ ವೇತನದಲ್ಲಿ ಬದುಕು ಸಾಗಿಸುವುದು ಕಷ್ಟಕರವಾಗಿದೆ. ಇವೆಲ್ಲ ಕಾಲೇಜುಗಳು ಅಗತ್ಯ ಮೂಲಭೂತ ಸೌಕರ್ಯಗಳನ್ನು ಹೊಂದಿವೆ. ಹಾಗಾಗಿ ಎಲ್ಲ ಕಾಲೇಜುಗಳನ್ನು ಅನುದಾನಕ್ಕೆ ಒಳಪಡಿಸಬೇಕು' ಎಂದರು. ರಾಜ್ಯ ಘಟಕದ ಅಧ್ಯಕ್ಷ ಶಿವಾನಂದ ಹಾಗರಗಿ, ಎಸ್.ವಿ.ಯೋಗಾನಂದ, ಸುರೇಶ ಹನಗಂಡಿ, ಬಿ.ಜಿ.ಮಡ್ಲಿ, ಎಸ್.ಎಸ್.ಪಾಟೀಲ ಇದ್ದರು.

ಆಧಾರ:ಪ್ರಜಾವಾಣಿ, ದಿನಾಂಕ:23.12.2021.

## 142. ಸುವರ್ಣ ಸೌಧದ ಬಳಿ ಶಾಸಕರ ಭವನ ನಿರ್ಮಿಸಿ

ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ಶಾಸಕರ ಭವನ ನಿರ್ಮಿಸಬೇಕು ಎಂದು ಮಾಜಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಸಲಹೆ ನೀಡಿದರು.

ಉತ್ತರ ಕರ್ನಾಟಕ ಅಭಿವೃದ್ಧಿ ಕುರಿತ ಚರ್ಚೆಯಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ಈ ಭಾಗದ ಪ್ರವಾಸೋದ್ಯಮ ಬೆಳವಣಿಗೆ ದೃಷ್ಟಿಯಿಂದ ಸುವರ್ಣ ಸೌಧದಲ್ಲಿ ಶಾಸಕರಭವನ ನಿರ್ಮಿಸಬೇಕು, ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮದ (ಕೆಎಸ್‌ಟಿಡಿಸಿ) ಮೂಲಕ ಖಾಸಗಿಯವರ ಸಹಭಾಗಿತ್ವದಲ್ಲಿ ಈ ಕಾರ್ಯ ಕೈಗೆತ್ತಿಕೊಳ್ಳಬೇಕೆಂದರು.

ಸುವರ್ಣ ಸೌಧದ ಆವರಣದಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣ ಪ್ರತಿಮೆಗಳನ್ನು ಸ್ಥಾಪಿಸಲು ಮುಖ್ಯ ಮಂತ್ರಿಗಳು ಘೋಷಿಸಿದ್ದು ಶ್ಲಾಘನೀಯ. ಹಾಗೆಯೇ ಶಾಸಕರ ಭವನ ಸಹ ನಿರ್ಮಿಸಿ ಎಂದರು.

'ರಾಜ್ಯದಲ್ಲಿ ನನ್ನ ನೇತೃತ್ವದಲ್ಲಿನ ಪ್ರಥಮ ಬಿಜೆಪಿ ಸರ್ಕಾರದ ಅವಧಿಯಲ್ಲಿ ನೀರಾವರಿಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು. 2008–13ರ ಬಿಜಿಪಿ ಸರ್ಕಾರದ ಅವಧಿ ಸುವರ್ಣಯುಗವಾಗಿತ್ತು' ಎಂದು ಬಣ್ಣಿಸಿದ ಅವರು, ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬರುವ ಮುನ್ನ ಕೃಷ್ಣಾ ಮೇಲ್ದಂಡೆ ಯೋಜನೆಗೆ ಪ್ರತಿ ವರ್ಷ ರೂ.10 ಸಾವಿರ ಕೋಟಿ ಖರ್ಚು ಮಾಡುವುದಾಗಿ ಹೇಳಿತ್ತು. ಆದರೆ ವಾಗ್ದಾನದಂತೆ ನಡೆಯಲಿಲ್ಲ. ಆರೂವರೆ ವರ್ಷಗಳಲ್ಲಿ ಬರೀ ರೂ. 7 ಸಾವಿರ ಕೋಟಿ ಮಾತ್ರ ನೀಡಿದರೆಂದು ಟೀಕಿಸಿದರು.

ಬಿಜೆಪಿ ಅಧಿಕಾರಕ್ಕೆ ಬಂದ ನಂತರ ನೆನೆಗುದಿಗೆ ಬಿದ್ದಿದ್ದ ಕೊಪ್ಪಳ ಏತ ನೀರಾವರಿ ಯೋಜನೆ ಅನುಷ್ಠಾನಕ್ಕೆ ಮುಂದಾಗಿದ್ದೇವೆ. ಕಳಸಾ ಬಂಡೂರಿ, ಮಹದಾಯಿ ಯೋಜನೆ ಜಾರಿಗೆ ನಾವು ಬದ್ಧ, ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು 524.5 ಮೀಟರ್‌ಗೆ ಹೆಚ್ಚಿಸಲಿದ್ದೇವೆ ಎಂದರು. ತುಂಗಾಭದ್ರಾ ಜಲಾಶಯದ ಹೂಳಿನ ಸಮಸ್ಯೆ ನಿವಾರಣೆಗಾಗಿ ಗಂಗಾವತಿ ತಾಲ್ಲೂಕಿನ ನವಲಿ ಬಳಿ ಸಮನಾಂತರ ಜಲಾಶಯ ನಿರ್ಮಾಣಕ್ಕೆ ಈಗಾಗಲೇ ಡಿಪಿಆರ್ ಸಿದ್ಧವಾಗಿದ್ದು ಶೀಘ್ರ ಚಾಲನೆ ನೀಡಲಿವೆ ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:23.12.2021.

## 143. Council passes Ayush university bill

The legislative council has passed a bill to set up an ayush university in Karnataka, the first in Southern India. The bill passed smoothly although a few members questioned the need for such a varsity.

The university will cover all Ayush institutions that are currently operating under the Rajiv Gandhi University of Health Sciences (RGUHS). Health and Family Welfare Minister K Sudhakar tabled the bill.

Sudhakar said about 100 acres have been identified in a village in Shivamogga for the varsity. He said Shivamogga is an ideal place for the varsity as the Western Ghats is the home to thousands of medicinal plants. Sudhakar further said there is a mistrust in Ayush because of the lack standardised medicines. This facility will promote research to build confidence on Ayush practices among people.

MLC Maritibbegowda questioned the need for a new varsity when Rajiv Gandhi University of Health Sciences was functioning efficiently. He said he opposed the bill. Congress MLC CM Ibrahim said if the government fails to recognize Ayush doctors then the purpose of this new university will not be served. The leader of opposition in the house, S R Patil welcomed the bill and said this will help promote ayush practices.

The house passed an amendment to the University of Agriculture Sciences Bill to name a horticulture university at Shivamogga after Shivappa after Keladi Shivappa Nayaka. The council also passed amendment to the Inam Land Act.

**War of words:** MLC Pratap Chandra Shetty and Revenue Minister R Ashok was seen engaging in a war of words during question hour. Shetty compelled the minsister to grant deemed forest land to farmers in his area in Udupi district, to which Ashok did not yield. Later, Shetty threatened the state of staging protest triggering ward of words.

Courtesy:Times of India, Dated:23.12.2021

## 144. CM promises to increase session sittings from next year

Chief Minister Basavaraj Bommai said the government will try to increase the number of state legislature sittings, starting from the joint session in January. The move comes in the wake of criticism of the decline in the number of sittings, low attendance of MLAs, frequent disruptions and poor quality of debates.

In 2012, the 225-member assembly to transact business for at least 60 days a year. However, sessions have been held for less than 45 days in the the last few years and a record low of 32 days in 2021.

"We will conduct a longer legislature session, starting from the joint session in January followed by the budget one in February-March. We will even try to extend the

days for the next winter session to ensure MLAs get adequate time and chance to express grievances," Bommai told the legislative assembly.

Several MLAs cutting across party lines expressed concern over frequent disruptions, deteriorating quality of debates and poor turnout of MLAs, which has particularly been an issue during recent legislature sessions. "People have an impression that many law makers haven't been participating in the debates zealously and some also think usage of words and quality of debates has been deteriorating over the years. This is not done.If we don't use these powers and priviliges, we have only ourselves to blame. We need to keep traditions alive to save democratic institutions," said Speaker Vishweshwara Hegde, Kageri. He also expressed anguish over members not heeding his orders and taking more than the required time in debating issues.

The anguish were shared by senior legislators, including former Chief Ministers BS Yediyurappa, HD Kumaraswamy, Law Minister JC Madhuswamy, Former Speaker KR Ramesh kumar, Senior Congress MLA, R Ramalinga Reddy and JD(S) MLA HD Revanna.

Yediyurappa said it's the Speaker's duty to fix the time depending on the importance of the subject and ensure members stick to it. Responding to this, Kageri sought to know why senior party MLAs cause disorder in the house.

Congress MLA and former Law and Parliamentary Affairs Minister Krishna Byre Gowda urged the government to increase the time frame for the upcoming sessions to make sure every legislator gets enough time to speak about the issues plaguing their constituency." With members under pressure from people in their constituency, who are crucial for their political survival, they have to mandatorily raise several issues in the house. However, if time is restricted then they will decide to either not attend the assembly or speak out of turn,"said Gowda.

Revanna suggested the Speaker and Parliamentary Affairs Minister sit together to provide time for every party based on its strength, as is the case in parliament, and ensure the issue is debated within that time.

**PUBLIC MAY LOSE FAITH IN SYSTEM: SPEAKER**

The House is the temple that fulfils the expectations and aspirations of the people, and our conduct should be befitting to it. We have the responsibility to strengthen this system, our future generations will not forgive us. A lot of sacrifice and pain of our elders has gone into building this system. If we don't understand it and take this parliamentary and democratic system lightly, it will create anarchy. The public should not lose faith in us and the system.

Vishweshwar Hegde Kageri,Speaker.

A training programme for legislators is held when the new assembly comes into existence, but no one attends it, even whips don't look into the attendance of legislators. We

have to read and understand rules of procedures first… if everyone doesn't cooperate, how can the speaker alone run the house

KR Ramesh Kumar,Congress.

The house is there to legislate and formulate rules and we have not been able to concentrate on it for a single day, as no serious discussions are taking place due to the number of calling attention, and question hour and zero hours getting prolonged. Have we been able to debate on matters of public importance properly? Where are we debating? Are we utilizing talented members?

JC Madhuswamy, Law and Parliamentrary Affairs Minister.

Courtesy:Times of India, Dated:23.12.2021

## 145. KMC Bill passed amid Opposition walkout

The Karnataka Municipal Corporation and certain other law(amendment) Bill, 2021 was passed in the Legislative Council amid walk out by opposition parties during the winter session of the state legislative council.

Higher Education Minister Dr Ashwath Narayan CN tabled the Bill on behalf of Urban Development Minister B A Basavaraj, in the Council. The amended Bills are – Karnataka Municipal Corporation Act, 1976 and the Bruhat Bengaluru Mahanagara Palike Act. 2020.

Raising objection and demanding a review, MLC s P R Ramesh, Thippeswamy and Opposition Leader S R Patil said, "It is not correct in the legal aspects as the Bill is being brought to legalise Rs. 2362 crore tax collected in Bengaluru arbitrarily from property holders."

Patil termed the tax collected from the people of Bengaluru as "Dacoity" as it was collected without the binding of any law. The Court has already slapped the government many times for bringing such unscientific amendment. Bills should be brought earlier for levying the revised taxes or new taxes. However, this amendment. Bill is being brought to legalise the tax collected illegally earlier' he said.

In his reply, Ashwath Narayan said the tax was collected by framing a by -law in 2015. As the Court has passed an order to bring a law, the amendment Bill has been moved with a request to pass.

Courtesy:Indian Express, Dated:23.12.2021

## 146. Complete irrigation work in NK quickly: Legislators

HIGHLIGHTING pending irrigation projects and other development work in North Karnataka, Legislators called for implementation of the third phase of the Upper Krishna Project (UKP), while urging the Sate Government to put pressure on the Centre to issue gazette notification on the same and expedite the land acquisition process.

Congress' MB Patil said the land acquisition process has been vitiated due to confusion over the guidance value. The government should clear this.

Former CM H D Kumaraswamy said in the last 11 years, only 22,309 acres of land had been acquired out of the needed 1.33 lakh acres. Also, the majority of the released Rs. 13,320 crore for the project, has been spent on building main canals, but not distributaries.

He further charged that only some contractors had benefited from the project, and not farmers.

Courtesy:Indian Express, Dated:23.12.2021

## 147. ಮೇಲ್ಮನೆಯಲ್ಲಿ ಮತಾಂತರ ಮಸೂದೆ ಮಂಡನೆ ವಿಫಲ

ವಿಧಾನಸಭೆಯಲ್ಲಿ ಅಂಗೀಕಾರ ಪಡೆದಿರುವ ಮತಾಂತರ ನಿಷೇಧ ವಿಧೇಯಕವನ್ನು ವಿಧಾನಪರಿಷತ್ತಿನಲ್ಲೂ ಮಂಡಿಸಲು ರಾಜ್ಯ ಸರ್ಕಾರ ಇನ್ನಿಲ್ಲದ ಪ್ರಯತ್ನ ನಡೆಸಿದರೂ ಪ್ರತಿಪಕ್ಷಗಳ ತೀವ್ರ ವಿರೋಧದ ಹಿನ್ನೆಲೆಯಲ್ಲಿ ವಿಫಲವಾಯಿತು. ಈ ಮಧ್ಯೆ ಮಾತುಕತೆ ಸಂಧಾನದ ಹೈಡ್ರಾಮ ಕೂಡ ನಡೆಯಿತು.

ಕೊನೆಗೆ ಸಭಾಪತಿಗಳ ಕಛೇರಿಯಲ್ಲಿ ಆಡಳಿತ ಮತ್ತು ಪ್ರತಿಪಕ್ಷ ಮುಖಂಡರ ನಡುವೆ ನಡೆದ ಸಂಧಾನ ಸಭೆ ಬಳಿಕ ಸರ್ಕಾರ ಈ ಮಸೂದೆ ಮಂಡನೆಯ ನಿರ್ಧಾರದಿಂದ ಹಿಂದೆ ಸರಿದು, ಬರುವ ಜನವರಿಯಲ್ಲಿ ನಡೆಯುವ ಅಧಿವೇಶನದಲ್ಲಿ ಮಂಡಿಸುವುದಾಗಿ ಹೇಳಿದ ಬಳಿಕ ಸದನವನ್ನು ಅನಿರ್ದಿಷ್ಟಾವಧಿಗೆ ಮುಂದೂಡಲಾಯಿತು.

ಪರಿಷತ್ ಕಾರ್ಯಕಲಾಪ ಪಟ್ಟಿಯಲ್ಲಿ ಮತಾಂತರ ನಿಷೇಧ ಮಸೂದೆ ಮಂಡನೆ ವಿಚಾರ ಇಲ್ಲದಿದ್ದರೂ ಸರ್ಕಾರ ಸಭಾಪತಿ ಅವರಿಗೆ ಹೆಚ್ಚುವರಿ ಪಟ್ಟಿ ನೀಡುವ ಮೂಲಕ ವಿಧೇಯಕ ಮಂಡನೆಗೆ ಭೋಜನ ವಿರಾಮದ ನಂತರ ಪ್ರಯತ್ನ ನಡೆಸಿತು. ಆದರೆ ಇದಕ್ಕೆ ಪ್ರತಿಪಕ್ಷ ಕಾಂಗ್ರೆಸ್ ಹಾಗೂ ಜೆಡಿಎಸ್ ತೀವ್ರ ವಿರೋಧ ವ್ಯಕ್ತಪಡಿಸಿದವು. ಕಲಾಪ ಪಟ್ಟಿಯಲ್ಲೇ ಇಲ್ಲದ ವಿಷಯವನ್ನು ಮಂಡನೆಗೆ ತಂದಿರುವುದು ಸರಿಯಲ್ಲ. ಅಲ್ಲದೆ ಅದು ಅಂತಹ ಜರೂರು ವಿಷಯವು ಅಲ್ಲ. ಉತ್ತರ ಕರ್ನಾಟಕ ಭಾಗದ ಸಮಸ್ಯೆಗಳ ಚರ್ಚೆಗೆ ನಮ್ಮ ಅನೇಕ ಸದಸ್ಯರಿಗೆ ಅವಕಾಶ ಸಿಕ್ಕಲ್ಲ. ನಮ್ಮ ಪಕ್ಷದ ಅನೇಕ ಸದಸ್ಯರು ಈಗಾಗಲೇ ಸದನದಿಂದ ನಿರ್ಗಮಿಸಿದ್ದಾರೆ. ಸದನದಲ್ಲಿ ಸಂಖ್ಯಾಬಲ ಇಲ್ಲದ ಸರ್ಕಾರ ಈ ಸಮಯ ನೋಡಿಕೊಂಡು ಕಾಯ್ದೆ ತರಲು ಮುಂದಾಗಿರುವುದು ಸರಿಯಲ್ಲ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಕಲಾಪ ಮಧ್ಯಾಹ್ನವೇ ಮುಕ್ತಾಯವಾಗುತ್ತದೆ ಎಂದು ಉಪ ಸಭಾಪತಿ ಸೇರಿದಂತೆ ಕೆಲ ಸದಸ್ಯರು ತಮ್ಮ ಊರಿನತ್ತ ಪ್ರಯಾಣವನ್ನು ಬೆಳೆಸಿದ್ದರಿಂದ ಕಾಂಗ್ರೆಸ್ ಸದಸ್ಯರ ಸಂಖ್ಯಾಬಲ ಸದನದಲ್ಲಿ ಕಡಿಮೆ ಇತ್ತು. ಇದನ್ನೇ ಸದುಪಯೋಗ ಮಾಡಿಕೊಳ್ಳಲು ತನ್ನ ಸದಸ್ಯರನ್ನೆಲ್ಲಾ ಹಿಡಿದಿಟ್ಟುಕೊಂಡಿದ್ದ ಆಡಳಿತ ಪಕ್ಷ ಬಿಜೆಪಿ ಸದನದಲ್ಲಿ ಕಾಂಗ್ರೆಸ್‌ಗಿಂತ ಹೆಚ್ಚು ಸಂಖ್ಯಾ ಬಲವಿರುವಂತೆ ನೋಡಿಕೊಂಡಿತ್ತು. ಊರುಗಳತ್ತ ತೆರಳಿದ್ದ ಪರಿಷತ್‌ನ ಸದಸ್ಯರಿಗೆ ಹಿಂದಿರುಗುವಂತೆ ನಿರ್ದೇಶಿಸಿತ್ತು. ಧಾರವಾಡ ತಲುಪಿದ್ದ ಪ್ರಾಣೇಶ್‌ರನ್ನು ವಾಪಸ್ ಕರೆಸಿಕೊಳ್ಳಲಾಗಿತ್ತು.

ಆಧಾರ:ಕನ್ನಡ ಪ್ರಭ, ದಿನಾಂಕ:25.12.2021

## 148. ಬೆಳಗಾವಿಯಲ್ಲಿ ಶಾಸಕರ ಭವನ ನಿರ್ಮಾಣ, ಎರಡು ಬಾರಿ ಕಲಾಪ

ಬೆಳಗಾವಿಯಲ್ಲಿ ಶಾಸಕರ ಭವನ ಮತ್ತು ಸಚಿವಾಲಯ ನಿರ್ಮಾಣದ ಪ್ರಸ್ತಾವ ಕುರಿತು ಮುಖ್ಯಮಂತ್ರಿ ಜೊತೆ ಚರ್ಚಿಸಲಾಗಿದೆ ಎಂದು ವಿಧಾನಪರಿಷತ್ ಸಭಾಪತಿಯವರು ತಿಳಿಸಿದರು.

ಸುವರ್ಣ ವಿಧಾನಸೌಧದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು ಇನ್ನು ಮುಂದೆ ಬೆಳಗಾವಿಯಲ್ಲಿ ವರ್ಷದಲ್ಲಿ ಎರಡು ಬಾರಿ ವಿಧಾನಮಂಡಲದ ಕಲಾಪವನ್ನು ನಡೆಸುವ ಪ್ರಸ್ತಾಪವನ್ನು ಸಲ್ಲಿಸಲಾಗಿದೆ. ವಿಧಾನ ಪರಿಷತ್ತಿನ ಘನತೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಹೊಸ ಸದಸ್ಯರಿಗೆ ತರಬೇತಿ ಕಾರ್ಯಕ್ರಮ ಆಯೋಜಿಸಲು ನಿರ್ಧರಿಸಲಾಗಿದ್ದು, ಮಾದರಿ ವಿಧಾನ ಪರಿಷತ್ ಆಗಿ ರೂಪಿಸಲಾಗುವುದು ಎಂದರು.

ಈ ಬಾರಿ ಕಲಾಪಗಳಲ್ಲಿ ಉತ್ತರ ಕರ್ನಾಟಕ ಭಾಗದ ಸಮಸ್ಯೆಗಳ ಕುರಿತು ಸಮಗ್ರವಾಗಿ ಚರ್ಚಿಸಲು ಸಾಧ್ಯವಾಗಿದೆ. ಒಟ್ಟು 11 ಗಂಟೆ ಕಾಲ ಉತ್ತರ ಕರ್ನಾಟಕ ಅಭಿವೃದ್ಧಿ ಕುರಿತು ಎಲ್ಲಾ ಸದಸ್ಯರು ಸಕ್ರಿಯವಾಗಿ ಚರ್ಚೆಯಲ್ಲಿ ಭಾಗವಹಿಸಿದ್ದಾರೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ:25.12.2021

## 150. ವಿಧಾನಸಭೆ: ಶೇ% 75 ಸದಸ್ಯರಷ್ಟೇ ಹಾಜರು

ಈ ಬಾರಿಯ ಅಧಿವೇಶನದಲ್ಲಿ ಶೇ.75%ರಷ್ಟು ಸದಸ್ಯರು ಹಾಜರಾಗಿದ್ದರು ಎಂದು ವಿಧಾನ ಸಭಾಧ್ಯಕ್ಷರು ಹೇಳಿದರು.

ವಿಧಾನಸಭೆಯಲ್ಲಿ ಕಲಾಪವನ್ನು ಅನಿರ್ದಿಷ್ಟಾವಧಿಗೆ ಮುಂದೂಡಿದ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಅವರು ಸದನಕ್ಕೆ ಗೈರುಹಾಜರಾಗಲು 8 ಸದಸ್ಯರು ಪೂರ್ವಾನುಮತಿ ಪಡೆದಿದ್ದರು ಎಂದರು.

ಈ ವರ್ಷ 40 ದಿನಗಳ ಅಧಿವೇಶನ ನಡೆದಿದೆ. ಪ್ರತಿವರ್ಷ 60 ದಿನಗಳ ಕಾಲ ಅಧಿವೇಶನ ನಡೆಯಬೇಕು ಎಂಬುದು ನಮ್ಮ ಹಂಬಲ. ಕೊರೋನಾ ಸೋಂಕಿನ ಕಾರಣದಿಂದ ಕಳೆದ ಎರಡು ವರ್ಷದಿಂದ 60 ದಿನಗಳು ಅಧಿವೇಶನ ನಡೆದಿರಲಿಲ್ಲ. ಮುಂದಿನ ವರ್ಷ ಹೆಚ್ಚಿನ ದಿನ ಅಧಿವೇಶನ ನಡೆಸುವ ಸಂಬಂಧ ಮುಖ್ಯಮಂತ್ರಿ ಅವರೊಂದಿಗೆ ಸಮಾಲೋಚನೆ ನಡೆಸುತ್ತೇನೆ ಎಂದರು.

ಬೆಳಗಾವಿಯಲ್ಲಿ 52 ಗಂಟೆಗಳ ಕಾಲ ಕಾರ್ಯಕಲಾಪ ನಡೆಸಲಾಗಿದೆ. ಒಟ್ಟು 2426 ಪ್ರಶ್ನೆಗಳನ್ನು ಸ್ವೀಕರಿಸಲಾಗಿದ್ದು, ಸದನದಲ್ಲಿ ಉತ್ತರಿಸಬೇಕಾದ 150 ಪ್ರಶ್ನೆಗಳ ಪೈಕಿ 149 ಪ್ರಶ್ನೆಗಳಿಗೆ ಉತ್ತರ ನೀಡಲಾಗಿದೆ. ಲಿಖಿತ ಮೂಲಕ ಉತ್ತರಿಸುವ 2032 ಪ್ರಶ್ನೆಗಳ ಪೈಕಿ 1921 ಪ್ರಶ್ನೆಗಳಿಗೆ ಉತ್ತರಗಳನ್ನು ಮಂಡಿಸಲಾಗಿದೆ. ಈ ಮೂಲಕ ಶೇ.99 ಸಾಧನೆ ಮಾಡಲಾಗಿದೆ ಎಂದರು.

ಅತಿವೃಷ್ಟಿ ಕುರಿತ ಚರ್ಚೆಯಲ್ಲಿ 37 ಸದಸ್ಯರು ಭಾಗವಹಿಸಿದ್ದು 8 ಗಂಟೆ 38 ನಿಮಿಷಗಳ ಕಾಲ ಹಾಗೂ ಉತ್ತರ ಕರ್ನಾಟಕದ ಸಮಸ್ಯೆಗಳ ಕುರಿತು 13 ಸದಸ್ಯರು ಭಾಗವಹಿಸಿದ್ದು 5 ಗಂಟೆ 45 ನಿಮಿಷಗಳ ಕಾಲ ಚರ್ಚಿಸಲಾಗಿದೆ ಎಂದು ಅವರು ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:25.12.2021

## 151. ಉತ್ತರದ ಅಭಿವೃದ್ಧಿಗೆ ಪೂರಕ ಅಧಿವೇಶನ

ಉತ್ತರ ಕರ್ನಾಟಕದ ಅಭಿವೃದ್ಧಿ ಯೋಜನೆಗಳಿಗೆ ಅನುಮೋದನೆ ನೀಡುವ ಮೂಲಕ ಬೆಳಗಾವಿ ಅಧಿವೇಶನವನ್ನು ಸಾರ್ಥಕಗೊಳಿಸಲಾಗಿದೆ ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ.

ಸುದ್ದಿಗಾರರೊಂದಿಗೆ ಮಾತನಾಡಿ, ಬೆಳಗಾವಿ ಅಧಿವೇಶನದಲ್ಲಿ ಉತ್ತರ ಕರ್ನಾಟಕದ ಹಲವಾರು ಜ್ವಲಂತ ಸಮಸ್ಯೆಗಳಿಗೆ ಉತ್ತರ ದೊರೆತಿದೆ. ಉತ್ತರ ಕರ್ನಾಟಕದ ನೀರಾವರಿ ಕ್ಷೇತ್ರದ ಅಭಿವೃದ್ಧಿ ಬದ್ಧವಾಗಿದೆ ಎಂದು ಸರ್ಕಾರ ನಿರೂಪಿಸಿದೆ. ಈ ನಿಟ್ಟಿನಲ್ಲಿ ಉತ್ತರ ಕರ್ನಾಟಕ ಭಾಗಕ್ಕೆ ರೈಲ್ವೆ ಯೋಜನೆಗಳು, ಹೆಸ್ಕಾಂನ ಆರ್ಥಿಕ ಪುನಶ್ಚೇತನ, ಸಾಲಟ್ಟಿ ಮತ್ತು ಮಂಟೂರುಗಳಿಗೆ ನೀರಾವರಿ ಯೋಜನೆಗೆ ಅನುಮೋದನೆ, ಗುಲ್ಬರ್ಗಾ ಸೇಡಂನಲ್ಲಿ ಏತ ನೀರಾವರಿ ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ.

**ರೈತರ ಸಂಕಷ್ಟಕ್ಕೆ ಸ್ಪಂದಿಸಿದ ಸರ್ಕಾರ:** ಅಕಾಲಿಕ ಮಳೆ ಹಾಗೂ ಪ್ರವಾಹದಿಂದ ಸಂಕಷ್ಟಕ್ಕೊಳಗಾಗಿದ್ದ ರೈತರು ಬಡವರ ಪರಿಹಾರ ನೀಡಲು ಸುದೀರ್ಘ ಚರ್ಚೆಯಾಯಿತು. ಬೆಳೆಹಾನಿ ಮತ್ತು ಮನೆಹಾನಿ, ನೀರು ನುಗ್ಗಿರುವ ಮನೆಗಳಿಗೆ ಪರಿಹಾರ ಮತ್ತು ತಂತ್ರಾಂಶದ ಬಳಕೆಯಿಂದ ಸರ್ವೇ ಕಾರ್ಯ ಅಪ್‌ಲೋಡ್ ಆದ 48 ಗಂಟೆಗಳೊಳಗೆ ಪರಿಹಾರ ನೀಡುವ ಕೆಲಸವಾಗಿದೆ. ಬೆಳೆಹಾನಿಯಾದ ಒಂದೇ ತಿಂಗಳಲ್ಲಿ ರೂ.700 ಕೋಟಿಗೂ ಹೆಚ್ಚು ಪರಿಹಾರವನ್ನು 14 ಲಕ್ಷ ರೈತರಿಗೆ ಈಗಾಗಲೇ ನೀಡಲಾಗಿದೆ. ಇದು ದೇಶದಲ್ಲೇ ದಾಖಲೆ ನಿರ್ಮಿಸಿದ ಮಾದರಿ ಕಾರ್ಯಕ್ರಮ ಎಂದು ತಿಳಿಸಿದರು.

**ಬೆಳೆಹಾನಿಗೆ ದುಪ್ಪಟ್ಟು ಪರಿಹಾರ:** ರಾಜ್ಯ ಸರ್ಕಾರ ಸಕಾಲದಲ್ಲಿ ರೈತರಿಗೆ ಸ್ಪಂದಿಸಿದ ಒಣಬೇಸಾಯದ ಪ್ರತಿ ಹೆಕ್ಟೇರ್‌ಗೆ ರೂ.6,800 ಪರಿಹಾರವನ್ನು ರೂ.13,600ಗಳಿಗೆ, ನೀರಾವರಿ ಜಮೀನಿನ ಪ್ರತಿ ಹೆಕ್ಟೇರ್ ಬೆಳೆಹಾನಿಗೆ ರೂ.13,500 ಪರಿಹಾರವನ್ನು ರೂ.25,000ಗಳಿಗೆ ಹಾಗೂ ತೋಟಗಾರಿಕೆ ಬೆಳೆಯ ಪ್ರತಿ ಹೆಕ್ಟೇರ್ ಬೆಳೆಹಾನಿಗೆ ರೂ.18,000 ಪರಿಹಾರವನ್ನು 28,000 ಗಳಿಗೆ ಹೆಚ್ಚಿಸಿ ನೀಡಲು ತೀರ್ಮಾನಿಸಲಾಗಿದೆ. ಇದು ಐತಿಹಾಸಿಕವಾದ ತೀರ್ಮಾನ. 12 ರಿಂದ 14 ಸಾವಿರ ಹೆಕ್ಟೇರ್ ಪ್ರದೇಶ ನಾಶವಾಗಿದೆ. ಸರ್ಕಾರದ ಆರ್ಥಿಕ ಇತಿಮಿತಿಯೊಳಗೆ ರೈತಪರ ನಿಲುವನ್ನು ತಳೆಯಲಾಗಿದೆ. ರೈತ ಸ್ನೇಹಿ ಸರ್ಕಾರ ಎಂದು ಸದನದಲ್ಲಿ ನಿರೂಪಿಸಲಾಯಿತು ಎಂದರು.

**ಮತಾಂತರ ನಿಷೇಧ ಕಾಯಿದೆ:** ಮತಾಂತರ ನಿಷೇಧ ಕಾಯಿದೆಯ ಬಗ್ಗೆ ಸ್ಪಷ್ಟ ನಿಲುವಿನಿಂದ ವಿಧಾನಸಭೆಯಲ್ಲಿ ಪಾಸ್ ಮಾಡಲಾಯಿತು. ಕಾಂಗ್ರೆಸ್ ದ್ವಿಮುಖ ನೀತಿ ಸ್ಪಷ್ಟವಾಗಿ ಗೋಚರಿಸಿತು. ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿ ಎಪಿಎಂಸಿ ಕಾಯಿದೆಯಡಿ ಖಾಸಗಿ ಮಾರುಕಟ್ಟೆಗೆ ಅನುಮತಿ ನೀಡಿತ್ತು. ಆದರೆ ಪ್ರತಿಪಕ್ಷದಲ್ಲಿದ್ದಾಗ ಅದನ್ನು ವಿರೋಧಿಸುತ್ತಿದ್ದಾರೆ. ದ್ವಿಮುಖ ನೀತಿಯನ್ನು ಕಾಂಗ್ರೆಸ್ ನಿರಂತರವಾಗಿ ಮಾಡುತ್ತಿದೆ ಎಂದು ತಿಳಿಸಿದರು. ಕಾಯಿದೆ ಒಪ್ಪಲು ಯಾವುದೇ ಒತ್ತಾಯ ಒತ್ತಡ ಹೇರುವುದಿಲ್ಲ. ವಿಷಯಗಳನ್ನು ಮನದಟ್ಟು ಮಾಡಿ ಸದಸ್ಯರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಮುಂದಿನ ಅಧಿವೇಶನದಲ್ಲಿ ಪರಿಗಣಿಸಲಾಗುವುದು ಎಂದು ಹೇಳಿದರು.

ಆಧಾರ: ವಿಶ್ವವಾಣಿ, ದಿನಾಂಕ:25.12.2021

## 152. ಮತ್ತೆ ಸಿಗದ ಉತ್ತರ

ಈ ಬಾರಿಯ ವಿಧಾನಸಭೆ ಅಧಿವೇಶನವು ಉತ್ತರ ಕರ್ನಾಟಕದ ಚರ್ಚೆಯಿಲ್ಲದೆಯೇ ಮುಗಿದಿದೆ. ಉತ್ತರದ ಚರ್ಚೆಗೆ ಕೊನೆಗೂ ಪೂರ್ಣ ಪ್ರಮಾಣದ ಕಾಲಾವಕಾಶ ಸಿಗಲೇ ಇಲ್ಲ.

ವಿಧಾನ ಪರಿಷತ್‌ನಲ್ಲಿ 12 ಗಂಟೆಗಳ ಕಾಲ ಚರ್ಚೆ ನಡೆದು ಸರ್ಕಾರದ ಪರವಾಗಿ ಉತ್ತರವು ನೀಡಲಾಯಿತು. ವಿಧಾನಸಭೆಯಲ್ಲಿ ಮಾತ್ರ ಸರ್ಕಾರ ಸಮರ್ಪಕ ಉತ್ತರವನ್ನು ಕೊಡಲಿಲ್ಲ. ಚರ್ಚೆಯು ಕೇವಲ 5 ಗಂಟೆಗೆ ಸೀಮಿತವಾಯಿತು.

ಎ.ಎಸ್.ಪಾಟೀಲ್ ನಡಹಳ್ಳಿ ಅವರು ಅರ್ಧ ದಿನದವರೆಗೂ ಮಾತನಾಡಲು ಸಜ್ಜಾಗಿ ಬಂದಿದ್ದರೂ ಅರ್ಧ ಗಂಟೆ ಮಾತ್ರ ಕಾಲಾವಕಾಶ ದೊರೆಯಿತು. ಖುದ್ದು ಪ್ರತಿಪಕ್ಷ ನಾಯಕರು ನನಗೆ ಇನ್ನು ಮಾತನಾಡಲು ಕಾಲಾವಕಾಶ ಬೇಕಿತ್ತು ಎಂದು ಮುನಿಸಿಕೊಂಡ ಘಟನೆಯೂ ನಡೆಯಿತು. ಜೆಡಿಎಸ್‌ನ ಬಹುತೇಕ ಸದಸ್ಯರಿಗೆ ಅವಕಾಶವೇ ಸಿಗಲಿಲ್ಲ.

ಅಧಿವೇಶನದ ಎರಡನೇ ವಾರದಲ್ಲಿ ಎರಡು ದಿನಗಳ ಕಾಲ ಉತ್ತರ ಕರ್ನಾಟಕ ಭಾಗದ ಸಮಸ್ಯೆಗಳ ಚರ್ಚೆಗೆ ಅವಕಾಶ ಕೊಡುವುದಾಗಿ ಸ್ಪೀಕರ್ ಹೇಳಿದ್ದರಾದರೂ ಅದು ಸಾಧ್ಯವಾಗಲಿಲ್ಲ.

ಪ್ರತಿಭಟನೆಯಲ್ಲೇ ಅಧಿವೇಶನದ ಬಹುತೇಕ ಅವಧಿ ಕೊಚ್ಚಿ ಹೋಗಿದ್ದಕ್ಕೆ ಈ ಭಾಗದ ಸದಸ್ಯರು ಪಕ್ಷಾತೀತವಾಗಿ ಅಸಮಾಧಾನ ವ್ಯಕ್ತಪಡಿಸಿದರು. ಮೊದಲಿನಿಂದ ಕಲಾಪದ ಸಮಯಕ್ಕೆ ಬೆಲೆ ಕೊಡದೇ ಕೊನೆಗೆ ನಮ್ಮ ಭಾಗದ ಚರ್ಚೆಗೆ ಸಮಯ ಸಿಗದಂತಾಯಿತು. ಉತ್ತರ ಕನ್ನಡ ಭಾಗದ ಸಮಸ್ಯೆಗಳನ್ನು

ಪ್ರಸ್ತಾಪಿಸಲು ಸಾಧ್ಯವಾಗಲಿಲ್ಲ. ನಾವು ಕ್ಷೇತ್ರದಲ್ಲಿ ಏನು ಉತ್ತರ ಹೇಳಬೇಕು ಎಂದು ಬಹಿರಂಗ ಅಸಮಾಧಾನ ಹೊರ ಹಾಕಿದರು.

ಇದರ ನಡುವೆ ಅಧಿವೇಶನವು ಇನ್ನೊಂದು ವಾರ ವಿಸ್ತರಣೆ ಆಗಬೇಕು ಎಂದು ಹಲವು ಸದಸ್ಯರು ಒತ್ತಾಯಿಸಿದರೂ ಅದಕ್ಕೆ ಮನ್ನಣೆ ಸಿಗಲಿಲ್ಲ. ಆಡಳಿತ ಹಾಗೂ ಪ್ರತಿಪಕ್ಷದ ಕಡೆಯಿಂದ ವಿಸ್ತರಣೆಗೆ ವಿರೋಧ ಇತ್ತು. ಹೀಗಾಗಿ ಹತ್ತು ದಿನದಲ್ಲೇ ಅಧಿವೇಶನ ಮುಗಿಯುವಂತಾಯಿತು.

**ಆಡಳಿತ–ಪ್ರತಿಪಕ್ಷ ಜಟಾಪಟಿ:**ಉತ್ತರ ಕರ್ನಾಟಕ ಭಾಗದ ಚರ್ಚೆಗೆ ಅವಕಾಶ ವಿಚಾರದಲ್ಲಿ ಆಡಳಿತ ಹಾಗೂ ಪ್ರತಿಪಕ್ಷದ ನಡುವೆ ಭಾರೀ ಜಟಾಪಟಿ ನಡೆದಿದ್ದು ಕೊನೆಯ ದಿನದ ಕಲಾಪವೂ ಪ್ರತಿಭಟನೆಯಲ್ಲೇ ಅಂತ್ಯಗೊಳ್ಳುವಂತಾಯಿತು. ಪ್ರತಿಪಕ್ಷ ನಾಯಕನಾದ ನನಗೆ ಮಾತನಾಡಲು ಅವಕಾಶ ಸಿಗಲಿಲ್ಲ ಎಂದು ಸಿದ್ದರಾಮಯ್ಯ ಅವರು ಕಾಂಗ್ರೆಸ್ ಸದಸ್ಯರೊಂದಿಗೆ ಸದನದ ಬಾವಿಗೆ ಇಳಿದು ಘೋಷಣೆಗಳನ್ನು ಕೂಗಿದ್ದರಿಂದ ಗದ್ದಲ–ಕೋಲಾಹಲ ಉಂಟಾಗಿ ಅದರ ನಡುವೆಯೇ ಸರ್ಕಾರ ಉತ್ತರ ಶಾಸ್ತ್ರ ಮುಗಿಸಿ ಸದನ ಅನಿರ್ದಿಷ್ಟಾವಧಿಗೆ ಮುಂದೂಡಲಾಯಿತು.

**ಮಂಡನೆಯಾಗದ ಮತಾಂತರ ತಡೆ ವಿಧೇಯಕ:** ಅಧಿವೇಶನದ ಕೊನೆಯ ದಿನ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ವಿಧೇಯಕ ಪರಿಷತ್‌ನಲ್ಲಿ ಮಂಡಿಸಿ ಒಪ್ಪಿಗೆ ಪಡೆಯುವ ಪ್ರಯತ್ನವನ್ನು ಸರ್ಕಾರ ಮಾಡಿತ್ತಾದರೂ ಕಾಂಗ್ರೆಸ್‌ನ ವಿರೋಧದಿಂದ ಕೈ ಬಿಟ್ಟಿತು. ಮುಂದಿನ ಅಧಿವೇಶನದಲ್ಲಿ ವಿಧೇಯಕ ಮಂಡಿಸಲು ನಿರ್ಧರಿಸಲಾಯಿತು.

ಆಧಾರ: ಉದಯವಾಣಿ, ದಿನಾಂಕ:25.12.2021

## 153. ವಿಧಾನಮಂಡಲದ ವಿವಿಧ ಸ್ಥಾಯಿ ಸಮಿತಿಗಳಿಗೆ ನೇಮಕ

2021–22ನೇ ಸಾಲಿನ ಕರ್ನಾಟಕ ವಿಧಾನಮಂಡಲದ ವಿವಿಧ ಸ್ಥಾಯಿ ಸಮಿತಿಗಳ ಅಧ್ಯಕ್ಷರು ಹಾಗೂ ಸದಸ್ಯರನ್ನು ನೇಮಕ ಮಾಡಿ ಆದೇಶ ಹೊರಡಿಸಲಾಗಿದೆ.

ಸಾರ್ವಜನಿಕ ಲೆಕ್ಕಪತ್ರ ಸಮಿತಿಗೆ ರಮೇಶ್ ಕುಮಾರ್ ಅವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ. ಸಾರ್ವಜನಿಕ ಉದ್ಯಮಗಳ ಸಮಿತಿ ಜಿ.ಎಸ್.ತಿಪ್ಪಾರೆಡ್ಡಿ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿ ಎಂ.ಪಿ.ಕುಮಾರಸ್ವಾಮಿ, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಸಮಿತಿ ಕುಮಾರ್ ಬಂಗಾರಪ್ಪ, ಅಧೀನ ಶಾಸನ ರಚನಾ ಸಮಿತಿ ಎಲ್.ಎ.ರವಿಸುಬ್ರಮಣ್ಯ, ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿ ಸಾ.ರಾ.ಮಹೇಶ್, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿ ಕೆ.ಪೂರ್ಣಿಮಾ, ಸ್ಥಳೀಯ ಸಂಸ್ಥೆಗಳು ಮತ್ತು ಪಂಚಾಯತ್ ರಾಜ್ ಸಮಿತಿ ಜಿ.ಸೋಮಶೇಖರ ರೆಡ್ಡಿ ಅವರುಗಳನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ. ಅಲ್ಲದೇ ಪ್ರತಿ ಸಮಿತಿಗೂ ವಿಧಾನ ಸಭೆಯಿಂದ 15 ಜನ ಸದಸ್ಯರು ಹಾಗೂ ವಿಧಾನ ಪರಿಷತ್ತಿನ 5 ಸದಸ್ಯರು ಇರಲಿದ್ದಾರೆ ಎಂದು ಪ್ರಕಟಣೆಯಲ್ಲಿ ತಿಳಿಸಿದೆ.

ವಿಧಾನ ಸಭೆಯ ಸ್ಥಾಯಿ ಸಮಿತಿಗಳಾದ ಅಂದಾಜು ಸಮಿತಿ–ಅಭಯ್ ಪಾಟೀಲ್, ಸರ್ಕಾರಿ ಭರವಸೆಗಳ ಸಮಿತಿ–ರಘುಪತಿ ಭಟ್, ಹಕ್ಕು ಬಾಧ್ಯತಾ ಸಮಿತಿ–ಬಸವನಗೌಡ ಪಾಟೀಲ್ ಯತ್ನಾಳ್ ಖಾಸಗಿ ಸದಸ್ಯರುಗಳ ವಿಧೇಯಕ ಹಾಗೂ ನಿರ್ಣಯಗಳ ಸಮಿತಿ, ಅರ್ಜಿಗಳ ಸಮಿತಿ ಹಾಗೂ ವಸತಿ ಸಮಿತಿಗೆ ವಿಧಾನಸಭೆ ಉಪಾಧ್ಯಕ್ಷರಾದ ಆನಂದ ಮಾಮನಿ ಅವರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:28.12.2021

## 154. 75ನೇ ಸ್ವಾತಂತ್ರ್ಯೋತ್ಸವದ "ಅಮೃತ ಮಹೋತ್ಸವ" ಸಂದರ್ಭದಲ್ಲಿ ವಿಧಾನಸಭೆ ಸಭಾಂಗಣದಲ್ಲಿ ಜಂಟಿ ಸದನ ಕುರಿತು ಸನ್ಮಾನ್ಯ ಲೋಕ ಸಭಾ ಅಧ್ಯಕ್ಷರಾದ ಶ್ರೀ ಓಂ ಬಿರ್ಲಾ ಅವರ ಭಾಷಣ

ಕರ್ನಾಟಕ ವಿಧಾನಸಭೆಯ ಗೌರವಾನ್ವಿತ ಸ್ಪೀಕರ್ ಶ್ರೀ ವಿ.ಹೆಚ್. ಕಾಗೇರಿಯವರೇ, ಕರ್ನಾಟಕ ವಿಧಾನ ಪರಿಷತ್ತಿನ ಗೌರವಾನ್ವಿತ ಅಧ್ಯಕ್ಷರಾದ ಶ್ರೀ ಬಸವರಾಜ ಹೊರಟ್ಟಿ ಅವರೇ, ಕರ್ನಾಟಕ ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರೇ, ಮಾನ್ಯ ಮಂತ್ರಿಗಳು, ಗೌರವಾನ್ವಿತ ಶಾಸಕಾಂಗ ಸಭೆ ಮತ್ತು ವಿಧಾನ ಪರಿಷತ್ ಸದಸ್ಯರುಗಳೇ ಇಲ್ಲಿ ಉಪಸ್ಥಿತರಿರುವ ಪ್ರಬುದ್ಧರೇ, ಮಹಿಳೆಯರೇ ಮತ್ತು ಮಹನೀಯರೇ,

1. ಕರ್ನಾಟಕ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಜಂಟಿ ಸಭೆಯಲ್ಲಿ ಭಾಗವಹಿಸುತ್ತಿರುವುದಕ್ಕೆ ನನಗೆ ತುಂಬಾ ಸಂತೋಷವಾಗಿದೆ.

2. ಇಲ್ಲಿನ ವಿಧಾನಸೌಧ ಕಟ್ಟಡವು ಪ್ರಜಾಪ್ರಭುತ್ವದ ಒಂದು ವಿಶಿಷ್ಟ ಸಂಕೇತವಾಗಿದ್ದು, ಅದು ಜನರ ಆಶಯಗಳು ಮತ್ತು ಆಕಾಂಕ್ಷೆಗಳನ್ನು ಪ್ರತಿಬಿಂಬಿಸುತ್ತದೆ.
   ಈ ಐತಿಹಾಸಿಕ ಕಟ್ಟಡ ಮತ್ತು ಪ್ರಜಾಪ್ರಭುತ್ವದೊಂದಿಗಿನ ಅದರ ಸುಧೀರ್ಘ ಪ್ರಯಾಣವು ನಮಗೆ ಹೊಸ ಸ್ಫೂರ್ತಿಯನ್ನು ನೀಡುತ್ತದೆ.

3. ವಿಧಾನಸೌಧವು ಕರ್ನಾಟಕಕ್ಕೆ ಭೇಟಿ ನೀಡುವ ದೇಶೀಯ ಮತ್ತು ವಿದೇಶಿ ಪ್ರವಾಸಿಗರ ಮೇಲೆ ಪ್ರಮುಖವಾಗಿ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಅಳವಡಿಸಿಕೊಳ್ಳುವಲ್ಲಿ ಸ್ಫೂರ್ತಿ ನೀಡುತ್ತದೆ.

4. ಕರ್ನಾಟಕವು ಶ್ರೀಮಂತ ಮತ್ತು ಅದ್ಭುತವಾದ ಇತಿಹಾಸವನ್ನು ಹೊಂದಿದೆ. ಭಗವಾನ್ ಬಸವೇಶ್ವರರ 12ನೇ ಶತಮಾನದಲ್ಲಿ ನಿರ್ಮಿಸಲಾದ 'ಅನುಭವ ಮಂಟಪ' ಪ್ರಸ್ತುತ ಸಂದರ್ಭದಲ್ಲಿ ಜನಪ್ರತಿನಿಧಿಗಳ ಸಂಸತ್ತಿನ ಪ್ರತಿಬಿಂಬವಾಗಿದೆ.
   ರಾಣಿ ಚೆನ್ನಮ್ಮನ ಮಹಾನ್ ತ್ಯಾಗವು ನಮಗೆ ಸ್ಫೂರ್ತಿ ನೀಡುತ್ತಲೇ ಇದೆ.

5. ಸ್ನೇಹಿತರೇ, ಕರ್ನಾಟಕ ರಾಜ್ಯದಲ್ಲಿ ಪ್ರಜಾಪ್ರಭುತ್ವದ ಪ್ರಯಾಣವು ರೋಮಾಂಚಕ ಮತ್ತು ಸ್ಫೂರ್ತಿದಾಯಕವಾಗಿದೆ. ಈ ಭವ್ಯವಾದ ಪ್ರಯಾಣಕ್ಕೆ ಕಾರಣರಾದ ರಾಜಕೀಯ ಮುತ್ಸದ್ದಿಗಳಿಗೆ ನಾನು ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.
   ನಾವು ಅಂತಹವರಿಂದ ಸ್ಫೂರ್ತಿ ಪಡೆಯಬೇಕು.

6. ನಾನು ಇಂದು ಒಂದು ಪ್ರಮುಖ ವಿಷಯದ ಬಗ್ಗೆ ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಿದ್ದೇನೆ. ನಮ್ಮ ಈ ಏಳು ದಶಕಗಳ ಸ್ವಾತಂತ್ರ್ಯದ ಅವಧಿಯಲ್ಲಿ ನಾವು ಅನುಸರಿಸಿದ ಸಂಸದೀಯ ರೂಪ ಆಡಳಿತ ಮಾರ್ಗದಲ್ಲಿ ನಾವು ಪ್ರಜಾಪ್ರಭುತ್ವ ಮೌಲ್ಯಗಳನ್ನು ಕಾಪಾಡುವಲ್ಲಿ ಮತ್ತು ಪ್ರಜಾಪ್ರಭುತ್ವದ ಸಂಸ್ಥೆಗಳನ್ನು ಹೆಚ್ಚು ಜವಾಬ್ದಾರಿಯುತಗೊಳಿಸುವಲ್ಲಿ ನಾವೆಲ್ಲ ಇದುವರೆಗೆ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದ್ದೇವೆ ಎಂದು ಚಿಂತನೆ ನಡೆಸಬೇಕಿದೆ.

7. ಸಂಸದೀಯ ಪ್ರಜಾಪ್ರಭುತ್ವವನ್ನು ಅತ್ಯುತ್ತಮ ಆಡಳಿತದ ರೂಪವೆಂದು ಸಾರ್ವತ್ರಿಕವಾಗಿ ಒಪ್ಪಿಕೊಳ್ಳಲಾಗಿದೆ. ಈ ಸನ್ನಿವೇಶದಲ್ಲಿ, ನಾವು ಸಂಸದೀಯ ಪ್ರಜಾಪ್ರಭುತ್ವ ಮತ್ತು ಶಾಸಕಾಂಗವನ್ನು ಬಲಪಡಿಸಿದ್ದೇವೆ ಮತ್ತು ಆಡಳಿತದ ವಿವಿಧ ಆಯಾಮಗಳಲ್ಲಿ ಪ್ರಗತಿ ಸಾಧಿಸಿದ್ದೇವೆ.

8. ನಮ್ಮ ಪ್ರಜಾಪ್ರಭುತ್ವ ಯಾವಾಗಲೂ ಜನ ಕೇಂದ್ರಿತವಾಗಿದೆ. ಇದರ ನಿರ್ಮಾತೃಗಳು ಸಂವಿಧಾನವನ್ನು ರೂಪಿಸುವಾಗ ಜನರ ಹಿತಾಸಕ್ತಿಗಳನ್ನು ಮುಖ್ಯವಾಗಿ ಗಮನದಲ್ಲಿ ಇಟ್ಟುಕೊಂಡಿದ್ದರು.

9. ಈ ಕಾರಣದಿಂದಲೇ ಇದುವರೆಗೆ ದೇಶದಲ್ಲಿ 17 ಸಾರ್ವತ್ರಿಕ ಚುನಾವಣೆಗಳು ಮತ್ತು 300ಕ್ಕೂ ಹೆಚ್ಚು ವಿಧಾನಸಭಾ ಚುನಾವಣೆಗಳು ಯಶಸ್ವಿಯಾಗಿ ನಡೆದಿವೆ, ಮತದಾರರ ಭಾಗವಹಿಸುವಿಕೆಯಲ್ಲಿ ಗಣನೀಯ ಪ್ರಗತಿಯಾಗಿದೆ. ಚುನಾವಣೆಯ ನಂತರ ಅಧಿಕಾರದ ವರ್ಗಾವಣೆ ಅತ್ಯಂತ ಸರಳವಾಗಿ ನಡೆಯುತ್ತಿದೆ. ಇದಕ್ಕೆ ಕಾರಣ ಪ್ರಜಾಪ್ರಭುತ್ವದ ಬಗೆಗಿನ ನಮ್ಮ ಬದ್ಧತೆಯಾಗಿದೆ.

10. ದೇಶದ ಪ್ರಜಾಪ್ರಭುತ್ವ ಸಂಸ್ಥೆಗಳು ಜನರ ಕಲ್ಯಾಣಕ್ಕೆ ಹೆಚ್ಚಿನ ಆದ್ಯತೆ ನೀಡುತ್ತವೆ. ಶಾಸಕಾಂಗಗಳಲ್ಲಿರುವ ನಾವು ಜನರ ಆಶಯಗಳನ್ನು ಮತ್ತು ಆಕಾಂಕ್ಷೆಗಳನ್ನು ಪೂರೈಸುವ ಮಾಧ್ಯಮವಾಗಿದ್ದು, ಅವುಗಳ ಕಲ್ಯಾಣವನ್ನು ಗುರಿಯಾಗಿಸಿಕೊಂಡು ಕಾನೂನು ರೂಪಿಸುತ್ತೇವೆ.

11. ಆದರೆ, ಈಗ ನಾವು ಈ ಪ್ರಯಾಣದ 75 ವರ್ಷಗಳನ್ನು ಪೂರ್ಣಗೊಳಿಸಲಿರುವಾಗ, ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಜನರಿಗೆ ಇನ್ನಷ್ಟು ಉತ್ತರದಾಯಕರನ್ನಾಗಿ ಮಾಡುವುದು ಹೇಗೆ ಎಂದು ನಾವು ಪರಿಶೀಲಿಸಬೇಕಾಗಿದೆ. ಆಡಳಿತವು ಜನರ ಭಾವನೆಗಳು ಮತ್ತು ಆಕಾಂಕ್ಷೆಗಳೊಂದಿಗೆ ಹೊಂದಿಕೆಯಾಗಿದೆಯೇ ಎಂದು ಖಚಿತಪಡಿಸಿಕೊಳ್ಳಲು ಮತ್ತು ಅವರ ಯೋಗಕ್ಷೇಮವನ್ನು ಖಚಿತಪಡಿಸಿಕೊಳ್ಳಲು ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಮತ್ತಷ್ಟು ಬಲಪಡಿಸುವ ಅವಶ್ಯಕತೆಯಿದೆ.

12. ಸಂಸದೀಯ ಪ್ರಜಾಪ್ರಭುತ್ವವು ಚುನಾಯಿತ ಪ್ರತಿನಿಧಿಗಳ ಜವಾಬ್ದಾರಿಯನ್ನು ಆಧರಿಸಿದೆ. ಚುನಾಯಿತ ಪ್ರತಿನಿಧಿಗಳು ಜನರ ಆಶಯಗಳು ಮತ್ತು ಆಕಾಂಕ್ಷೆಗಳಿಗೆ ಸಂವೇದನಾಶೀಲರಾದಾಗ ಮತ್ತು ಶಾಸಕಾಂಗಗಳ ಮೂಲಕ ಅವುಗಳನ್ನು ಪೂರೈಸಲು ಶ್ರಮಿಸಿದಾಗ ಮಾತ್ರ ಸಂಸತ್ತು ಮತ್ತು ಶಾಸಕಾಂಗದ ಪ್ರತಿಷ್ಠೆಯನ್ನು ಹೆಚ್ಚಿಸಬಹುದು.

13. ನಮ್ಮ ಶಾಸಕಾಂಗಗಳು ಪ್ರಜಾಪ್ರಭುತ್ವದ ಆತ್ಮ. ದೇಶಕ್ಕಾಗಿ ನೀತಿಗಳು ಮತ್ತು ಕಾನೂನುಗಳನ್ನು ರೂಪಿಸುವ ಜವಾಬ್ದಾರಿ ಶಾಸಕಾಂಗಗಳ ಹೆಗಲ ಮೇಲಿದೆ.

14. ಸಾರ್ವಜನಿಕ ಕಲ್ಯಾಣಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ರಚನಾತ್ಮಕ ಚರ್ಚೆ ಮತ್ತು ಚರ್ಚೆಗಳು ಶಾಸಕಾಂಗಗಳ ಚಾಕಟ್ಟಿನೊಳಗೆ ನಡೆಯುವುದನ್ನು ನಾವು ಖಾತ್ರಿಪಡಿಸಿಕೊಂಡಾಗ ಮಾತ್ರ ನಾವು ಶಾಸಕಾಂಗಗಳನ್ನು ಹೆಚ್ಚು ಜವಾಬ್ದಾರಿಯುತವಾಗಿ ಮಾಡಬಹುದು.

15. ನಮ್ಮ ಶಾಸಕಾಂಗ ಸಂಸ್ಥೆಗಳು ಇತ್ತೀಚಿನ ದಿನಗಳಲ್ಲಿ ಜನರ ಕುಂದುಕೊರತೆಗಳಿಗೆ ಧ್ವನಿ ನೀಡಲು ವಿವಿಧ ದೃಷ್ಟಿಕೋನಗಳಲ್ಲಿ ಕೆಲಸ ಮಾಡುತ್ತಿವೆ ಮತ್ತು ಕಾರ್ಯಾಂಗದ ಜವಾಬ್ದಾರಿಯನ್ನು ಸರಿಪಡಿಸಲು ಕೂಡ ಬಹುವಿಧದ ಆಯಾಮದಲ್ಲಿ ಕೆಲಸ ಮಾಡುತ್ತಿವೆ.

16. ಇಂತಹ ಗುರುತರವಾದ ಜವಾಬ್ದಾರಿಗಳನ್ನು ಪೂರೈಸಲು, ಶಾಸಕಾಂಗದ ಸದಸ್ಯರು ಪ್ರಜಾಪ್ರಭುತ್ವದ ತತ್ವಗಳು ಮತ್ತು ಮೌಲ್ಯಗಳನ್ನು ಶ್ರದ್ಧೆಯಿಂದ ಪಾಲಿಸಬೇಕು ಮತ್ತು ಈ ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಜನರಿಗೆ ಹೆಚ್ಚು ಪಾರದರ್ಶಕ ಮತ್ತು ಉತ್ತರದಾಯಕವಾಗಿ ಮಾಡುವಂತೆ ನೋಡಿಕೊಳ್ಳಬೇಕು.

17. ಆಡಳಿತದ ಮೂರು ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ಸಂವಿಧಾನದಲ್ಲಿ ನಿರ್ದಿಷ್ಟಪಡಿಸಲಾಗಿದೆ ಮತ್ತು ಅವುಗಳ ವ್ಯಾಪ್ತಿಯನ್ನು ಕೂಡ ನಿಗದಿಪಡಿಸಲಾಗಿದೆ.

18. ಆದಾಗ್ಯೂ, ಈ ಮೂರರಲ್ಲಿ ಶಾಸಕಾಂಗವು ಪ್ರಮುಖ ಪಾತ್ರವನ್ನು ಹೊಂದಿದೆ. ಏಕೆಂದರೆ, ಇದು ಜನರ ನಿರೀಕ್ಷೆಗಳಿಗೆ ಅನುಗುಣವಾಗಿ ಕಾನೂನುಗಳನ್ನು ರೂಪಿಸುವ ಸಂಸ್ಥೆಯಾಗಿದೆ.

19. ಸಂವಿಧಾನವನ್ನು ರೂಪಿಸುವಾಗ, ನಮ್ಮ ಶಾಸಕರು ನಮ್ಮ ಜನರ ಸಾಮಾಜಿಕ-ಆರ್ಥಿಕ ಪ್ರಗತಿಯನ್ನು ಖಚಿತಪಡಿಸಿಕೊಳ್ಳಲು ನಮ್ಮ ಶಾಸಕಾಂಗವು ಹೆಚ್ಚು ಅರಿವು, ಶ್ರದ್ಧೆ, ಪ್ರಾಮಾಣಿಕತೆ ಮತ್ತು ಜವಾಬ್ದಾರಿಯುತವಾಗಿರಬೇಕು ಎಂಬ ಚಿಂತನೆಯೊಂದಿಗೆ ಇದರ ನಿರ್ಮಾತೃಗಳು ಕೆಲಸ ಮಾಡಿದರು.

20. ನಾವು ರೂಪಿಸುವ ಕಾನೂನಿನ ಬಗ್ಗೆ ಸಮಗ್ರ ಚರ್ಚೆ ಮತ್ತು ಚಿಂತನ ಮಂಥನ ನಡೆಸಬೇಕಾದುದು ನಮ್ಮ ಜವಾಬ್ದಾರಿಯಾಗಿದೆ. ಈ ಪ್ರಕ್ರಿಯೆಯಲ್ಲಿ ಶಾಸಕರ ಸಕ್ರಿಯ ಭಾಗವಹಿಸುವಿಕೆ ಇರಬೇಕು. ಆದ್ದರಿಂದ ಅಂತಿಮವಾಗಿ ಕಾನೂನು ರೂಪುಗೊಂಡ ಮೇಲೆ ಯಾರೂ ಇದರ ಬಗ್ಗೆ ಬೆರಳೆತ್ತಿ ನಮ್ಮತ್ತ ತೋರುವಂತಿರಬಾರದು.

21. ಇದಕ್ಕಾಗಿ, ನಮ್ಮ ಶಾಸಕಾಂಗಗಳು ಕಾನೂನುಗಳನ್ನು ರೂಪಿಸುವಲ್ಲಿ ಸಮರ್ಥ ಮತ್ತು ಪರಿಣಾಮಕಾರಿಯಾಗಿರಬೇಕು. ಶಾಸಕರ ಸಾಮರ್ಥ್ಯ ಮತ್ತು ಕೌಶಲ್ಯವನ್ನು ಹೆಚ್ಚಿಸಲು ಶಾಸಕಾಂಗಗಳು ಸಮಗ್ರ ಸಾಮರ್ಥ್ಯ ವೃದ್ಧಿ ಕ್ರಿಯಾ ಯೋಜನೆಯನ್ನು ರೂಪಿಸಬೇಕು.

22. ಆದರೆ, ಅಗತ್ಯವಿರುವ ಮಟ್ಟದಲ್ಲಿ ಚರ್ಚೆಗಳು, ಚರ್ಚೆಗಳು, ಶಾಸಕರ ಭಾಗವಹಿಸುವಿಕೆ ಮತ್ತು ಚಿಂತನೆಗಳು, ಚರ್ಚೆಗಳು ನಡೆಯದಿರುವುದನ್ನು ನಾವು ನೋಡುತ್ತೇವೆ. ಇದು ನಮ್ಮೆಲ್ಲರ ತೀವ್ರ ಕಳವಳಕಾರಿ ಸಂಗತಿಯಾಗಿದೆ.

23. ಜನಪ್ರತಿನಿಧಿಗಳು ಜನರೊಂದಿಗೆ ನೇರ ಸಂಪರ್ಕದಲ್ಲಿದ್ದಾರೆ ಮತ್ತು ಅವರ ಆಕಾಂಕ್ಷೆಗಳು, ಸಮಸ್ಯೆಗಳು ಮತ್ತು ತೊಂದರೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾರೆ. ಆದ್ದರಿಂದ, ಕಾನೂನು ರಚನೆಯಲ್ಲಿ ಅವರ ಸಕ್ರಿಯ ಭಾಗವಹಿಸುವಿಕೆ ಅತ್ಯಗತ್ಯ. ಈ ಕಾರಣದಿಂದಲೇ ಸದನದ ಅಮೂಲ್ಯ ಸಮಯ ಅಡೆತಡೆಗಳ ಕಾರಣಕ್ಕಾಗಿ ವ್ಯರ್ಥವಾಗದಂತೆ ನಾವು ಎಂದು ಖಚಿತಪಡಿಸಿಕೊಳ್ಳಬೇಕು.

24. ಆದ್ದರಿಂದ, ಸದನದಲ್ಲಿ ನಾವು ಶಿಸ್ತು, ಸೌಜನ್ಯ ಮತ್ತು ಸಂಯಮವನ್ನು ಹೇಗೆ ರೂಢಿಸಿಕೊಳ್ಳಬಹುದು ಎಂಬುದನ್ನು ಪರಿಗಣಿಸಲು ಗಂಭೀರ ಚರ್ಚೆಗಳನ್ನು ನಡೆಸುವುದು ಇಂದಿನ ಅಗತ್ಯವಾಗಿದೆ. ಈ ವಿಷಯದ ಬಗ್ಗೆ ಕಾಲಕಾಲಕ್ಕೆ ವಿವಿಧ ವೇದಿಕೆಗಳಲ್ಲಿ ಚರ್ಚೆಗಳು ನಡೆಯುತ್ತಿವೆ.

25. ಈ ಸಮಸ್ಯೆಯನ್ನು ಪರಿಹರಿಸುವ ಸಮಾವೇಶಗಳು 1992, 1997 ಮತ್ತು 2001ರಲ್ಲಿ ನಡೆದವು. ಇದರಲ್ಲಿ ಅಧ್ಯಕ್ಷರು, ಆಡಳಿತ ಮತ್ತು ವಿರೋಧ ಪಕ್ಷಗಳ ಹಿರಿಯ ನಾಯಕರು ಹಾಗೂ ಎಲ್ಲಾ ಇತರ ಪಕ್ಷಗಳು ಭಾಗವಹಿಸಿ ಸಮಗ್ರವಾಗಿ ಶಿಸ್ತು, ಸೌಜನ್ಯ ಮತ್ತು ಘನತೆಯನ್ನು ಖಾತ್ರಿಪಡಿಸಿಕೊಳ್ಳುವ ಬಗ್ಗೆ ಚರ್ಚಿಸಿದರು.

ನಮ್ಮ ಹಿರಿಯ ಮತ್ತು ಅನುಭವಿ ರಾಜಕೀಯ ನಾಯಕರು ಸದನದ ಘನತೆಯನ್ನು ಕಾಪಾಡಿಕೊಳ್ಳಲು ಅತ್ಯಂತ ಕಾಳಜಿ ವಹಿಸುತ್ತಾರೆ ಎಂದು ಖಚಿತಪಡಿಸಿಕೊಳ್ಳಲು ಕೆಲವು ಪ್ರಸ್ತಾಪಗಳು ಮತ್ತು ನಿರ್ಣಯಗಳನ್ನು ತೆಗೆದುಕೊಂಡಿದ್ದಾರೆ. ಆ ನಿರ್ಣಯಗಳನ್ನು ನೆನಪಿಸಿಕೊಳ್ಳುವುದು ಮತ್ತು ಕಾರ್ಯಗತಗೊಳಿಸುವುದು ಈ ಹೊತ್ತಿನ ಅನಿವಾರ್ಯವಾಗಿದೆ.

26. ಪ್ರಜಾಪ್ರಭುತ್ವದ ಆಡಳಿತದಲ್ಲಿ, ಚುನಾಯಿತ ಜನಪ್ರತಿನಿಧಿಗಳು ತಮ್ಮ ಶಿಸ್ತಿನ ನಡವಳಿಕೆ ಮತ್ತು ಸಭ್ಯ ನಡವಳಿಕೆಯಿಂದ ವರ್ತಿಸಿ ಸಭೆಯ ಘನತೆಯನ್ನು ಎತ್ತಿಹಿಡಿಯುವ ಆಶಯ ಹೊಂದಲಾಗಿದೆ. ಹಾಗೆಯೇ ಖಾಸಗಿ ಜೀವನದಲ್ಲಿ ಅವರ ನಡತೆಗಳು ಮತ್ತು ವ್ಯವಹಾರಗಳು ಸದನದ ಘನತೆಯನ್ನು ಹೆಚ್ಚಿಸಲು ಸಾಮಾನ್ಯವಾಗಿ ಜನರಿಗೆ ಮಾದರಿಯಾಗಬೇಕು.

27. ಸದಸ್ಯರು ತಮ್ಮ ನಡವಳಿಕೆಯೊಂದಿಗೆ ಸಭ್ಯತೆ, ಪ್ರಬುದ್ಧತೆ ಮತ್ತು ಔದಾರ್ಯಗಳನ್ನು ಹೊಂದಿರಬೇಕು. ಹಾಗಾದಾಗ ನಾವು ಸಂಸದೀಯ ಪ್ರಜಾಪ್ರಭುತ್ವದ ಬಗ್ಗೆ ಹೆಮ್ಮೆ ಪಡಬಹುದು.

28. ಸದನದ ಕಲಾಪದಲ್ಲಿ ಉಂಟಾಗುವ ಅಡಚಣೆಗಳು ಸಾರ್ವಜನಿಕ ಹಿತಾಸಕ್ತಿಯ ಸಮಸ್ಯೆಗಳನ್ನು ಸದನದಲ್ಲಿ ಪ್ರಸ್ತಾಪಿಸಲು ಇರುವ ನಮ್ಮ ಅವಕಾಶಗಳನ್ನ ಕಸಿದುಕೊಳ್ಳುತ್ತವೆ, ಇದರಿಂದಾಗಿ ಮಹತ್ವದ ಮಸೂದೆಗಳನ್ನು ಚರ್ಚಿಸಲು ಸದನಕ್ಕೆ ಕಷ್ಟವಾಗುತ್ತದೆ. ಈ ಕಾರಣದಿಂದಾಗಿ ಕಾರ್ಯಾಂಗದ ಹೊಣೆಗಾರಿಕೆಯನ್ನು ಖಾತ್ರಿಪಡಿಸುವುದು ಅಸಾಧ್ಯವಾಗುತ್ತದೆ.

29. ಇದರರ್ಥ ಸದನದಲ್ಲಿ ಯಾವುದೇ ವಿರೋಧ, ಭಿನ್ನಾಭಿಪ್ರಾಯ ಮತ್ತು ಭಿನ್ನಾಭಿಪ್ರಾಯ ಇರಬಾರದು ಎಂದಲ್ಲ. ವಾಸ್ತವವಾಗಿ, ವಿರೋಧ, ಅಭಿಪ್ರಾಯ ಭಿನ್ನತೆ, ಒಪ್ಪಿಗೆ-ಭಿನ್ನಾಭಿಪ್ರಾಯ, ವಾದಗಳು, ಚರ್ಚೆಗಳು ಮತ್ತು ಪ್ರತಿಭಟನೆಗಳು ನಮ್ಮ ಪ್ರಜಾಪ್ರಭುತ್ವದ ಜನಾಂಗದ ಆಧಾರವಾಗಿದೆ. ಈ ಗುಣಲಕ್ಷಣಗಳು ನಮ್ಮ ಪ್ರಜಾಪ್ರಭುತ್ವವನ್ನು ಸಮೃದ್ಧವೂ ಮತ್ತು ರೋಮಾಂಚಕವೂ ಆಗಿಸಿವೆ. ಆದರೆ, ಪ್ರತಿಭಟನೆ ಸದನದ ಘನತೆಗೆ ಅನುಗುಣವಾಗಿರಬೇಕು ಮತ್ತು ಸಂಸತ್ತಿನ ನಿಯಮಗಳಿಗೆ ಅನುಸಾರವಾಗಿರಬೇಕು.

30. ಸದನದಲ್ಲಿ ನಡೆಯುವ ಚರ್ಚೆಗಳಲ್ಲಿ ಎಲ್ಲರೂ ಪರಸ್ಪರ ಸೌಜನ್ಯ ಮತ್ತು ಗೌರವವನ್ನು ಕಾಪಾಡಿಕೊಳ್ಳಬೇಕು. ಸಂಸದೀಯ ಪ್ರಜಾಪ್ರಭುತ್ವದ ಪರಿಣಾಮಕಾರಿತ್ವ ಮತ್ತು ಘನತೆಗೆ ಧಕ್ಕೆ ತರುವಂತಹ ರೀತಿಯಲ್ಲಿ ಜನಪ್ರತಿನಿಧಿಗಳು ಸದನದಲ್ಲಿ ಹಾಗೂ ಸಾರ್ವಜನಿಕವಾಗಿ ವರ್ತಿಸಬಾರದು.

31. ಸದೃಢ ಪ್ರಜಾಪ್ರಭುತ್ವಕ್ಕಾಗಿ, ಇಂತಹ ವ್ಯವಸ್ಥೆಯಲ್ಲಿ ಜನರ ನಂಬಿಕೆಯನ್ನು ಉಳಿಸಿಕೊಳ್ಳುವುದು ಬಹಳ ಮುಖ್ಯ. ಜನಪ್ರತಿನಿಧಿಗಳು ತಮ್ಮ ನಡವಳಿಕೆಯ ಮೂಲಕ ತಮ್ಮನ್ನು ತಾವು ಪ್ಯಾರಾಗನ್‌ಗಳೆಂದು ಪ್ರಸ್ತುತಪಡಿಸಿಕೊಂಡಾಗ ಮಾತ್ರ ಇದನ್ನು ಸಾಧಿಸಬಹುದು, ಇದು ಪ್ರಜಾಪ್ರಭುತ್ವದಲ್ಲಿ ಜನರ ವಿಶ್ವಾಸವನ್ನು ಗಳಿಸಲು ನೆರವಾಗುತ್ತದೆ.

32. ಇಂದು ಭಾರತವು ಪರಿವರ್ತನೆಯ ಹಂತವನ್ನು ಎದುರಿಸುತ್ತಿದೆ. 'ಆಜಾದಿ ಕಾ ಅಮೃತ್ ಮಹೋತ್ಸವ' ಸಮಯದಲ್ಲಿ ಈ ದೇಶದ ಪ್ರತಿಯೊಂದು

ವರ್ಗದ ಜನ ಸಮುದಾಯವೂ ಸಹ ನವಭಾರತ ನಿರ್ಮಾಣದಲ್ಲಿ ಭಾಗವಹಿಸಲು ಬಯಸುತ್ತದೆ.

33. ಶಾಸಕಾಂಗಗಳನ್ನು ಮತ್ತು ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಬಲಪಡಿಸುವುದು ನಮ್ಮ ಸಂಕಲ್ಪವಾಗಿದೆ. ಅರ್ಥಪೂರ್ಣ ಚರ್ಚೆಗಳು ಮತ್ತು ಸಂವಾದಗಳ ಮೂಲಕ ನಾವು ಜನರ ಆಶಯಗಳನ್ನು ಮತ್ತು ನಿರೀಕ್ಷೆಗಳನ್ನು ಪೂರೈಸಬೇಕು. ಇದರಿಂದ ನಾವು ಪ್ರಜಾಪ್ರಭುತ್ವದ ಮಂಚೂಣಿಯಲ್ಲಿರುವುದನ್ನು ಕುರಿತು ಜಗತ್ತಿಗೆ ಮಾರ್ಗದರ್ಶನ ನೀಡಬಹುದು.

34. ಸ್ನೇಹಿತರೇ, ನಾವು ನಮ್ಮ ದೇಶದಲ್ಲಿ ಸಂಸದೀಯ ವ್ಯವಸ್ಥೆಯನ್ನು ಬಹು-ಪಕ್ಷೀಯ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದೇವೆ. ವಿಭಿನ್ನ ಸಿದ್ಧಾಂತಗಳು ಮತ್ತು ವೈವಿಧ್ಯತೆಗಳ ದೇಶವಾಗಿದ್ದರೂ, ನಾವು ಪ್ರಜಾಪ್ರಭುತ್ವ ಸಂಸ್ಥೆಗಳ ಮೂಲಕ
ರಾಜ್ಯ ಮತ್ತು ದೇಶದ ಜನರ ಸೇವೆಯಲ್ಲಿ ಸಾಮೂಹಿಕವಾಗಿ ಕೆಲಸ ಮಾಡಲು ಸಾಧ್ಯವಾಗಿದೆ.

35. ನಾವು ಪ್ರಜಾಪ್ರಭುತ್ವ ಸಂಸ್ಥೆಗಳ ಮೂಲಕ ರಾಜ್ಯ ಮತ್ತು ದೇಶದ ಸಮೃದ್ಧಿ ಮತ್ತು ಅಭಿವೃದ್ಧಿಗಾಗಿ ಸಾಮೂಹಿಕವಾಗಿ ಕೆಲಸ ಮಾಡಬೇಕೆಂದು ನಾನು ಬಯಸುತ್ತೇನೆ. ಇದರಿಂದ ನಾವು ರಾಜ್ಯ ಮತ್ತು ದೇಶದ ಜನರ ಬದುಕಿನಲ್ಲಿ ಶಾಂತಿ, ಸಮೃದ್ಧಿ ಮತ್ತು ಸಂತೋಷವನ್ನು ತರಬಹುದು ಮತ್ತು ಸಾಮಾಜಿಕ ಮತ್ತು ಆರ್ಥಿಕ ಉನ್ನತಿಯನ್ನು ತರಬಹುದು.

ಇಂದು ನಮ್ಮ ಚರ್ಚೆಯು ಉತ್ತಮ ಫಲಿತಾಂಶಗಳನ್ನು ನೀಡುತ್ತದೆ ಮತ್ತು ಇಡೀ ದೇಶಕ್ಕೆ ಧನಾತ್ಮದ ಸಂದೇಶವನ್ನು ನೀಡುತ್ತದೆ ಎಂದು ನನಗೆ ಭರವಸೆಯಿದೆ.

**ಧನ್ಯವಾದ, ಜೈ ಹಿಂದ್.**

**155. 75ನೇ ಸ್ವಾತಂತ್ರ್ಯೋತ್ಸವದ "ಅಮೃತ ಮಹೋತ್ಸವ" ಸಂದರ್ಭದಲ್ಲಿ ವಿಧಾನಸಭೆ ಸಭಾಂಗಣದಲ್ಲಿ ಸನ್ಮಾನ್ಯ ಲೋಕಸಭಾ ಅಧ್ಯಕ್ಷರಾದ ಶ್ರೀ ಓಂ ಬಿರ್ಲಾ ರವರ ಉಪಸ್ಥಿತಿಯಲ್ಲಿ ಸನ್ಮಾನ್ಯ ಸಭಾಪತಿಯವರು ಮಾತನಾಡಿರುವ ಕುರಿತು:–**



**ಶ್ರೀ ಬಸವರಾಜ ಹೊರಟ್ಟಿ, ವಿಧಾನಸಭೆಯ ಸಭಾಪತಿಗಳು:–** ಸ್ವಾತಂತ್ರ್ಯದ ಅಮೃತ ಮಹೋತ್ಸವದ ಅಂಗವಾಗಿ "ಪ್ರಜಾಪ್ರಭುತ್ವ ಸಂಸದೀಯ ಮೌಲ್ಯಗಳ ರಕ್ಷಣೆ" ಕುರಿತು ಇಂದಿನ ಐತಿಹಾಸಿಕ ಜಂಟಿ ಅಧಿವೇಶನದಲ್ಲಿ ಉಭಯ ಸದನಗಳ ಸದಸ್ಯರುಗಳನ್ನು ಉದ್ದೇಶಿಸಿ ಮಾತನಾಡಲು ಆಗಮಿಸಿರುವ ಲೋಕಸಭೆಯ ಸಭಾಧ್ಯಕ್ಷರಾದ ಸನ್ಮಾನ್ಯ ಶ್ರೀ ಓಂ ಬಿರ್ಲಾರವರೆ, ಆತ್ಮೀಯರು ಹಾಗೂ ಕರ್ನಾಟಕ ವಿಧಾನ ಸಭೆಯ ಸಭಾಧ್ಯಕ್ಷರೂ ಆದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರೆ, ಮಾನ್ಯ ಮುಖ್ಯಮಂತ್ರಿಗಳೇ, ಸಚಿವರುಗಳೇ ಹಾಗೂ ವಿಧಾನ ಮಂಡಲದ ಉಭಯ ಸದನಗಳ ಎಲ್ಲಾ ಮಾನ್ಯ ಸದಸ್ಯರುಗಳೇ, ಎಲ್ಲರಿಗೂ ನಮಸ್ಕಾರ.

ಇಂದು ಬಹಳ ವಿಶೇಷ ದಿನ. ವಿಧಾನ ಸಭೆ ಹಾಗೂ ವಿಧಾನ ಪರಿಷತ್ತಿನ ಎಲ್ಲಾ ಸದಸ್ಯರು ಇಲ್ಲಿ ನೆರೆದಿದ್ದಾರೆ. ಇಂದಿನ ಈ ವಿಶೇಷ ಅಧಿವೇಶನದಲ್ಲಿ ನಾವೆಲ್ಲರೂ ಅತೀ ಅವಶ್ಯಕವಾದ ಹಾಗೂ ಮಹತ್ವಪೂರ್ಣವಾದ ಗಂಭೀರ ವಿಷಯದ ಬಗ್ಗೆ ಚರ್ಚೆ ನಡೆಸುತ್ತಿದ್ದೇವೆ.

ನಾಗರಿಕ ಸಮಾಜದ ಜನರು, ಹೆಚ್ಚು ಪ್ರಜಾಸತ್ತಾತ್ಮಕವಾಗಿರಬೇಕೆಂಬುದು ಪ್ರಜಾಪ್ರಭುತ್ವದ ಮೂಲ ಆಶಯವಾಗಿರುತ್ತದೆ. ಈ ಆಶಯಕ್ಕೆ ಪೂರಕವಾಗಿ, ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಜಾತ್ಯಾತೀತತೆ, ಧಾರ್ಮಿಕ ಸಹಿಷ್ಣುತೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಹಿಂದುಳಿದ ಹಾಗೂ ದಮನಿತ ವರ್ಗಗಳ ಏಳಿಗೆಗಾಗಿ ಸಂವಿಧಾನದ ನೆರಳಿನಲ್ಲಿ ನಮ್ಮ ಎಲ್ಲಾ ಸಂಸದೀಯ ಮೌಲ್ಯಗಳನ್ನು ರೂಪಿಸಲಾಗಿದೆ. ಇದು ಇಂದಿನ ಆಧುನಿಕ ವಿಚಾರವೆನಿಸಿದರೂ ಈ ವೈಜ್ಞಾನಿಕ ಪರಿಕಲ್ಪನೆಯು 12ನೇ ಶತಮಾನದಲ್ಲಿಯೇ ನಮ್ಮ ನೆಲದಲ್ಲಿಯೇ ಬೀಜಾಂಕುರವಾದದ್ದು ಎನ್ನುವುದು ಅಭಿಮಾನದ ಸಂಗತಿ. ಜನ ಸಾಮಾನ್ಯರ ಬದುಕಿಗೆ ಧ್ವನಿಯಾದ ಜಗಜ್ಯೋತಿ ಬಸವಣ್ಣನವರು ಪ್ರತಿಪಾದಿಸಿದ ಆದರ್ಶ ನೈತಿಕ ಮೌಲ್ಯಗಳೇ, ಪ್ರಜಾಪ್ರಭುತ್ವದ ಪರಿಕಲ್ಪನೆಗೆ ಅಡಿಪಾಯ ಒದಗಿಸಿವೆ ಎಂದರೆ ತಪ್ಪಾಗಲಾರದು.

12ನೇ ಶತಮಾನದಲ್ಲಿ ಅಲ್ಲಮಪ್ರಭು ಮತ್ತು ಬಸವಾದಿ ಶರಣರು ನಿರ್ಮಿಸಿದ **"ಅನುಭವ ಮಂಟಪ"** ಇಡೀ ವಿಶ್ವದ ಪ್ರಪ್ರಥಮ ಶಾಸನ ಸಭೆ ಎಂಬ ಹೆಗ್ಗಳಿಕೆಗೂ ಪಾತ್ರವಾಗಿದೆ. ಅಸಮಾನತೆಯನ್ನು ತೊಡೆದು ಹಾಕಬೇಕೆಂಬ **ಅನುಭವ ಮಂಟಪದ** ಆಶಯ ಹಾಗೂ ಮೌಲ್ಯ, ದೇಶಾತೀತ ಮತ್ತು ಸಾರ್ವಕಾಲಿಕ ವಿಚಾರಧಾರೆಯೇ ಆಗಿರುವುದು ಉಲ್ಲೇಖನೀಯ ಸಂಗತಿ.

ಮಾನವೀಯ ಮೌಲ್ಯಗಳು ನಾಗರಿಕರ ಬದುಕನ್ನು ಉತ್ಕೃಷ್ಟವಾಗಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ನಮ್ಮ ದೇಶದಂತಹ ವೈವಿಧ್ಯಮಯ ಲಕ್ಷಣಗಳನ್ನುಳ್ಳ ಸನ್ನಿವೇಶದಲ್ಲಿ, ಮೌಲ್ಯಗಳನ್ನು ನಾವು ಒಂದು ವಿಶಿಷ್ಟ ನೆಲೆಯಲ್ಲೇ ಅರ್ಥೈಸಿಕೊಳ್ಳಬೇಕಾಗುತ್ತದೆ. ಇದರೊಂದಿಗೆ ಜಾತಿ, ಧರ್ಮ, ಜನಾಂಗ, ಭಾಷೆ, ವೃತ್ತಿ, ಬಡವ, ಬಲ್ಲಿದ ಮೊದಲಾದ ಸಾಮಾಜಿಕ ತಾರತಮ್ಯಗಳನ್ನು ಮೀರಿ ಜನರಿಗೆ ಬದುಕನ್ನು ಕಟ್ಟಿಕೊಡುವುದು ಪ್ರಜಾಪ್ರಭುತ್ವದ ಆದ್ಯ ಕರ್ತವ್ಯವಾಗಿರುತ್ತದೆ. ಸಮಾಜದ ಹಿತಕ್ಕಾಗಿ ಸ್ವಹಿತ ಮರೆತು ಸಮಾಜದ ಕಲ್ಯಾಣಕ್ಕಾಗಿ ಪ್ರಜಾಪ್ರತಿನಿಧಿ ಯಾವತ್ತಿಗೂ ಶ್ರಮಿಸುತ್ತಿರಲೇಬೇಕು ಎಂಬುದು ಕೂಡ ಸಮಾನತೆಯ ಹರಿಕಾರ ಬಸವಣ್ಣನವರ ಆಶಯವೇ ಆಗಿದೆ. **ಸರ್ವರಿಗೂ ಸಮಪಾಲು-ಸರ್ವರಿಗೂ ಸಮಬಾಳು** ತತ್ವ ಪ್ರಜಾಪ್ರಭುತ್ವ ಮೂಲ ಆಶಯವಾಗಿದೆ.

ಜನತೆಯ ಬದುಕನ್ನು ಸುಧಾರಿಸಲು ಅವರಿಗೆ ಅಗತ್ಯವಿರುವಂತಹ ಆಹಾರ, ಶಿಕ್ಷಣ, ಆರೋಗ್ಯ, ಉದ್ಯೋಗ ಮುಂತಾದಂತಹ ನಾಗರಿಕ ಮೂಲ ಸೌಲಭ್ಯಗಳನ್ನು ಅವರಿಗೆ ತಲುಪಿಸುವುದು ಇಲ್ಲಿ ನೆರೆದಿರುವ ನಮ್ಮೆಲ್ಲರ ಆದ್ಯ ಕರ್ತವ್ಯವೇ ಆಗಿರುತ್ತದೆ. ಇದು ಆರಂಭದಿಂದಲೂ ಅಸಮತೆಗಳಲ್ಲೇ ಬಳಲಿರುವ ನಮ್ಮ ದೇಶಕ್ಕೆ ಸವಾಲಿನ ಹಾಗೂ ಶ್ರಮದಾಯಕ ಕಾರ್ಯವೇ ಆಗಿದೆ ಎಂಬುದು ನಮ್ಮೆಲ್ಲರ ಅನುಭವಕ್ಕೆ ಬಂದಿದೆ ಎಂದು ನಾನು ಭಾವಿಸುತ್ತೇನೆ.

ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಪ್ರಣೀತ ಸರ್ವೋದಯದ ಪರಿಕಲ್ಪನೆಯಲ್ಲಿ ಹಾಗೂ ಡಾ: ಅಂಬೇಡ್ಕರ್‌ರವರ ಚಿಂತನೆಯ ವಿಚಾರಧಾರೆ ಒಗ್ಗೂಡಿ ಈ ದೇಶಕ್ಕೆ ನೀಡಿರುವ ಸಂವಿಧಾನವೆಂಬ ಬೆಳಕಿನಲ್ಲಿ ನಾವು ಸಾಗಬೇಕಾಗಿದೆ. ಸಂವಿಧಾನದ ಮೂಲ ಆಶಯಗಳನ್ನು ಕಾರ್ಯರೂಪಕ್ಕೆ ತರುವುದೇ ಸಂಸದೀಯ ಮೌಲ್ಯಗಳ ನಿಜವಾದ ರಕ್ಷಣೆ ಎಂದರೆ ತಪ್ಪಾಗಲಾರದು.

ಈ ಕಾರಣಕ್ಕಾಗಿ ಇಂದಿನ ಜಂಟಿ ಅಧಿವೇಶನ ಅರ್ಥಪೂರ್ಣವಾಗಿದ್ದು, ಪ್ರಜಾಪ್ರಭುತ್ವ, ಸಂಸದೀಯ ಮೌಲ್ಯಗಳ ರಕ್ಷಣೆ ಕುರಿತು, ಸನ್ಮಾನ್ಯ ಲೋಕಸಭಾಧ್ಯಕ್ಷ ಶ್ರೀಯುತ ಓಂ ಬಿರ್ಲಾ ಅವರು ತಮ್ಮ ವಿಚಾರಗಳನ್ನು ಹಂಚಿಕೊಳ್ಳಲಿದ್ದಾರೆ.

ಪ್ರಜಾಸತ್ತಾತ್ಮಕ ವಿಚಾರಪರತೆಯುಳ್ಳ ಶಾಸನ ರಚನೆಯ ಮೂಲಕ ಜನತೆಗೆ ನೆರವಾಗುವ ಅವಿರತ ಪ್ರಯತ್ನದಲ್ಲಿ ನಾವು ಸದಾ ನಿರತರಾಗಿರಬೇಕಾಗಿರುತ್ತದೆ. ಅದು ಸಾಧ್ಯವಾಗುವುದು ತಮ್ಮನ್ನು ಆಯ್ಕೆ ಮಾಡಿದವರ ಧ್ವನಿಗೆ ಜನಪ್ರತಿನಿಧಿಗಳು ಕಿವಿಯಾದಾಗ ಮಾತ್ರ. ಹಾಗಾಗಿ ಒಂದು ಶಾಸನ ರಚನೆಯೆಂದರೆ ಜನರ ಮಾನವೀಯ ಅಗತ್ಯತೆಗಳನ್ನು ಕಾನೂನಿನ ಚೌಕಟ್ಟಿಗೆ ತರುವುದೇ ಆಗಿರುತ್ತದೆ. ಈ ಹಂತದಲ್ಲಿ ಕಾರ್ಯಾಂಗ ಮತ್ತು ಶಾಸಕಾಂಗಗಳೆರಡೂ ರಥದ ಜೋಡಿಗಾಲಿಗಳ ಹಾಗೆ ಚಲಿಸಬೇಕಾಗುತ್ತದೆ. ಕಾರ್ಯಾಂಗದಿಂದ ರಚಿತವಾದ ಕಾನೂನು ಕಟ್ಟಲೆಗಳನ್ನು, ಶಾಸಕಾಂಗವು ಅಮೂಲಾಗ್ರವಾಗಿ ಚರ್ಚಿಸಿ ಸಮಾಜದ ಎಲ್ಲಾ ಸ್ತರದ ಜನರಿಗೂ ಅದು ಲಭ್ಯವಾಗುವಂತೆ ಸಲಹೆ ಸೂಚನೆಗಳನ್ನು ನೀಡಿ ವಿನ್ಯಾಸಗೊಳಿಸಬೇಕಾಗುತ್ತದೆ.

ಈ ದಿಶೆಯಲ್ಲಿ ಎಲ್ಲರ ಒಳಿತನ್ನು ಗಮನದಲ್ಲಿಟ್ಟುಕೊಂಡು ಭಾರತದ **ವಿವಿಧತೆಯಲ್ಲಿ ಏಕತೆಯೆಂಬ** ವಿಶಿಷ್ಟ ಲಕ್ಷಣಕ್ಕೆ ಬಾಧಕವಾಗದಂತೆ ನಾವು ನಡೆದುಕೊಳ್ಳಬೇಕಾಗುತ್ತದೆ.

ಎಲ್ಲಾ ಜಾತಿ, ಧರ್ಮ, ಭಾಷೆ, ಶ್ರೇಣಿಗಳನ್ನು ಮೀರಿ ಜನತೆಯ ಸರ್ವತೋಮುಖ ಅಭಿವೃದ್ಧಿಯಷ್ಟೇ ನಮ್ಮ ಆದ್ಯತೆಯಾಗಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ರಚಿಸುವ ಮಸೂದೆಗಳು, ಅಗತ್ಯವಿರುವ ಜನಹಿತ ಯೋಜನೆಗಳು, ನೀತಿ-ನಿಯಮಗಳು ಹಾಗೂ ಶಾಸನ ರಚನೆಗಳಂತಹ ವಿಚಾರಗಳ ಬಗೆಗೆ ಚಿಂತಿಸುವ ಹಾಗೂ ಅದರ ಸಾಧಕ ಬಾಧಕಗಳನ್ನು ವಿವೇಚಿಸುವ ಮತ್ತು ಭಾರತ ಸಂವಿಧಾನದಲ್ಲಿನ ಪ್ರಜಾಪ್ರಭುತ್ವದ ಮುಖ್ಯ ಉದ್ದೇಶಗಳನ್ನು ಅತ್ಯಂತ ದಕ್ಷ ಹಾಗೂ ಪರಿಪೂರ್ಣ ನೆಲೆಗಳಲ್ಲಿ ಈಡೇರಿಸಲು ಇರುವ ಏಕೈಕ ವೇದಿಕೆಯೆಂದರೆ ಸದನ.

ಈ ಮಾತಿಗೆ ಇಂಬು ಕೊಡುವಂತೆ ಸ್ವಾತಂತ್ರ್ಯೋತ್ತರ ಭಾರತದ 50-60ನೇ ದಶಕಗಳಲ್ಲಿ ಸದನದಲ್ಲಿ ನಡೆಯುತ್ತಿದ್ದ ಚರ್ಚೆಗಳು ರಾಷ್ಟ್ರಕವಿ ಕುವೆಂಪುರವರ ರಾಜಕೀಯ ನಿಲುವುಗಳಾದ ಸರ್ವೋದಯ, ಸಮಾನತೆ, ಸಮದೃಷ್ಟಿಗಳ ನೆಲೆಯಲ್ಲಿ ಹಾಸುಹೊಕ್ಕಾಗಿದ್ದವು. ತಾವೆಲ್ಲರೂ “ಸಂಸದೀಯ ಪಟುಗಳು” ಮಾಲಿಕೆಯಲ್ಲಿ ನಮ್ಮ ಹಿಂದಿನ ಸಂಸದರು ಸದನದಲ್ಲಿ ನಡೆಸಿರುವ ಅಮೂಲ್ಯ ಚರ್ಚೆಗಳನ್ನು ಗಮನಿಸಿದರೆ ಆ ಚರ್ಚೆಗಳಲ್ಲಿರುತ್ತಿದ್ದ ಸಮಾಜದ ಬಗೆಗಿನ ಅಂತಃಕರಣ, ಮಾನವೀಯ ನೆಲೆ, ಕಾಳಜಿಗಳು ಹೃದಯಸ್ಪರ್ಶಿಯಾಗಿರುತ್ತಿದ್ದದ್ದು ಗೋಚರವಾಗುತ್ತದೆ. ಆದರೆ ಕಾಲ ಸರಿದಂತೆ ಇಂದು ನಮ್ಮೆಲ್ಲರ “ಅನುಕೂಲ ಸಿಂಧು ರಾಜಕಾರಣ” ನಮ್ಮನ್ನು ತಲೆತಗ್ಗಿಸುವಂತೆ ಮಾಡುತ್ತಿವೆ. ಸದನಗಳು ಆರೋಪ-ಪ್ರತ್ಯಾರೋಪಗಳ ಅಖಾಡಗಳಾಗಿವೆ. ‘ಭಿನ್ನತೆ’ಯೆಂಬುದು ‘ವಿರೋಧ’ ಎಂಬ ಅರ್ಥಕ್ಕೆ ಎಡೆಮಾಡಿಕೊಡುತ್ತಿರುವುದು ವಿಷಾದನೀಯ. ಚರ್ಚೆಗಳಿಗೆ ಅವಕಾಶವೇ ಇಲ್ಲದಂತೆ ವಿಧೇಯಕಗಳು ಮಂಡನೆಯಾಗಿ, ಅನುಮೋದನೆ ಪಡೆಯುತ್ತಿವೆ. ವಿಧೇಯಕಗಳ ಮಂಡನೆಗೆ ಬಹುಮುಖ್ಯವಾಗಿ ಅಗತ್ಯವಾದ ಯಾವ ಕಾರ್ಯವಿಧಾನವನ್ನು ಪಾಲಿಸದೆ ಅವುಗಳನ್ನು ಏಕಾಏಕಿ ಜಾರಿಗೆ ತರಲಾಗುತ್ತಿದೆ. ಜನರಿಂದ ಆರಿಸಿಬಂದ ನಾವು ಹೇಳಿದ ಕೂಡಲೇ ಎಲ್ಲಾ ಕಾರ್ಯಗಳು ನಡೆದು ಬಿಡಬೇಕು ಎಂಬ ಧೋರಣೆ ಕಡಿವಾಣವಿಲ್ಲದ ಕುದುರೆಯಂತೆ ಓಡುತ್ತಲೇ ಇದೆ. ಒಂದು ವೇಳೆ ಅಧಿವೇಶನದಲ್ಲಿ ಮಂಡನೆಯಾಗದ ವಿಧೇಯಕಗಳನ್ನು ಸುಗ್ರಿವಾಜ್ಞೆ ಹೊರಡಿಸುವ ಮೂಲಕ ಅನುಷ್ಠಾನಗೊಳಿಸುತ್ತಿರುವ ಪರಿಪಾಠವಂತೂ ಅತ್ಯಂತ ನಿರಾಶಾದಾಯಕ ಸಂಪ್ರದಾಯಕ್ಕೆ ನಾಂದಿಯನ್ನೇ ಹಾಡಿಬಿಟ್ಟಿದೆ.

ಸುಗ್ರೀವಾಜ್ಞೆಯನ್ನು ರಾಷ್ಟ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಅತ್ಯಂತ ತುರ್ತಾಗಿ ಶಾಸನಗಳ ಅನಿವಾರ್ಯತೆಯುಂಟಾದ ಸಂದರ್ಭದಲ್ಲಿ ಮಾತ್ರ ಹೊರಡಿಸುವ ಒಂದು ಕಾಲವೂ ಇತ್ತು ಎಂಬುದನ್ನು ನೆನೆದರೆ, ಪ್ರಸ್ತುತ ಎಂತಹ ವಿಷಯ ಪರಿಸ್ಥಿತಿಯಲ್ಲಿ ನಾವಿದ್ದೇವೆ ಹಾಗೂ ನಮ್ಮೆಲ್ಲರ ಪ್ರಸ್ತುತತೆ ಹೇಗೆ ಕಡಿಮೆಯಾಗುತ್ತಿದೆ ಎಂಬುದು ಅರಿವಾಗುತ್ತದೆ. ಇಂತಹ ಮಾರಕ ವಿಚಾರಗಳಿಗೆ ನಮ್ಮ ಸಮಾಜದಲ್ಲಿ ಬೇರುಬಿಟ್ಟಿರುವ ವಿಷಮತೆಯೇ ಕಾರಣ ಎಂಬುದನ್ನು ಅರಿಯಬೇಕಿದೆ.

ಈ ದಿಶೆಯಲ್ಲಿ ಆಳವಾಗಿ ಚಿಂತಿಸಲು ಆರಂಭಿಸಿದಾಗ ಚುನಾವಣೆಗಳನ್ನು ಹಣ-ಹೆಣ-ಸ್ವಜನ ಪಕ್ಷಪಾತಗಳಿಂದ ಮುಕ್ತವಾಗಿಸಿದರೆ ಮಾತ್ರ ಸಮಸ್ಯೆ ಗರಿಷ್ಠ ಪ್ರಮಾಣದಲ್ಲಿ ಕಡಿಮೆಯಾಗುವ ಸಾಧ್ಯತೆಯಿದೆ ಎನಿಸುತ್ತದೆ. ಬದಲಾದ ದಿನಮಾನಗಳಲ್ಲಿ ಚಕ್ರ ಉರುಳುತ್ತಲೇ ಇರುತ್ತದೆ ಎಂಬುದನ್ನು ನಾವೆಲ್ಲರೂ ಹೊಸ ಭರವಸೆಯೊಂದಿಗೆ ಹಾಗೂ

ನಿರೀಕ್ಷೆಗಳೊಂದಿಗೆ ಕನಸುಗಳನ್ನು ಕಟ್ಟಿಕೊಳ್ಳೋಣ. ಚಕ್ರ ಉರುಳಿದಂತೆ, ಹಳಿತಪ್ಪಿದ ಗಾಲಿಯನ್ನು ಮತ್ತೆ ಹೊಸ ಉತ್ಸಾಹ-ಚೈತನ್ಯಗಳೊಂದಿಗೆ ಹಳಿಗೆ ತರೋಣ. ಏಕೆಂದರೆ, ಈ ದೇಶವನ್ನು ತ್ಯಾಗ-ಬಲಿದಾನಗಳಿಂದ, ನಿಸ್ವಾರ್ಥತತೆಯಿಂದ ನಮ್ಮ ಪೂರ್ವಜರು ಕಟ್ಟಿದ್ದಾರೆ. ಅವುಗಳನ್ನು ನಿರರ್ಥಕ ಮಾಡುವುದು ಬೇಡ.

ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಈ ದೇಶದಲ್ಲಿ ಮಧ್ಯರಾತ್ರಿ ಮಹಿಳೆಯರು ಸುರಕ್ಷಿತವಾಗಿ ಸಂಚರಿಸಿದಾಗ ಮಾತ್ರ ಈ ದೇಶಕ್ಕೆ ವಾಸ್ತವವಾಗಿ ಸ್ವಾತಂತ್ರ್ಯ ಬರುತ್ತದೆಂದು ತುಂಬಾ ಮಾರ್ಮಿಕವಾಗಿ ಹೇಳಿದ್ದರು.

ಇಂದು ನಮ್ಮ ಸಮಾಜದಲ್ಲಿ ನಡೆಯುತ್ತಿರುವ ಮಹಿಳೆಯರ ಮೇಲಿನ ಸಾಮೂಹಿಕ ಅತ್ಯಾಚಾರ, ಅಪ್ರಾಪ್ತ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ದೌರ್ಜನ್ಯಗಳು ನಾಗರಿಕ ಸಮಾಜದಲ್ಲಿರುವ ಪ್ರತಿಯೊಬ್ಬರು ತಲೆತಗ್ಗಿಸುವಂತೆ ಮಾಡಿದೆ.

ಮಹಿಳೆಯರು ಮತ್ತು ಮಕ್ಕಳಿಗೆ ಸುರಕ್ಷಿತ ವಾತಾವರಣ ಹಾಗೂ ಶಿಕ್ಷಣದ ಮೂಲಕ ಘನತೆಯ ಬದುಕಿಗೆ ಪೂರಕವಾದ ವಾತಾವರಣವನ್ನು ಕಲ್ಪಿಸಿಕೊಡುವುದು ಸದನಗಳಿಗೆ ಕಷ್ಟಸಾಧ್ಯವೇನಲ್ಲ. ಏಕೆಂದರೆ ಸದನಗಳಿಗೆ ತಮ್ಮದೇ ಆದ ಮಹತ್ವವಿದೆ. ಸದನಗಳ ಮೌಲ್ಯಗಳ ಪರಿಧಿಯಲ್ಲಿಯೇ ಕಾನೂನುಗಳನ್ನು ರಚಿಸುವ ಹಾಗೂ ಬದಲಾಯಿಸುವ, ಮಾರ್ಪಾಡು ಮಾಡುವ ಹಾಗೂ ರದ್ದುಪಡಿಸುವ ಸರ್ವಸ್ವತಂತ್ರ ಅಧಿಕಾರವೂ ಇದೆ. ಇದೊಂದು ಸಮಾಜವನ್ನು ಹೊಸ ದಿಕ್ಕಿನೆಡೆಗೆ ಕರೆದೊಯ್ಯಲು ಇರುವ ಮಂತ್ರದಂಡವೆಂದು ಅತ್ಯಂತ ಜವಾಬ್ದಾರಿಯಿಂದ ಆಲೋಚಿಸಬೇಕಾಗುತ್ತದೆ ಮತ್ತು ನಾವೆಲ್ಲರೂ ಹಾಗೆಯೇ ಚಿಂತಿಸೋಣ ಎನ್ನುವುದು ನನ್ನ ಅನಿಸಿಕೆ.

**ಸ್ನೇಹಿತರೇ,**

ಈ ಸದನಕ್ಕೆ ನಾವೆಲ್ಲರೂ ಜಾತಿ, ಧರ್ಮ, ಲಿಂಗಗಳ ಭೇದವಿಲ್ಲದೆ ಆರಿಸಿ ಬರುವ ಅವಕಾಶ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಕಲ್ಪಿಸಿಕೊಟ್ಟಿದೆ. ಇಲ್ಲಿ ವೈವಿಧ್ಯಮಯ ಹಿನ್ನೆಲೆಯ ಪ್ರತಿನಿಧಿಗಳು ಆರಿಸಿ ಬರುತ್ತಾರೆ. ಇಂತಹ ಪವಿತ್ರ ವಾತಾವರಣದಲ್ಲಿ ಜನರ ಬೇಕು-ಬೇಡಗಳ, ದುಃಖ-ದುಮ್ಮಾನಗಳನ್ನು ಆಲಿಸುವ, ಚರ್ಚಿಸುವ, ನಿರ್ವಹಿಸುವ ಔದಾರ್ಯವನ್ನು ತೋರಬೇಕಾಗಿದೆ. ಪಕ್ಷಭೇದ ಮರೆತು ಪರಸ್ಪರ ವಿಶ್ವಾಸಾರ್ಹತೆಯಿಂದ ವರ್ತಿಸಿ, ಸದಸ್ಯರೆಲ್ಲರೂ ತಮ್ಮ ಅನುಭವ ಹಾಗೂ ಜ್ಞಾನಗಳನ್ನು ಧಾರೆಯೆರೆದು ನಿಸ್ವಾರ್ಥವಾದ ಜನಸೇವೆ ಮಾಡಬೇಕಾದುದು ಹಿಂದೆಂದಿಗಿಂತಲೂ ಇಂದು ತುರ್ತು ಅಗತ್ಯವಾಗಿದೆ ಎಂಬುದನ್ನು ನಾವೆಲ್ಲರೂ ಮನವರಿಕೆ ಮಾಡಿಕೊಳ್ಳಬೇಕಿದೆ.

ಸದನದಲ್ಲಿ ಮಾನ್ಯ ಸಭಾಪತಿಯವರ ಹಾಗೂ ಮಾನ್ಯ ಸಭಾಧ್ಯಕ್ಷರ ಸ್ಥಾನಗಳಿಗೆ ಅವುಗಳದೇ ಆದ ಗೌರವ, ಘನತೆಯಿದೆ. ಈ ಘನತೆಗೆ ಚ್ಯುತಿ ಬಾರದಂತೆ ಸಂಸದೀಯ ಪಟುಗಳ ವರ್ತನೆಯಿರಬೇಕಾಗುತ್ತದೆ. ಇವು ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಪ್ರಜ್ಞಾಪೂರ್ವಕವಾಗಿ ಎತ್ತಿ ಹಿಡಿಯುವ ಕೆಲಸದಲ್ಲಿಯೇ ಸದಾ ನಿರತವಾಗಿರುವಂತಹ ಸ್ಥಾನಗಳಾಗಿವೆ ಎಂಬುದು ಸರ್ವವಿದಿತ.

**ವಿಧಾನ ಮಂಡಲದ ಕಾರ್ಯಕಲಾಪಗಳು ವರ್ಷದಲ್ಲಿ ಕನಿಷ್ಠ ಅರವತ್ತು ದಿನಗಳು** ನಡೆಯಬೇಕು ಎನ್ನುವ ವಿಚಾರವನ್ನು ಪಕ್ಷಭೇದ ಮರೆತು ನಾವೆಲ್ಲರೂ ಒಪ್ಪಿಕೊಂಡಿದ್ದರೂ ಸಹ ಅದು ಇತ್ತೀಚಿನ ವರ್ಷಗಳಲ್ಲಿ ಸಾಧ್ಯವಾಗಿಲ್ಲ ಎನ್ನುವುದು ಕಟುಸತ್ಯವಾಗಿದೆ.

ಸ್ಥಾಯಿ ಸಮಿತಿಗಳು ವಿಧಾನ ಮಂಡಲದ ಸದನಗಳ ಮುಂದುವರೆದ ಭಾಗವೇ ಆಗಿದ್ದು, ಅಧಿವೇಶನಗಳು ಇಲ್ಲದಿರುವಾಗ ಅಲ್ಲಿ ಪ್ರಸ್ತಾಪಿಸುವಂತಹ ನೀತಿ, ನಿಯಮ, ಕಾನೂನುಗಳ ಅನುಷ್ಠಾನಗಳ ಸಂಬಂಧ ವಿಧಾನ ಮಂಡಲದ ಸದಸ್ಯರು ಸಕ್ರಿಯವಾಗಿ ಭಾಗವಹಿಸಿ ತಮ್ಮ ಜವಾಬ್ದಾರಿಯನ್ನು ನಿರ್ವಹಿಸುವುದೂ ಕೂಡ ಅತ್ಯಂತ ಆದ್ಯ ವಿಚಾರವೇ ಆಗಿರುತ್ತದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಂಸದೀಯ ಮೌಲ್ಯಗಳು ಒಂದು ರಕ್ಷಿತ ಪರಿಧಿಯನ್ನು ದಾಟಿದರೆ, ಅಲ್ಲಿ ಸರ್ವಾಧಿಕಾರಿಗಳ ಉಗಮ ತಾನೇ ತಾನಾಗಿ ಸೃಷ್ಟಿಯಾಗಿ ಬಿಡುತ್ತದೆ. ಸಂವಿಧಾನದ ಮಾರ್ಗದರ್ಶನದಲ್ಲಿಯೇ ನಡೆಯಬೇಕಾದ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪರಸ್ಪರ ಪೂರಕವಾಗಿ ಹಾಗೂ ಪ್ರಜಾಪರವಾಗಿ ನಡೆದುಕೊಳ್ಳಬೇಕಾಗುತ್ತದೆ. ಪರಿಸ್ಥಿತಿ ಹೀಗಿಲ್ಲದಿರುವಾಗ ಕಾರ್ಯಾಂಗವು ಶಾಸಕಾಂಗದ ಮೇಲೆ ಸವಾರಿ ಮಾಡುವ ಅಪಾಯಕಾರಿ ಹಂತವನ್ನು ನಾವು ಸುಗ್ರೀವಾಜ್ಞೆಗಳನ್ನು ತರುತ್ತಿರುವ ಹಿನ್ನೆಲೆಯಲ್ಲಿ ಗಮನಿಸಬೇಕಾಗುತ್ತದೆ. ಈ ನಡೆಯನ್ನು ಸದನದ ಪ್ರಸ್ತುತತೆಯನ್ನು ಗೌಣಗೊಳಿಸುವ ನಡೆಯೆಂದೇ ಅರ್ಥೈಸಬಹುದಾಗಿದೆ.

ದೂರದರ್ಶಿತ್ವವುಳ್ಳ, ಸ್ವಾರ್ಥ-ರಾಜಕೀಯ ಮುಕ್ತ, ಕಾನೂನು ಅನುಷ್ಠಾನಕ್ಕೆ ಹಾಗೂ ಶಾಸನ ರಚನೆಗೆ ನಾವೆಲ್ಲರೂ ಕಟಿಬದ್ಧರಾಗಿ ರಾಷ್ಟ್ರ ಹಾಗೂ ರಾಜ್ಯದ ಹಿತದೃಷ್ಟಿಯಿಂದ ಯಾವುದೇ ನಿರ್ಣಾಯಕ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಪಕ್ಷಭೇದ ಮರೆತು ಒಂದಾಗಿ ನಿಲ್ಲುವ ಪ್ರತಿಜ್ಞೆಗೈಯೋಣ ಎಂದು ನಾನು ತಮ್ಮಲ್ಲಿ ವಿನಂತಿಸುತ್ತೇನೆ.

ರಾಜಕಾರಣದಲ್ಲಿ ಯುವ ಪೀಳಿಗೆಗೆ ಆದ್ಯತೆ ನೀಡ ಮುತ್ಸದ್ದಿತನದ ಹಾಗೂ ಸಕ್ರಿಯ ರಾಜಕಾರಣಕ್ಕೆ ಮೇಲ್ಪಂಕ್ತಿ ಹಾಕೋಣ. ವ್ಯಕ್ತಿ ನಿಷ್ಠೆಯನ್ನು ಪ್ರಧಾನವಾಗಿಸದೇ, ವಸ್ತುನಿಷ್ಠವಾಗಿ ಈ ಸಮಾಜವನ್ನು ರೂಪಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ ಎನ್ನುವುದನ್ನು ನಾನು ಪ್ರಾಮಾಣಿಕವಾಗಿ ಹೇಳಬಯಸುತ್ತೇನೆ.

ಜನರಿಂದ ಆಯ್ಕೆಯಾದ ನಾವೆಲ್ಲರೂ ಒಂದು ನಿರ್ದಿಷ್ಟ ನೀತಿ ಸಂಹಿತೆಯನ್ನು ಪಾಲಿಸುವುದರ ಮೂಲಕ ನಮ್ಮ ಪೂರ್ವಿಕ ಸಂಸದೀಯ ಪಟುಗಳ ಹೆಜ್ಜೆ ಗುರುತುಗಳಲ್ಲಿರುವ ತತ್ತ್ವಾದರ್ಶ-ಮೌಲ್ಯಗಳನ್ನು ಸಕಾಲಿಕ ವಿವೇಕದೊಂದಿಗೆ ಗ್ರಹಿಸಿಕೊಳ್ಳೋಣ. ಪ್ರಜೆಗಳ ಆಶೋತ್ತರಗಳಿಗೆ ಸ್ಪಂದಿಸುವ ಮನಸ್ಥಿತಿಯನ್ನು ಸದಾ ಜಾಗೃತವಾಗಿಟ್ಟುಕೊಂಡು, ಅಧಿವೇಶನ ನಡೆಯುವ ಪ್ರತಿಯೊಂದು ದಿನವೂ, ಅಧಿವೇಶನದಲ್ಲಿ ಭಾಗವಹಿಸಿ, ವಿಚಾರಗಳನ್ನು ಮಂಡಿಸಿ, ಆರೋಗ್ಯಕರ ಚರ್ಚೆಗಳಿಗೆ ನಾಂದಿ ಹಾಡೋಣ. ಸ್ವಜನ ಪಕ್ಷಪಾತವೆಂಬುದು ಈ ದೇಶಕ್ಕೆ ಬಂದೊದಗಿದ ಆಪತ್ತು ಎಂಬುದನ್ನು

ಮನಗಂಡು ಸಂಸದೀಯ ಮೌಲ್ಯಗಳ ಅಪಮೌಲ್ಯವನ್ನು ತಡೆದು ಈ ದೇಶವನ್ನು ಮಾದರಿಯಾಗಿಸೋಣ ಎನ್ನುವುದು ನನ್ನ ಕಳಕಳಿಯಾಗಿದೆ.

ಈ ಎಲ್ಲಾ ನಿರೀಕ್ಷೆಗಳೊಂದಿಗೆ ಒಂದೇ ದಿನದಲ್ಲಿ ಸಂಪೂರ್ಣ ಬದಲಾವಣೆಯ ನಿರೀಕ್ಷೆ ಮಾಡದಿದ್ದರೂ, ಒಂದು ಧನಾತ್ಮದ ಪಲ್ಲಟವನ್ನಾದರೂ ಸಾಧಿಸುತ್ತದೆಂಬ ಆಶಯ ನನ್ನದಾಗಿದೆ. ದೇಶವು ಸಂವಿಧಾನವನ್ನು ಅಂಗೀಕರಿಸುವ ಮೊದಲೇ ಮೈಸೂರು ಸಂಸ್ಥಾನದಲ್ಲಿ ಮೇಲ್ಮನೆಯ ಪರಿಕಲ್ಪನೆ ಚಾಲನೆಯಲ್ಲಿತ್ತು ಹಾಗೂ ರಾಷ್ಟ್ರಮಟ್ಟದಲ್ಲಿ ರಾಜ್ಯಸಭೆ ರಚನೆಯಾಗಲು ಈ ಪರಿಕಲ್ಪನೆಯೇ ಸ್ಫೂರ್ತಿಯಾಯಿತು ಎಂಬುದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಯಾದ ನನಗೆ ಅತ್ಯಂತ ಹೆಮ್ಮೆಯ ವಿಚಾರವೆಂಬುದನ್ನು ನಿಮ್ಮೆಲ್ಲರೊಂದಿಗೆ ಹಂಚಿಕೊಳ್ಳುತ್ತಾ, ಸಂಸದೀಯ ಮೌಲ್ಯಗಳನ್ನು ಇನ್ನಷ್ಟು ಹೆಚ್ಚಿಸುವ ನಿಟ್ಟಿನಲ್ಲಿ ಈಗಿರುವ ನಿಯಮಗಳನ್ನು ಹೇಗೆ ಬಲಪಡಿಸಬೇಕು ಹಾಗೂ ಅವುಗಳನ್ನು ಯಾವ ರೀತಿಯಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕೆಂಬ ಕುರಿತು ಚಿಂತನೆ ನಡೆಸಿ ಅವುಗಳನ್ನು ನಾವೆಲ್ಲರೂ ಸೇರಿ ಕಾರ್ಯರೂಪಗೊಳಿಸುವ ಸಂಕಲ್ಪದೊಂದಿಗೆ ಅತ್ಯಂತ ಸಂತೊಷದಿಂದ ನಾನು ಇಂದಿನ ಈ ಸಭೆಯಲ್ಲಿ ಭಾಗವಹಿಸಿದ್ದೇನೆ.

ಲೋಕಸಭೆಯ ಅಧ್ಯಕ್ಷರಾದ ಮಾನ್ಯ ಶ್ರೀ ಓಂ ಬಿರ್ಲಾ ಅವರಿಂದ ಪ್ರಜಾಸತ್ತಾತ್ಮಕ ಮೌಲ್ಯಗಳ ರಕ್ಷಣೆ ಕುರಿತು ಅವರ ಅನುಭವದ ಮೂಸೆಯಿಂದ ಹೊರಬರುವ ಉನ್ನತ ವಿಚಾರಗಳನ್ನು ನಾವೆಲ್ಲರೂ ಕೇಳಿ ಅವುಗಳ ಅನುಷ್ಠಾನಕ್ಕೆ ಕಟಿಬದ್ಧರಾಗೋಣ ಎಂದು ಪುನರುಚ್ಚರಿಸುತ್ತಾ ನನ್ನ ಮಾತಿಗೆ ವಿರಾಮ ನೀಡುತ್ತೇನೆ.

**ಜೈ ಹಿಂದ್, ಜೈ ಕರ್ನಾಟಕ.**

## 156. 75ನೇ ಸ್ವಾತಂತ್ರ್ಯ ಅಮೃತ ಮಹೋತ್ಸವದ ಸಂದರ್ಭದಲ್ಲಿ ವಿಧಾನ ಸಭೆಯಲ್ಲಿ ಸನ್ಮಾನ್ಯ ಲೋಕಸಭಾ ಅಧ್ಯಕ್ಷರಾದ ಶ್ರೀ ಓಂ ಬಿರ್ಲಾ ರವರ ಉಪಸ್ಥಿತಿಯಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಮಾತನಾಡಿರುವ ಕುರಿತು:–



**ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ:** ಪ್ರಜಾಪ್ರಭುತ್ವ ಸಂಸದೀಯ ಮೌಲ್ಯಗಳ ರಕ್ಷಣೆಯ ಕುರಿತಂತೆ ಉಭಯ ಸದನಗಳ ಸದಸ್ಯರನ್ನುದ್ದೇಶಿ ಮಾತನಾಡುವುದಕ್ಕೆ ಇಂದು ಪ್ರಧಾನ ಭಾಷಣ ಮಾಡಲು ಬಂದಿರುವ ಸನ್ಮಾನ್ಯ ಶ್ರೀ ಓಂ ಬಿರ್ಲಾರವರೆ, ಶ್ರೀಯುತ ಬಸವರಾಜ ಹೊರಟ್ಟಿಯವರೆ ಮತ್ತು ಎಲ್ಲಾ ಆತ್ಮೀಯ ಶಾಸಕ ಬಂಧುಗಳೆ, ನನ್ನ ಬಳಿ ಅನೇಕ ಶಾಸಕರುಗಳು, ಪತ್ರಕರ್ತರು, ಅಧಿಕಾರಿಗಳನ್ನೊಳಗೊಂಡಂತೆ ಸಾರ್ವಜನಿಕ ಕ್ಷೇತ್ರದಲ್ಲಿರುವಂತಹ ಆತ್ಮೀಯರು, ತಾವು ವಿಧಾನಸಭಾಧ್ಯಕ್ಷರಾದ ಮೇಲೆ ಈ ಕಾರ್ಯಕ್ರಮವನ್ನು ಏಕೆ ಮಾಡುತ್ತಿದ್ದೀರಿ ಎಂಬ ಪ್ರಶ್ನೆಯನ್ನು ಕೇಳಿದರು. ಇದು ವಿಧಾನಮಂಡಲದ ವತಿಯಿಂದ ಸಂಘಟಿಸಿರುವಂತಹ ಕಾರ್ಯಕ್ರಮ. ಇದನ್ನು ನಾವು ಮಾಡುವುದಕ್ಕೆ ಮುಖ್ಯವಾದ ಕಾರಣವೆಂದರೆ, ನಮ್ಮೆಲ್ಲರಿಗೆ ಗೊತ್ತಿದೆ. ಇಡೀ ಸಮಾಜದ ಎಲ್ಲಾ ವ್ಯವಸ್ಥೆಗಳಲ್ಲಿ, ಎಲ್ಲಾ ಕ್ಷೇತ್ರಗಳಲ್ಲಿ ಆದರ್ಶಗಳ ಮೌಲ್ಯಗಳ ಅಧ:ಪತನಗಳಾಗುತ್ತಿರುವುದು ಗೊತ್ತಿದೆ. ನಾವಿಬ್ಬರು ಭೇಟಿಯಾದಾಗ ಮಾತನಾಡುವುದು ಎಲ್ಲಿ ಯಾವ ದೋಷಗಳಾಗುತ್ತಿವೆ? ಯಾವ ದೌರ್ಬಲ್ಯಗಳಿಂದ ಏನು ತೊಂದರೆಯಾಗುತ್ತಿದೆ? ಜನಜೀವನ ಎಷ್ಟು ಕಷ್ಟದಲ್ಲಿದೆ? ಅಭಿವೃದ್ಧಿಗಳು ಹೇಗೆ ಕುಂಠಿತವಾಗಿವೆ ಇತ್ಯಾದಿ ವಿಷಯಗಳನ್ನು ನಾವು ಮಾತನಾಡುತ್ತೇವೆ. ವ್ಯಕ್ತಿ-ವ್ಯಕ್ತಿಗಳಲ್ಲಿರುವ ಮೌಲ್ಯಗಳ ಕುಸಿತದಿಂದ, ವ್ಯವಸ್ಥೆಗಳ ಮೌಲ್ಯಗಳು ಹೇಗೆ ಕುಸಿದು ಇಂದು ನಾವು ಏನೆಲ್ಲಾ ಕಷ್ಟಗಳನ್ನು ಅನುಭವಿಸುತ್ತಿದ್ದೇವೆ ಎನ್ನುವ ಮಾತನ್ನು ನಾವು ಪರಸ್ಪರ ಹಂಚಿಕೊಳ್ಳುತ್ತೇವೆ. ಅತ್ಯಂತ ಸಹಜವಾಗಿ ನೋವುಗಳನ್ನು, ದು:ಖವನ್ನು ನಮ್ಮ ಆತಂಕವನ್ನು , ಆಕ್ರೋಶವನ್ನು ಎಲ್ಲವನ್ನೂ ಅನೇಕ ಸಂದರ್ಭದಲ್ಲಿ ನಾವು ವ್ಯಕ್ತಪಡಿಸುತ್ತಿರುತ್ತೇವೆ. ನಿಜ, ಇದೆಲ್ಲವೂ ಸತ್ಯ. ಆದರೆ ಒಳ್ಳೆಯದನ್ನು ಮಾಡಬೇಕು ಎಂದು ನಾವೆಲ್ಲಾ ಪ್ರಯತ್ನ ಮಾಡುವುದು ಅಷ್ಟೇ ಅಗತ್ಯವಾದ ಮತ್ತು ಸತ್ಯವಾದ ಮಾತು. ನಾವು ಹೀಗೆ ಆಗುತ್ತಿದೆ ಎಂದು ನಮ್ಮ ಬೇಸರವನ್ನು ವ್ಯಕ್ತಪಡಿಸುವುದರ ಜೊತೆ-ಜೊತೆಯಲ್ಲಿ ಹೀಗೆ ಮಾಡಬೇಕೆನ್ನುವ ಜವಾಬ್ದಾರಿಯನ್ನೂ ನಾವು ಸ್ವೀಕರಿಸಬೇಕು ಎನ್ನುವ ಹಿನ್ನೆಲೆಯಲ್ಲಿ ಉಭಯ ಸದನಗಳ ಸದಸ್ಯರುಗಳ ಈ ಕಾರ್ಯಕ್ರಮ ನಡೆಯುತ್ತಿದೆ. ಆದರೆ, ಈ ಪರಿಸ್ಥಿತಿಯಲ್ಲಿ ಪ್ರಜಾಪ್ರಭುತ್ವದಲ್ಲಿ ಸಂಸದೀಯ ವ್ಯವಸ್ಥೆಯಲ್ಲಿರುವಂತಹ ಪ್ರಮುಖರಾದ ನಾವು, ಸಮಾಜಕ್ಕೆ ಒಂದು ನೇತೃತ್ವವನ್ನು ಕೊಡುತ್ತಿರುವ ನಾವು, ಈ ಜವಾಬ್ದಾರಿಯನ್ನು ಸ್ವೀಕರಿಸುವಂತಹ, ನಮ್ಮ ಜವಾಬ್ದಾರಿಗಳನ್ನು ಹೆಚ್ಚಿಸಿಕೊಳ್ಳುವಂತಹ ಕಾರ್ಯಕ್ರಮ ಇದಾಗಬೇಕೆನ್ನುವ ಹಿನ್ನೆಲೆಯಲ್ಲಿ ಈ ಕಾರ್ಯಕ್ರಮವನ್ನು ಮಾಡುತ್ತಿದ್ದೇವೆ. ನನಗೆ ಅತ್ಯಂತ ಸಂತೋಷವಿದೆ. ನಾನು ಸ್ಪೀಕರ್ ಆದ ತಕ್ಷಣದಲ್ಲಿ ಮೊದಲು ಸಂವಿಧಾನದ ಬಗ್ಗೆ ನಮ್ಮ ವಿಧಾನ ಸಭೆಯಲ್ಲಿ ನಾವು ಸುದೀರ್ಘವಾಗಿ ಮಾತನಾಡಿದ್ದೇವೆ. 50ಕ್ಕಿಂತ ಹೆಚ್ಚು ಶಾಸಕರು ಅತ್ಯಂತ ಪ್ರಭಾವಿಯಾಗಿ

ಮಾತನಾಡಿರುವುದನ್ನು ನಾನು ಸ್ಮರಿಸಿಕೊಳ್ಳುತ್ತಾ ಅವರಿಗೆ ಅಭಿನಂದಿಸುತ್ತೇನೆ. ಇಡೀ ದೇಶದ ವಿಧಾನಸಭೆಗಳ ಇತಿಹಾಸದಲ್ಲಿ ಕರ್ನಾಟಕ ವಿಧಾನಸಭೆಯು, ಸಂವಿಧಾನದ ಬಗ್ಗೆ ಸುದೀರ್ಘವಾಗಿ ಚರ್ಚೆ ಮಾಡಿರುವ ಮೊದಲ ವಿಧಾನಸಭೆ ಎಂದು ಹೇಳಿಸಿಕೊಂಡಿರುವುದಕ್ಕೆ ನಾವು ಕಾರಣೀಕರ್ತರಾಗಿದ್ದೇವೆ. ಇದಾದ ನಂತರ ಬ್ಯಾಂಕ್ವೆಟ್‌ಹಾಲ್‌ನಲ್ಲಿ ಸಮಾಜದ ವಿವಿಧ ಕ್ಷೇತ್ರಗಳ ಗಣ್ಯರುಗಳ ಜೊತೆ ಸಮಾಲೋಚನೆಗಳನ್ನು ಮಾಡಿದ್ದೇವೆ. ಅವರನ್ನೂ ನಾವು ಇಂದಿನ ಕಾರ್ಯಕ್ರಮಕ್ಕೆ ಆಹ್ವಾನಿಸಿದ್ದೇವೆ. ಅನೇಕರು ಸ್ಪೀಕರ್ ಗ್ಯಾಲರಿಯಲ್ಲಿ ಬೇರೆ ಬೇರೆ ಕಡೆ ಕುಳಿತುಕೊಂಡು ನೋಡುತ್ತಿದ್ದಾರೆ. ಸಮಾಜದ ಬೇರೆ ಬೇರೆ ಕ್ಷೇತ್ರಗಳಲ್ಲಿರುವ ಅವರು, ನಮ್ಮ ಈ ಶಾಸಕಾಂಗ ವ್ಯವಸ್ಥೆಯನ್ನು ಉತ್ತಮ ಪಡಿಸಲು ಸಲಹೆ ಸೂಚನೆಗಳು ಏನು ಎಂಬುದರ ಬಗ್ಗೆ ನಾವು ಚರ್ಚೆ ಮತ್ತು ಸಮಾಲೋಚನೆಗಳನ್ನು ಮಾಡಿದ್ದೇವೆ. ಇನ್ನು ಅನೇಕ ಕಾರ್ಯಕ್ರಮ ಮತ್ತು ಸಭೆಗಳನ್ನು ಮಾಡುವುದರ ಮೂಲಕ ಚಿಂತನೆಗಳನ್ನು ನಡೆಸಿ ಒಳ್ಳೆಯದನ್ನು ಮಾಡಲು ಬೇಕಾದ ಪ್ರಯತ್ನವನ್ನು ನಾವು ಮಾಡಬೇಕು ಎನ್ನುವುದಕ್ಕೆ ಈ ಒಂದು ಪ್ರಜಾಪ್ರಭುತ್ವ: ಸಂಸದೀಯ ಮೌಲ್ಯಗಳ ರಕ್ಷಣೆಯ ಕಾರ್ಯಕ್ರಮ ಇವತ್ತು ಸಂಘಟಿಸಿದೆ. ಇದು ನಮ್ಮ ಜವಾಬ್ದಾರಿಯನ್ನು ನಾವು ಹೆಚ್ಚಿಸಿಕೊಳ್ಳುವ ಕಾರ್ಯಕ್ರಮ ಎನ್ನುವುದನ್ನು ಮತ್ತೆ ಮತ್ತೆ ನಾನು ಹೇಳುವುದಕ್ಕೆ ಬಯಸುತ್ತಾ, ಇವತ್ತು ಸನ್ಮಾನ್ಯ ಓಂ ಬಿರ್ಲಾರವರು ಈ ಕಾರ್ಯಕ್ರಮಕ್ಕೆ ಬಂದಿರುವುದು ಅತ್ಯಂತ ಸಂತೋಷವಾಗಿದೆ. ಓಂ ಬಿರ್ಲಾರವರು 3 ಬಾರಿಗೆ ರಾಜಸ್ಥಾನದ ಕೋಟಾ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾದವರು. ಅವರು ವಿದ್ಯಾರ್ಥಿ ಜೀವನದಲ್ಲಿ ವಿದ್ಯಾರ್ಥಿ ನಾಯಕರಾಗಿ ಕೆಲಸವನ್ನು ಮಾಡಿದ್ದಾರೆ. ಸಹಕಾರಿ ಕ್ಷೇತ್ರದಲ್ಲಿ ಬಹಳ ಅನುಭವವನ್ನು ಗಳಿಸಿಕೊಂಡಿದ್ದಾರೆ. ಉಳಿದ ಅನೇಕ ಕ್ಷೇತ್ರಗಳಲ್ಲಿ ಒಳ್ಳೆ-ಒಳ್ಳೆಯ ಕೆಲಸಗಳನ್ನು ಮಾಡಿರುವುದನ್ನು ನೆನಪಿಸಬಹುದು. ಇವತ್ತು ಕೋಟಾ ವಿಧಾನಸಭಾ ಕ್ಷೇತ್ರಕ್ಕೆ IIT ಬಂದಿದ್ದರೆ ಅದು ಓಂ ಬಿರ್ಲಾರವರ ಕಾರಣದಿಂದ ಎನ್ನುವುದು ಹೆಮ್ಮೆಯ ಸಂಗತಿ ಎಂದು ಇವತ್ತು ರಾಜಸ್ಥಾನದ ಜನ ನೆನಪಿಸಿಕೊಳ್ಳುತ್ತಿದ್ದಾರೆ. ಹೀಗೆ, ಇನ್ನೂ ಹತ್ತಾರು ಸಂಗತಿಗಳನ್ನು ನಾನು ಅವರ ಬಗ್ಗೆ ಹೇಳಬಹುದು. 2014ರಲ್ಲಿ ಮೊದಲ ಬಾರಿಗೆ ಲೋಕಸಭೆಗೆ ಆಯ್ಕೆಯಾದರು. 2019ರಲ್ಲಿ 2ನೇ ಬಾರಿಗೆ ಲೋಕಸಭೆಗೆ ಆಯ್ಕೆಯಾಗಿ ಲೋಕಸಭಾ ಸ್ಪೀಕರ್ ಆಗಿ ಕೆಲಸವನ್ನು ಮಾಡುತ್ತಿದ್ದಾರೆ. ಇದುವರೆಗೆ ನೋಡಿರುವ ಸ್ಪೀಕರ್‌ಗಳಲ್ಲಿ ಅತೀ ಪ್ರಭಾವಿಯಾಗಿ ಲೋಕಸಭೆಯನ್ನು ನಡೆಸುತ್ತಿರುವ ಸ್ಪೀಕರ್ ಅವರು ಓಂ ಬಿರ್ಲಾರವರು ಎಂದು ಹೇಳಲು ಸಂತೋಷವಾಗುತ್ತದೆ. ಅವರು ಇವತ್ತು ಕರ್ನಾಟಕ ವಿಧಾನಸಭೆಗೆ ಬಂದು ನಮ್ಮನ್ನುದ್ದೇಶಿಸಿ ಪ್ರಧಾನ ಭಾಷಣ ಮಾಡುತ್ತಿರುವುದಕ್ಕೆ ನಮ್ಮೆಲ್ಲರಿಗೂ ಗರ್ವ ಮತ್ತು ಹೆಮ್ಮೆಯ ಸಂಗತಿ. ಕರ್ನಾಟಕದ ಜನತೆಯೂ ಸಹ ಇವತ್ತು ಲೋಕಸಭಾ ಅಧ್ಯಕ್ಷರು ಬರುತ್ತಿರುವ ಸಂತೋಷದ ವಾತಾವರಣದಲ್ಲಿದ್ದಾರೆ. ನಮ್ಮ ಕರ್ನಾಟಕದ ಇತಿಹಾಸದ ಬಗ್ಗೆ ನಮಗೆ ಹೆಮ್ಮೆ ಇದೆ. ನಾವು 12ನೇ ಶತಮಾನದಲ್ಲಿ ಬಸವಣ್ಣನವರ ಅನುಭವ ಮಂಟಪದ ಮೂಲಕ ಪ್ರಜಾಪ್ರಭುತ್ವ: ಸಂಸದೀಯ ವ್ಯವಸ್ಥೆಗೆ ತಳಪಾಯವನ್ನು ಹಾಕಿರುವ ರಾಜ್ಯ ನಮ್ಮ ಕರ್ನಾಟಕ ಎನ್ನುವುದನ್ನು ಹೆಮ್ಮೆಯಿಂದ ಸ್ಮರಿಸಿಕೊಳ್ಳೋಣ. ಮೈಸೂರು ರಾಜರ ಆಡಳಿತದಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ರೂಪಿಸುವುದರ ಮೂಲಕ ಪ್ರಜೆಗಳ ಜವಾಬ್ದಾರಿಯನ್ನು ಹೆಚ್ಚಿಸಲು ಬೇಕಾದ ಪ್ರಯತ್ನ ನಡೆದಿರುವುದು ನಮ್ಮ ಕರ್ನಾಟಕದ ಮೂಲಕ ಎನ್ನುವ ಹೆಮ್ಮೆ ಇದೆ. ಹಾಗಾಗಿ, ವಿಕೇಂದ್ರೀಕರಣ ವ್ಯವಸ್ಥೆ ಇರಬಹುದು, ಇನ್ನೂ ಹತ್ತಾರು ವಿಷಯಗಳಲ್ಲಿ ಇರಬಹುದು ಕರ್ನಾಟಕ ಇಡೀ ದೇಶದಲ್ಲಿ ಮುಂಚೂಣಿಯಲ್ಲಿರುವ ಒಂದು

ರಾಜ್ಯವಾಗಿದೆ. ಹಾಗಾಗಿ, ಕರ್ನಾಟಕ ವಿಧಾನಸಭೆಗೆ, ವಿಶೇಷವಾಗಿ ವಿಧಾನಪರಿಷತ್ತಿಗೆ 114 ವರ್ಷಗಳ ಇತಿಹಾಸ ಇರುವುದು ನಮ್ಮೆಲ್ಲರಿಗೂ ಅಭಿಮಾನದ ಸಂಕೇತವಾಗಿದೆ. ನಾವು ನಮ್ಮೆಲ್ಲರ ಸುದೈವದಿಂದ ಇವತ್ತು ಶಾಸಕರಾಗಿದ್ದೇವೆ, ವಿಧಾನಪರಿಷತ್ತಿನ ಸದಸ್ಯರಾಗಿದ್ದೇವೆ. ಅದೆಷ್ಟೋ 6.5 ಕೋಟಿ ಜನರಲ್ಲಿ ಒಂದು 300 ಜನ ಈ ಒಂದು ಪವಿತ್ರ ಪ್ರಜಾಪ್ರಭುತ್ವದ ದೇಗುಲದಡಿಯಲ್ಲಿ ಕೆಲಸ ಮಾಡುವ ಒಂದು ಸೌಭಾಗ್ಯವನ್ನು ನಾವು ಪಡೆದಿದ್ದೇವೆ. ಈ ಒಂದು ಸೌಭಾಗ್ಯವನ್ನು ಅರ್ಥಪೂರ್ಣವಾಗಿ ಕಾರ್ಯನಿರ್ವಹಣೆ ಮಾಡದೆ ಹೋದರೆ ಅದು ನಮಗೆ ನಾವೇ ಅನ್ಯಾಯವನ್ನು ಮಾಡಿಕೊಂಡಂತಲ್ಲ, ಈ ರಾಜ್ಯದ ಜನತೆಯ ಆಶೋತ್ತರಗಳಿಗೆ ಅನ್ಯಾಯ ಮಾಡಿದಂತೆ ಆಗುತ್ತದೆ. ನ್ಯಾಯ ದೊರಕಿಸಿಕೊಡಲು ಸಾಧ್ಯವಾಗದ ಪರಿಸ್ಥಿತಿ ಬರುತ್ತದೆ. ಆ ಹಿನ್ನೆಲೆಯಲ್ಲಿ ನಾವು ಈ ಸ್ಥಾನದಿಂದ ಉತ್ತಮವಾಗಿ, ಪ್ರಭಾವಿಯಾಗಿ ಜನರ ಧ್ವನಿಗೆ, ಭಾವನೆಗಳಿಗೆ ನಾವು ನೇತೃತ್ವವನ್ನು ಕೊಡುವ ನಾಯಕರಾಗಿ ಹೊರಹೊಮ್ಮಬೇಕಾಗುವ ಅಗತ್ಯತೆ ಇದೆ. ರಾಜಕಾರಣದ ಭಾಗ ಇದ್ದೇ ಇದೆ, ನಾವು ಅಧಿಕಾರಕ್ಕೆ ಬರಬೇಕು, ಆಯ್ಕೆಯಾಗಬೇಕು ಎನ್ನುವ ಸಹಜವಾದ ಭಾವಗಳು, ಚಟುವಟಿಕೆಗಳು ಇದ್ದೇ ಇರುತ್ತದೆ. ಆದರೆ, ಒಮ್ಮೆ ಈ ಪವಿತ್ರ ಪ್ರಜಾಪ್ರಭುತ್ವ ದೇಗುಲದೊಳಗೆ ಪ್ರವೇಶಿಸಿದ ನಂತರ ನಾವು ಜನಹಿತವನ್ನು ಕಾಪಾಡಲು ಬೇಕಾದ ಹಾಗೂ ನಮ್ಮ ಬದ್ಧತೆಯನ್ನು ನಾವೇ ಹೆಚ್ಚಿಸಿಕೊಳ್ಳಲು ಬೇಕಾದ ಪ್ರಯತ್ನವನ್ನು ಮಾಡಲೇಬೇಕಾದ ಅಗತ್ಯತೆ ಇದೆ. ಅದಕ್ಕೆ ಈ ಎಲ್ಲಾ ಕಾರ್ಯಕ್ರಮಗಳು ಶಕ್ತಿಯನ್ನು ಕೊಡುತ್ತವೆ ಎನ್ನುವಂತಹ ನಂಬಿಕೆ ನನ್ನದು. ಬಂಧುಗಳೆ, ನಾನು ನನ್ನ ಭಾಷಣದ ಪ್ರತಿಯನ್ನು ತಮಗೆ ಕೊಟ್ಟಿದ್ದೇನೆ. ನಾನು ಈ ಭಾಷಣವನ್ನು ಓದುವುದಕ್ಕೆ ಬಯಸುವುದಿಲ್ಲ. ನಾನು ನನ್ನ ಕೆಲವು ಮಾತುಗಳನ್ನು ಹೀಗೇ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ನಾನು ಬ್ಯಾಂಕ್ವೆಟ್ ಹಾಲ್‌ನಲ್ಲಿ ಈ ಮೌಲ್ಯಗಳ ಅಧ:ಪತನವನ್ನು ತಡೆಗಟ್ಟಲು ಒಂದು "ಆತ್ಮಾವಲೋಕನ ಸಭೆ" ಯನ್ನು ಮಾಡೋಣವೆಂದು ಆಯೋಜಿಸಿದಾಗ ನಾನು ಒಂದು ಮಾತನ್ನು ಹೇಳಿರುವುದು ನನಗೆ ನೆನಪಾಗುತ್ತಿದೆ. ಇಡೀ ಜಗತ್ತಿನಲ್ಲಿ ಭಾರತದ ಪ್ರಜಾಪ್ರಭುತ್ವ ಒಂದು ಅತ್ಯುತ್ತಮವಾದ ಸಂಸದೀಯ ವ್ಯವಸ್ಥೆಯಾಗಿದೆ. ಇನ್ನು ಯಾವುದೇ ದೇಶದಲ್ಲೂ ಈ ರೀತಿಯ ಪ್ರಜಾಪ್ರಭುತ್ವದ ವ್ಯವಸ್ಥೆ ಇಲ್ಲ. 135 ಕೋಟಿ ಜನಸಂಖ್ಯೆಯನ್ನು ಹೊಂದಿರುವ ಭಾರತದಲ್ಲಿ ನಾವು ಸ್ವಾತಂತ್ರ್ಯಾ ನಂತರದ ಈ 75 ವರ್ಷದ ಆಚರಣೆಯ ಹೊಸ್ತಿಲಿನಲ್ಲಿರುವಾಗ ನಾವು ಕೇವಲ ತುರ್ತು ಪರಿಸ್ಥಿತಿಯ ಆ ಸಮಯವನ್ನು ಬಿಟ್ಟರೆ ಉಳಿದೆಲ್ಲಾ ಹಂತದಲ್ಲೂ ಪ್ರಜಾಪ್ರಭುತ್ವವನ್ನು ಅತ್ಯಂತ ಪ್ರಭಾವಿಯಾಗಿ ಆಡಳಿತವನ್ನು ನಡೆಸಿಕೊಂಡು ಬಂದಿರುವ ದೇಶ ನಮ್ಮ ಭಾರತ. ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆ ಇವತ್ತು ಅತ್ಯುತ್ತಮವಾದ ವ್ಯವಸ್ಥೆ ಎಂದು ಇಡೀ ಜಗತ್ತು ಗುರುತಿಸಿದೆ. ಇವತ್ತು ಕಮ್ಯುನಿಸ್ಟ್ ಆಡಳಿತ ಇರುವ ದೇಶಗಳಿವೆ. ಇವತ್ತು ಇನ್ನೂ ರಾಜಾಡಳಿತ, ಸರ್ವಾಧಿಕಾರ ಇರುವ ಆಡಳಿತಗಳು ನಡೆಯುತ್ತಿವೆ. ಇನ್ನೂ ಹತ್ತಾರು ರೀತಿಯಲ್ಲಿ ಆಡಳಿತಗಳು ನಡೆಯುತ್ತಿರುವ ದೇಶಗಳಿವೆ. ಆದರೆ, ಪ್ರಜಾಪ್ರಭುತ್ವದ ವ್ಯವಸ್ಥೆ ಅತ್ಯಂತ ಶ್ರೇಷ್ಠವಾದ ವ್ಯವಸ್ಥೆ ಎಂದು ಜಗತ್ತು ಗುರುತಿಸಿದೆ. ಪ್ರಜಾಪ್ರಭುತ್ವದ ವ್ಯವಸ್ಥೆಗೆ ಈ ಸದನಗಳು ಈ ಸಂಸದೀಯ ವ್ಯವಸ್ಥೆಗಳು, ಒಂದು ಆಧಾರಸ್ತಂಭವಾಗಿ ಈ ವ್ಯವಸ್ಥೆಯನ್ನು ಪ್ರತಿಬಿಂಬಿಸುವ ಕ್ಷೇತ್ರವಾಗಿ ಇರುವುದನ್ನು ನೋಡಬಹುದು. ಆ ಹಿನ್ನೆಲೆಯಲ್ಲಿ ನಾನು ನಿಮ್ಮೆಲ್ಲರಲ್ಲಿ ಅರಿಕೆ ಮಾಡಿಕೊಳ್ಳುವುದು ಮತ್ತು ದೇಶದ ಜನ ಚಿಂತಕರು ನಮ್ಮಂತಹ ಸ್ಥಾನಮಾನದಲ್ಲಿರುವವರಿಗೆ ಹೇಳುವುದೇನೆಂದರೆ, ಈ ಪ್ರಜಾಪ್ರಭುತ್ವದ ಸಂಸದೀಯ ವ್ಯವಸ್ಥೆಯ ರಕ್ಷಣೆಯ ಜವಾಬ್ದಾರಿಗಳನ್ನು ನಾವೆಲ್ಲ ಜನಪ್ರತಿನಿಧಿಗಳು ಸ್ವೀಕರಿಸುವಂತಾಗಬೇಕು. ಪ್ರತಿಜ್ಞಾ ರೂಪದಲ್ಲಿ ಸ್ವೀಕರಿಸುವಂತಾಗಬೇಕು. ಇಲ್ಲವೆಂದರೆ, ಈ

ಪ್ರಜಾಪ್ರಭುತ್ವದ ವ್ಯವಸ್ಥೆ ಬಗ್ಗೆ ಜನ ವಿಶ್ವಾಸ ಕಳೆದುಕೊಂಡರೆ, ನಂಬಿಕೆಯನ್ನು ಕಳೆದುಕೊಂಡರೆ ಅರಾಜಕತೆ ನಿರ್ಮಾಣವಾಗುತ್ತದೆ, ಅಷ್ಟೇ ಅಲ್ಲ, ಮುಂದಿನ ದಿನಗಳಲ್ಲಿ ಜನಜೀವನ ಹೇಗೆ ಅಸ್ತವ್ಯಸ್ತಗೊಳ್ಳುತ್ತದೆ, ಅಲ್ಲೋಲ-ಕಲ್ಲೋಲಗಳು ನಿರ್ಮಾಣವಾಗುತ್ತವೆ ಎನ್ನುವುದನ್ನು ಅನೇಕ ಅನುಭವಿಗಳು, ತಜ್ಞರು ಈ ಮಾತನ್ನು ಹೇಳಿದ್ದಾರೆ. ಆ ರೀತಿ ಆಗಿರುವಂತಹ ದೇಶದ ಉದಾಹರಣೆಗಳು ನಮ್ಮ ಕಣ್ಣ ಮುಂದಿವೆ. ಹಾಗಾಗಿ, ನಾವು ಈ ವ್ಯವಸ್ಥೆಯಲ್ಲಿ ಈ ಜವಾಬ್ದಾರಿ ಸ್ಥಾನದಲ್ಲಿ ಇರುವವರು ಕೇವಲ ನಾನು ಶಾಸಕನಾಗಿದ್ದೇನೆ ಎನ್ನುವ ಭಾವನೆಯನ್ನಷ್ಟೇ ಹೊಂದದೆ ನಾನು ಲಕ್ಷಾಂತರ ಜನರನ್ನು ಪ್ರತಿನಿಧಿಸುವ ಒಬ್ಬ ಜನ ಪ್ರತಿನಿಧಿ ಪ್ರಜೆ ನಾನಾಗಿದ್ದೇನೆ ಈ ಸದನದಲ್ಲಿ ಎನ್ನುವ ಜವಾಬ್ದಾರಿಗಳು ಬಂದಾಗ ಈ ವ್ಯವಸ್ಥೆಗೆ ಶಕ್ತಿಯನ್ನು ಕೊಡಲು ನಮಗೆ ಸಾಧ್ಯವಾಗುತ್ತದೆ. ನಾವು ಈ ಮೌಲ್ಯಗಳ, ಆದರ್ಶಗಳ ಕುಸಿತವನ್ನು ತಡೆಗಟ್ಟಲು ನಮಗೆ ಬೇಕಾದ ಪ್ರಯತ್ನವನ್ನು ನಾವು ಮಾಡಲು ಮುಂದಾಗದೇ ಹೋದರೆ ಈ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಕೊಡಲಿ ಏಟು ಕೊಡುವುದಕ್ಕೆ ನಾವೇ ಕಾರಣೀಕರ್ತರಾಗುತ್ತೇವೆ. ಹಾಗಾಗಬಾರದು. ಹಾಗೆ ಆಗಬಾರದೆಂದರೆ, ನಮ್ಮ ಜವಾಬ್ದಾರಿಗಳನ್ನು ನಾವು ಹೆಚ್ಚಿಸಿಕೊಳ್ಳಬೇಕು. ನಾನಿದನ್ನು ಮಾತನಾಡುವಾಗ ಸಹಜವಾಗಿ ರಾಜಕಾರಣದ ಚಿಂತನೆ ಮಾಡುವ ನಿಮಗೆ, ಅನೇಕರಿಗೆ ಏನನ್ನಿಸುತ್ತದೆ ಎಂದರೆ, ನೀವು ಏಕೆ ಇದನ್ನೆಲ್ಲಾ ಮಾತನಾಡುವಿರಿ, ಮುಂದಿನ ಚುನಾವಣೆಯಲ್ಲಿ ನಾವು ಗೆಲ್ಲುವುದು ಹೇಗೆಂದು ಯೋಚನೆ ಮಾಡಿದರೆ ನಮಗೆ ಭಯವಾಗುತ್ತದೆ, ಆತಂಕವಾಗುತ್ತದೆ. ನಾವು ಅದನ್ನು ಯೋಚಿಸುವುದನ್ನು ಬಿಟ್ಟು ಈ ಮೌಲ್ಯಗಳ ಆದರ್ಶಗಳನ್ನು ಮೇಲೆತ್ತುವ ಬಗ್ಗೆ ಮಾತನಾಡಿ ಏನು ಉಪಯೋಗವೆಂದು ಕೇಳುವಿರಿ, ಬಂಧುಗಳೆ, ಒಂದು ಮಾತನ್ನು **ನಾವೆಲ್ಲ** ಇತಿಹಾಸದ ಪುಟಗಳಿಂದ ನಾವು ನೆನಪಿಸಿಕೊಳ್ಳಬೇಕು. ಯಾರ್‍ಯಾರು ದೇಶದಲ್ಲಿ, ರಾಜ್ಯದಲ್ಲಿ ಅಧಿಕಾರವನ್ನು ನಡೆಸಿದ್ದಾರೋ ಅವರೆಲ್ಲರೂ ಮತ್ತೊಮ್ಮೆ ನಾವು ಬರಬೇಕು ಎಂಬ ಭಾವನೆಯಿಂದಲೇ ಆಡಳಿತವನ್ನು ನಡೆಸಿದ್ದಾರೆ. ಆದರೆ, ಅವರಲ್ಲಿ ಯಾರು ಬಂದಿದ್ದಾರೆ ಯಾರು ಬಂದಿಲ್ಲ ಎನ್ನುವ ಚಿತ್ರಣ ಜನತೆಯ ಮುಂದಿದೆ. ನಾವು ಮಾಡಬೇಕಾದ ಕೆಲಸವನ್ನು ಈ ಒಂದು ಪ್ರಜಾಪ್ರಭುತ್ವಕ್ಕೆ ಶಕ್ತಿ ಕೊಡುವ ಕೆಲಸ ಈ ಸಂಸದೀಯ ವ್ಯವಸ್ಥೆಯಲ್ಲಿ ಮೌಲ್ಯಗಳನ್ನು ತುಂಬುವ ಕೆಲಸವನ್ನು ನಮ್ಮ ಈ ಜವಾಬ್ದಾರಿಯ ಸ್ಥಾನದಲ್ಲಿ ನಾನು ಮಾಡುತ್ತಿದ್ದೇನೆ, ಮಾಡಬೇಕು ಎನ್ನುವ ಇಚ್ಛಾಶಕ್ತಿ ನಮ್ಮಲ್ಲಿ ಜಾಗೃತವಾಗುವುದು ಅತ್ಯಗತ್ಯವಾಗಿದೆ. ನಾವು ಆ ಬದ್ಧತೆಯನ್ನು ಕಳೆದುಕೊಂಡು ಕೇವಲ ಮುಂದಿನ ಚುನಾವಣೆಯನ್ನು ಮಾತ್ರ ಕಣ್ಮುಂದೆ ಇಟ್ಟುಕೊಂಡು ಆ ಚುನಾವಣೆಯಲ್ಲಿ ಗೆಲ್ಲಲು ಬೇಕಾದ ತಂತ್ರಗಾರಿಕೆಯನ್ನು ಮಾಡುತ್ತಾ ಉಳಿದರೆ ನಾವ್ಯಾರೂ ಈ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಶಕ್ತಿ ತುಂಬಲು ಸಾಧ್ಯವಾಗುವುದಿಲ್ಲ. ಕೇವಲ ನಾವೊಬ್ಬ ಶಾಸಕರಾಗಿ ನಮ್ಮ ಅವಧಿಗಳನ್ನು ಮುಗಿಸಬಹುದು. ಆದರೆ, ಈ ವ್ಯವಸ್ಥೆಗೆ ಶಕ್ತಿ ಕೊಡುವ ಪ್ರಯತ್ನಗಳನ್ನು ನಾವು ಮಾಡಬೇಕು. ನಾನಿವತ್ತು ನಮ್ಮ ದೇಶದ ಅನೇಕ ಮಹಾಪುರುಷರ ಸ್ಮರಣೆಯನ್ನು ಮಾಡಿಕೊಳ್ಳುತ್ತೇನೆ. ವಿಶೇಷವಾಗಿ ನಮ್ಮ ಭಾರತದ ಸಂವಿಧಾನವನ್ನು ಬರೆದ ಡಾ.ಬಿ.ಆರ್.ಅಂಬೇಡ್ಕರ್‌ರವರನ್ನು ನಾನು ನೆನಪಿಸಿಕೊಳ್ಳುತ್ತೇನೆ. ಆ ಹಿರಿಯರ ಸಮೂಹವನ್ನು ನಾನು ನೆನಪಿಸಿಕೊಳ್ಳುತ್ತೇನೆ. ನಮ್ಮ ಈ ಸಂಸದೀಯ ವ್ಯವಸ್ಥೆ, ಈ ಪ್ರಜಾಪ್ರಭುತ್ವದ ವ್ಯವಸ್ಥೆ ಇಷ್ಟು ಉತ್ತಮವಾಗಿ ನಿರ್ಮಾಣವಾಗಲು ನಮ್ಮ ಸಂವಿಧಾನ ಕಾರಣವಾಗಿದೆ. ಡಾ.ಬಿ.ಆರ್.ಅಂಬೇಡ್ಕರ್‌ರವರು ಕಾರಣೀಕರ್ತರಾಗಿದ್ದಾರೆ. ನಾವು ಅವರು ಯಾವ ಕನಸನ್ನು ಕಂಡು ಈ ವ್ಯವಸ್ಥೆಯನ್ನು ರೂಪಿಸಲು ಈ ಸಂವಿಧಾನವನ್ನು ಕೊಟ್ಟಿದ್ದಾರೆ ಎನ್ನುವುದನ್ನು ಅರ್ಥ ಮಾಡಿಕೊಳ್ಳುವ

ಅಗತ್ಯವಿದೆ. ಆ ಜವಾಬ್ದಾರಿಯನ್ನು ಅರಿತು ನಾವು ಮುನ್ನಡೆದಾಗ ಈ ವ್ಯವಸ್ಥೆಯನ್ನು ಇನ್ನಷ್ಟು ಹೆಚ್ಚು ಉತ್ತಮ ಪಡಿಸಲು ಸಾಧ್ಯವಿದೆ. ಬಂಧುಗಳೆ, ನಮ್ಮಷ್ಟೇ ಜವಾಬ್ದಾರಿ ಕಾರ್ಯಾಂಗಕ್ಕೂ ಇದೆ, ನ್ಯಾಯಾಂಗಕ್ಕೂ ಇದೆ. ಪ್ರಜಾಪ್ರಭುತ್ವದ ನಾಲ್ಕನೇ ಅಂಗವೆಂದು ಕರೆಸಿಕೊಳ್ಳುವ ಪತ್ರಿಕಾರಂಗಕ್ಕೂ ಇದೆ. ಈ ಬಗ್ಗೆ ನಾವು ಆತ್ಮಾವಲೋಕನ ಮಾಡಿಕೊಳ್ಳುವಂತಹದ್ದಲ್ಲ. ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಇರುವಂತಹವರು ವಿಶೇಷವಾಗಿ ಕಾರ್ಯಾಂಗ, ನ್ಯಾಯಾಂಗ, ಶಾಸಕಾಂಗ ಮತ್ತು ಪತ್ರಿಕಾ ರಂಗದವರೂ ಸಹ ತಾವು ತಮ್ಮ ಸ್ಥಾನಗಳಲ್ಲಿ ಹೇಗೆ ಇದ್ದೇವೆಂದು ಆತ್ಮಾವಲೋಕನ ಮಾಡಿಕೊಳ್ಳುವಂತಹ ಅಗತ್ಯತೆ ಇದೆ. ಮಾಧ್ಯಮಗಳಲ್ಲಿ ರಾಜಕೀಯಕ್ಕೆ ಪ್ರಾಮುಖ್ಯತೆ ಸಿಗುವ ಕಾರಣದಿಂದ, ಆಯ್ಕೆಯಾದಂತಹ ಜನಪ್ರತಿನಿಧಿಗಳು, ಸರ್ಕಾರ ಮತ್ತು ಶಾಸಕಾಂಗದ ವ್ಯವಸ್ಥೆಯ ಭಾಗವಾದ ನಾವು ಜನರ ಎದುರುಗಡೆ ಹಗುರವಾಗುತ್ತಿರುವುದನ್ನು ನೋಡಿದ್ದೇವೆ. ಆದರೆ ಕಾರ್ಯಾಂಗವಾಗಲೀ, ನ್ಯಾಯಾಂಗವಾಗಲೀ, ಪತ್ರಿಕಾರಂಗವಾಗಲೀ ನಾವೂ ಸಮಾಜದ ಎದುರಿನಲ್ಲಿ ಹೇಗೆ ಇದ್ದೇವೆಂಬ ಆತ್ಮಾವಲೋಕನ ಮಾಡಿಕೊಳ್ಳುವ ಅಗತ್ಯವಿದೆ. ನಾವು ಕೇವಲ ಒಂದು ಬೆರಳನ್ನು ತೋರಿಸಿ ನೀವು ಹೀಗೆ ಇದ್ದೀರಿ ಎಂದರೆ, ಉಳಿದ ನಾವುಗಳೂ ಹೇಗಿದ್ದೇವೆಂದು ನೋಡಿಕೊಳ್ಳುವ ಅಗತ್ಯವಿದೆ. ಶಾಸಕಾಂಗದ ನಮ್ಮ ಬಯಕೆಗಳು, ಅಪೇಕ್ಷೆಗಳು ಜನತೆಯ ಅಭಿವೃದ್ಧಿಯ ಪರವಾಗಿ ಇರಬೇಕು. ಕಾರ್ಯಾಂಗ ಅದನ್ನು ಹೇಗೆ ಅನುಷ್ಠಾನಗೊಳಿಸುತ್ತಿದೆ ಎಂಬುದನ್ನು ನೋಡುತ್ತಿದ್ದೇವೆ. ಆಯ್ಕೆಯಾದಂತಹ ಜನಪ್ರತಿನಿಧಿಗಳು ಸಮಾಜದ ಆದರ್ಶ ಮೌಲ್ಯಗಳ ಮೇಲೆ ಕೆಲಸ ಮಾಡಬೇಕು. ಕಾರ್ಯಾಂಗದವರೂ ನಮ್ಮ ಪ್ರಜೆಗಳೇ ಆಗಿರುವುದರಿಂದ ಅವರಿಗೂ ಸಹ ತಮ್ಮ ಕರ್ತವ್ಯಗಳ, ಜವಾಬ್ದಾರಿಗಳ ಅರಿವೂ ಇದ್ದೇ ಇರುತ್ತದೆ. ಆದರೆ ಕಾರ್ಯಾಂಗದ ಶಿಥಿಲತೆಗಳು ಹೇಗೆ ಆಗುತ್ತಿವೆ ಎಂಬುದನ್ನು ನೋಡಿದರೆ ಆತಂಕವಾಗುತ್ತದೆ. ಅದೇ ರೀತಿ ನ್ಯಾಯಾಂಗದ ಬಗ್ಗೆ ನಾನು ಹೆಚ್ಚು ಮಾತನಾಡುವುದಿಲ್ಲ. ನ್ಯಾಯಾಂಗದಲ್ಲಿಯೂ ವ್ಯವಸ್ಥೆಗಳು ಯಾವ ಹಂತ ತಲುಪಿದೆ ಎಂಬುದನ್ನು ನಾವು ನೋಡುತ್ತಿದ್ದೇವೆ. ಅದರ ಬಗ್ಗೆ ನಾನು ಹೆಚ್ಚು ಉಲ್ಲೇಖ ಮಾಡಲು ಬಯಸುವುದಿಲ್ಲ. ನಾಲ್ಕನೇ ಅಂಗವೆಂದು ಕರೆಸಿಕೊಳ್ಳುತ್ತಿರುವ ಪತ್ರಿಕಾರಂಗದ ಬಗ್ಗೆಯೂ ಜನರು ಹೇಗೆ ಮಾತನಾಡಿಕೊಳ್ಳುತ್ತಿದ್ದಾರೆಂಬುದನ್ನು ನಾವು ನೋಡುತ್ತಿದ್ದೇವೆ. ಇವತ್ತು ಎಲ್ಲಾ ರಂಗಗಳಲ್ಲಿರುವವರೂ ಸಹ ಆತ್ಮಾವಲೋಕನ ಮಾಡಿಕೊಂಡು ಆದರ್ಶ ಸ್ಥಿತಿಯನ್ನು ನಿರ್ಮಿಸಲು ಬೇಕಾದಂತಹ ಪ್ರಯತ್ನವನ್ನು ಮಾಡಿದಾಗ ಮಾತ್ರ ಬದಲಾವಣೆಗಳು ಸಾಧ್ಯ. ನಾವು ಒಬ್ಬರನ್ನೊಬ್ಬರು ದೂಷಿಸಿಕೊಂಡು ಇರುವುದರಿಂದ ಜನರ ಆಶೋತ್ತರಗಳಿಗೆ ಸ್ಪಂದಿಸಲು ಆಗದೇ ಇರುವಂತಹ ಸ್ಥಿತಿಯನ್ನು ತಂದುಕೊಂಡರೆ ಯಾರಿಗೂ ಶೋಭೆ ತರುವುದಿಲ್ಲ. ಹಾಗಾಗಿ ನಾವು ನಮ್ಮ ಆತ್ಮಾವಲೋಕನ ಮಾಡಿಕೊಳ್ಳುತ್ತಿದ್ದೇವೆಂದು ಶಾಸಕಾಂಗದವರು ಹೆಮ್ಮೆಯಿಂದ, ಅಭಿಮಾನದಿಂದ ಹೇಳಬಹುದು. ಈ ಪ್ರಜಾಪ್ರಭುತ್ವ, ಸಂಸದೀಯ ವ್ಯವಸ್ಥೆಯನ್ನು ಉತ್ತಮಪಡಿಸಲು ಬೇಕಾದಂತಹ ಚಿಂತನೆಯನ್ನು ನಡೆಸುತ್ತಿದ್ದೇವೆ. ಉಳಿದ ಕ್ಷೇತ್ರದಲ್ಲಿ ಇರುವಂತಹರ ಜೊತೆಗೆ ತಾವೂ ತಮ್ಮ ಕ್ಷೇತ್ರದಲ್ಲಿರುವಂತಹ ಮೌಲ್ಯಗಳನ್ನು ಹೆಚ್ಚಿಸುವುದಕ್ಕೆ ಬೇಕಾದಂತಹ ಪ್ರಯತ್ನವನ್ನು ಮಾಡಿ ಎಂದು ಹೇಳುವ ಜವಾಬ್ದಾರಿಯುತ ನೈತಿಕ ಸ್ಥಿತಿಯಲ್ಲಿ ನಾವಿದ್ದೇವೆ. ಹಾಗಾಗಿ ಬಂಧುಗಳೇ, ನಾವು ಈ ಸಭೆಯನ್ನು ಮಾಡುವುದರ ಮೂಲಕ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿಯೂ ಈ ರೀತಿ ಆತ್ಮಾವಲೋಕನ ನಡೆದು ಮೌಲ್ಯಗಳನ್ನು ಕಾಪಾಡುವಂತಹ ಜವಾಬ್ದಾರಿಯುತ ಕ್ರಮಗಳನ್ನು ನಾವು ಮಾಡಬೇಕಾದ ಅಗತ್ಯತೆ ಇದೆ. ನಾವು ಮಾಡದಿದ್ದರೆ ಉಳಿದವರು ಮಾಡುತ್ತಾರೆ, ಮಾಡಬೇಕು ಎಂದು ನಿರೀಕ್ಷಿಸುವುದು ಈ ಸದನದ ದೇಗುಲದಲ್ಲಿ

ಇರುವಂತಹ ನಮಗೆ ಅದು ಅಭಿಮಾನವಲ್ಲ. ನಾವು ಬೇರೆಯವರಿಂದ ಏನನ್ನು ಬಯಸುತ್ತೇವೆಯೋ ಅದನ್ನು ನಾವೂ ಮಾಡಬೇಕಾದ ಅಗತ್ಯವೂ ಇದೆ. ಹಾಗಾಗಿ ಈ ಜವಾಬ್ದಾರಿಯನ್ನು ಸ್ವೀಕರಿಸಿ ಮುನ್ನಡೆಯೋಣ. ಬೇರೆಯವರಿಗೆ ನೀವು ಒಳ್ಳೆಯದನ್ನು ಮಾಡಬೇಕು ಎನ್ನುವುದಕ್ಕೆ ನಾವು ಮಾರ್ಗದರ್ಶಕರಾಗೋಣ. ಶಾಸಕಾಂಗ ಆ ಎತ್ತರದ ಸ್ಥಾನವನ್ನು ಹೊಂದಿದೆ. 'ಯಥಾ ರಾಜ, ತಥಾ ಪ್ರಜಾ' ಎನ್ನುವಂತಹ ಮಾತು ನಮಗೆ ಗೊತ್ತಿದೆ. ಅದರ ಬದಲಾಗಿ ಪ್ರಜಾಪ್ರಭುತ್ವದಲ್ಲಿ 'ಯಥಾ ಪ್ರಜಾ, ತಥಾ ರಾಜ' ಎಂದು ಆಗುತ್ತಿರುವುದನ್ನೂ ನೋಡುತ್ತಿದ್ದೇವೆ. ಅದನ್ನು ಹೇಗೆ ಅರ್ಥೈಸಬೇಕೆಂದು ಗೊತ್ತಿಲ್ಲ. ಇವತ್ತು ಜನರು, ಜನರಿಂದ, ಜನರಿಗಾಗಿ ಆಯ್ಕೆಯಾದಂತಹ ನಮ್ಮ ಜವಾಬ್ದಾರಿಗಳು ಹೆಚ್ಚಿದೆ. ಅದಕ್ಕಾಗಿ ನಾವು ಇನ್ನೂ ಈ ರೀತಿಯ ಚಟುವಟಿಕೆಗಳನ್ನು ಮಾಡುತ್ತಾ ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕೆ ಮುಂದಾಗಬೇಕು. ನಾನು ಮತ್ತೆ ಮತ್ತೆ ನಿಮ್ಮಲ್ಲಿ ವಿನಂತಿಸುತ್ತೇನೆ. ನಾವು ಕೇವಲ ಮುಂದಿನ ಚುನಾವಣೆಗಳ ಬಗ್ಗೆ ಮಾತ್ರ ಯೋಚನೆ ಮಾಡದೇ ರಾಜ್ಯದ ಆರೂವರೆ ಕೋಟಿ ಜನರ ಹಿತದ ಬಗ್ಗೆ ಯೋಚನೆಯನ್ನು ಮಾಡುತ್ತಾ, ಈ ಪ್ರಜಾಪ್ರಭುತ್ವ, ಸಂಸದೀಯ ಮೌಲ್ಯಗಳಿಗೆ ಶಕ್ತಿಯನ್ನು ಕೊಡುವುದಕ್ಕೆ ಬೇಕಾದ ಚಿಂತನೆಯನ್ನು ಮಾಡುವಂತಹ ಪವಿತ್ರ ವೇದಿಕೆಗಳು ಇದಾಗಬೇಕು. ಸರ್ಕಾರದ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಒಂದು ಸರ್ಕಾರಕ್ಕಿಂತಲೂ ಮತ್ತೊಂದು ಸರ್ಕಾರಗಳು ಉತ್ತಮವಾದಂತಹ ಕೆಲಸಗಳನ್ನು ಮಾಡುವುದಕ್ಕೆ ಸತತವಾದ ಪ್ರಯತ್ನವನ್ನು ಮಾಡಿಯೇ ಮಾಡಿರುತ್ತವೆ. ಅಭಿವೃದ್ಧಿ ಕೆಲಸಗಳನ್ನು ಮಾಡುವುದಕ್ಕೆ ಸೌಹಾರ್ದಯುತ ಸ್ಪರ್ಧೆಗಳೊಂದಿಗೆ ಸರ್ಕಾರಗಳು ಮುಂದೆ ಬರಬೇಕು. ಈ ಜವಾಬ್ದಾರಿಯ ಸ್ಥಾನದಿಂದ ನಮ್ಮ ಮೂಲಭೂತ ಕರ್ತವ್ಯಗಳನ್ನು, ಹೊಣೆಗಾರಿಕೆಗಳನ್ನು ನಾವು ಅರಿಯುವುದಕ್ಕೆ ಬೇಕಾದಂತಹ ಪ್ರಯತ್ನವನ್ನು ನಾವು ಮಾಡೋಣ. ವಿಕೇಂದ್ರೀಕರಣ ವ್ಯವಸ್ಥೆಯನ್ನು ಶಕ್ತಿಶಾಲಿಗೊಳಿಸುವುದಕ್ಕೂ ನಾವು ಕಾರಣೀಕರ್ತರಾಗಬೇಕು. ಅಲ್ಲಿ ಆಯ್ಕೆಯಾದಂತಹ ಜನಪ್ರತಿನಿಧಿಗಳು ಅತ್ಯಂತ ಹೆಮ್ಮೆ, ಗೌರವ ಅಭಿಮಾನದಿಂದ ಜನಪರವಾದ, ಅಭಿವೃದ್ಧಿ ಪರವಾದ ಕೆಲಸಗಳನ್ನು ಮಾಡುವಲ್ಲಿ ಕಾರಣೀಕರ್ತರಾಗಬೇಕು. ಹೀಗೆ ಹತ್ತಾರು ಕ್ಷೇತ್ರಗಳಿಗೆ ಮಾರ್ಗದರ್ಶನ ಮಾಡುವಂತಹ ನಾವು ನಮ್ಮ ಜವಾಬ್ದಾರಿಯನ್ನು ಪ್ರಯತ್ನವನ್ನು ಮುಂದುವರೆಸಬೇಕೆಂದು ಈ ಸಂದರ್ಭದಲ್ಲಿ ನಾನು ತಮ್ಮಲ್ಲಿ ವಿನಂತಿಯನ್ನು ಮಾಡಿಕೊಳ್ಳುತ್ತಿದ್ದೇನೆ. ಇವತ್ತಿನ ಕಾರ್ಯಕ್ರಮ ಬಹಳ ಚೆನ್ನಾಗಿ ಮೂಡಿಬರಬೇಕೆಂದು ಮಾನ್ಯ ಮುಖ್ಯಮಂತ್ರಿಗಳೂ, ಕಾನೂನು ಮತ್ತು ಸಂಸದೀಯ ಸಚಿವರು, ಶ್ರೀಯುತ ಯಡಿಯೂರಪ್ಪನವರು ಒಳಗೊಂಡಂತೆ ಹಿರಿಯರಾದ ಎಲ್ಲಾ ಸದಸ್ಯರೂ ಆಶಿಸಿದ್ದಾರೆ. ಈ ರೀತಿಯ ಎಲ್ಲಾ ಒಳ್ಳೆಯ ಕಾರ್ಯಕ್ರಮಗಳಿಗೆ ಪ್ರೋತ್ಸಾಹಿಸಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳಾದ, ಶ್ರೀಯುತ ಬಸವರಾಜ್ ಬೊಮ್ಮಾಯಿಯವರು ಮಾನ್ಯ ಲೋಕಸಭಾ ಸ್ಪೀಕರ್ ಆದಂತಹ ಶ್ರೀಯುತ ಓಂ ಬಿರ್ಲಾ ರವರೊಂದಿಗೆ ಮಾತನಾಡಿ ಈ ಕಾರ್ಯಕ್ರಮಕ್ಕೆ ಬಂದು ನಮಗೆ ಮಾರ್ಗದರ್ಶನ ಮಾಡಬೇಕೆಂದು ವಿನಂತಿಯನ್ನು ಮಾಡಿಕೊಂಡಿದ್ದಾರೆ. ಸರ್ಕಾರದಿಂದ ಈ ರೀತಿಯ ಒಳ್ಳೆಯ ಕಾರ್ಯಕ್ರಮ ಆಯೋಜಿಸಿರುವುದಕ್ಕಾಗಿ ಸಭಾಧ್ಯಕ್ಷನಾಗಿ ನಾನೂ ಸಹ ಸರ್ಕಾರಕ್ಕೆ ಅಭಿನಂದನೆಯನ್ನು ಸಲ್ಲಿಸುತ್ತಿದ್ದೇನೆ. ವಿಧಾನಪರಿಷತ್ತಿನ ನಮ್ಮ ಸಭಾಪತಿಯವರು ಈ ಕಾರ್ಯಕ್ರಮಕ್ಕೆ ಪೂರ್ಣ ಸಹಕಾರವನ್ನು ಕೊಟ್ಟು, ತಮ್ಮ ಸದಸ್ಯರೊಂದಿಗೆ ಭಾಗಿಯಾಗಿ ತಮ್ಮ ಅಮೂಲ್ಯವಾದಂತಹ ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ. ಆದ್ದರಿಂದ ಮಾನ್ಯ ಸಭಾಪತಿಯವರಿಗೆ, ಪರಿಷತ್ತಿನ ಸದಸ್ಯರಿಗೆ ನಾನು ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ನಮ್ಮ ಅಧಿಕಾರಿ ವರ್ಗದವರು, ಪತ್ರಿಕಾ ರಂಗದವರು,

ಸಾರ್ವಜನಿಕರೆಲ್ಲರೂ ಸಹ ಈ ಕಾರ್ಯಕ್ರಮ ಯಶಸ್ವಿಯಾಗಬೇಕೆಂದು ಪೂರ್ಣ ಸಹಕಾರವನ್ನು ಕೊಟ್ಟಿದ್ದಾರೆ. ಆದರೆ ನನಗೆ ಆದ ಬೇಸರದ ಸಂಗತಿಯೆಂದರೆ, ಪ್ರತಿಪಕ್ಷದ ಸದಸ್ಯರುಗಳು ಈ ಕಾರ್ಯಕ್ರಮಕ್ಕೆ ಬಹಿಷ್ಕಾರ ಹಾಕಿರುವುದಕ್ಕೆ ನಿಜವಾಗಿಯೂ ನನಗೆ ಬೇಸರವಾಗಿದೆ. ಜೆಡಿ(ಎಸ್)ನವರು ಕಾರ್ಯಕ್ರಮದಲ್ಲಿ ಭಾಗಿಯಾಗಿರುವುದರಿಂದ, ಕಾಂಗ್ರೆಸ್ ನವರು ಮಾತ್ರ ಬಹಿಷ್ಕಾರ ಹಾಕಿದ್ದಾರೆಂದರೆ ಹೆಚ್ಚು ಉಚಿತವಾಗಿರುತ್ತದೆ. ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ. ಕುಮಾರಸ್ವಾಮಿಯವರೇ ಕಾರ್ಯಕ್ರಮಕ್ಕೆ ಹಾಜರಾಗಿದ್ದಾರೆ. ಅವರನ್ನು ಮತ್ತು ಅವರ ಪಕ್ಷದ ಸದಸ್ಯರುಗಳನ್ನು ಅಭಿನಂದಿಸುತ್ತೇನೆ. ಮಾನ್ಯ ಸಿದ್ಧರಾಮಯ್ಯನವರನ್ನು ಒಳಗೊಂಡಂತೆ ಉಳಿದಂತಹ ಕಾಂಗ್ರೆಸ್ ಸದಸ್ಯರು ಗೈರು ಹಾಜರಾಗಿರುವುದು ನಿಜವಾಗಿಯೂ ನನಗೆ ಬೇಸರವಾಗಿದೆ. ಏಕೆಂದರೆ, ಈ ಸಭೆಯನ್ನು ಕರೆದಿರುವುದು ನಾನು ಮತ್ತು ಹೊರಟ್ಟಿಯವರು. ನಾವಿಬ್ಬರೂ ಸಹ ಸಂವಿಧಾನಬದ್ಧವಾದಂತಹ ಜವಾಬ್ದಾರಿ ನಿರ್ವಹಿಸುತ್ತಿರುವ ಹುದ್ದೆಯಲ್ಲಿರುವವರು. ಸಂವಿಧಾನದ **ಅತ್ಯುಚ್ಚ** ಸ್ಥಾನದಲ್ಲಿರುವಂತಹ ಮಾನ್ಯ ಲೋಕಸಭಾ ಸ್ಪೀಕರ್ ರವರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸಿದ್ದೇವೆ. ಮೂರು ಜನ ಸಂಸದೀಯ ಜವಾಬ್ದಾರಿ ಸ್ಥಾನದಲ್ಲಿರುವವರು ಭಾಗವಹಿಸುವಂತಹ ಕಾರ್ಯಕ್ರಮಕ್ಕೆ ಕಾಂಗ್ರೆಸ್ ಭಾಗಿಯಾಗುವುದಿಲ್ಲ ಎನ್ನುವುದು ನಿಜವಾಗಿಯೂ ಬೇಸರದ ಸಂಗತಿಯಾಗಿದೆ. ಕಾರ್ಯಕ್ರಮಕ್ಕೆ ಹಾಜರಾಗಬೇಕೆಂದು ನಾನು ಅವರಲ್ಲಿ ಬಹಳಷ್ಟು ಬಾರಿ ವಿನಂತಿಸಿಕೊಂಡಿದ್ದೇನೆ. ಆದರೆ ಅವರದೇ ಕಾರಣಗಳಿಂದ ಹಾಜರಾಗಿಲ್ಲ. ಅವರು ಮುಂದಿನ ದಿನಗಳಲ್ಲಿಯಾದರೂ ಈ ರೀತಿಯ ಕಾರ್ಯಕ್ರಮಕ್ಕೆ ಹಾಜರಾಗಲು ಅವಕಾಶ ಮಾಡಿಕೊಳ್ಳಬೇಕು ಎಂಬ ಮಾತನ್ನು ನಾನು ಹೇಳುತ್ತೇನೆ. ಪ್ರಜಾಪ್ರಭುತ್ವ ಅಥವಾ ಸಂಸದೀಯ ವ್ಯವಸ್ಥೆಗಳು ಕೇವಲ ಆಡಳಿತ ಪಕ್ಷದಿಂದ ನಡೆಯುವುದಿಲ್ಲ, ಪ್ರತಿಪಕ್ಷಗಳ ಸಹಕಾರದಿಂದಲೂ ನಡೆಯಬೇಕಾಗುತ್ತದೆ. ಹಾಗಾಗಿ ಸರ್ಕಾರ ಮತ್ತು ಸದನಗಳನ್ನು ನಡೆಸುವುದಕ್ಕೆ ಎಲ್ಲರ ಸಹಕಾರ ಬೇಕಾಗುತ್ತದೆ. ವಿಶೇಷವಾಗಿ ಜೆ.ಡಿ.(ಎಸ್) ಶಾಸಕರು, ಮಾಜಿ ಮುಖ್ಯಮಂತ್ರಿಗಳು ಮಾನ್ಯ ಕುಮಾರಸ್ವಾಮಿಯವರು ಜೆ.ಡಿ.(ಎಸ್) ಶಾಸಕಾಂಗದ ನಾಯಕರು ತಮ್ಮ ಸದಸ್ಯರೆಲ್ಲರ ಜೊತೆಯಲ್ಲಿ ಹಾಜರಾಗಿರುವುದಕ್ಕೆ ತಮಗೂ ಸಹ ನಾನು ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ವಿಶೇಷವಾಗಿ ಇಲ್ಲಿ ನಮ್ಮ ರಾಜ್ಯದ ಸಂಸದರೂ ಸಹ ಭಾಗಿಯಾಗಿರುವುದು ಬಹಳ ಹೆಮ್ಮೆ ಮತ್ತು ಸಂತೋಷದ ಸಂಗತಿಯಾಗಿದೆ. ಅವರನ್ನೂ ನಾನು ಗುರುತಿಸಿದ್ದೇನೆ, ಅಭಿಮಾನಪೂರ್ವಕವಾಗಿ ಸ್ವಾಗತಿಸುತ್ತೇನೆ. ಸಂಸದರು ತಾವು ಬಂದ ಕೂಡಲೇ, ನಾವು ನಮ್ಮ ಲೋಕಸಭಾಧ್ಯಕ್ಷರಾದ ಓಂ ಬಿರ್ಲಾರವರನ್ನು ಮಾತನಾಡಿಸಬೇಕಾಗಿತ್ತು, ಹಾಗಾಗಿ ಬಂದಿದ್ದೇವೆಂದು ಹೇಳಿದರು. ನಮ್ಮ ಸ್ಪೀಕರ್ ಎಂದು ಲೋಕಸಭಾ ಸದಸ್ಯರಿಗೆ ಎಷ್ಟು ಹೆಮ್ಮೆ, ಅಭಿಮಾನ ಇದೆ. ಅವರೆಲ್ಲರೂ ಬಂದು ಮಾನ್ಯ ಸ್ಪೀಕರ್ ರವರನ್ನು ಭೇಟಿ ಮಾಡಿ, ಉಭಯ ಕುಶಲೋಪರಿಗಳನ್ನು ವಿಚಾರಿಸಿಕೊಂಡಿದ್ದಾರೆ. ಅವರು ಈ ಕಾರ್ಯಕ್ರಮಕ್ಕೆ ಭಾಗಿಯಾಗಿರುವುದಕ್ಕೆ ಅತ್ಯಂತ ಮನಃಪೂರ್ವಕವಾಗಿ ಸಂತೋಷವನ್ನು ವ್ಯಕ್ತಪಡಿಸುತ್ತೇನೆ. ಅನೇಕ ಹಿರಿಯರೂ, ನಾಡಿನ ಗಣ್ಯರೂ ಸಹ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದಾರೆ. ಮಾಧ್ಯಮ ಸ್ನೇಹಿತರು, ಅನುಭವಿಗಳೂ ಇದ್ದಾರೆ. ನಮಗೆ ಸಾರ್ವಜನಿಕ ಜೀವನದ ಬಗ್ಗೆ ನಮಗೆ ಎಷ್ಟು ಅನುಭವವಿದೆಯೋ ಅಷ್ಟೇ ಮಾಧ್ಯಮದವರಿಗೂ ಅನುಭವ ಇದೆ. ಅವರೂ ಸಹ ಈ ಕಾರ್ಯಕ್ರಮಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿ, ಸಂಪೂರ್ಣ ಸಹಕಾರ ಕೊಟ್ಟಿರುವುದಕ್ಕೆ ಸಂತೋಷವಾಗಿದೆ. ನಾಡಿನ ಜನರು ಈ ಕಾರ್ಯಕ್ರಮದ ನೇರ ಪ್ರಸಾರವನ್ನು

ನೋಡುತ್ತಿದ್ದಾರೆ. ಅವರಿಗೂ ಸಹ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ. ಕರ್ನಾಟಕ ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರುಗಳಾದಂತಹ ನಾವು ಪ್ರಜಾಪ್ರಭುತ್ವದ ವ್ಯವಸ್ಥೆಗೆ ಶಕ್ತಿಯನ್ನು ಕೊಡುವುದಕ್ಕೆ, ಸಂಸದೀಯ ವ್ಯವಸ್ಥೆಗೆ ಇನ್ನಷ್ಟು ಹೆಚ್ಚು ಮೌಲ್ಯವನ್ನು ತುಂಬುವುದಕ್ಕೆ ನಾವು ಬದ್ಧರಾಗಿದ್ದೇವೆ ಎಂಬ ಸಂದೇಶವನ್ನು ಕೊಡೋಣ. ಆ ಸಂದೇಶದ ಮೇಲೆ ವಿಶ್ವಾಸ ಮೂಡಿಸುವ ಚಟುವಟಿಕೆಗಳನ್ನು ಮುಂದಿನ ದಿನಗಳಲ್ಲಿ ನಾವೆಲ್ಲಾ ಮಾಡೋಣ ಎನ್ನುವ ಮಾತನ್ನು ಹೇಳುತ್ತಿದ್ದೇನೆ. ಅತ್ಯುತ್ತಮ ಶಾಸಕ ಪ್ರಶಸ್ತಿಯನ್ನು ಪಡೆದಂತಹ ಶ್ರೀಯುತ ಯಡಿಯೂರಪ್ಪನವರಿಗೆ ನಮ್ಮೆಲ್ಲರ ಪರವಾಗಿ ಮತ್ತೊಮ್ಮೆ ಅಭಿನಂದನೆಯನ್ನು ಸಲ್ಲಿಸುತ್ತೇನೆ. ಕರ್ನಾಟಕ ಇತಿಹಾಸದಲ್ಲಿ ಮೊಟ್ಟ ಮೊದಲ ಬಾರಿಗೆ ಈ ಪ್ರಶಸ್ತಿಯನ್ನು ಪಡೆದಿದ್ದಾರೆ ಅವರಿಗೆ ಅಭಿನಂದನೆಯನ್ನು ಸಲ್ಲಿಸುತ್ತೇನೆ. ಮಾನ್ಯ ಓಂ ಬಿರ್ಲಾರವರು ಇನ್ನು ಮುಂದೆ ತಮ್ಮ ಪ್ರಧಾನ ಭಾಷಣವನ್ನು ಮಾಡುವವರಿದ್ದಾರೆ. ಅವರು ಇಂದು ಮತ್ತು ನಾಳೆ ಕರ್ನಾಟಕದ ಪ್ರವಾಸದಲ್ಲಿದ್ದಾರೆ. ಮಾನ್ಯರು ಇಷ್ಟು ದೊಡ್ಡ ಜವಾಬ್ದಾರಿ ಹುದ್ದೆಯಲ್ಲಿದ್ದು, ಇತ್ತೀಚೆಗೆ ಈ ಕಾರಣಕ್ಕಾಗಿ ಅನೇಕ ದೇಶಗಳಿಗೂ ಸಹ ಪ್ರವಾಸ ಮಾಡಿದ್ದಾರೆ. ಅನೇಕ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸುವವರಿದ್ದಾರೆ. ಅವರು ಕರ್ನಾಟಕ ವಿಧಾನಸಭೆಯ ಈ ಕಾರ್ಯಕ್ರಮಕ್ಕೆ ಬಂದಿರುವುದು ಕರ್ನಾಟಕಕ್ಕೆ, ಕರ್ನಾಟಕ ವಿಧಾನಸಭೆಗೆ ಅತ್ಯಂತ ಗೌರವ, ಹೆಮ್ಮೆ, ಅಭಿಮಾನವನ್ನು ತಂದಿದೆ ಎಂದು ಅವರಿಗೂ ಸಹ ನನ್ನ ಅಭಿನಂದನೆಯನ್ನು ಸಲ್ಲಿಸುತ್ತಾ ನನ್ನ ಮಾತನ್ನು ಮುಗಿಸುತ್ತಿದ್ದೇನೆ, ನಮಸ್ಕಾರ.

**ಜೈ ಹಿಂದ್, ಜೈ ಕರ್ನಾಟಕ.**

## 157. 15ನೇ ವಿಧಾನಸಭೆಯ 11ನೇ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

15ನೇ ವಿಧಾನ ಸಭೆಯ 11ನೇ ಅಧಿವೇಶನವು ದಿನಾಂಕ 13ನೇ ಡಿಸೆಂಬರ್, 2021ರಂದು ಬೆಳಗಾವಿ ಸುವರ್ಣ ವಿಧಾನಸೌಧದ ವಿಧಾನ ಸಭೆಯ ಸಭಾಂಗಣದಲ್ಲಿ ಪ್ರಾರಂಭವಾಗಿ 24ನೇ ಡಿಸೆಂಬರ್, 2021 ರವರೆಗೆ 10 ದಿನಗಳ ಕಲಾಪಗಳನ್ನು ನಡೆಸಲಾಗಿದ್ದು, ಒಟ್ಟಾರೆ ಸುಮಾರು 52ಗಂಟೆಗಳ ಕಾಲ ಕಾರ್ಯಕಲಾಪಗಳನ್ನು ನಡೆಸಲಾಗಿದೆ.

- ಇತ್ತೀಚೆಗೆ ನಿಧನ ಹೊಂದಿರುವ ಕರ್ನಾಟಕದ ಮಾಜಿ ರಾಜ್ಯಪಾಲರಾಗಿದ್ದ ಶ್ರೀ ಕೆ. ರೋಸಯ್ಯ, ಕೇಂದ್ರದ ಮಾಜಿ ಸಚಿವರಾಗಿದ್ದ ಶ್ರೀ ಆರ್.ಎಲ್. ಜಾಲಪ್ಪ, ರಾಜ್ಯಸಭೆಯ ಮಾಜಿ ಸದಸ್ಯರಾಗಿದ್ದ ಶ್ರೀ ಕೆ.ಆರ್. ಜಯದೇವಪ್ಪ, ರಾಜ್ಯದ ಮಾಜಿ ಸಚಿವರುಗಳಾಗಿದ್ದ ಶ್ರೀ ಎಸ್.ಆರ್. ಮೋರೆ ಮತ್ತು ಶ್ರೀ ವಿರುಪಾಕ್ಷಪ್ಪ ಅಗಡಿ, ವಿಧಾನ ಸಭೆಯ ಮಾಜಿ ಸದಸ್ಯರುಗಳಾಗಿದ್ದ ಶ್ರೀ ಕೆ. ರಾಮ ಭಟ್ ಮತ್ತು ಡಾ॥ ಎಂ.ಪಿ. ಕರ್ಕಿ, ಸಶಸ್ತ್ರ ಪಡೆಗಳ ಮುಖ್ಯಸ್ಥರಾಗಿದ್ದ ಜನರಲ್ ಬಿಪಿನ್ ರಾವತ್ ಮತ್ತು ಇತರರು, ಚಿತ್ರನಟರುಗಳಾಗಿದ್ದ ಶ್ರೀ ಪುನೀತ್ ರಾಜ್‌ಕುಮಾರ್ ಮತ್ತು ಶ್ರೀ ಎಸ್. ಶಿವರಾಂ, ಬಹುಶೃತ ವಿದ್ವಾಂಸರಾಗಿದ್ದ ಪ್ರೊ. ಕೆ.ಎಸ್. ನಾರಾಯಣಾಚಾರ್ಯ, ಗ್ರೂಪ್ ಕ್ಯಾಪ್ಟನ್ ಆಗಿದ್ದ ಶ್ರೀ ವರುಣ್ ಸಿಂಗ್ ಅವರುಗಳಿಗೆ ಸಂತಾಪ ಸೂಚನಾ ನಿರ್ಣಯವನ್ನು ಮಂಡಿಸಿ, ಅಂಗೀಕರಿಸಲಾಗಿದೆ.
- ನೂತನ ಸದಸ್ಯರಾದ ಶ್ರೀ ಮಾನೆ ಶ್ರೀನಿವಾಸ್ ಅವರು ದಿನಾಂಕ:15.12.2021ರಂದು ಪ್ರಮಾಣ ವಚನ ಸ್ವೀಕರಿಸಿರುತ್ತಾರೆ.
- ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಬಗ್ಗೆ ಕಾರ್ಯದರ್ಶಿಯವರ ವರದಿಯನ್ನು ಮಂಡಿಸಲಾಗಿದೆ.
- ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ, ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನೀಡಿರುವ 2020–21ನೇ ಸಾಲಿನ ಧನವಿನಿಯೋಗ ಲೆಕ್ಕಗಳು ಮತ್ತು ಹಣಕಾಸಿನ ಲೆಕ್ಕಗಳ (ಸಂಪುಟI ಮತ್ತುII)ನ್ನು ಸದನದಲ್ಲಿ ಮಂಡಿಸಲಾಗಿದೆ.
- ಒಂದು ಹಕ್ಕುಚ್ಯುತಿ ಪ್ರಸ್ತಾವವನ್ನು ಸದನದಲ್ಲಿ ಮಂಡಿಸಿದ್ದು, ಈ ಬಗ್ಗೆ ಚರ್ಚಿಸಿ ತೀರ್ಮಾನಿಸಲಾಗಿದೆ.
- 2021–22ನೇ ಸಾಲಿನ ಪೂರಕ ಅಂದಾಜುಗಳ ಎರಡನೇ ಕಂತು ಹಾಗೂ 2021–22ನೇ ಸಾಲಿನ ರಾಜ್ಯ ಹಣಕಾಸಿನ ಮಧ್ಯವಾರ್ಷಿಕ ಪರಿಶೀಲನಾ ವರದಿಯನ್ನು ದಿನಾಂಕ:17.12.2021 ರಂದು ಮಂಡಿಸಿದ್ದು, ದಿನಾಂಕ:23.12.2021 ರಂದು ಮತಕ್ಕೆ ಹಾಕಿ ಅಂಗೀಕರಿಸಲಾಗಿದೆ.
- 2018ನೇ ಸಾಲಿನ ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ವಿಧೇಯಕವನ್ನು ಹಿಂಪಡೆಯಲಾಗಿದೆ.
- ಈ ಅಧಿವೇಶನದಲ್ಲಿ ಧನವಿನಿಯೋಗ ವಿಧೇಯಕ ಸೇರಿದಂತೆ ಒಟ್ಟು 10 ವಿಧೇಯಕಗಳನ್ನು ಮಂಡಿಸಿ ಅಂಗೀಕರಿಸಲಾಗಿದೆ.

- ಕನ್ನಡದ ಬಾವುಟಕ್ಕೆ, ಸಂಗೊಳ್ಳಿ ರಾಯಣ್ಣ ಮತ್ತು ಛತ್ರಪತಿ ಶಿವಾಜಿ ಮಹಾರಾಜರ ಪುತ್ಥಳಿಗಳಿಗೆ ಕಿಡಿಗೇಡಿಗಳು ಅಪಮಾನ ಮಾಡಿದ ಕೃತ್ಯವನ್ನು ಖಂಡಿಸಿ ಸದನವು ನಿರ್ಣಯವನ್ನು ಸರ್ವಾನು ಮತದಿಂದ ಅಂಗೀಕರಿಸಿದೆ.

- ಕರ್ನಾಟಕ ವಿಧಾನಮಂಡಲದ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ 2020–21ನೇ ಸಾಲಿನ ಐದನೇ, ಆರನೇ ಮತ್ತು ಏಳನೇ ವರದಿಗಳು ಮತ್ತು 23 ಅಧಿಸೂಚನೆಗಳು, 01 ಅಧ್ಯಾದೇಶ, 69 ವಾರ್ಷಿಕ ವರದಿಗಳು, 77 ಲೆಕ್ಕ ಪರಿಶೋಧನಾ ವರದಿಗಳು ಹಾಗೂ 01 ವಿಶೇಷ ವರದಿಯನ್ನು ಸದನದಲ್ಲಿ ಮಂಡಿಸಲಾಗಿದೆ.

- ನಿಯಮ 60ರಡಿಯಲ್ಲಿ ನೀಡಿದ್ದ 8 ನಿಲುವಳಿ ಸೂಚನೆಗಳನ್ನು ಪರಿವರ್ತಿಸಿರುವುದನ್ನು ಸೇರಿಸಿ 21 ಸೂಚನೆಗಳನ್ನು ನಿಯಮ 69 ರಡಿಯಲ್ಲಿ ಸ್ವೀಕರಿಸಿದ್ದು, 05 ಸೂಚನೆಗಳನ್ನು ಚರ್ಚಿಸಲಾಗಿದೆ. ಈ ಪೈಕಿ ಅತಿವೃಷ್ಟಿಕುರಿತು ನಡೆದ ಚರ್ಚೆಯಲ್ಲಿ 37 ಸದಸ್ಯರುಗಳು ಭಾಗವಹಿಸಿದ್ದು, 8 ಗಂಟೆ 38 ನಿಮಿಷಗಳ ಕಾಲ ಹಾಗೂ ಉತ್ತರ ಕರ್ನಾಟಕದ ಸಮಸ್ಯೆಗಳ ಕುರಿತು ನಡೆದ ಚರ್ಚೆಯಲ್ಲಿ 13 ಸದಸ್ಯರುಗಳು ಭಾಗವಹಿಸಿದ್ದು, 5 ಗಂಟೆ 45 ನಿಮಿಷಗಳ ಕಾಲ ಚರ್ಚಿಸಲಾಗಿದೆ.

- ಒಟ್ಟು 2426 ಪ್ರಶ್ನೆಗಳನ್ನು ಸ್ವೀಕರಿಸಲಾಗಿದ್ದು, ಸದನದಲ್ಲಿ ಉತ್ತರಿಸಬೇಕಾಗಿದ್ದ 150 ಪ್ರಶ್ನೆಗಳ ಪೈಕಿ 149 ಪ್ರಶ್ನೆಗಳಿಗೆ ಉತ್ತರಿಸಲಾಗಿದೆ. ಲಿಖಿತ ಮೂಲಕ ಉತ್ತರಿಸುವ 2032 ಪ್ರಶ್ನೆಗಳ ಪೈಕಿ 1921 ಪ್ರಶ್ನೆಗಳಿಗೆ ಉತ್ತರಗಳನ್ನು ಮಂಡಿಸಲಾಗಿದೆ. ಪ್ರಶ್ನೋತ್ತರಕ್ಕೆ ಸಂಬಂಧಿಸಿದಂತೆ ಶೇಕಡ 99ರಷ್ಟು ಸಾಧನೆಯಾಗಿದೆ ಎಂಬುದನ್ನು ಸದನದ ಗಮನಕ್ಕೆ ತರಬಯಸುತ್ತೇನೆ.

- ನಿಯಮ 351 ರಡಿಯಲ್ಲಿ 194 ಸೂಚನೆಗಳನ್ನು ಅಂಗೀಕರಿಸಿದ್ದು, 133 ಸೂಚನೆಗಳ ಉತ್ತರಗಳನ್ನು ಸ್ವೀಕರಿಸಲಾಗಿದೆ.

- ಗಮನ ಸೆಳೆಯುವ 350 ಸೂಚನೆಗಳ ಪೈಕಿ 103 ಸೂಚನೆಗಳನ್ನು ಚರ್ಚಿಸಲಾಗಿದೆ/ ಮಂಡಿಸಲಾಗಿದೆ. ಒಟ್ಟಾರೆಯಾಗಿ 213 ಸೂಚನೆಗಳಿಗೆ ಉತ್ತರವನ್ನು ಸ್ವೀಕರಿಸಲಾಗಿದೆ.

- ಶೂನ್ಯ ವೇಳೆಯಲ್ಲಿ ಒಟ್ಟು 24 ಸೂಚನೆಗಳನ್ನು ಚರ್ಚಿಸಲಾಗಿದೆ.

- 01 ಅರ್ಜಿಯನ್ನು ಸದನಕ್ಕೆ ಒಪ್ಪಿಸಲಾಗಿದೆ.

- ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಸೆನೆಟ್‌ಗೆ ಮೂರು ಜನ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸದನವು ಮಾನ್ಯ ಸಭಾಧ್ಯಕ್ಷರವರಿಗೆ ದಿನಾಂಕ: 22.12.2021 ರಂದು ಅಧಿಕಾರ ನೀಡಲಾಗಿರುತ್ತದೆ.

- ಕೆಲವೊಂದು ಸಾರ್ವಜನಿಕ ಮಹತ್ವವುಳ್ಳ ವಿಷಯಗಳ ಕುರಿತು ಗಂಭೀರವಾಗಿ ಚರ್ಚಿಸುತ್ತಿರುವ ಸಂದರ್ಭದಲ್ಲಿ ಗೊಂದಲ ಉಂಟಾಗಿ ಧರಣಿ ನಡೆಸಿದ ಸಂದರ್ಭದಲ್ಲಿ ಸರ್ಕಾರದ ಹಾಗೂ ಪ್ರತಿಪಕ್ಷಗಳ ಪ್ರಮುಖರೊಂದಿಗೆ ಚರ್ಚಿಸಿ ಗೊಂದಲವನ್ನು ಆಗಿಂದಾಗ್ಗೆ ಸೌಹಾರ್ದಯುತವಾಗಿ ಪರಿಹರಿಸಿ ಸದನವನ್ನು ಯಶಸ್ವಿಯಾಗಿ ನಡೆಸಲು ಸಹಕರಿಸಿದ ಎಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ಅಲ್ಲದೇ,

**ಈ ಅವಧಿಯಲ್ಲಿ ಸದನವು ಶೇಕಡ 90ಕ್ಕಿಂತ ಹೆಚ್ಚಿನ ಕಾರ್ಯಕಲಾಪಗಳನ್ನು ಪೂರ್ಣಗೊಳಿಸಿರುತ್ತದೆ ಎಂಬುದನ್ನು ತಿಳಿಸಲು ಹರ್ಷವಾಗುತ್ತದೆ.**

ಸದನದ ಎಲ್ಲಾ ಕಾರ್ಯಕಲಾಪಗಳಲ್ಲಿ ಭಾಗವಹಿಸಿ, ನನ್ನೊಂದಿಗೆಸಹಕರಿಸಿದ ಸಭಾ ನಾಯಕರಾದ ಮಾನ್ಯ ಮುಖ್ಯಮಂತ್ರಿಯವರಿಗೆ, ಮಾನ್ಯ ವಿರೋಧ ಪಕ್ಷದ ನಾಯಕರಿಗೆ, ಸಚಿವ ಸಂಪುಟದ ಸದಸ್ಯರಿಗೆ, ಉಪ ಸಭಾಧ್ಯಕ್ಷರಿಗೆ, ಸರ್ಕಾರಿ ಹಾಗೂ ವಿರೋಧ ಪಕ್ಷದ ಮುಖ್ಯ ಸಚೇತಕರುಗಳಿಗೆ, ಎಲ್ಲಾ ಸದಸ್ಯರುಗಳಿಗೆ, ಮಾಧ್ಯಮ ಪ್ರತಿನಿಧಿಗಳಿಗೆ, ಇಲಾಖಾ ಮುಖ್ಯಸ್ಥರು, ಅಧಿಕಾರಿ/ಸಿಬ್ಬಂದಿಯವರಿಗೆ, ಬೆಳಗಾವಿಯಲ್ಲಿ ವಸತಿ ಮತ್ತು ಸಾರಿಗೆ ವ್ಯವಸ್ಥೆ ಮಾಡಿಕೊಟ್ಟು ಶಾಸಕರ ಸೌಕರ್ಯಕ್ಕೆ ನಿರಂತರವಾಗಿ ಪ್ರಯತ್ನಿಸಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ ಎಲ್ಲರಿಗೂ ಹಾಗೂ ವಿಶೇಷವಾಗಿ ಬೆಳಗಾವಿ ಜಿಲ್ಲಾಡಳಿತದವರಿಗೆ ಹಾಗೂ ಕಾನೂನು ಸುವ್ಯವಸ್ಥೆಯ ಜವಾಬ್ದಾರಿಗಳನ್ನು ಸೂಕ್ತವಾಗಿ ನಿರ್ವಹಿಸಿದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಹಾಗೂ ವಿಧಾನಸಭೆ ಸಚಿವಾಲಯದ ಅಧಿಕಾರಿ ಹಾಗೂ ಸಿಬ್ಬಂದಿಯವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.ನಾಡಿನ ಜನತೆಯು ಕೊರೋನಾ ಕುರಿತು ಮುಂಜಾಗ್ರತೆ ವಹಿಸುವಂತೆ ಕೋರುತ್ತೇನೆ.

**ಈಗ ರಾಷ್ಟ್ರಗೀತೆಯೊಂದಿಗೆ ಸದನವನ್ನು ಅನಿರ್ಧಿಷ್ಟ ಅವಧಿಗೆ ಮುಂದೂಡುತ್ತಿದ್ದೇನೆ.**

*****

## 158. ಕರ್ನಾಟಕ ವಿಧಾನಸಭೆ

## 15ನೇ ವಿಧಾನಸಭೆ

### ದಿನಾಂಕ:13.12.2021 ರಿಂದ 24.12.2021 ರವರೆಗೆ ನಡೆದ ಹನ್ನೊಂದನೇ ಅಧಿವೇಶನದಲ್ಲಿ ಮಂಡಿಸಿದ/ಅಂಗೀಕರಿಸಿದ ಹಾಗೂ ಹಿಂಪಡೆಯಲಾದ ವಿಧೇಯಕಗಳ ಪಟ್ಟಿ

| ಕ್ರ. ಸಂ. Sl. No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು | | | ಷರಾ Remarks |
|---|---|---|---|---|---|
| | | ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | |
| | | ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ಅಂಗೀಕರಿಸಿದ ದಿನಾಂಕ Date of Passing | |
| 1 | 2 | 3 | 4 | 6 | 7 |
| 1 | ಕರ್ನಾಟಕ ನಗರಪಾಲಿಕೆಗಳ ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:41) The Karnataka Muncipal Corporations and Certain other Law (Amendment) Bill, 2021 (L.A. Bill No. 41 of 2021) | **15.12.2021** | **21.12.2021** | **22.12.2021** | --- |
| 2 | ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:42) The Karnataka Land Revenue (Amendment) Bill, 2021 (L.A. Bill No. 42 of 2021) | **15.12.2021** | **20.12.2021** | **22.12.2021** | --- |
| 3 | ಕರ್ನಾಟಕ ಕೆಲವು ಇನಾಮುಗಳ ರದ್ದಿಯಾತಿ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:43) The Karnataka Certain Inams Abolition and Certain other Law (Amendment) Bill, 2021 (L.A. Bill No. 43 of 2021) | **15.12.2021** | **20.12.2021** | **22.12.2021** | --- |
| 4 | ಕರ್ನಾಟಕ ರಾಜ್ಯ ಆಯುಷ್ ವಿಶ್ವವಿದ್ಯಾಲಯ ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:44) The The Karnataka State Ayush | **16.12.2021** | **21.12.2021** | **22.12.2021** | --- |

| ಕ್ರ. ಸಂ. Sl. No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು ವಿಧಾನಸಭೆ Legislative Assembly ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ವಿಧಾನ ಪರಿಷತ್ತು Legislative Council ಅಂಗೀಕರಿಸಿದ ದಿನಾಂಕ Date of Passing | ಷರಾ Remarks |
|---|---|---|---|---|---|
| | University Bill, 2021 (L.A. Bill No. 44 of 2021) | | | | |
| 5 | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ಎರಡನೇ ತಿದ್ದುಪಡಿ) (2021ರ ವಿ.ಸ.ವಿ. ಸಂಖ್ಯೆ:45)<br>The Karnataka State Civil Services (Regulation of Transfer of Teachers) Bill, 20201 (L.A. Bill No. 45 of 2021) | **16.12.2021** | **21.12.2021** | **22.12.2021** | --- |
| 6 | ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜು ವಿಶ್ವವಿದ್ಯಾಲಯ, ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:46)<br>The University of Visvesvaraya college of Ingineering Bill, 20201 (L.A. Bill No. 46 of 2021 | **16.12.2021** | **20.12.2021** | **22.12.2021** | --- |
| 7 | ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:47)<br>The University of Agricultural Sciences (Amendment) Bill, 20201 (L.A. Bill No. 47 of 2021 | **17.12.2021** | **21.12.2021** | **22.12.2021** | --- |
| 8 | ಕರ್ನಾಟಕ ನಗರಪಾಲಿಕೆಗಳ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:48)<br>The Karnataka Muncipal Corporations and Certain other Law (Amendment) Bill, 2021 (L.A. Bill No. 48 of 2021) | **17.12.2021** | **20.12.2021** | **22.12.2021** | --- |

| ಕ್ರ. ಸಂ. Sl. No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | ಷರಾ Remarks |
|---|---|---|---|---|---|
| | | ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ಅಂಗೀಕರಿಸಿದ ದಿನಾಂಕ Date of Passing | |
| 9 | ಕರ್ನಾಟಕ ಧನವಿನಿಯೋಗ (ಸಂಖ್ಯೆ:4) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:49)<br>The Karnataka Appropriation (No: 4) Bill, 2021 (L.A. Bill No 49 of 2021) | **23.12.2021** | **23.12.2021** | **24.12.2021** | --- |
| 10 | ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:50)<br>The Karnataka Protection of Right to Freedom of Religion Bill, 2021 (L.A. Bill No. 50 of 2021) | **21.12.2021** | **23.12.2021** | **23.12.2021** | --- |

| ವಿಧಾನಸಭೆಯಲ್ಲಿ ಹಿಂಪಡೆಯಲಾದ ವಿಧೇಯಕ | | | | | |
|---|---|---|---|---|---|
| ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) (ತಿದ್ದುಪಡಿ) ವಿಧೇಯಕ, 2018 (2018ರ ವಿಸ.ವಿ.ಸಂಖ್ಯೆ:12)<br>The Karnataka Scheduled Castes, Scheduled Tribes and other Backward Classes (Reservation of Appointments etc.,) (Amendment) Bill, 2018 (L.A. Bill No. 12 of 2018) | **12.12.2018** | | ---- | ---- | ದಿನಾಂಕ: 12.12.2018ರಂದು ಮಂಡನೆಯಾಗಿದ್ದ ಸದರಿ ವಿಧೇಯಕವನ್ನು ವಿಧಾನಸಭೆಯಲ್ಲಿ ದಿನಾಂಕ: 15.12.2021 ರಂದು ಹಿಂಪಡೆಯಲಾಗಿದೆ. |

## 159. ವಿಧಾನ ಪರಿಷತ್ತಿನ 145ನೇ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

ಮಾನ್ಯ ಸಭಾಪತಿಯವರು:

ವಿಧಾನ ಪರಿಷತ್ತಿನ 145ನೇ ಅಧಿವೇಶನದಲ್ಲಿ ನಡೆದಿರುವ ಕಾರ್ಯಕಲಾಪಗಳ ವಿವರವನ್ನು ಸದನಕ್ಕೆ ತಿಳಿಸಲು ಇಚ್ಛಿಸುತ್ತೇನೆ. ಪ್ರಸ್ತುತ ಅಧಿವೇಶನವು ದಿನಾಂಕ:13.12.2021 ರಿಂದ 24.12.2021 ರವರೆಗೆ ಒಟ್ಟು 10 ದಿನಗಳು ಅಂದರೆ, 53 ಗಂಟೆ 22 ನಿಮಿಷಗಳ ಕಾಲ ನಡೆಸಲಾಗಿರುತ್ತದೆ.

ದಿನಾಂಕ:13.12.2021ರಂದು ಬೆಳಗ್ಗೆ 11.00 ಗಂಟೆಗೆ ಪ್ರಾರಂಭವಾಗಿ ಕಳೆದ ಅಧಿವೇಶನದಿಂದೀಚೆಗೆ ನಿಧನರಾದ ಗಣ್ಯರುಗಳಿಗೆ ಸದನವು ತನ್ನ ಸಂತಾಪವನ್ನು ವ್ಯಕ್ತಪಡಿಸಿತು.

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಷ್ಟ್ರಪತಿಯವರಿಂದ ಹಾಗೂ ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಕಾರ್ಯದರ್ಶಿಯವರು ಮಂಡಿಸಿದರು.

ಭಾರತ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ನೀಡಿರುವ 2020-2021ನೇ ಸಾಲಿನ ಧನವಿನಿಯೋಗದ ಲೆಕ್ಕಗಳು ಮತ್ತು ಹಣಕಾಸು ಲೆಕ್ಕಗಳನ್ನು (ಸಂಪುಟ 1 ಮತ್ತು 2) ಮತ್ತು 2021-2022ನೇ ಸಾಲಿನ ಪೂರಕ ಅಂದಾಜುಗಳ 2ನೇ ಕಂತಿನ ಬೇಡಿಕೆಗಳನ್ನು ಹಾಗೂ ಮಧ್ಯ ವಾರ್ಷಿಕ ಪರಿಶೀಲನಾ ವರದಿಯನ್ನು ಹಾಗೂ ಸಭೆಯ ಮುಂದಿಡಲಾಗುವ ಕಾಗದ ಪತ್ರಗಳ 01 ಮತ್ತು 02ನೇ ಪಟ್ಟಿಗಳನ್ನು ಮಂಡಿಸಲಾಯಿತು.

ವಿಧಾನ ಪರಿಷತ್ತಿನ **ಹಕ್ಕುಬಾಧ್ಯತಾ ಸಮಿತಿಯ 98ನೇ ವರದಿಯನ್ನು** ವಿಧಾನ ಮಂಡಲದ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ವರದಿ ಹಾಗೂ 2021ನೇ ಸಾಲಿನ ಸದಸ್ಯರುಗಳ **ಖಾಸಗಿ ವಿಧೇಯಕ ಮತ್ತು ನಿರ್ಣಯಗಳ ಸಮಿತಿಯ ಮೊದಲನೇ ವರದಿಗಳನ್ನು** ಒಪ್ಪಿಸಲಾಯಿತು.

ಪ್ರಸ್ತುತ ಅಧಿವೇಶನದಲ್ಲಿ 1384 ಪ್ರಶ್ನೆಗಳನ್ನು ಸ್ವೀಕರಿಸಿದ್ದು, ಅದರಲ್ಲಿ 150 ಪ್ರಶ್ನೆಗಳನ್ನು ಚುಕ್ಕೆ ಗುರುತಿನ ಪ್ರಶ್ನೆಗಳನ್ನಾಗಿ ಅಂಗೀಕರಿಸಿದ್ದು, ಅವುಗಳ ಪೈಕಿ 134 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಿಸಲಾಯಿತು. ಲಿಖಿತ ಮೂಲಕ ಉತ್ತರಿಸುವ ಒಟ್ಟು 1234 ಪ್ರಶ್ನೆಗಳ ಪೈಕಿ 792 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರವನ್ನು ಮಂಡಿಸಲಾಯಿತು.

ನಿಯಮ 72ರಡಿಯಲ್ಲಿ 160 ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ 8 ಸೂಚನೆಗಳಿಗೆ ಉತ್ತರಿಸಲಾಯಿತು.

ನಿಯಮ 330ರಡಿಯಲ್ಲಿ 111 ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ 13 ಪ್ರಸ್ತಾವಗಳಿಗೆ ಉತ್ತರಿಸಲಾಯಿತು.

ಶೂನ್ಯ ವೇಳೆಯ ಒಟ್ಟು 86 + ಪ್ರಸ್ತಾವಗಳ ಪೈಕಿ 6 ಪ್ರಸ್ತಾವಕ್ಕೆ ಸದನದಲ್ಲಿ ಉತ್ತರಿಸಲಾಗಿದ್ದು, 23 ಪ್ರಸ್ತಾವಗಳಿಗೆ ಉತ್ತರಗಳನ್ನು ಸದನದಲ್ಲಿ ಮಂಡಿಸಲಾಯಿತು.

ನಿಯಮ 59ರ ಅಡಿಯಲ್ಲಿ 04 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, 03 ಸೂಚನೆಯನ್ನು ನಿಯಮ 68ಕ್ಕೆ ಪರಿವರ್ತಿಸಿ ಚರ್ಚಿಸಿ ಉತ್ತರಿಸಲಾಗಿರುತ್ತದೆ.

ನಿಯಮ 68ರ ಅಡಿಯಲ್ಲಿ 02 ಸೂಚನೆಗಳನ್ನು ಸ್ವೀಕರಿಸಲಾಗಿರುತ್ತದೆ.

ನಿಯಮ 58ರ ಅಡಿಯಲ್ಲಿ 06 ಸೂಚನೆಗಳನ್ನು ಸ್ವೀಕರಿಸಲಾಗಿರುತ್ತದೆ.

ವಿಧಾನ ಸಭೆಯಿಂದ ಅಂಗೀಕೃತರೂಪದಲ್ಲಿರುವ 9 ವಿಧೇಯಕಗಳಿಗೆ ವಿಧಾನ ಪರಿಷತ್ತು ತನ್ನ ಸಹಮತಿಯನ್ನು ನೀಡಿರುತ್ತದೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್** ಇಲಾಖೆಯಲ್ಲಿ ಕುಡಿಯುವ ನೀರು ಮತ್ತು ನೈರ್ಮಲ್ಯ ಕಾರ್ಯಕ್ರಮಕ್ಕೆ ಬಿಡುಗಡೆಯಾದ ಹಣವನ್ನು ಅವ್ಯವಹಾರ ಮಾಡಿರುವ ಸಂಬಂಧ ಪರಿಶೀಲಿಸಿ ವರದಿ ನೀಡಲು ರಚಿಸಲಾಗಿರುವ ಸದನ ಸಮಿತಿಯ ಹಾಗೂ ರಾಜ್ಯದಲ್ಲಿ 2020-2021ನೇ ಸಾಲಿನಲ್ಲಿ ಹೊಸದಾಗಿ **ನರ್ಸಿಂಗ್ ಮತ್ತು ಅಲೈಡ್ ಹೆಲ್ತ್ ಸೈನ್ಸ್‌ಸ್** ಕಾಲೇಜುಗಳಿಗೆ ಮೂಲ ಸೌಕರ್ಯಗಳಿಲ್ಲದಿದ್ದರೂ ಅನುಮತಿ ನೀಡಿ ಇಂಡಿಯನ್ ನರ್ಸಿಂಗ್ ಕೌನ್ಸಿಲ್ ರಚಿಸಲಾಗಿರುವ ಸಂಬಂಧ ಪರಿಶೀಲಿಸಿ ವರದಿ ನೀಡಲು ರಚಿಸಲಾಗಿರುವ **ಸದನ ಸಮಿತಿಗಳ ಕಾಲಾವಧಿಯನ್ನು ವಿಸ್ತರಿಸುವ ಪ್ರಸ್ತಾವವನ್ನು** ಹಾಗೂ **ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿಗೆ** ವಿಧಾನ ಪರಿಷತ್ತಿನ ಇಬ್ಬರು ಸದಸ್ಯರುಗಳನ್ನು ಚುನಾಯಿಸುವ ಬದಲು ಮಾನ್ಯ ಸಭಾಪತಿಯವರು ನಾಮನಿರ್ದೇಶಿಸುವ ಪ್ರಸ್ತಾವವನ್ನು ಮಂಡಿಸಿ ಅಂಗೀಕರಿಸಲಾಯಿತು.

ಉತ್ತರ ಕರ್ನಾಟಕ ಹಾಗೂ ಕಲ್ಯಾಣ ಕರ್ನಾಟಕ ಭಾಗದ ಜ್ವಲಂತ ಸಮಸ್ಯೆಗಳ ಕುರಿತು ವಿಸ್ತಾರವಾಗಿ ಚರ್ಚಿಸಿ ಸರ್ಕಾರದಿಂದ ಉತ್ತರಿಸಲಾಯಿತು.

<u>ಮಾನ್ಯ ಸಭಾನಾಯಕರು ಹಾಗೂ ವಿರೋಧ ಪಕ್ಷದ ನಾಯಕರು ಮಾತನಾಡಿದ ನಂತರ</u>:-

ಮಾನ್ಯ ಮುಖ್ಯಮಂತ್ರಿಗಳಿಗೆ, ಸಭಾನಾಯಕರಿಗೆ, ವಿರೋಧ ಪಕ್ಷದ ನಾಯಕರಿಗೆ, ಎಲ್ಲಾ ಮಂತ್ರಿ ವರ್ಗದವರಿಗೆ, ಸರ್ಕಾರದ ಮುಖ್ಯ ಸಚೇತಕರಿಗೆ, ವಿರೋಧ ಪಕ್ಷದ ಮುಖ್ಯಸಚೇತಕರಿಗೆ, ಪತ್ರಿಕಾ ಹಾಗೂ ಮಾಧ್ಯಮ ವರದಿಗಾರರಿಗೆ, ವಿಧಾನ ಪರಿಷತ್ತಿನ ಸಚಿವಾಲಯದ ಅಧಿಕಾರಿ/ನೌಕರವರ್ಗದವರಿಗೆ ಮತ್ತು ಸರ್ಕಾರದ ಎಲ್ಲಾ ಅಧಿಕಾರಿ/ನೌಕರ ವೃಂದದವರಿಗೆ ಸದನದ ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಲು ಸಹಕರಿಸಿದ್ದಕ್ಕೆ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಾ, **<u>ಸದನವನ್ನು ಅನಿರ್ದಿಷ್ಟಕಾಲದವರೆಗೆ ಮುಂದೂಡುತ್ತಿದ್ದೇನೆ</u>**.

ಮಾನ್ಯ ಉಪಸಭಾಪತಿಯವರು(**ಶ್ರೀ ಎಂ.ಕೆ.ಪ್ರಾಣೇಶ್**) ಸದನವನ್ನು ಸಂಜೆ 5.00ಗಂಟೆಗೆ ಅನಿರ್ದಿಷ್ಟ ಕಾಲದವರೆಗೆ ಮುಂದೂಡಿದರು.

# 160. ಕರ್ನಾಟಕ ವಿಧಾನ ಪರಿಷತ್ತು
# ನೂರನಲವತ್ತೈದನೆಯ ಅಧಿವೇಶನ

## ದಿನಾಂಕ: 13.12.2021 ರಿಂದ 24.12.2021 ರವರೆಗೆ ವಿಧಾನ ಸಭೆಯಲ್ಲಿ ಅಂಗೀಕೃತಗೊಂಡು ವಿಧಾನ ಪರಿಷತ್ತಿನ ಸಹಮತಿ ಪಡೆದಿರುವ ವಿಧೇಯಕಗಳ ವಿವರ

| ಕ್ರ ಸಂ | ವಿಧೇಯಕದ ಹೆಸರು | ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 1 | **ಕರ್ನಾಟಕ ನಗರ ಪಾಲಿಕೆಗಳ ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕ, 2021**<br>The Karnataka Municipal Corporations and Certain Other Law (Second Amendment) Bill, 2021 | 41 | 21.12.2021 | 22.12.2021 |
| 2. | **ಕರ್ನಾಟಕ ಭೂಕಂದಾಯ(ತಿದ್ದುಪಡಿ) ವಿಧೇಯಕ, 2021**<br>The Karnataka Land Revenue (Amendment) Bill, 2021 | 42 | 20.12.2021 | 22.12.2021 |
| 3. | **ಕರ್ನಾಟಕಕೆಲವು ಇನಾಮುಗಳ ರದ್ದಿಯಾತಿ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2021**<br>The Karnataka Certain Inams Abolition and Certain other Law (Amendment) Bill, 2021 | 43 | 20.12.2021 | 22.12.2021 |
| 4. | **ಕರ್ನಾಟಕರಾಜ್ಯಆಯುಷ್ ವಿಶ್ವವಿದ್ಯಾಲಯ ವಿಧೇಯಕ, 2021**<br>The Karnataka State Ayush University Bill, 2021 | 44 | 21.12.2021 | 22.12.2021 |
| 5. | **ಕರ್ನಾಟಕರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ಎರಡನೇತಿದ್ದುಪಡಿ) ವಿಧೇಯಕ, 2021**<br>The Karnataka State Civil Services (Regulation of Transfer of Teachers)(Second Amendment) Bill, 2021 | 45 | 21.12.2021 | 22.12.2021 |

| ಕ್ರ ಸಂ | ವಿಧೇಯಕದ ಹೆಸರು | ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 6 | **ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜು ವಿಶ್ವವಿದ್ಯಾಲಯ ವಿಧೇಯಕ, 2021**<br>The University of Visvesvaraya College of Engineering Bill, 2021 | 46 | 20.12.2021 | 22.12.2021 |
| 7 | **ಕೃಷಿ ವಿಜ್ಞಾನಗಳ ವಿಶ್ವ ವಿದ್ಯಾಲಯಗಳ (ತಿದ್ದುಪಡಿ) ವಿಧೇಯಕ, 2021**<br>The Universities of Agricultural Science (Amendment) Bill, 2021 | 47 | 21.12.2021 | 22.12.2021 |
| 8 | **ಕರ್ನಾಟಕ ನಗರ ಪಾಲಿಕೆಗಳ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ)ವಿಧೇಯಕ, 2021**<br>The Karnataka Municipal Corporations and Certain Other Law (Amendment) Bill, 2021 | 48 | 20.12.2021 | 22.12.2021 |
| 9 | **ಕರ್ನಾಟಕ ಧನವಿನಿಯೋಗ (ಸಂಖ್ಯೆ–4) ವಿಧೇಯಕ 2021**<br>The Karnataka Appropriation (No-4) Bill, 2021 | 49 | 23.12.2021 | 23.12.2021 |
| 10 | **ಕರ್ನಾಟಕ ಧಾರ್ಮಿಕ ಸ್ವಾತಂತ್ರ್ಯ ಹಕ್ಕು ಸಂರಕ್ಷಣಾ ವಿಧೇಯಕ 2021**<br>The Karnataka Protection of Right to Freedom of Religion Bill, 2021 | 50 | 23.12.2021 | ಪರ್ಯಾಲೋಚನೆಗೆ ತೆಗೆದು ಕೊಂಡಿರುವುದಿಲ್ಲ |





ದಿನಾಂಕ: 01.10.2021 ರಂದು ಜಿಲ್ಲಾಡಳಿತ ಹಾಗೂ ಜಿಲ್ಲಾ ಪಂಚಾಯತ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ, ಹುಬ್ಬಳ್ಳಿ-ಧಾರವಾಡ ಇವರ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ಹಿರಿಯ ನಾಗರೀಕರ ದಿನಾಚರಣೆಯಲ್ಲಿ ವಿಧಾನಪರಿಷತ್ತಿನ ಸಭಾಪತಿಯವರಾದ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡಿದ್ದು, ಕಾರ್ಯಕ್ರಮವನ್ನು ಉದ್ಘಾಟಿಸಿ, ವಿಕಲಚೇತನ ಹಾಗೂ ಹಿರಿಯನಾಗರಿಕ ಬಂಧುಗಳನ್ನು ಸನ್ಮಾನಿಸಿದರು. ಕಾರ್ಯಕ್ರಮದಲ್ಲಿ ವಿವಿಧ ಇಲಾಖೆಗಳ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ದಿನಾಂಕ: **02.10.2021** ರಂದು ಕರ್ನಾಟಕ ಸರ್ಕಾರ ವಸತಿ ಇಲಾಖೆ, ಹಾಗೂ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರ ವತಿಯಿಂದ ಹುಬ್ಬಳ್ಳಿ-ಧಾರವಾಡ ವಿಧಾನಸಭಾ ಕ್ಷೇತ್ರದ ಕೊಳಗೇರಿ ಪ್ರದೇಶದ ನಿವಾಸಿಗಳಿಗೆ ಹಕ್ಕು ಪತ್ರ ನೀಡುವ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಫಲಾನುಭವಿಗಳಿಗೆ ಹಕ್ಕುಪತ್ರ ವಿತರಿಸಿದರು. ಕಾರ್ಯಕ್ರಮದಲ್ಲಿ ಕೇಂದ್ರ ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಪ್ರಹ್ಲಾದ ಜೋಶಿರವರು, ವಸತಿ ಸಚಿವರಾದ ಶ್ರೀ ವಿ.ಸೋಮಣ್ಣ ಮತ್ತು ಕೈಮಗ್ಗ ಮತ್ತು ಜವಳಿ ಸಚಿವರಾದ ಶ್ರೀ ಶಂಕರ್ ಬಿ. ಪಾಟೀಲ್ ಮುನೇನಕೊಪ್ಪ ಹಾಗೂ ಶಾಸಕರಾದ ಶ್ರೀ ಅರವಿಂದ್ ಬೆಲ್ಲದ್ ರವರು ಉಪಸ್ಥಿತರಿದ್ದರು.





ದಿನಾಂಕ: **02.10.2021** ರಂದು ಗಾಂಧಿಜಯಂತಿ ಪ್ರಯುಕ್ತ, ಶ್ರೀ ಸ್ವಾಮಿ ವಿವೇಕಾನಂದ ಸಾಂಸ್ಕೃತಿಕ ಸಮಿತಿ(ರಿ) ಹಾಗೂ ಗದಗ–ಬೆಟಗೇರಿ ನಗರಸಭೆ ಇವರ ಸಹಯೋಗದಲ್ಲಿ ಹಮ್ಮಿಕೊಂಡಿದ್ದ, ನಮ್ಮ ನಿರ್ಮಲ ನಗರ ಹಾಗೂ ನಮ್ಮ ಕೈತೋಟ ಚಾಲನಾ ಕಾರ್ಯಕ್ರಮದಲ್ಲಿ, ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಪಾರ್ಥೇನಿಯಂ ಕಳೆ ಗಿಡವನ್ನು ತೆಗೆಯುವ ಮೂಲಕ ವಿದ್ಯುಕ್ತವಾಗಿ ಚಾಲನೆ ನೀಡಿದರು. ಕಾರ್ಯಕ್ರಮದಲ್ಲಿ ಲೋಕೋಪಯೋಗಿ ಸಚಿವರಾದ ಶ್ರೀ ಸಿ.ಸಿ ಪಾಟೀಲ ಮತ್ತು ವಿಧಾನಪರಿಷತ್ತಿನ ಸದಸ್ಯರಾದ ಶ್ರೀ ಎಸ್.ವಿ ಸಂಕನೂರ ಹಾಗೂ ಮಾಜಿ ಶಾಸಕರಾದ ಶ್ರೀ ಡಿ.ಆರ್ ಪಾಟೀಲ್ ರವರು ಉಪಸ್ಥಿತರಿದ್ದರು.





**ದಿನಾಂಕ: 04.10.2021 ರಂದು ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆ ಇವರು ಆಯೋಜಿಸಿದ್ದ, ಜಿಲ್ಲಾ ಮಟ್ಟದ "ರಾಷ್ಟ್ರೀಯ ಶಿಶಿಕ್ಷು ಮೇಳ–2021" ರ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಕಾರ್ಯಕ್ರಮವನ್ನು ಉದ್ಘಾಟಿಸಿ, ಶಿಶಿಕ್ಷು ಮೇಳವನ್ನು ಕುರಿತು ಮಾತನಾಡಿದರು.**






ದಿನಾಂಕ: **04.10.2021** ರಂದು ನರಗುಂದದಲ್ಲಿ ನಡೆದ ಶಿಕ್ಷಕರ ಹಾಗೂ ಶಿಕ್ಷಣ ಸಂಸ್ಥೆಗಳ ಜ್ವಲಂತ ಸಮಸ್ಯೆಗಳ ಪರಿಹಾರಕ್ಕಾಗಿ ಸಭಾಪತಿಗಳೊಂದಿಗೆ ಶಿಕ್ಷಕರ ಸಂವಾದ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಹಲವು ಸಮಸ್ಯೆಗಳ ಬಗ್ಗೆ ಚರ್ಚಿಸಿದರು. ನಂತರ ಗದಗ ಜಿಲ್ಲಾ ಮಾಧ್ಯಮಿಕ ಶಾಲಾ ನೌಕರರ ಸಂಘದ ವತಿಯಿಂದ ಅಭಿನಂದನೆ ಸ್ವೀಕರಿಸಿದರು. ಕಾರ್ಯಕ್ರಮದಲ್ಲಿ ಗದಗ ಜಿಲ್ಲಾ ಮಾಧ್ಯಮಿಕ ಶಾಲಾ ನೌಕರರ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ: **05.10.2021** ರಂದು ಕರ್ನಾಟಕ ರಾಜ್ಯ ಮಾಧ್ಯಮಿಕ ಹಾಗೂ ಪ್ರೌಢಶಾಲಾ ನೌಕರರ ಸಂಘ ಮತ್ತು ಮಾಧ್ಯಮಿಕ ಹಾಗೂ ಪ್ರೌಢಶಾಲಾ ಮುಖ್ಯೋಪಾಧ್ಯಾಯರುಗಳ ಸಂಘ, ತಾಲ್ಲೂಕು ಘಟಕ ಕಲಘಟಗಿ ಇವರ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಕಾರ್ಯಕ್ರಮ ಉದ್ಘಾಟಿಸಿ ಅಭಿನಂದನೆ ಸ್ವೀಕರಿಸದರು. ಕಾರ್ಯಕ್ರಮದಲ್ಲಿ ಅಪಾರ ಶಿಕ್ಷಕ ಬಂಧುಗಳು ಉಪಸ್ಥಿತರಿದ್ದರು.






**ದಿನಾಂಕ: 05.10.2021 ರಂದು ರಾಜ್ಯ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ (ರಿ) ಜಿಲ್ಲಾ ಘಟಕ ಧಾರವಾಡ ಇವರು ಆಯೋಜಿಸಿದ್ದ ಅಂತರಾಷ್ಟ್ರೀಯ ಶಿಕ್ಷಕರ ದಿನಾಚರಣೆ ಹಾಗೂ ಉತ್ತಮ ಶಾಲೆಗಳಿಗೆ–ಶಿಕ್ಷಕರಿಗೆ ಜಿಲ್ಲಾ ಪ್ರಶಸ್ತಿ ಪ್ರಧಾನ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಉತ್ತಮ ಶಾಲೆಗಳಿಗೆ–ಶಿಕ್ಷಕರಿಗೆ ಪ್ರಶಸ್ತಿ ಪ್ರಧಾನ ಮಾಡಿದರು.**






ಅವ್ವ ಸೇವಾ ಟ್ರಸ್ಟ್ ಹುಬ್ಬಳ್ಳಿ ಇವರು ಶಿಕ್ಷಕಿಯರಿಗಾಗಿ ಸ್ತನ ಕ್ಯಾನ್ಸರ್ ಕುರಿತು ಮುಂಜಾಗ್ರತಾ ಉಚಿತ ಥರ್ಮಲ್ ಪರೀಕ್ಷಾ ಶಿಬಿರವನ್ನು ದಿನಾಂಕ:10.10.2021 ರಂದು ಆಯೋಜಿಸಿರುವ ಹಿನ್ನೆಲೆಯಲ್ಲಿ ಅವ್ವ ಸೇವಾ ಟ್ರಸ್ಟ್ ಅಧ್ಯಕ್ಷರು ಹಾಗೂ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪತ್ರಿಕಾಗೋಷ್ಠಿಯನ್ನು ಏರ್ಪಡಿಸಿದ್ದರು. ಈ ಪತ್ರಿಕಾಗೋಷ್ಠಿಯಲ್ಲಿ ಅವ್ವ ಸೇವಾ ಟ್ರಸ್ಟ್‌ನ ಎಲ್ಲಾ ಪದಾಧಿಕಾರಿಗಳು ಹಾಗೂ ಮಾಧ್ಯಮ ಪ್ರತಿನಿಧಿಗಳು ಉಪಸ್ಥಿತರಿದ್ದರು. (06.10.2021)





**ದಿನಾಂಕ: 07.10.2021 ರಂದು ಮೈಸೂರಿನಲ್ಲಿ ವಿಶ್ವ ವಿಖ್ಯಾತ ದಸರಾ ಉತ್ಸವದ ನಿಮಿತ್ತ "ದಸರಾ ಸಾಂಸ್ಕೃತಿಕ ಕಾರ್ಯಕ್ರಮಗಳ ಉದ್ಘಾಟನೆ ಮತ್ತು ರಾಜ್ಯ ಸಂಗೀತ ವಿದ್ವಾನ್ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿರವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ, ಕಾಗೇರಿರವರು ಹಾಗೂ ಸಚಿವರುಗಳಾದ ಶ್ರೀ ಎಸ್.ಟಿ. ಸೋಮಶೇಖರ್, ಶ್ರೀ ವಿ. ಸುನೀಲ್ ಕುಮಾರ್ ಹಾಗೂ ಶಾಸಕರುಗಳಾದ ಶ್ರೀ ಎಸ್.ಎ. ರಾಮದಾಸ್, ಶ್ರೀ ನಾಗೇಂದ್ರ ಶ್ರೀ ಜಿ.ಟಿ. ದೇವೇಗೌಡ, ರವರುಗಳೊಂದಿಗೆ ಭಾಗವಹಿಸಿದ ಸಂದರ್ಭ.**









ದಿನಾಂಕ:10.10.2021 ರಂದು ಅವ್ವ ಸೇವಾ ಟ್ರಸ್ಟ್ ಹುಬ್ಬಳ್ಳಿ ಇವರು ಆಯೋಜಿಸಿರುವ ಶಿಕ್ಷಕಿಯರಿಗಾಗಿ ಸ್ತನ ಕ್ಯಾನ್ಸರ್ ಕುರಿತು ಮುಂಜಾಗ್ರತಾ ಉಚಿತ ಥರ್ಮಲ್ ಪರೀಕ್ಷಾ ಶಿಬಿರವನ್ನು ಅವ್ವ ಸೇವಾ ಟ್ರಸ್ಟ್ ಅಧ್ಯಕ್ಷರು ಹಾಗೂ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿ ರವರು ಉದ್ಘಾಟಿಸಿದರು.



ದಿನಾಂಕ:10.10.2021 ರಂದು ಧಾರವಾಡ ಜಿಲ್ಲಾ ಕಾರ್ಯನಿರತ ಪತ್ರಕರ್ತರ ಸಂಘ, ಹುಬ್ಬಳ್ಳಿ ಇವರು ಆಯೋಜಿಸಿದ್ದ ವಾರ್ಷಿಕ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಮಾಧ್ಯಮ ಹಾಗೂ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಸಾಧಕರುಗಳಿಗೆ ಪ್ರಶಸ್ತಿ ಪ್ರಧಾನ ಮಾಡಿದರು.



ದಿನಾಂಕ; 11.10.2021 ರಂದು ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಪೌರಾಡಳಿತ ಇಲಾಖೆಯ ಗದಗ–ಬೆಟಗೇರಿ ನಗರಸಭೆಗೆ ಸಂಬಂಧಿಸಿದ ಹಲವು ಸಮಸ್ಯೆಗಳ ಪರಿಹಾರಕ್ಕಾಗಿ ಸಭೆಯನ್ನು ಆಯೋಜಿಸಲಾಗಿತ್ತು. ಸಭೆಯಲ್ಲಿ ಪೌರಾಡಳಿತ ಸಚಿವರಾದ ಶ್ರೀ ಎಂ.ಟಿ.ಬಿ ನಾಗರಾಜುರವರು ಮತ್ತು ಇಲಾಖೆಯ ಅಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ: **11.10.2021** ರಂದು ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಗಳಿಗೆ ಸಂಬಂಧಿಸಿದ ಹಲವು ಸಮಸ್ಯೆಗಳ ಬಗ್ಗೆ ಚರ್ಚಿಸಲು ಸಭೆ ಆಯೋಜಿಸಲಾಗಿತ್ತು. ಸಭೆಯಲ್ಲಿ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರಾದ ಶ್ರೀ ಬಿ.ಸಿ ನಾಗೇಶ್ ರವರು, ಶಿಕ್ಷಕರ ಹಾಗೂ ಪದವೀಧರ ಕ್ಷೇತ್ರದ ವಿಧಾನಪರಿಷತ್ತಿನ ಸದಸ್ಯರುಗಳು, ಇಲಾಖೆಯ ಅಧಿಕಾರಿಗಳು ಉಪಸ್ಥಿತರಿದ್ದರು.




ದಿನಾಂಕ: **11.10.2021** ರಂದು ಬೆಂಗಳೂರು ವಿಶ್ವವಿದ್ಯಾಲಯ ವಾಣಿಜ್ಯ ಮತ್ತು ನಿರ್ವಹಣಾಶಾಸ್ತ್ರ ಅಧ್ಯಾಪಕರ ಪರಿಷತ್ತು (ರಿ) ಇವರು ಆಯೋಜಿಸಿದ್ದ ರಾಷ್ಟ್ರೀಯ ಶಿಕ್ಷಣನೀತಿ ಸಾಧಕ–ಬಾಧಕಗಳ ಸಂವಾದ ಕಾರ್ಯಾಗಾರದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಕಾರ್ಯಾಗಾರವನ್ನು ಉದ್ಘಾಟಿಸಿ, ರಾಷ್ಟ್ರೀಯ ಶಿಕ್ಷಣನೀತಿ ಸಾಧಕ–ಬಾಧಕಗಳ ಕುರಿತು ಸಂವಾದ ಕಾರ್ಯಕ್ರಮದಲ್ಲಿ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿ ಅಭಿನಂದನೆ ಸ್ವೀಕರಿಸಿದರು. ಕಾರ್ಯಾಗಾರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ವಾಣಿಜ್ಯ ಮತ್ತು ನಿರ್ವಹಣಾಶಾಸ್ತ್ರ ಅಧ್ಯಾಪಕರ ಪರಿಷತ್ತು (ರಿ) ಇದರ ಎಲ್ಲಾ ಪದಾಧಿಕಾರಿಗಳು ಹಾಗೂ ನಿವೃತ್ತ ವಾಣಿಜ್ಯ ಮತ್ತು ನಿರ್ವಹಣಾಶಾಸ್ತ್ರ ಅಧ್ಯಾಪಕರುಗಳು ಉಪಸ್ಥಿತರಿದ್ದರು.



ದಿನಾಂಕ: **13.10.2021** ರಂದು ಕರ್ನಾಟಕ ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘ (ರಿ) ರಾಜ್ಯ ಘಟಕ ಹುಬ್ಬಳ್ಳಿ ಇವರು ಆಯೋಜಿಸಿದ್ದ ಕಾರ್ಯಕಾರಿಣಿ ಸಭೆಯಲ್ಲಿ ವಿಧಾನ ಪರಿಷತ್ತಿನ ಸಭಾಪತಿಗಳು ಹಾಗೂ ಕರ್ನಾಟಕ ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘದ ಅಧ್ಯಕ್ಷರು ಆದ ಶ್ರೀ ಬಸವರಾಜ ಹೊರಟ್ಟಿಯವರು ಕಾರ್ಯಕಾರಿಣಿ ಸಭೆಯನ್ನು ಉದ್ಘಾಟಿಸಿ ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದಲ್ಲಿ ಕರ್ನಾಟಕ ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘ ಎಲ್ಲಾ ಪದಾಧಿಕಾರಿಗಳು ಹಾಗೂ ಶಿಕ್ಷಕವೃಂದದವರು ಉಪಸ್ಥಿತರಿದ್ದರು.




ದಿನಾಂಕ: **16.10.2021** ರಂದು ಜಿಲ್ಲಾಡಳಿತ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಹಾಗೂ ಜಿಲ್ಲಾಸ್ಪತ್ರೆ ಧಾರವಾಡ ಇವರ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ **PM CARES PSA** ಅಡಿ ನಿರ್ಮಾಣಗೊಂಡ ನೂತನ ಮಕ್ಕಳ ಚಿಕಿತ್ಸಾ ಘಟಕ ಉದ್ಘಾಟನಾ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿದ್ದರು. ಕೋವಿಡ್ ಸಂದರ್ಭದಲ್ಲಿ ಹಗಲಿರುಳೆನ್ನದೆ ಕಾರ್ಯನಿರ್ವಹಿಸಿದ ಕರೋನಾ ವಾರಿಯರ್ಸ್‌ಗಳಾದ ಆರೋಗ್ಯ ಇಲಾಖೆಯ ಸಿಬ್ಬಂದಿಗಳಿಗೆ ಈ ಸಂದರ್ಭದಲ್ಲಿ ಅಭಿನಂದಿಸಿದರು. ಕಾರ್ಯಕ್ರಮದಲ್ಲಿ ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ್ ಜೋಶಿರವರು, ಶಾಸಕರಾದ ಶ್ರೀ ಅರವಿಂದಬೆಲ್ಲದ್ ರವರು, ಎಸ್.ವಿ ಸಂಕನೂರ ರವರು ಜಿಲ್ಲಾಡಳಿತ ಹಾಗೂ ಆರೋಗ್ಯ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ದಿನಾಂಕ: **20.10.2021** ರಂದು ಜಿಲ್ಲಾಡಳಿತ, ಧಾರವಾಡ ಜಿಲ್ಲಾ ಪಂಚಾಯತ್, ಪರಿಶಿಷ್ಟವರ್ಗಗಳ ಕಲ್ಯಾಣ ಇಲಾಖೆ ಇವರ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ಮಹರ್ಷಿ ವಾಲ್ಮೀಕಿ ಜಯಂತಿ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಕಾರ್ಯಕ್ರಮ ಉದ್ಘಾಟಿಸುವ ಮೂಲಕ ಮಹರ್ಷಿ ವಾಲ್ಮೀಕಿ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು. ಕಾರ್ಯಕ್ರಮದಲ್ಲಿ ಕೈಮಗ್ಗ ಮತ್ತು ಜವಳಿ ಸಚಿವರಾದ ಶ್ರೀ ಶಂಕರ್ ಬಿ. ಪಾಟೀಲ್ ಮುನೇನಕೊಪ್ಪ ಹಾಗೂ ಶಾಸಕರಾದ ಶ್ರೀ ರಾಜೂಗೌಡ ಮತ್ತು ಎಲ್ಲಾ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.





ದಿನಾಂಕ: 22.10.2021 ರಂದು ಮಾನ್ಯ ಮಾಜಿ ಸಭಾಪತಿಗಳಾದ ಶ್ರೀ ವೀರಣ್ಣ ಮತ್ತಿಕಟ್ಟಿ ಯವರ ಕುಟುಂಬ ಪರಿವಾರದ ವಿವಾಹ ಮಹೋತ್ಸವ ಕಾರ್ಯಕ್ರಮಕ್ಕೆ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ನೂತನ ವಧು–ವರರಿಗೆ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಮಾಜಿ ಶಾಸಕರಾದ ಶ್ರೀ ಎನ್.ಹೆಚ್ ಕೋನರೆಡ್ಡಿರವರು ಹಾಗೂ ವೀರಣ್ಣ ಮತ್ತಿಕಟ್ಟಿ ರವರ ಕುಟುಂಬ ಸದಸ್ಯರು ಮತ್ತು ಹಲವು ಶಿಕ್ಷಕವೃಂದದವರನ್ನು ಈ ಚಿತ್ರದಲ್ಲಿ ಕಾಣಬಹುದು.






ದಿನಾಂಕ: 22.10.2021 ರಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಧಾರವಾಡ ಇವರ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ, ಕರೋನಾ ಲಸಿಕೆಯ ಬೃಹತ್–ಗುರಿ ಸಾಟಿಯಿಲ್ಲದ ಸಾಧನೆ ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿರವರು ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಯವರೊಂದಿಗೆ ಪಾಲ್ಗೊಂಡಿದ್ದರು. ಕಾರ್ಯಕ್ರಮದಲ್ಲಿ ಆರೋಗ್ಯ ಸಚಿವ ಶ್ರೀ ಡಾ. ಕೆ. ಸುಧಾಕರ್ ಮತ್ತು ಕೈಮಗ್ಗ ಮತ್ತು ಜವಳಿ ಸಚಿವರಾದ ಶ್ರೀ ಶಂಕರ್ ಪಾಟೀಲ್ ಮುನೇನಕೊಪ್ಪ ರವರು ಉಪಸ್ಥಿತರಿದ್ದರು.






ದಿನಾಂಕ: **23.10.2021** ರಂದು ಶ್ರೀ ದುರುದುಂಡೀಶ್ವರ ವಿದ್ಯಾವರ್ಧಕ ಸಂಘ, ಸಂಕೇಶ್ವರ ಇವರು ಆಯೋಜಿಸಿದ್ದ, ಸಹಕಾರ ಮಹರ್ಷಿ ಹಾಗೂ ಸ್ವಾತಂತ್ರ್ಯ ಸೇನಾನಿ ಲಿಂ. ಅಪ್ಪಣ್ಣಗೌಡ ಪಾಟೀಲರ ಪುಣ್ಯ ಸರಣೆ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಶಾಲಾ ವಿದ್ಯಾರ್ಥಿಗಳಿಂದ ಗೌರವವಂದನೆ ಸ್ವೀಕರಿಸಿ ಶ್ರೀ ಲಿಂ. ಅಪ್ಪಣ್ಣಗೌಡ ಪಾಟೀಲರ ಪುತ್ಥಳಿಗೆ ಮಾಲಾರ್ಪಣೆ ಮಾಡಿದರು.





**ದಿನಾಂಕ: 23.10.2021 ರಂದು ವೀರಶೈವ ಸಂಘಟನಾ ಸಮಿತಿ (ರಿ) ಹುಬ್ಬಳ್ಳಿ ಇವರು ರಾಣಿಚನ್ನಮ್ಮ ವೃತ್ತದಲ್ಲಿ ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಅಭಿನಂದನೆ ಸ್ವೀಕರಿಸದರು. ಕಾರ್ಯಕ್ರಮದಲ್ಲಿ ವೀರಶೈವ ಸಂಘಟನಾ ಸಮಿತಿಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.**



ದಿನಾಂಕ: 28.10.2021 ರಂದು ನವಲಗುಂದ ತಾಲ್ಲೂಕಿನ ಸೊಬರದಮಠ ಇವರು ಆಯೋಜಿಸಿದ್ದ, ಸಂಗ್ರಾಣಿ ಕಲ್ಲು ಎತ್ತುವ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ವಿಧಾನಪರಿಷತ್ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಕಾರ್ಯಕ್ರಮವನ್ನು ಉದ್ಘಾಟಿಸುವ ಮೂಲಕ ಸಂಗ್ರಾಣಿ ಕಲ್ಲುಗಳನ್ನು ಎತ್ತಿ ಸ್ಪರ್ಧಾಳುಗಳಿಗೆ ಉತ್ತೇಜನ ನೀಡಿದರು.





**ದಿನಾಂಕ: 29.10.2021 ರಂದು ಕರ್ನಾಟಕ ವಿಶ್ವವಿದ್ಯಾಲಯದ ಆವರಣದಲ್ಲಿ ಆಯೋಜಿಸಿದ್ದ, ಡಾ॥ ಶಿವರುದ್ರ ಕಲ್ಲೋಳಿಕರ ಇವರ ನಿವೃತ್ತಿಯ ಬೀಳ್ಕೊಡುಗೆ ಸಮಾರಂಭದಲ್ಲಿ ವಿಧಾನಪರಿಷತ್ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿ, ಡಾ॥ ಶಿವರುದ್ರ ಕಲ್ಲೋಳಿಕರ ಅಭಿನಂದನಾ ಗ್ರಂಥ ಅಕ್ಷರ ಸಂಪುಟ–1 ನ್ನು ಬಿಡುಗಡೆಗೊಳಿಸಿ, ಅಭಿನಂದನೆ ಸ್ವೀಕರಿಸಿದರು.**



**ದಿನಾಂಕ: 30.10.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಶಾಸಕರ ಭವನಕ್ಕೆ ಭೇಟಿ ನೀಡಿ ಅಲ್ಲಿನ ಕಾಮಗಾರಿ ಹಾಗೂ ಸಿ.ಸಿ.ಟಿ.ವಿ. ವ್ಯವಸ್ಥೆಯನ್ನು ಪರಿಶೀಲಿಸುತ್ತಿರುವ ಸಂದರ್ಭ.**





**ಕರ್ನಾಟಕ ವಿಧಾನ ಮಂಡಲದ ವತಿಯಿಂದ ದಿನಾಂಕ 01.11.2021ರಂದು ಆಯೋಜಿಸಲಾಗಿದ್ದ ಕರ್ನಾಟಕ ರಾಜ್ಯೋತ್ಸವದ ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಪತಿಗಳು ಹಾಗೂ ಸನ್ಮಾನ್ಯ ಸಭಾಧ್ಯಕ್ಷರು ಶಾಸಕರ ಭವನದಲ್ಲಿ ಧ್ವಜಾರೋಹಣದ ನಂತರ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾಗವಹಿಸಿ ಸದರಿ ಸಂದರ್ಭದಲ್ಲಿ ಸನ್ಮಾನಿತರಾದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿ ಶ್ರೀ ಚಂದ್ರಶೇಖರ ಕಂಬಾರ, ಸಾಧಕರಾದ ಶ್ರೀ ಅಶೋಕ ಚಂದರಗಿ, ಶ್ರೀ ಸುಹಾಸ ಲಾಲಿನಕರೆ ಯತಿರಾಜ್ ಅವರುಗಳು ಉಪಸ್ಥಿತಿ**





**ದಿನಾಂಕ:06.11.2021 ರಂದು ಬೆಂಗಳೂರಿನ ಬಾನ್ ಸೆಕೌರ್ಸ್ ಮಹಿಳಾ ಪ್ರಥಮ ದರ್ಜೆ ಕಾಲೇಜು ವಿಭಾಗವನ್ನು ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿಯವರಾದ ಶ್ರೀ ಬಸವರಾಜ ಹೊರಟ್ಟಿಯವರು ಉದ್ಘಾಟಿಸಿದರು ಮತ್ತು ಇದೇ ಸಂದರ್ಭದಲ್ಲಿ ಆಡಳಿತ ಮಂಡಳಿಯವರಿಂದ ಅಭಿನಂದನೆ ಸ್ವೀಕರಿಸಿದರು. ಕಾರ್ಯಕ್ರಮದಲ್ಲಿ ಶಾಸಕರಾದ ಶ್ರೀ ಹ್ಯಾರಿಸ್ ಹಾಗೂ ಬಾನ್ ಸೆಕೌರ್ಸ್ ಶಿಕ್ಷಣ ಸಂಸ್ಥೆಯ ಆಡಳಿತ ಮಂಡಳಿವರ್ಗದವರು ಮತ್ತು ಪದಾಧಿಕಾರಿಗಳು ಉಪಸ್ಥಿತರಿದ್ದರು.**






**ದಿನಾಂಕ: 06.11.2021 ರಂದು ಬೆಂಗಳೂರಿನ ಎನ್.ಪಿ.ಎಸ್ ಶಿಕ್ಷಣ ಸಮೂಹಗಳ ಅಧ್ಯಕ್ಷರಾದ ಶ್ರೀ ಗೋಪಾಲಕರಷ್ಣ ರವರನ್ನು ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಸೌಹಾರ್ದಯುತವಾಗಿ ಭೇಟಿ ಮಾಡಿ ಶೈಕ್ಷಣಿಕ ವಿಷಯಗಳ ಕುರಿತಾಗಿ ಅವರೊಂದಿಗೆ ಚರ್ಚಿಸಿದರು.**



**ದಿನಾಂಕ: 07.11.2021 ರಂದು ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರದಲ್ಲಿ ಆಯೋಜಿಸಿದ್ದ, 35ನೇ ವರ್ಷದ ಸಂಕಲ್ಪ ಉತ್ಸವ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿ ಆಯೋಜಕರಿಂದ ಅಭಿನಂದನೆ ಸ್ವೀಕರಿಸಿದರು. ಈ ಸಂದರ್ಭದಲ್ಲಿ ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.**





ದಿನಾಂಕ: **07.11.2021** ರಂದು ಧಾರವಾಡ ನಗರದಲ್ಲಿ ಧಾರವಾಡ ನಾಗರೀಕ ವೇದಿಕೆ ಆಯೋಜಿಸಿದ್ದ, ಅಥಣಿ ಶ್ರೀ ಮೊಟಗಿ ಮಠದ ಪೂಜ್ಯ ಶ್ರೀ ಪ್ರಭುಚನ್ನಬಸವ ಸ್ವಾಮೀಜಿಯವರ (ಫಣೀಶ) ವಿರಚಿತ 'ಮಹಾತ್ಮರ ಚರಿತಾಮೃತ' ಗ್ರಂಥ ಲೋಕಾರ್ಪಣಾ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗಿಯಾಗಿದ್ದರು. ಈ ಸಂದರ್ಭದಲ್ಲಿ ಶಾಸಕರಾದ ಶ್ರೀ ಅರವಿಂದ ಬೆಲ್ಲದರವರು ಮತ್ತು ವಿವಿಧ ಮಠಾಧೀಶರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.






ದಿನಾಂಕ: 08.11.2021 ರಂದು ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಚಳಿಗಾಲದ ಅಧಿವೇಶನಕ್ಕೆ ಸಜ್ಜಾಗುತ್ತಿರುವ ಬೆಳಗಾವಿಯ ಸುವರ್ಣ ವಿಧಾನಸೌಧಕ್ಕೆ ಭೇಟಿ ನೀಡಿ ವಿಧಾನಪರಿಷತ್ತಿನ ಸಭಾಂಗಣದಲ್ಲಿನ ವ್ಯವಸ್ಥೆಗಳನ್ನು ಅಧಿಕಾರಿಗಳೊಂದಿಗೆ ಪರಿಶೀಲಿಸಿದರು. ಈ ಸಂದರ್ಭದಲ್ಲಿ ವಿಧಾನಪರಿಷತ್ತಿನ ಕಾರ್ಯದರ್ಶಿ ಶ್ರೀಮತಿ ಕೆ.ಆರ್ ಮಹಾಲಕ್ಷ್ಮೀ ಮತ್ತು ಸಭಾಪತಿಯವರ ಆಪ್ತ ಕಾರ್ಯದರ್ಶಿ ಶ್ರೀ ಡಾ.ಜಿ ವಿಶ್ವನಾಥ್ ರವರು ಮತ್ತು ವಿಶೇಷ ಕರ್ತವ್ಯಾಧಿಕಾರಿಗಳಾದ ಶ್ರೀ ಡಾ. ಮಹೇಶ ವಾಳ್ವೇಕರ್ ರವರು ಮತ್ತು ಅಲ್ಲಿನ ನೌಕರ ಮತ್ತು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.





ದಿನಾಂಕ; 09.11.2021 ರಂದು ಅನ್ನದಾನೇಶ್ವರ ಸಂಸ್ಥಾನ ಮಠ, ಹಾಲಕೆರೆ, ಗಜೇಂದ್ರಗಡ ಇವರು ಆಯೋಜಿಸಿರುವ ಗುರುವಂದನೆ ಕಾರ್ಯಕ್ರಮದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರಿ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಶ್ರೀ ಮಠದ ವತಿಯಿಂದ ಪ್ರಾರಂಭಗೊಳ್ಳಲಿರುವ ಬಾಲಕರ ವಸತಿ ನಿಲಯದ ಅಡಿಗಲ್ಲು ಕಾರ್ಯಕ್ರಮಕ್ಕೆ ಸಾಕ್ಷಿಯಾಗುವ ಮೂಲಕ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಈ ಸಂದರ್ಭದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ರವರು, ಜಲಸಂಪನ್ಮೂಲ ಸಚಿವರಾದ ಶ್ರಿ ಗೋವಿಂದ ಕಾರಜೋಳರವರು, ಮತ್ತು ವಿಧಾನಪರಿಷತ್ತಿನ ಸದಸ್ಯರಾದ ಶ್ರಿ ಎಸ್.ವಿ ಸಂಕನೂರ ರವರು ಹಾಗೂ ವಿವಿಧ ಮಠಾಧೀಶರುಗಳು ಉಪಸ್ಥಿತರಿದ್ದರು.





ದಿನಾಂಕ: **11.11.2021** ರಂದು ಕುಮಾರಕೃಪದ ಪೂರ್ವದಲ್ಲಿ ತಮಗೆ ಹಂಚಿಕೆಯಾಗಿರುವ ಸರ್ಕಾರಿ ವಸತಿ ಗೃಹದ ಗೃಹಪ್ರವೇಶ ಕಾರ್ಯಕ್ರಮವನ್ನು ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ತಮ್ಮ ಕುಟುಂಬದ ಸದಸ್ಯರು ಮತ್ತು ಕಚೇರಿ ಸಿಬ್ಬಂದಿಗಳೊಂದಿಗೆ ನೆರೆವೇರಿಸಿದ ಸುಸಂದರ್ಭ.





**ದಿನಾಂಕ: 13.11.2021 ರಂದು ಧಾರವಾಡ ಜಿಲ್ಲಾ ಮನಗುಂಡಿಯಲ್ಲಿ ಜರುಗಿದ ಪೂಜ್ಯ ಶ್ರೀ ಬಸವಾನಂದ ಸ್ವಾಮಿಗಳ 50 ಜನ್ಮದಿನಾಚರಣೆ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ಕಾರ್ಯಕ್ರಮವನ್ನು ಉದ್ಘಾಟಿಸಿ, ಶ್ರೀ ಬಸವಾನಂದ ಸ್ವಾಮಿಗಳವರಿಗೆ ಗುರುವಂದನೆ ಸಲ್ಲಿಸಿದರು.**



**ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: 17.11.2021 ರಿಂದ 19.11.2021ರವರೆಗೆ ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆದ 82ನೇ ಅಖಿಲ ಭಾರತೀಯ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಹಿಮಾಚಲ ಪ್ರದೇಶದ ರಾಜ್ಯಪಾಲರಾದ ಶ್ರೀ ರಾಜೇಂದ್ರ ಅರ್ಲೇಕರ್‌ರವರನ್ನು ಭೇಟಿ ಮಾಡಿದ ಸಂದರ್ಭ**



**ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: 17.11.2021 ರಿಂದ 19.11.2021ರವರೆಗೆ ಹಿಮಾಚಲ ಪ್ರದೇಶದ ಶಿಮ್ಲಾದಲ್ಲಿ ನಡೆದ 82ನೇ ಅಖಿಲ ಭಾರತೀಯ ಪೀಠಾಸೀನಾಧಿಕಾರಿಗಳ ಸಮ್ಮೇಳನದಲ್ಲಿ ಭಾಗವಹಿಸಿದ ಕುರಿತು ದಿನಾಂಕ: 21.11.2021 ರಂದು ವಿಧಾನಸೌಧದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಪತ್ರಿಕಾಗೋಷ್ಠಿಯನ್ನು ನಡೆಸಿ ಮಾಹಿತಿಯನ್ನು ಹಂಚಿಕೊಳ್ಳುತ್ತಿರುವ ಸಂದರ್ಭ**





ದಿನಾಂಕ: 25.11.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯಲ್ಲಿ ನಡೆಯಲಿರುವ ಅಧಿವೇಶನದ ಪೂರ್ವಸಿದ್ಧತೆಯ ಕುರಿತಂತೆ ವಿಧಾನಸಭೆಯ ಹಿರಿಯ ಅಧಿಕಾರಿಗಳೊಂದಿಗೆ ಸಭೆ ನಡೆಸಿ ಸಲಹೆ ಸೂಚನೆಗಳನ್ನು ನೀಡುತ್ತಿರುವ ಸಂದರ್ಭ



ದಿನಾಂಕ: 27.11.2021ರಂದು ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿರವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿರವರು ಶಾಸಕರ ಭವನದಲ್ಲಿ "ಪ್ರಕೃತಿ ಚಿಕಿತ್ಸೆ" ಆಸ್ಪತ್ರೆಯನ್ನು ಉದ್ಘಾಟಿಸಿದ ಸಂದರ್ಭ





ದಿನಾಂಕ:27.11.2021 ರಂದು ನವದೆಹಲಿಯಲ್ಲಿ ಆಜಾದಿ ಕಾ ಅಮೃತ್ ಮಹೋತ್ಸವ್ ಮತ್ತು ಆತ್ಮ ನಿರ್ಭರ್ ಭಾರತ್ ಪ್ರಯುಕ್ತ, ಆಯೋಜಿಸಿದ್ದ ವಿವಿಧ ರಾಜ್ಯಗಳ ವಸ್ತುಪ್ರದರ್ಶನ ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡು ವಿವಿಧ ರಾಜ್ಯಗಳ, ಸಾಂಸ್ಕೃತಿಕ ಮತ್ತು ಕರಕುಶಲ ಕಲೆಗಳನ್ನು ವೀಕ್ಷಿಸಿದರು. ಈ ಸಂದರ್ಭದಲ್ಲಿ ಸಭಾಪತಿಯವರ ವಿಶೇಷ ಕರ್ತವ್ಯಾಧಿಕಾರಿ ಡಾ. ಮಹೇಶ ವಾಳ್ವೇಕರ್ ರವರು ಉಪಸ್ಥಿತರಿದ್ದರು




.



ದಿನಾಂಕ: **28.11.2021** ರಂದು ಅನ್ನಪೂರ್ಣ ಪ್ರಕಾಶನ ಸಿರಿಗೆರೆ ಮತ್ತು ದೆಹಲಿ ಕರ್ನಾಟಕ ಸಂಘ ಇವರ ಸಂಯುಕ್ತಾಶ್ರಯದಲ್ಲಿ ದೆಹಲಿಯಲ್ಲಿ ಆಯೋಜಿಸಿದ್ದ, ಕನ್ನಡ ರಾಜ್ಯೋತ್ಸವ ಆಚರಣೆಯಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊಟ್ಟಿಯವರು ಪಾಲ್ಗೊಂಡಿದ್ದು, ದೆಹಲಿ ಕರ್ನಾಟಕ ಸಂಘದ ಪದಾಧಿಕಾರಿಗಳಿಂದ ಕನ್ನಡ ಸಾಹಿತ್ಯ ಪುಸ್ತಕಗಳನ್ನು ಅಭಿನಂದನಾ ಪೂರ್ವಕವಾಗಿ ಸ್ವೀಕರಿಸಿದರು. ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ ಮಾಜಿ ಸದಸ್ಯ ಶ್ರೀ ಡಿ.ಎಸ್ ವೀರಯ್ಯ, ಅನ್ನಪೂರ್ಣ ಪ್ರಕಾಶನ ಸಂಸ್ಥೆಯ ಯರ್ರಿಸ್ವಾಮಿ ಹಾಗೂ ದೆಹಲಿ ಕರ್ನಾಟಕ ಸಂಘದ ಸಿ.ಎಂ ನಾಗರಾಜು ಮತ್ತಿತರರು ಉಪಸ್ಥಿತರಿದ್ದರು.






ದಿನಾಂಕ: **28.11.2021** ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕು ಘಟಕದ ಶಿಕ್ಷಕರೊಂದಿಗೆ ಶಿಕ್ಷಕರ ಸಮಸ್ಯೆಗಳ ಬಗ್ಗೆ ಸಮಾಲೋಚನೆ ಸಭೆ ನಡೆಸಿದರು. ಈ ಸಂದರ್ಭದಲ್ಲಿ ಸಭಾಪತಿಯವರ ವಿಶೇಷ ಕರ್ತವ್ಯಾಧಿಕಾರಿ ಡಾ.ಮಹೇಶ್ ವಾಳ್ವೇಕರ್ ರವರು ಮತ್ತು ತಾಲ್ಲೂಕು ಘಟಕದ ಶಿಕ್ಷಕರ ಸಂಘಗಳ ಪದಾಧಿಕಾರಿಗಳು ಮತ್ತು ಹಲವು ಶಿಕ್ಷಕರುಗಳು ಉಪಸ್ಥಿತರಿದ್ದರು



ದಿನಾಂಕ: 02.12.2021ರಂದು ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜಹೊರಟ್ಟಿರವರು ಬೆಳಗಾವಿಯಲ್ಲಿ ನಡೆಯುವ ಚಳಿಗಾಲದ ಅಧಿವೇಶನದ ಪೂರ್ವತಯಾರಿಯಲ್ಲಿರುವ ಸುವರ್ಣ ವಿಧಾನಸೌಧದ ವಿಧಾನಪರಿಷತ್ತಿನ ಸಭಾಂಗಣವನ್ನು ವೀಕ್ಷಿಸಿದರು. ಈ ಸಂದರ್ಭದಲ್ಲಿ ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿರವರು, ವಿಧಾನಸಭೆಯ ಉಪಸಭಾಧ್ಯಕ್ಷರಾದ ಶ್ರೀ ಆನಂದ ಮಾಮನಿ ರವರುಮತ್ತು ಸಭಾಪತಿಯವರ ವಿಶೇಷಕರ್ತವ್ಯಾಧಿಕಾರಿ ಡಾ. ಮಹೇಶ್ ವಾಳ್ವೇಕರ್ ರವರು ಹಾಗೂ ವಿಧಾನಮಂಡಲದ ಸಚಿವಾಲಯದ ಎಲ್ಲಾ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು. ನಂತರ ವಿಧಾನಪರಿಷತ್ತಿನ ಅಧಿಕಾರಿಗಳೊಂದಿಗೆ ಆಂತರಿಕ ಸಭೆ ನಡೆಸಿದರು.





ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ರವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರಾದಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ದಿನಾಂಕ: 04.12.2021ರಂದು ನವದೆಹಲಿಯ ಸಂಸತ್ ಭವನದಲ್ಲಿ ನಡೆದ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಶತಮಾನೋತ್ಸವ ಆಚರಣೆಯ ಉದ್ಘಾಟನಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಶಾಸಕರ ಕ್ಲಬ್‌ಗಳ ಪರಿವೀಕ್ಷಣೆ ನಡೆಸಿದರು ಈ ಸಂದರ್ಭದಲ್ಲಿ ಭಾರತದ ರಾಷ್ಟ್ರಪತಿಗಳಾದ ಸನ್ಮಾನ್ಯ ಶ್ರೀ ರಾಮನಾಥ ಕೋವಿಂದ್‌ರವರು, ಉಪ ರಾಷ್ಟ್ರಪತಿಗಳಾದ ಸನ್ಮಾನ್ಯ ಶ್ರೀ ಎಂ. ವೆಂಕಯ್ಯ ನಾಯ್ಡು ರವರು, ಲೋಕಸಭಾ ಸಭಾಧ್ಯಕ್ಷರಾದ ಸನ್ಮಾನ್ಯ ಶ್ರೀ ಓಂ ಬಿರ್ಲಾ ರವರು ಹಾಗೂ ರಾಜ್ಯ ಸಭಾ ಉಪ ಸಭಾಪತಿಗಳಾದ ಸನ್ಮಾನ್ಯ ಶ್ರೀ ಹರಿವಂಶ್ ರವರ, ಹಾಗೂ ಸಂಸತ್ತಿನ ಸಾರ್ವಜನಿಕ ಲೆಕ್ಕಪತ್ರ ಸಮಿತಿ ಅಧ್ಯಕ್ಷರಾದ ಶ್ರೀ ಅಧೀರ್‌ರಂಜನ್ ಚೌಧರಿ ರವರು ಹಾಗೂ ಅಖಿಲ ಭಾರತ ಪೀಠಾಸೀನಾಧಿಕಾರಿಗಳು ಹಾಗೂ ವಿಧಾನ ಮಂಡಲಗಳ ಸಾರ್ವಜನಿಕ ಲೆಕ್ಕಪತ್ರ ಸಮಿತಿ ಅಧ್ಯಕ್ಷರುಗಳು ಮತ್ತು ಹಿರಿಯ ಅಧಿಕಾರಿಗಳು ಭಾಗವಹಿಸಿದ ಸಂದರ್ಭ







ದಿನಾಂಕ: 04.12.2021ಮತ್ತು 05.12.2021 ರಂದು ದೆಹಲಿಯಲ್ಲಿ ಲೋಕಸಭಾಧ್ಯಕ್ಷರಾದ ಶ್ರೀ ಓಂಬಿರ್ಲಾ ರವರ ಅಧ್ಯಕ್ಷತೆಯಲ್ಲಿ ನಡೆದ ಸಂಸತ್ತಿನ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಶತಮಾನೋತ್ಸವದಲ್ಲಿ ಕರ್ನಾಟಕದ ಪ್ರತಿನಿಧಿಗಳಾಗಿ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಮತ್ತು **ಸ್ಪೀಕರ್ ವಿಶ್ವೇ**ಶ್ವರ ಹೆಗಡೆ ಕಾಗೇರಿರವರು ಪಾಲ್ಗೊಂಡಿದ್ದರು. ಈ ದುಂಡು ಮೇಜಿನ ಸಭೆಯಲ್ಲಿ ಎಲ್ಲಾ ರಾಜ್ಯಗಳ ಸಂಸದೀಯ ಪೀಠಾಸೀನಾಧಿಕಾರಿಗಳು ಭಾಗವಹಿಸಿದ್ದರು.





ದಿನಾಂಕ: 05.12.2021 ರಂದು ವಿಧಾನ ಪರಿಷತ್ ಸಭಾಪತಿಗಳಾದ ಶ್ರೀ ಬಸವರಾಜ್ ಹೊರಟ್ಟಿಯವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ನವದೆಹಲಿಗೆ ಭೇಟಿ ನೀಡಿದ ಸಂದರ್ಭದಲ್ಲಿ ರಾಷ್ಟ್ರೀಯ ಪೊಲೀಸ್ ಸ್ಮಾರಕದಲ್ಲಿ "ದೇಶದ ರಕ್ಷಣೆಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಹುತಾತ್ಮರಾದ ವೀರ ಯೋಧರ ಶೌರ್ಯ, ಸಾಹಸ, ತ್ಯಾಗ ಮತ್ತು ಬಲಿದಾನವನ್ನು ಸ್ಮರಿಸಿ ಎಲ್ಲ ವೀರ ಹುತಾತ್ಮ ಯೋಧರಿಗೆ ಗೌರವ ನಮನ ಸಲ್ಲಿಸುತ್ತಿರುವುದು

ದಿನಾಂಕ: 11.12.2021 ರಂದು ಬೆಂಗಳೂರಿನ ವೈ.ಎಂ.ಸಿ.ಎ ಸಭಾಂಗಣದಲ್ಲಿ ನಡೆದ ಅಖಿಲ ಭಾರತ ರಾಜ್ಯ ಸರ್ಕಾರಿ ನೌಕರರ ಒಕ್ಕೂಟದ ರಾಷ್ಟ್ರೀಯ ಕಾರ್ಯಾಗಾರದಲ್ಲಿ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡಿದ್ದರು ನಂತರ ಕಾರ್ಯಾಗಾರದಲ್ಲಿ ಪಾಲ್ಗೊಂಡಿದ್ದಲವು ನೌಕರರುಗಳನ್ನು ಸನ್ಮಾನಿಸಿದರು.






**ದಿನಾಂಕ: 12.12.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ದಿನಾಂಕ: 13.12.2021ರಂದು ನಡೆಯಲಿರುವ ವಿಧಾನಸಭೆಯ ಅಧಿವೇಶನದ ಪೂರ್ವಸಿದ್ಧತೆ, ಮಾನ್ಯ ಶಾಸಕರುಗಳ ವಸತಿ ಹಾಗೂ ಕಾನೂನು ಸುವ್ಯವಸ್ಥೆ ಕುರಿತಂತೆ, ಜಿಲ್ಲಾಧಿಕಾರಿಗಳು, ಪೊಲೀಸ್ ವರಿಷ್ಠಾಧಿಕಾರಿಗಳು ಹಾಗೂ ಹಿರಿಯ ಅಧಿಕಾರಿಗಳೊಂದಿಗೆ ಸ್ಥಳ ಪರಿವೀಕ್ಷಣೆ ನಡೆಸಿದ ಸಂದರ್ಭ**







**ದಿನಾಂಕ: 13.12.2021ರಂದು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಪ್ರಾರಂಭವಾದ ಅಧಿವೇಶನದ ಸಂದರ್ಭದಲ್ಲಿ ಸನ್ಮಾನ್ಯ ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆದ ವಿಧಾನ ಸಭೆಯ ಕಾರ್ಯಕಲಾಪಗಳ ಸಲಹಾ ಸಮಿತಿ ಸಭೆ**





**ದಿನಾಂಕ: 21.12.2021ರಂದು ವಿಧಾನಪರಿಷತ್ತಿನ ಸಭಾಪತಿ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ, ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರ ಸಮ್ಮುಖದಲ್ಲಿ ಶಿಕ್ಷಕರ ಹಾಗೂ ಶಿಕ್ಷಣ ಕ್ಷೇತ್ರಗಳ ಜ್ವಲಂತ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಭೆ ನಡೆಸಲಾಯಿತು. ಈ ಸಭೆಯಲ್ಲಿ ಉನ್ನತ ಶಿಕ್ಷಣ ಸಚಿವ ಡಾ. ಅಶ್ವಥ್ ನಾರಾಯಣ, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವ ಶ್ರೀಬಿ.ಸಿ ನಾಗೇಶ್** ಮತ್ತು **ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಶ್ರೀ ಮಂಜುನಾಥಪ್ರಸಾದ್, ಆರ್ಥಿಕ ಇಲಾಖೆಯ ಅಪರಮುಖ್ಯ ಕಾರ್ಯದರ್ಶಿ ಶ್ರೀ ಐ.ಎಸ್.ಎನ್. ಪ್ರಸಾದ್, ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿ ಶ್ರೀ ಸೆಲ್ವಕುಮಾರ್, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತ ಡಾ. ಆರ್ವಿಶಾ ಹಾಗೂ ಶಿಕ್ಷಣ ಇಲಾಖೆಯ ಅಧಿಕಾರಿ ವರ್ಗದವರು ಉಪಸ್ಥಿತರಿದ್ದರು.**



ದಿನಾಂಕ: 22.12.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿಯ ಸುವರ್ಣ ವಿಧಾನಸೌಧದ ಸೆಂಟ್ರಲ್ ಹಾಲ್‌ನಲ್ಲಿ ನಡೆದ ಕಾಮನ್‌ವೆಲ್ತ್ ಸಂಸದೀಯ ಸಂಘ, ಕರ್ನಾಟಕ ಶಾಖೆಯ (ಸಿ.ಪಿ.ಎ) ವಾರ್ಷಿಕ ಸಾಮಾನ್ಯ ಸಭೆಯನ್ನು ಉದ್ದೇಶಿಸಿ ಮಾತನಾಡಿದರು ಈ ಸಂದರ್ಭದಲ್ಲಿ ವಿಧಾನಪರಿಷತ್ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿರವರು, ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿರವರು ಮಾನ್ಯ ಉಪಸಭಾಧ್ಯಕ್ಷರಾದ ಶ್ರೀ ಆನಂದ ಮಾಮನಿರವರು ಹಾಗೂ ಕಾನೂನು ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿ, ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರಾದ ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಉಭಯ ಸದನಗಳ ಕಾರ್ಯದರ್ಶಿಗಳು ಹಾಗೂ ವಿಧಾನ ಮಂಡಳಗಳ ಶಾಸಕರುಗಳು ಉಪಸ್ಥಿತರಿದ್ದರು





**ದಿನಾಂಕ: 24.12.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ನಡೆದ ಅಧಿವೇಶನವು ಅನಿರ್ದಿಷ್ಟ ಕಾಲ ಮುಂದೂಡಲ್ಪಟ್ಟ ನಂತರ ಪತ್ರಿಕಾಗೋಷ್ಠಿ ನಡೆಸಿದ ಸಂದರ್ಭ**



**ದಿನಾಂಕ: 24.12.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ನಡೆದ ಅಧಿವೇಶನವು ಅನಿರ್ದಿಷ್ಟ ಕಾಲ ಮುಂದೂಡಲ್ಪಟ್ಟ ನಂತರ ಈ ಸಂದರ್ಭದಲ್ಲಿ ಅಧಿವೇಶನವು ಯಶಸ್ವಿಯಾಗಿ ನಡೆಯಲು ಎಲ್ಲಾ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿದ ಜಿಲ್ಲಾಡಳಿತದ ಹಿರಿಯ ಅಧಿಕಾರಿಗಳು ಹಾಗೂ ವಿಧಾನಸಭೆಯ ಅಧಿಕಾರಿಗಳೊಂದಿಗೆ ಸಭೆ ನಡೆಸಿದ ಸಂದರ್ಭ**





**ದಿನಾಂಕ: 25.12.2021ರಂದು ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳಿಗೆ ಸಂಬಂಧಿಸಿದ ಸಮಸ್ಯೆಗಳು ಮತ್ತು ರೈತರ ಸಮಸ್ಯೆಗಳ ಪರಿಹಾರಕ್ಕಾಗಿ ಕೃಷಿ ಸಚಿವ ಶ್ರೀಬಿ.ಸಿ. ಪಾಟೀಲ್ ಹಾಗೂ ತೋಟಗಾರಿಕೆ ಸಚಿವ ಶ್ರೀಮುನಿರತ್ನರವರ ಸಮ್ಮುಖದಲ್ಲಿ ಸಭೆ ಆಯೋಜಿಸಲಾಗಿತ್ತು. ಈ ಸಭೆಯಲ್ಲಿ ಕೃಷಿ ಆಯುಕ್ತರಾದ, ಶ್ರೀ ಬಿ.ಕೆ.ದೀಕ್ಷಿತ್, ತೋಟಗಾರಿಕೆ ನಿರ್ದೇಶಕ ಶ್ರೀ ನಾಗೇಂದ್ರ ಪ್ರಸಾದ್ ಕೃಷಿ ನಿರ್ದೇಶಕಿ ಶ್ರೀಮತಿ ನಂದಿನಿಕುಮಾರಿ, ಬೆಳಗಾವಿ ಜಿಲ್ಲೆ ಜಂಟಿ ಕೃಷಿ ನಿರ್ದೇಶಕ ಶ್ರೀ ಶಿವನಗೌಡ ಎಸ್. ಪಾಟೀಲ್ ಹಾಗೂ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಹಿರಿಯ ಅಧಿಕಾರಿ ವರ್ಗದವರು ಮತ್ತು ಹಲವು ಸ್ಥಳೀಯ ರೈತ ಮುಖಂಡರುಗಳು ಉಪಸ್ಥಿತರಿದ್ದರು.**





**ದಿನಾಂಕ: 25.12.2021ರಂದು ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯು ಹೊರ ತಂದಿರುವ ಸುವರ್ಣ ಕರ್ನಾಟಕ ಕಿರೀಟ ವಿಶೇಷ ಸಂಚಿಕೆಯ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಸಭಾಪತಿ ಬಸವರಾಜ ಹೊರಟ್ಟಿಯವರೊಂದಿಗೆ, ಮಾನ್ಯ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ, ಸಚಿವರಾದ ಶ್ರೀ ಗೋವಿಂದಕಾರಜೋಳ, ಶ್ರೀ ಮುರಗೇಶ್ಆರ್. ನಿರಾಣಿ, ಶ್ರೀ ಶಂಕರ ಬಿ.ಪಾಟೀಲ ಮುನೇನಕೊಪ್ಪ, ಲೋಕ ಶಿಕ್ಷಣ ಟ್ರಸ್ಟ್ನ ಮರ್ಗದರ್ಶಿ ಮತ್ತು ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀಯು.ಬಿ ವೆಂಕಟೇಶ್ನಾ ಗೂ ವಿಧಾನಪರಿಷತ್ತಿ ರೋಧಪಕ್ಷದ ಮುಖ್ಯ ಸಚೇತಕ ಶ್ರೀ ಎಂ. ನಾರಾಯಣಸ್ವಾಮಿ ಹಾಗೂ ಹಲವಾರು ವಿಧಾನಪರಿಷತ್ತಿನ ಸದಸ್ಯರುಗಳು ಭಾಗಿಯಾಗಿದ್ದರು**



**ದಿನಾಂಕ: 26.12.2021 ರಂದು ಬೆಂಗಳೂರಿನಲ್ಲಿ ದಿನ್ಯೂಸ್ ಪೇಪರ್ಸ್ ಅಸೋಸಿಯೇಷನ್ ಅವರು ಆಯೋಜಿಸಿದ್ದ, ವಿವಿಧವಲಯಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಗಣ್ಯ ಮಾನ್ಯರಿಗೆ ನೀಡುವ "ಕರ್ನಾಟಕ ರತ್ನ" ಪ್ರಶಸ್ತಿಯನ್ನು ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರಿಗೆ ನೀಡಿ ಗೌರವಿಸಲಾಯಿತು. ಈ ಸಂದರ್ಭದಲ್ಲಿ ದಿನ್ಯೂಸ್ ಪೇಪರ್ಸ್ ಅಸೋಸಿಯೇಷನ್ಕ ರ್ನಾಟಕದ ಸಂಸ್ಥಾಪಕ ಅಧ್ಯಕ್ಷ ಶ್ರಾವಣ ಲಕ್ಷ್ಮಣ ಮತ್ತು ಸಂತೋಷ ಗುರೂಜಿ, ಶಾಸಕರಾದ ಶ್ರೀಮಸಾಲ ಜಯರಾಂ, ಮಾಜಿ ಶಾಸಕರಾದ ಶ್ರೀಶರವಣ, ನಟಿಯರಾದ ಶ್ರುತಿ, ಹರ್ಷಿಕಾ ಪೂಣಚ್ಚ, ಮತ್ತು ಇನ್ನಿತರ ಚಲನಚಿತ್ರ ನಟರು ಹಾಗೂ ಅಸೋಸಿಯೇಷನ್ಪದಾಧಿಕಾರಿಗಳು ಉಪಸ್ಥಿತರಿದ್ದರು.**



ದಿನಾಂಕ: 30.12.2021ರಂದು ಧಾರವಾಡ ಜಿಲ್ಲಾ, ಕಲಘಟಗಿಯಲ್ಲಿ ಆಯೋಜಿಸಿದ್ದ ರಾಜ್ಯ ಸರ್ಕಾರಿ ನೌಕರರ ಸಂಘದ ಸರ್ವ ಸದಸ್ಯರ ವಾರ್ಷಿಕ ಮಹಾಸಭೆ ಹಾಗೂ ರಾಜ್ಯ ಸರ್ಕಾರಿ ನೌಕರರ ದಿನಾಚರಣೆ ಕಾರ್ಯಕ್ರಮಕ್ಕೆ ಸಭಾಪತಿ ಶ್ರೀ ಬಸವರಾಜಹೊರಟ್ಟಿಯವರನ್ನು ಆತ್ಮೀಯವಾಗಿ ಸ್ವಾಗತಿಸಲಾಯಿತು. ನಂತರ ಸಭಾಪತಿಯವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ರಾಜ್ಯ ಸರ್ಕಾರಿ ನೌಕರರ ಸಂಘದ ಕಲಘಟಗಿ ತಾಲ್ಲೂಕು ಘಟಕದ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.






# ಭಾಗ – 2

# ಸಂಸತ್ ಸುದ್ದಿಗಳು

## 1.RS saw average daily attendance of 78% in last 7 sessions

First-ever analysis of attendance of Rajya Sabha MPs shows that 78% of the lawmakers attended proceedings daily in the last seven sessions between 2019, and 2021 with the highest daily attendance recorded in the July-August Monsoon Session this year.

The analysis undertaken by the Rajya Sabha Secretariat following the instructions of Chairman M.Venkaiah Naidu also showed that 29.14% of the MPs attended the proceedings daily while 1.9% did not attend a single sitting owing to reasons, including ill-health.

Sources said 78% MPs who participate in the proceedings of each sitting of the House are not necessarily the same set of members as it varies from day to day and similar was the case with those who did not attend.

The study was conducted for 138 sittings in the last seven sessions starting with $248^{th}$ (31 January, 2019 to 13 February, 2019) and $254^{th}$ (19 July, 2021 to 13 August, 2021).

The highest daily attendance of 82.57% was reported during the last Monsoon Session while a low of 72.88% was recorded during the preceding Budget. Session (January 29 to March 25). The analysis further showed that the Covid-19 pandemic did not impact the attendance during the last three sessions held under Covid-19 protocol. During the $252^{nd}$ Session the first to be held under Covid protocol, 99 Members accounting for 44.19% of the total attended the proceedings during all the 10 sittings while 98 accounting for 46% did so during the 17 sittings of the $254^{th}$ Session.

Session-wise the number of MPs with full attendance ranged from 34 (15.27%) during the 251% session. Number of MPs with zero attendance ranged from just two (0.9%) (9.38%) during the $252^{nd}$ the first to be held under Covid-19 protocol.

If one takes individual MPs 75-year-old S.R.Balasubramaniam of AIADMK participated in the proceedings of all the 138 sitting of the seven sessions. Five MPs Dr.Ashok Bajpai, Dr.D.P.Vats, Neeraj Shekhar, Vikas Mahatme and Ramkumar Verma had full attendance in 6 sessions.

Courtesy: Deccan Herald dt:- 06.10.2021

## 2. ಸಂಸದ ಸ್ಥಾನಕ್ಕೆ ಸುಪ್ರಿಯೋ ರಾಜೀನಾಮೆ

ಕಳೆದ ತಿಂಗಳ ಬಿಜೆಪಿ ತ್ಯಜಿಸಿ, ತೃಣಮೂಲ ಕಾಂಗ್ರೆಸ್(ಟಿಎಂಸಿ) ಸೇರಿದ್ದ ಸಂಸದ ಬಾಬುಲ್ ಸುಪ್ರಿಯೋ ಸಂಸದ ಸ್ಥಾನಕ್ಕೆ ಅಧಿಕೃತವಾಗಿ ರಾಜೀನಾಮೆ ನೀಡಿದ್ದಾರೆ. ಲೋಕಸಭಾ ಸ್ಪೀಕರ್ ಓಂ ಬಿರ್ಲಾರನ್ನು ನವದೆಹಲಿಯಲ್ಲಿ ಭೇಟಿ ಮಾಡಿದ ಅವರು ರಾಜೀನಾಮೆ ಪತ್ರ ಸಲ್ಲಿಸಿದ್ದಾರೆ. ನಾನು ರಾಜಕೀಯ ಜೀವನವನ್ನು ಬಿಜೆಪಿ ಮೂಲಕ ಆರಂಭಿಸಿದೆ. ನನ್ನ ಬಗ್ಗೆ ನಂಬಿಕೆಯಿಟ್ಟ ಮೋದಿಜೀ,

ಅಮೀತ್ ಶಾ ಮತ್ತು ಪಕ್ಷದ ಅಧ್ಯಕ್ಷರು ನನ್ನಲ್ಲಿ ನಂಬಿಕೆ ಇಟ್ಟಿದ್ದಕ್ಕೆ ಧನ್ಯವಾದ ತಿಳಿಸುತ್ತೇನೆ. ಭಾರದ ಹೃದಯದೊಂದಿಗೆ ನಾನು ಸಂಸದ ಸ್ಥಾನಕ್ಕೆ ರಾಜೀನಾಮೆ ಕೊಟ್ಟಿದ್ದೇನೆ ಎಂದು ಅವರು ಹೇಳಿದ್ದಾರೆ. ರಾಜಕೀಯ ತ್ಯಜಿಸುವುದಾಗಿ ಜೂನ್ 31 ರಂದು ತಿಳಿಸಿದ್ದ ಬಾಬುಲ್ ಅವರು, ಸೆಪ್ಟೆಂಬರ್ 19ರಂದು ಟಿಎಂಸಿ ಸೇರಿದ್ದರು.

ಆಧಾರ: ಉದಯವಾಣಿ, ದಿನಾಂಕ:20.10.2021.

## 3. Limit role of presiding officers in anti-defection cases:Speaker

Lok Sabha Speaker Om Birla and Presiding Officers of other states have made a strong pitch for curtailing their “unlimited” powers in dealing with the politically sensitive matters related to the anti-defection law.

The matter has been part of deliberations of the All India Presiding Officers Conference(AIPOC), which is expected to make a final recommendation to the government, after its meeting in Shimla to suitably amend the law.

There has to be some limit to the powers enjoyed by the Presiding Officers in dealing anti-defection law cases,’’ Birla told reporters here. He said the anti-defection law in its current form, grants unlimited powers to the Presiding officers, which is the cause for delay in deciding cases in which elected representatives change political loyalties.

According to experts, the present law does not specify a time period for the Presiding officer to decide on a disqualification plea. Courts can intervene in anti-defection matters only after the Presiding officer has decided on the matter, leaving the petitioner with no option but to wait for the decision to be made.

The tenth Schedule, popularly known as the anti-defection law, was inserted in the Constitution in 1985. It lays down the process by which legislators may be disqualified by the Presiding officer based on a petition by any number of the House.

Courtesy:Deccan Herald, Dated:16.11.2021

## 4. ವಿವಾದಿತ 3 ಕೃಷಿ ಕಾಯ್ದೆ ವಾಪಸ್

ಮಹತ್ವದ ಬೆಳವಣಿಗೆಯೊಂದರಲ್ಲಿ, ದೆಹಲಿಯ ಗಡಿ ಹಾಗೂ ವಿವಿಧ ರಾಜ್ಯಗಳಲ್ಲಿ ಒಂದು ವರ್ಷದಿಂದ ರೈತರ ಪ್ರತಿಭಟನೆಗೆ ಕಾರಣವಾಗಿದ್ದ ಕೇಂದ್ರ ಸರ್ಕಾರದ ಮೂರು ವಿವಾದಿತ ಕೃಷಿ ಕಾಯ್ದೆಗಳನ್ನು ಹಿಂಪಡೆಯುವುದಾಗಿ ಪ್ರಧಾನಿ ನರೇಂದ್ರ ಮೋದಿ ಪ್ರಕಟಿಸಿದ್ದಾರೆ. ಹೆಚ್ಚಾಗಿ ಸಿಖ್ ರೈತರಿಂದಲೇ ಆಕ್ರೋಶಕ್ಕೆ ಗುರಿಯಾಗಿದ್ದ ಈ ಕಾಯ್ದೆಗಳನ್ನು ಹಿಂಪಡೆಯುವುದಾಗಿ ಘೋಷಿಸಿರುವ ಅವರು, ಚಳಿಗಾಲದ ಸಂಸತ್ ಅಧಿವೇಶನದಲ್ಲಿ ರೈತ ಬಾಂಧವರೆಲ್ಲ ಮನೆಗೆ ಮರಳಬೇಕು’ ಎಂದು ಮನವಿ ಮಾಡಿದ್ದಾರೆ.

ಮೋದಿ ಘೋಷಣೆಯನ್ನು ರೈತ ಸಂಘಟನೆಗಳು ಸ್ವಾಗತಿಸಿ ವಿಜಯೋತ್ಸವ ಆಚರಿಸಿದ್ದರೂ ‘ಕನಿಷ್ಠ ಬೆಂಬಲ ಬೆಲೆ ಬೇಡಿಕೆ ಈಡೇರಿಸಬೇಕು ಹಾಗೂ ಸಂಸತ್ತಿನಲ್ಲಿ ಕಾಯ್ದೆ ರದ್ದಾಗಬೇಕು. ಅಲ್ಲಿಯವರೆಗೆ ಪ್ರತಿಭಟನೆ ಹಿಂಪಡೆಯಲ್ಲ’ ಎಂದು ತಿಳಿಸಿವೆ ಹಾಗೂ ಅಂತಿಮ ನಿರ್ಣಯ ಕೈಗೊಳ್ಳುವುದಾಗಿ ಹೇಳಿವೆ.

ಕಳೆದ ವರ್ಷದ ನವೆಂಬರ್ 26ರಂದು ಈ ಕಾಯ್ದೆಗಳ ವಿರುದ್ಧ ರೈತರ ಹೋರಾಟ ಆರಂಭವಾಗಿತ್ತು. ಆ ಹೋರಾಟಕ್ಕೆ ಒಂದು ವರ್ಷ ತುಂಬುವ ದಿನ ಸಮೀಪಿಸುತ್ತಿರುವ ಬೆನ್ನಲ್ಲೇ ಕೇಂದ್ರದ ಈ ಮಹತ್ವದ ನಿರ್ಧಾರ ಹೊರ ಬಿದ್ದಿದೆ. ರೈತರು ಹಾಗೂ ಪ್ರತಿಪಕ್ಷಗಳು ಸರ್ಕಾರದ ನಿರ್ಧಾರವನ್ನು ಸ್ವಾಗತಿಸಿವೆ. ಪಂಜಾಬ್ ಮತ್ತು ಉತ್ತರ ಪ್ರದೇಶದಲ್ಲಿ ಮುಂದಿನ ವರ್ಷಾರಂಭದಲ್ಲಿ ನಡೆಯಲಿರುವ ವಿಧಾನಸಭೆ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ಮೋದಿ ಈ ನಿರ್ಧಾರ ಕೈಗೊಂಡಿದ್ದಾರೆ ಎಂದು ಪ್ರತಿಪಕ್ಷಗಳು ಆರೋಪಿಸಿವೆ.

ಈ ಹಿಂದೆ ಕೃಷಿ ಕಾಯ್ದೆಗಳನ್ನು ಯಾವುದೇ ಕಾರಣಕ್ಕೂ ಹಿಂಪಡೆಯುವುದಿಲ್ಲ ಎಂದು ಪಟ್ಟು ಹಿಡಿದಿದ್ದ ಕೇಂದ್ರ ಸರ್ಕಾರ, ಪ್ರತಿಭಟನಾ ನಿರತ ರೈತರ ಮನವೊಲಿಸಲು 11 ಸುತ್ತಿನ ಸಭೆ ನಡೆಸಿದೆ.

ದೇಶದ ಹಲವು ಭಾಗಗಳ ರೈತರ ಆಕ್ರೋಶಕ್ಕೆ ಕಾರಣವಾಗಿದ್ದ 3 ವಿವಾದಿತ ಕೃಷಿ ಕಾಯ್ದೆಗಳನ್ನು ಹಿಂಪಡೆಯುವುದಾಗಿ ಪ್ರಧಾನಿ ನರೇಂದ್ರ ಮೋದಿ ಘೋಷಿಸಿದ್ದಾರೆ. ಕಾಯ್ದೆಗಳ ಜಾರಿ ಹಿಂದೆ ಪ್ರಾಮಾಣಿಕ ಯತ್ನವಿತ್ತು. ' ಸಾಕಷ್ಟು ಪ್ರಯತ್ನಗಳ ನಂತರವು ಕೆಲ ರೈತರಿಗೆ ನಮ್ಮಿಂದ ಮನವರಿಕೆ ಮಾಡಿಕೊಡಲು ಆಗಲಿಲ್ಲ. ಅದಕ್ಕಾಗಿ ನಾನು ದೇಶದ ಕ್ಷಮೆ ಯಾಚಿಸುತ್ತೇನೆ' ಎಂದು ಹೇಳಿದ್ದಾರೆ. ಅಲ್ಲದೆ, 'ಪ್ರತಿಭಟನೆ ನಡೆಸುತ್ತಿರುವ ರೈತ ಬಾಂದವರೆಲ್ಲ ಮನೆಗೆ ಮರಳಬೇಕು' ಎಂದು ಕೋರಿದ್ದಾರೆ. ಇದೇ ವೇಳೆ, ರೈತರ ಬಹುಮುಖ್ಯ ಬೇಡಿಕೆಯಾದ ಬೆಂಬಲ ಬೆಲೆ ಪದ್ಧತಿಯನ್ನು ಬಲಗೊಳಿಸಲು ಸಮಿತಿ ರಚಿಸುವುದಾಗಿಯೂ ಘೋಷಿಸಿದ್ದಾರೆ. ಬೆಳ್ಳಗ್ಗೆ 9 ಗಂಟೆಗೆ ದೇಶವನ್ನು ಉದ್ದೇಶಿಸಿ ಮಾತನಾಡಿದ ಮೋದಿ, 'ಕೃಷಿ ಕಾಯ್ದೆಗಳನ್ನು ರೈತ ಸಂಘಟನೆಗಳು, ಕೃಷಿ ತಜ್ಞರು ಹಾಗೂ ಪ್ರಗತಿಪರ ಕೃಷಿಕರು ಸ್ವಾಗತಿಸಿದ್ದರು. ಆದರೆ, ಸಾಕಷ್ಟು ಪ್ರಯತ್ನಗಳ ನಂತರವು ಕೆಲ ರೈತರಿಗೆ ನಮ್ಮಿಂದ ಮನವರಿಕೆ ಮಾಡಿಕೊಡಲು ಆಗಲಿಲ್ಲ. ಅದಕ್ಕಾಗಿ ನಾನು ದೇಶದ ಕ್ಷಮೆ ಯಾಚಿಸುತ್ತೇನೆ. ವಿರೋಧಿಸುತ್ತಿದ್ದವರು ಸಣ್ಣ ವರ್ಗವೆ ಆಗಿದ್ದರು ಅವರು ಕೂಡ ನಮಗೆ ಮುಖ್ಯ. 2 ವರ್ಷ ಈ ಕಾಯ್ದೆಗಳನ್ನು ಅಮಾನತ್ತಿನಲ್ಲಿಟ್ಟು, ರೈತರಿಗೆ ಸಮಸ್ಯೆಯಾಗುವ ಸಂಗತಿಗಳನ್ನು ತಿದ್ದುಪಡಿ ಮಾಡುತ್ತೇವೆ ಎಂದು ಹೇಳಿದ್ದೆವು. ಅದಕ್ಕೂ ವಿರೋಧ ವ್ಯಕ್ತವಾಯಿತು. ಕಾಯ್ದೆಗಳನ್ನು ಹಿಂಪಡೆಯಲು ನಿರ್ಧರಿಸಿದ್ದೇವೆ' ಎಂದು ಪ್ರಕಟಿಸಿದ್ದರು.

**ಚಳಿಗಾಲದ ಅಧಿವೇಶನದಲ್ಲಿ ಕಾಯ್ದೆ ರದ್ದು:** 'ಮುಂಬರುವ ಚಳಿಗಾಲದ ಅಧಿವೇಶನದಲ್ಲಿ ಈ ಕಾಯ್ದೆಗಳನ್ನು ರದ್ದುಪಡಿಸಲು ಅಗತ್ಯವಿರುವ ಸಾಂವಿಧಾನಿಕ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಲಾಗುವುದು. ರೈತರಿಗೆ ಅನುಕೂಲ ಮಾಡಿಕೊಡುವ ಬಹಳ ಒಳ್ಳೆಯ ಉದ್ದೇಶದಿಂದ ಕಾಯ್ದೆಗಳನ್ನು ತಂದಿದ್ದೆವು. ಸರ್ಕಾರದ ಪ್ರಯತ್ನ ಮತ್ತು ಕಾಯ್ದೆಗಳ ಉದ್ದೇಶ ಮೊಂಬತ್ತಿಯ ಬೆಳಕಿನಷ್ಟೇ ಸ್ಪಷ್ಟವಾಗಿತ್ತು. ಆದರೆ ಕೆಲ ರೈತರಿಗೆ ಇದರ ಪ್ರಯೋಜನಗಳನ್ನು ಮನವರಿಕೆ ಮಾಡಿಕೊಡುವಲ್ಲಿ ನಾವು ಯಶಸ್ವಿಯಾಗಲಿಲ್ಲ. ಈಗ ಹಿಂದಿನದನ್ನು ಹಿಂದೆ ಬಿಟ್ಟು ಎಲ್ಲರೂ ಹೊಸತಾಗಿ ಮುನ್ನಡೆಯೋಣ' ಎಂದು ಮೋದಿ ಹೇಳಿದರು.

**ಶೂನ್ಯ ಬಂಡವಾಳ ಕೃಷಿಗೆ ಉತ್ತೇಜನ:** ಪ್ರಧಾನಿಯವರು ಶೂನ್ಯ ಬಂಡವಾಳ ಕೃಷಿಯನ್ನು ಉತ್ತೇಜಿಸಲು ತಜ್ಞರ ಸಮಿತಿ ರಚಿಸುವುದಾಗಿ ಪ್ರಕಟಿಸಿದರು. ನೈಸರ್ಗಿಕ ಗೊಬ್ಬರ, ಸ್ಥಳೀಯಬೀಜ ಬಳಸಿಕೊಂಡು ಅತ್ಯಂತ ಕಡಿಮೆ ವೆಚ್ಚದಲ್ಲಿ ಮಾಡುವ ಕೃಷಿ ಇದಾಗಿದೆ. ದೇಶ ಮತ್ತು ರೈತರ ಅಗತ್ಯ ಈಡೇರಿಸಲು ಬೆಳೆ ವಿನ್ಯಾಸನ್ನು ಬದಲಿಸುವುದು ಇದರಲ್ಲಿ ಸೇರಿದೆ ಎಂದರು.

**ಬೆಂಬಲ ಬೆಲೆಗೆ ಸಮಿತಿ:** ಜೊತೆಗೆ, ಕನಿಷ್ಠ ಬೆಂಬಲ ಬೆಲೆಯನ್ನು ಇನ್ನಷ್ಟು ಪರಿಣಾಮಕಾರಿ ಮತ್ತು ಪಾರದರ್ಶಕವಾಗಿ ರೂಪಿಸಲಾಗುವುದು. ಇದಕ್ಕಾಗಿ ಸಮಿತಿ ರಚಿಸಲಾಗುವುದು. ಸಮಿತಿಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಪ್ರತಿನಿಧಿಗಳು, ರೈತರು ಹಾಗೂ ತಜ್ಞರು ಇರಲಿದ್ದಾರೆ' ಎಂದು ತಿಳಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:20.11.2021.

## 5. Five MPs likely to move dissent notes to Data Bill panel report

At least five of the 30 members of the Joint Parliamentary Committee on the personal Data Protection (PDP) Bill are expected to move dissent notes to the panels's report on the legislation. Sources said that at least three of these were directed at the controversial clause that allowed the Union Government to exempt any agency under its purview from the law.

According to informed sources, congress leaders Jairam Ramesh Manish Tewari and Gaurav Gogoi; Trinamool Congress MP Derek o'Brien; and Bijju Janata Dal MP Amar Patnaik will move the dissent notes. Sources said that mere members could join this list. The panel is meeting to adopt the long-pending report. The panel has been studying the Bill since 2019.

Clause 35, in the name of "sovereignty', "friendly relations with foreign states'' and "security of the state'', allows any agency under the Union Government exemption from all or any provisions of the law.

**Pegasus case**: This clause assumes importance against the backdrop of recent revelations in the Pegasus spyware case, where both private and public citizens were allegedly snooped upon by the Government.

The panel reached a middle path on the clause by agreeing that the Government had to record in writing the reasons to give exemption to any agency. Demands that this clause be suitably amended so as to include the provision to seek approval from parliament for seeking such exemptions were not accepted.

Mr. Ramesh was one of the members who argued that the Government should table the recorded reasons in Parliment for providing exemption to any Government agency to bring in greater transparency and accountability.

'Privileged class'

In his dissent note against clause 35, Mr. Ramesh said the design of the Bill assumes that the Constitutional right to privacy arises only where operations and activities of private companies are concerned. "Governments and government agencies are treated as a separate privileged class whose operations and activities are always in the public interest and individual privacy considerations are secondary,'' he wrote.

He added that the idea that the August 2017 Puttaswamy (privacy) judgment of the Supreme Court is relevant only for "a very, very, very tiny section of the Indian population" is in his view "deeply flawed and troubling".

Courtesy:The Hindu, Dated:27.11.2021

# 6. ಇನ್ನೆರೆಡು ಬ್ಯಾಂಕು ಖಾಸಗಿಗೆ

ದೇಶದಲ್ಲಿ ಮತ್ತೆರಡು ಸರ್ಕಾರಿ ಬ್ಯಾಂಕುಗಳ ಖಾಸಗೀಕರಣಕ್ಕೆ ವೇದಿಕೆ ಸಿದ್ಧವಾಗಿದೆ. ಸಾರ್ವಜನಿಕ ವಲಯದ ಎರಡು ಬ್ಯಾಂಕುಗಳನ್ನು ಖಾಸಗೀಕರಣಗೊಳಿಸುವ ಉದ್ದೇಶದಿಂದ ಕೇಂದ್ರ ಸರ್ಕಾರವು ಮುಂದಿನ ಅಧಿವೇಶನದಲ್ಲಿ ಬ್ಯಾಂಕಿಂಗ್ ಕಾನೂನುಗಳು (ತಿದ್ದುಪಡಿ) ವಿಧೇಯಕ 2021 ಅನ್ನು ಮಂಡಿಸಲಿದೆ.

ಇದೇ 29ರಿಂದ ಸಂಸತ್‌ನ ಚಳಿಗಾಲದ ಅಧಿವೇಶನ ಆರಂಭವಾಗಲಿದ್ದು ಅಲ್ಲಿ ಮಂಡಿಸಲು ನಿರ್ಧರಿಸಲಾಗಿರುವ 26 ವಿಧೇಯಕಗಳ ಪೈಕಿ ಇದು ಒಂದು ಎಂದು ಹೇಳಲಾಗಿದೆ. ಹಲವು ಪ್ರಮುಖ ವಿಧೇಯಕಗಳು ಚರ್ಚೆಗೆ ಬರುವ ಹಿನ್ನೆಲೆಯಲ್ಲಿ ಮೊದಲ ದಿನದಿಂದಲೇ ಕಲಾಪಗಳು ಕಾವೇರುವ ಲಕ್ಷಣ ಗೋಚರಿಸಿದೆ.

2021–22ರ ಬಜೆಟ್ ಮಂಡನೆ ವೇಳೆಯೇ ವಿತ್ತ ಸಚಿವೆ ನಿರ್ಮಾಲಾ ಸೀತಾರಾಮನ್ ಅವರು, ಸರ್ಕಾರದ ಬಂಡವಾಳ ಹಿಂಪಡೆಯುವಿಕೆ ಅಭಿಯಾನದ ಭಾಗವಾಗಿ 2 ಸರ್ಕಾರಿ ಬ್ಯಾಂಕ್‌ಗಳನ್ನು ಖಾಸಗೀಕರಣ ಮಾಡುವುದಾಗಿ ಘೋಷಿಸಿದ್ದರು. ಅದರಂತೆ, ಖಾಸಗೀಕರಣ ಪ್ರಕ್ರಿಯೇ ಆರಂಭಿಸಲು ಬ್ಯಾಂಕಿಂಗ್ ಕಂಪನೀಸ್ ಕಾಯ್ದೆಗಳು 1970 ಮತ್ತು 1980 ಹಾಗೂ ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ 1949ಕ್ಕೆ ತಿದ್ದುಪಡಿ ತರಲು ನಿರ್ಧರಿಸಲಾಗಿದೆ.

ಪಿಂಚಣಿ ನಿಧಿ ನಿಯಂತ್ರಣ ಮತ್ತು ಅಭಿವೃದ್ಧಿ ಪ್ರಾಧಿಕಾರ ತಿದ್ದುಪಡಿ ವಿಧೇಯಕವನ್ನು ಮುಂಬರುವ ಅಧಿವೇಶನದಲ್ಲಿ ಮಂಡಿಸಲು ಸರ್ಕಾರ ಸಜ್ಜಾಗಿದೆ. ಈ ವಿಧೇಯಕದಂತೆ, ಪಿಂಚಣಿ ನಿಧಿ ನಿಯಂತ್ರಣ ಮತ್ತು ಅಭಿವೃದ್ಧಿ ಪ್ರಾಧಿಕಾರದಿಂದ ರಾಷ್ಟ್ರೀಯ ಪಿಂಚಣಿ ವ್ಯವಸ್ಥೆ ಟ್ರಸ್ಟ್ ಅನ್ನು ಪ್ರತ್ಯೇಕವಾಗಿಸುವುದು ಸರ್ಕಾರದ ಉದ್ದೇಶವಾಗಿದೆ.

**ಉತ್ತರ ಪ್ರದೇಶದ ಪರಿಶಿಷ್ಟ ಪಂಗಡಗಳ ಪಟ್ಟಿಗೆ ತಿದ್ದುಪಡಿ:** ಉತ್ತರಪ್ರದೇಶ ವಿಧಾನಸಭೆ ಚುನಾವಣೆ ಸಮೀಪಿಸುತ್ತಿರುವಂತೆಯೇ ಆ ರಾಜ್ಯದಲ್ಲಿ ಪರಿಶಿಷ್ಟ ಪಂಗಡಗಳ ಪಟ್ಟಿಗೆ ತಿದ್ದುಪಡಿ ತರುವ ವಿಧೇಯಕವನ್ನು ಮಂಡಿಸಲು ಸರ್ಕಾರ ನಿರ್ಧರಿಸಿದೆ. ಉತ್ತರ ಪ್ರದೇಶ ಮಾತ್ರವಲ್ಲದೇ ತ್ರಿಪುರಾಗೆ ಸಂಬಂಧಿಸಿಯೂ ಇದೇ ಮಾದರಿಯ ಬಿಲ್ ಮಂಡಿಸಲು ಸಿದ್ಧತೆ ನಡೆದಿದೆ. ಪ್ರಸಕ್ತ ವರ್ಷದ ಆರಂಭದಲ್ಲಿ ಸಂಸತ್ ತಮಿಳುನಾಡಿನ ಎಸ್‌ಸಿ ಪಟ್ಟಿಯಲ್ಲಿ ತಿದ್ದುಪಡಿ ತಂದಿತ್ತು. ಉತ್ತರ ಪ್ರದೇಶದಲ್ಲೂ ಕೆಲವು ಸಮುದಾಯಗಳು ಇಂಥ ಬೇಡಿಕೆ ಇಟ್ಟಿರುವ ಹಿನ್ನೆಲೆಯಲ್ಲಿ ಪಟ್ಟಿ ಪರಿಷ್ಕರಣೆ ಮಾಡಲು ಸರ್ಕಾರ ಚಿಂತನೆ ನಡೆಸಿರಬಹುದು ಎಂದು ಉತ್ತರಪ್ರದೇಶದ ಹಿರಿಯ ಸಚಿವರೊಬ್ಬರು ತಿಳಿಸಿದ್ದಾರೆ. ಇಲ್ಲಿನ ಮೀನುಗಾರರ ಸಮುದಾಯವನ್ನು ಎಸ್‌ಟಿ ಪಟ್ಟಿಗೆ ಸೇರ್ಪಡೆ ಮಾಡುವ ಸಾಧ್ಯತೆಯು ಇದೆ. ಚುನಾವಣೆಗೆ ಸಂಬಂಧಿಸಿದಂತೆ ನೋಡುವುದಾದರೆ ಈ ಸಮುದಾಯವು ರಾಜ್ಯದಲ್ಲಿ ಹೆಚ್ಚಿನ ಪ್ರಭಾವವನ್ನು ಹೊಂದಿದೆ.

**ಮಂಡನೆಯಾಗಲಿರುವ ಪ್ರಮುಖ ವಿಧೇಯಕಗಳು:**

- ಮೂರು ಕೃಷಿ ಕಾಯ್ದೆಗಳನ್ನು ರದ್ದು ಮಾಡುವ ವಿಧೇಯಕ 2021
- ಕ್ರಿಪ್ಟೋ ಕರೆನ್ಸಿ ಮತ್ತು ಡಿಜಿಟಲ್ ಕರೆನ್ಸಿ ನಿಯಂತ್ರಣ ವಿಧೇಯಕ 2021
- ಮಾದಕ ವಸ್ತುಗಳು ತಡೆ (ತಿದ್ದುಪಡಿ) ವಿಧೇಯಕ 2021
- ಕೇಂದ್ರೀಯ ಜಾಗೃತ ದಳ ಆಯೋಗ (ತಿದ್ದುಪಡಿ) ವಿಧೇಯಕ 2021

- ದೆಹಲಿ ವಿಶೇಷ ಪೊಲೀಸ್ ಕಾಯ್ದೆ (ತಿದ್ದುಪಡಿ) ವಿಧೇಯಕ 2021
- ಬ್ಯಾಂಕಿಂಗ್ ಕಾಯ್ದೆಗಳು (ತಿದ್ದುಪಡಿ) ವಿಧೇಯಕ 2021

ಆಧಾರ: ಉದಯವಾಣಿ, ದಿನಾಂಕ:25.11.2021.

## 7. MPs are defenders of dignity of Parliament, says President

President Ram Nath Kovind said on that Members of Parliament (MPs), whether they represent the ruling party or the opposition, are defenders of the dignity of Parliament and one should not confuse competition to be rivalry.

Amid a boycott by around 15 opposition parties, President Kovind addressed MPs in the Central Hall of Parliament on the occasion of Constitution Day to commemorate the day the Indian Constitution was adopted.

Mr.Kovind said there may be difference, should be so great as to hinder the real purpose of public service.

"The opposition is, in fact, the most important element of democracy," he noted."Without an effective opposition, democracy becomes ineffective. It is expected that the Government and the Opposition, despite their differences, continue to work together in the best interests of the citizens."

**Healthy competition:** Noting that it was natural for members of the ruling party and the opposition to compete, he said it should be "about being better representatives and doing better things for the public good. Only then will it be considered healthy competition". "we all believe that our Parliament is a 'Temple of Democracy'. Therefore, it becomes the responsibility of every parliamentartian to conduct themselves in this temple of democracy with the same spirit of reverence with which they do in their places of worship," Mr. Kovind said.

The President also released the digital version of the Constituent Assembly debates, as well as the caligraphed version of the Constitution, at the event. Speaking at the function, Vice-President M. Venkaiah Naidu, who is the chairman of the Rajya Sabha, said legislatures should be guided by "dialogue and debate" and not be rendered "dysfunctional through persistent disruptions".

Mr. Naidu argued that the people's will in a democracy is conveyed as the mandate to the Governments of the day, and stressed that" tolerance towards the mandate of the people should be the guiding spirit for the legislatures". The Rajya Sabha Chairman said productivity of the House, that was meant to be one for Elders, had hit the lowest ever productivity of 29.60% during the last session, slipping from the previous low of 35.75% in 2018.

Lok Sabha Speaker Om Birla, in his address, too spoke about Parliament being a forum for debate instead of disruptions. While interacting with reporters after the function, he stated his displeasure at the boycott by the opposition.

Courtesy:The Hindu, Dated:27.11.2021

## 8. ಸರ್ವಪಕ್ಷಗಳ ಸಭೆಗೆ ಪ್ರಧಾನಿ ಗೈರು

ಆರಂಭವಾಗುವ ಸಂಸತ್ತಿನ ಚಳಿಗಾಲದ ಅಧಿವೇಶನಕ್ಕೆ ಪೂರ್ವಭಾವಿಯಾಗಿ ನಡೆದ ಸರ್ವಪಕ್ಷಗಳ ಸಭೆಗೆ ಪ್ರಧಾನಿ ನರೇಂದ್ರ ಮೋದಿ ಗೈರುಹಾಜರಾಗಿದ್ದರು. ಪ್ರಧಾನಿಯವರ ಈ ನಡೆಯ ಬಗ್ಗೆ ಪ್ರತಿಪಕ್ಷಗಳು ಆಕ್ರೋಶ ವ್ಯಕ್ತಪಡಿಸಿವೆ.

'ಅಧಿವೇಶನಕ್ಕೆ ಮುಂಚೆ ವಾಡಿಕೆಯಂತೆ ಸರ್ವಪಕ್ಷಗಳ ಸಭೆಯನ್ನು ಪ್ರಧಾನಿ ಅಧ್ಯಕ್ಷತೆಯಲ್ಲೇ ನಡೆಸಲಾಗುತ್ತದೆ. ಇವತ್ತಿನ ಸಭೆಗೆ ಪ್ರಧಾನಿ ಬರುತ್ತಾರೆ, ನಮ್ಮ ಜೊತೆಗೂಡುತ್ತಾರೆಂಬ ನಿರೀಕ್ಷೆ ಇತ್ತು. ಮೂರು ಕೃಷಿ ಕಾನೂನು ಬಗ್ಗೆ ಕೆಲವು ಪ್ರಶ್ನೆಗಳು ಇದ್ದವು. ಬೇರೆ ರೂಪದಲ್ಲಿ ಈ ಕಾಯ್ದೆಗಳು ಮರುಜಾರಿ ಆಗುತ್ತವೆ. ಈ ಬಗ್ಗೆ ಸ್ಪಷ್ಟನೆ ಬಯಸಿದ್ದೆವು. ಆದರೆ, ಪ್ರಧಾನಿ ಸಂಪ್ರದಾಯ ಮುರಿದು ಉದ್ದೇಶ ಪೂರ್ವಕವಾಗಿಯೇ ಸಭೆಯನ್ನು ತಪ್ಪಿಸಿದಂತೆ ಕಾಣುತ್ತದೆ' ಎಂದು ರಾಜ್ಯ ಸಭೆಯ ಪ್ರತಿಪಕ್ಷದ ನಾಯಕ ಎಂ. ಮಲ್ಲಿಕಾರ್ಜುನ ಖರ್ಗೆ ಅಸಮಾಧಾನ ವ್ಯಕ್ತಪಡಿಸಿದ್ದಾರೆ.

ಸಭೆಗೆ ಹಾಜರಾಗದೆ ಪ್ರಧಾನಿ ಸಂಪ್ರದಾಯ ಮುರಿದಿದ್ದಾರೆ ಎಂಬ ಟೀಕೆಯನ್ನು ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ್ ಜೋಶಿ ಅಲ್ಲಗಳೆದಿದ್ದಾರೆ. 'ಸರ್ವಪಕ್ಷಗಳ ಸಭೆಯಲ್ಲಿ ಪ್ರಧಾನಿ ಭಾಗವಹಿಸಲೇಬೇಕೆಂಬ ಸಂಪ್ರದಾಯ ಎನು ಇಲ್ಲ. ಏಕೆಂದರೆ, ಅಧಿವೇಶನಕ್ಕೆ ಮುನ್ನ ಸರ್ವಪಕ್ಷಗಳ ಸಭೆ ನಡೆಸುವ ಸಂಪ್ರದಾಯ ಆರಂಭವಾಗಿದ್ದೇ ಮೋದಿ ಪ್ರಧಾನಿಯಾದ ಬಳಿಕ' ಎಂದಿದ್ದಾರೆ. ರಕ್ಷಣಾ ಸಚಿವ ರಾಜನಾಥ ಸಿಂಗ್ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ವಾಣಿಜ್ಯ ಸಚಿವ ಪಿಯೂಷ್ ಗೋಯಲ್, ಲೋಕಸಭೆಯಲ್ಲಿನ ಕಾಂಗ್ರೆಸ್ ನಾಯಕ ಅಧಿರ್ ರಂಜನ್ ಚೌಧರಿ, ರಾಜ್ಯಸಭೆಯಲ್ಲಿ ಕಾಂಗ್ರೆಸ್ ಉಪ ನಾಯಕ ಆನಂದ ಶರ್ಮಾ ಸೇರಿ 31 ಪಕ್ಷಗಳ ಪ್ರತಿನಿಧಿಗಳು ಪಾಲ್ಗೊಂಡಿದ್ದರು.

ಆಧಾರ: ವಿಜಯವಾಣಿ, ದಿನಾಂಕ:29.11.2021

## 9. ಕ್ಷಣಮಾತ್ರದಲ್ಲಿ ರದ್ದಾದ್ದವು ರೈತ ಕಾಯ್ದೆಗಳು

ನಿರೀಕ್ಷಿಸಿದಂತೆಯೇ ಸಂಸತ್‌ನ ಚಳಿಗಾಲದ ಅಧಿವೇಶನದ ಮೊದಲ ದಿನವಾಗಿರುವ ಮೂರು ರೈತ ಕಾಯ್ದೆಗಳನ್ನು ರದ್ದು ಮಾಡುವ ವಿಧೇಯಕ ಅಂಗೀಕಾರ ಮಾಡಲಾಗಿದೆ.

ಲೋಕಸಭೆ ಮತ್ತು ರಾಜ್ಯ ಸಭೆಗಳೆರಡರಲ್ಲೂ ಮೂರು ಕಾಯ್ದೆಗಳನ್ನು ಹಿಂಪಡೆಯುವ ವಿಧೇಯಕವನ್ನು ಕೃಷಿ ಸಚಿವ ನರೇಂದ್ರ ಸಿಂಗ್ ತೋಮರ್ ಮಂಡಿಸಿದರು. ನಂತರ ಯಾವುದೇ ಚರ್ಚೆ ಇಲ್ಲದೆ ಅಂಗೀಕಾರವನ್ನು ಮಾಡಲಾಯಿತು. ಇದು ಪ್ರತಿಪಕ್ಷಗಳನ್ನು ಕೆರಳಿಸಿದ್ದು, ಉಭಯ ಸದನಗಳಲ್ಲೂ ತೀವ್ರ ಗದ್ದಲಕ್ಕೆ ಕಾರಣವಾಯಿತು.

ಈ ಕಾಯ್ದೆಗಳ ಬಗ್ಗೆ ಚರ್ಚೆಗೆ ಅವಕಾಶ ನೀಡಬೇಕು ಎಂದು ಒತ್ತಾಯಿಸಿ ಕಾಂಗ್ರೆಸ್ ಟಿಎಂಸಿ, ಡಿಎಂಕೆ ಸಂಸದರು ಗದ್ದಲ ಎಬ್ಬಿಸಿದರು. ಬೆಳಗ್ಗೆ 11 ಗಂಟೆಗೆ ಸದನ ಸಮಾವೇಶಗೊಂಡಿತು. ಅಗಲಿದ ಸಂಸದರಿಗೆ ಗೌರವ ಸೂಚಿಸುವ ನಿರ್ಣಯ ಅಂಗೀಕಾರಗೊಂಡ ಕೂಡಲೇ ಪ್ರತಿಪಕ್ಷಗಳ ಸದಸ್ಯರು

ವಿವಿಧ ವಿಚಾರಗಳಿಗೆ ಗದ್ದಲ ಎಬ್ಬಿಸಿದರು. ಮಧ್ಯಾಹ್ನ 12.06 ನಿಮಿಷಕ್ಕೆ ಕೃಷಿ ಸಚಿವರು ವಿಧೇಯಕ ಮಂಡಿಸಿದರೆ, 12.10ಕ್ಕೆ ವಿಧೇಯಕಕ್ಕೆ ಲೋಕಸಭೆಯ ಅಂಗೀಕಾರವೂ ಸಿಕ್ಕಿತು.

**ರಾಜ್ಯ ಸಭೆಯಲ್ಲಿ :** ಲೋಕಸಭೆಯಲ್ಲಿ ಅಂಗೀಕಾರ ಸಿಕ್ಕಿದ ಕೂಡಲೇ ರಾಜ್ಯಸಭೆಯಲ್ಲೂ ನರೇಂದ್ರ ಸಿಂಗ್ ತೋಮರ್ ವಿಧೇಯಕ ಮಂಡಿಸಲು ಮುಂದಾದರು. ಈ ಸಂಧರ್ಭದಲ್ಲಿ ಮಾತನಾಡಿದ ಪ್ರತಿಪಕ್ಷ ನಾಯಕ ಮಲ್ಲಿಕಾರ್ಜುನ ಖರ್ಗೆ ಅವರಿಗೆ 2 ನಿಮಿಷಗಳ ಕಾಲ ಮಾತನಾಡಲು ಅವಕಾಶವಿತ್ತರು. ಮುಂದಿನ  ವರ್ಷ ನಡಯಲಿರುವ ಐದು ರಾಜ್ಯಗಳ ವಿಧಾನಸಭೆ ಚುನಾವಣೆಗಾಗಿಯೇ ಕಾಯ್ದೆಗಳನ್ನು ರದ್ದು ಮಾಡಿದೆ. ಒಂದು ವರ್ಷದ ಅವಧಿಯಲ್ಲಿ 700 ಕ್ಕೂ ಹೆಚ್ಚು ಮಂದಿ ರೈತರು ಹುತಾತ್ಮರಾಗಿದ್ದಾರೆ ಎಂದರು. ನಂತರ  ಸಚಿವರು ವಿಧೇಯಕ ಮಂಡಿಸಿದ ಬಳಿಕ ಧ್ವನಿಮತದಿಂದ ರಾಜ್ಯಸಭೆಯಲ್ಲಿಯೂ ಕೃಷಿ ಕಾಯ್ದೆ ರದ್ದು ಮಾಡುವ ವಿಧೇಯಕಕ್ಕೆ ಅನುಮೋದನೆ ನೀಡಲಾಯಿತು.

ಆಧಾರ: ಉದಯವಾಣಿ, ದಿನಾಂಕ:30.11.2021

## 10. ರಾಜ್ಯಸಭೆಯಲ್ಲಿ ಅನುಚಿತ ವರ್ತನೆ ಪ್ರಕರಣ 12 ಸಂಸದರು ಅಮಾನತ್ತು

ರಾಜ್ಯಸಭೆಯ ಕಳೆದ ಅಧಿವೇಶನದಲ್ಲಿ ಕೃಷಿ ಕಾಯ್ದೆ ವಾಪಸಾತಿ ಮಸೂದೆ ಮಂಡನೆ ವೇಳೆ ಗಲಾಟೆ ಎಬ್ಬಿಸಿ, ಸದನದ ನಿಯಮಗಳನ್ನು ಗಾಳಿಗೆ ತೂರಿದ್ದ ವಿಪಕ್ಷಗಳ 12 ಸಂಸದರನ್ನು ಚಳಿಗಾಲದ ಅಧಿವೇಶನದ ಉಳಿದ ಅವಧಿಗೆ ಅಮಾನತ್ತುಗೊಳಿಸಲಾಗಿದೆ. ಸದನದಲ್ಲಿ ಅಶಿಸ್ತಿನ ವರ್ತನೆ ಸಹಿಸಲು ಸಾಧ್ಯವಿಲ್ಲ ಎಂದು ಕೇಂದ್ರ ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ ಜೋಶಿ ರಾಜ್ಯಸಭೆಯಲ್ಲಿ ಸಂಸದರ ಅಮಾನತಿಗೆ  ನಿಲುವಳಿ ಮಂಡಿಸಿದರು. ಧ್ವನಿಮತದ ಮೂಲಕ ಅನುಮೋದಿಸಿ ರಾಜ್ಯ ಸಭೆ ಉಪ ಸಭಾಪತಿ ಹರಿವಂಶರಾಯ್ ಪ್ರಕಟಿಸಿದರು.

**ಅಮಾನತ್ತಾದವರು:** ಕಾಂಗ್ರೆಸ್: ಪೋಲೋದೇವಿ ನೇತಂ, ಛಾಯ ವರ್ಮ ಆರ್ ಬೋರಾ, ರಾಜಮಣಿ ಪಟೇಲ್, ಸಯ್ಯದ್ ನಾಸರ್ ಹುಸೇನ್, ಅಖಿಲೇಶ್ ಪ್ರಸಾದ್ ಸಿಂಗ್. ಟಿಎಂಸಿ:ದೋಲಾ ಸೇನ್, ಶಂತ ಛೇತ್ರಿ,  ಶಿವಸೇನ: ಪ್ರಿಯಾಂಕ ಚರ್ತುವೇಧಿ, ಅನಿಲ್ ದೇಸಾಯಿ, ಸಿಪಿಎಂ: ಇಳಮಾರಮ್ ಕರೀಂ, ಸಿಪಿಐ:ಬಿನೋಯ್ ವಿಶ್ವಂ.

ಆಧಾರ: ವಿಜಯವಾಣಿ, ದಿನಾಂಕ:30.11.2021

## 11. ಲೋಕಸಭೆಯಲ್ಲಿ ಕ್ರಿಪ್ಟೋ ಬಗ್ಗೆ ರಾಜ್ಯದ ಸಂಸದರ ಪ್ರಶ್ನೆ

ಬಿಟ್ ಕಾಯಿನ್ ಬಗ್ಗೆ ರಾಜ್ಯದ ಸಂಸದರಾದ ಸುಮಲತಾ ಅಂಬರೀಷ್ ಹಾಗೂ ಡಿ.ಕೆ.ಸುರೇಶ್ ಅವರ ಲೋಕಸಭೆಯಲ್ಲಿ ದನಿಯೆತ್ತಿದ್ದಾರೆ. ಜೆಡಿಎಸ್ ಸಂಸದ ಪ್ರಜ್ವಲ್ ರೇವಣ್ಣ ಅವರು, ಬೆಂಗಳೂರಿನಲ್ಲಿ ದಾಖಲಾಗಿರುವ ಬಿಟ್ ಕಾಯಿನ್ ಪ್ರಕರಣ ಬಗ್ಗೆ ಕೇಂದ್ರ ಸರ್ಕಾರ ಹೊಂದಿರುವ ನಿಲುವಿನ ವಿವರಣೆ ಕೋರಿದರು. ಸಂಸತ್ತಿನ ಚಳಿಗಾಲದ ಅಧಿವೇಶನ ಹಿನ್ನೆಲೆಯಲ್ಲಿ ನಡೆದ ಕಲಾಪದಲ್ಲಿ ಮಾತನಾಡಿದ ಇವರಿಬ್ಬರೂ, 'ದೇಶದಲ್ಲಿ ನಿಧಾನವಾಗಿ ಬೆಳೆಯುತ್ತಿರುವ ಬಿಟ್ ಕಾಯಿನ್  ವ್ಯವಹಾರಗಳ ಬಗ್ಗೆ ಕೇಂದ್ರ ಸರ್ಕಾರದ ಬಳಿ ಮಾಹಿತಿಯಿದೆಯೇ' ಎಂದು ಕೇಂದ್ರವನ್ನು ಪ್ರಶ್ನಿಸಿದರು.

**ಪ್ರಜ್ವಲ್ ರೇವಣ್ಣ ಪ್ರಶ್ನೆಗೆ ಲಿಖಿತ ಉತ್ತರ :** ಕರ್ನಾಟಕದಲ್ಲಿ ದಾಖಲಾಗಿರುವ ಬಿಟ್ ಕಾಯಿನ್ ಪ್ರಕರಣದದ ಬಗ್ಗೆ ಜ್ಯಾತ್ಯಾತೀತ ಜನತಾದಳದ(ಜೆಡಿಎಸ್) ಸಂಸದ ಪ್ರಜ್ವಲ್ ರೇವಣ್ಣ ಅವರ ಪ್ರಶ್ನೆಯೊಂದಕ್ಕೆ ಲಿಖಿತ ಉತ್ತರ ನೀಡಿದ ಕೇಂದ್ರ ಹಣಕಾಸು ಇಲಾಖೆಯ ಸಹಾಯಕ ಸಚಿವ ಪಂಕಜ್ ಚೌದರಿ, ಬಿಟ್ ಕಾಯಿನ್ ಮೂಲಕ ಅಕ್ರಮ ಹಣ ವರ್ಗಾವಣೆಯಾಗಿರುವ ಬಗ್ಗೆ ಬೆಂಗಳೂರಿನಲ್ಲಿರುವ ಜಾರಿ ನಿರ್ದೇಶನಾಲಯ(ಇ.ಡಿ) ಪ್ರಕರಣ ದಾಖಲಿಸಿಕೊಂಡಿದೆ. ಕರ್ನಾಟಕ ಪೊಲೀಸರು, ಬಿಟ್ ಕಾಯಿನ್

ಹೆಸರಿನಲ್ಲಿ ಆಗಿರುವ ಸೈಬರ್ ಕ್ರೈಂಗಳ ತನಿಖೆ ನಡೆಸುತ್ತಿದ್ದಾರೆ. ಈ ತನಿಖೆಯನ್ನು ಸಿಬಿಐಗೆ ಹಸ್ತಾಂತರಿಸುವ ಯಾವುದೇ ಪ್ರಸ್ತಾವನೆ ಕೇಂದ್ರ ಸರ್ಕಾರಕ್ಕಿಲ್ಲ ಕ್ರಿಪ್ಟೋ ಕರೆನ್ಸಿಗಳನ್ನು ನಿಗ್ರಹಿಸುವ ಪ್ರಾಥಮಿಕ ಜವಾಬ್ದಾರಿಯು ಆಯಾ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳ ಸರ್ಕಾರಗಳಿಗೆ ಇರುತ್ತದೆ ಎಂದು ಅವರು ತಿಳಿಸಿರುತ್ತಾರೆ.

ಆಧಾರ: ಉದಯವಾಣಿ, ದಿನಾಂಕ:30.11.2021.

## 12. ಬಿಟ್ ಕಾಯಿನ್‌ಗೆ ಕರೆನ್ಸಿ ಮಾನ್ಯತೆ ಇಲ್ಲ

ಬಿಟ್ ಕಾಯಿನ್‌ಗೆ ಕರೆನ್ಸಿ ಮಾನ್ಯತೆ ನೀಡುವ ಪ್ರಸ್ತಾಪ ಸರ್ಕಾರಕ್ಕಿಲ್ಲ ಎಂದು ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ತಿಳಿಸಿದ್ದಾರೆ. ಲೋಕಸಭೆಯಲ್ಲಿ ಈ ಬಗ್ಗೆ ವಿವರ ನೀಡಿದ ಸಚಿವೆ, ಸರ್ಕಾರವು ಬಿಟ್ ಕಾಯಿನ್ ವರ್ಗಾವಣೆ ಕುರಿತ ಮಾಹಿತಿಗಳನ್ನು ಸಂಗ್ರಹಿಸಿಲ್ಲ ಎಂದರು.

ಬಿಟ್ ಕಾಯಿನ್ ಒಂದು ಕ್ರಿಪ್ಟೋ ಕರೆನ್ಸಿಯಾಗಿದ್ದು, ಜನತೆ ಸರಕು ಮತ್ತು ಸೇವೆಗಳ ಖರೀದಿಗೂ ಬಳಸುತ್ತಾರೆ. ಬ್ಯಾಂಕ್, ಕ್ರೆಡಿಟ್ ಕಾರ್ಡ್ ಇಲ್ಲದಿದ್ದರೂ ವರ್ಗಾವಣೆಗೆ ಬಳಸುತ್ತಾರೆ. ಸರ್ಕಾರ ಕ್ರಿಪ್ಟೋ ಕರೆನ್ಸಿಗಳನ್ನು ನಿಯಂತ್ರಿಸಲು ಈಗ ನಡೆಯುತ್ತಿರುವ ಚಳಿಗಾಲದ ಸಂಸತ್ ಅಧಿವೇಶನದಲ್ಲಿ ವಿಧೇಯಕವನ್ನು ಮಂಡಿಸಲಿದೆ. ಸರ್ಕಾರ ಕೆಲವು ಖಾಸಗಿ ಕ್ರಿಪ್ಟೋ ಕರೆನ್ಸಿಗಳಿಗೆ ಮಾತ್ರ ಅವಕಾಶ ನೀಡಿ ಉಳಿದವುಗಳನ್ನು ನಿಷೇಧಿಸುವ ಸಾಧ್ಯತೆ ಇದೆ. ಆರ್‌ಬಿಐ ತನ್ನ ಡಿಜಿಟಲ್ ಕರೆನ್ಸಿ ಬಿಡುಗಡೆಗೊಳಿಸಲು ಅವಕಾಶ ನೀಡುವ ನಿರೀಕ್ಷೆ ಇದೆ.

**ರೂ.2.29 ಲಕ್ಷ ಕೋಟಿ ಬಂಡವಾಳ ವೆಚ್ಚ:** ಮತ್ತೊಂದು ಪ್ರಶ್ನೆಗೆ ಉತ್ತರಿಸಿದ ಸಚಿವೆ, ಸರ್ಕಾರದ ಸಚಿವಾಲಯಗಳು ಮತ್ತು ಇಲಾಖೆಗಳು ಪ್ರಸಕ್ತ ಸಾಲಿನ ಏಪ್ರಿಲ್–ಸೆಪ್ಟೆಂಬರ್ ಅವಧಿಯಲ್ಲಿ ರೂ.2.29 ಲಕ್ಷ ಕೋಟಿ ಬಂಡವಾಳ ವೆಚ್ಚ ವ್ಯಯಿಸಿವೆ ಎಂದು ತಿಳಿಸಿದ್ದಾರೆ. ಇದು 2021–22 ರ ಬಜೆಟ್ ಅಂದಾಜಿನ ಶೇ.41 ಆಗುತ್ತದೆ. 2020–21 ಕ್ಕೆ ಹೋಲಿಸಿದರೆ ಶೇ.38 ಅಧಿಕವಾಗಿದೆ.

ದೇಶದಲ್ಲಿ ಬಂಡವಾಳ ವೆಚ್ಚ ಮತ್ತು ಮೂಲಸೌಕರ್ಯಗಳನ್ನು ಮೇಲ್ದರ್ಜೆಗೇರಿಸುವ ಉದ್ದೇಶದಿಂದ ಕೇಂದ್ರ ಸರ್ಕಾರ ರಾಷ್ಟ್ರೀಯ ಮೂಲಸೌಕರ್ಯ ಪೈಪ್ ಲೈನ್ (ಎನ್‌ಐಪಿ) ಯೋಜನೆ ಆರಂಭಿಸಿದೆ. 2020–2025ರಲ್ಲಿ ರೂ.111 ಲಕ್ಷ ಕೋಟಿ ಹೂಡಿಕೆಯನ್ನು ಇದು ಒಳಗೊಂಡಿದೆ. ದೇಶದಲ್ಲಿ ವಿಶ್ವ ದರ್ಜೆಯ ಮೂಲಸೌಕರ್ಯ ಕಲ್ಪಿಸುವುದು ಇದರ ಗುರಿ. ಎನ್‌ಐಪಿ ಅಡಿಯಲ್ಲಿ 6,835 ಯೋಜನೆಗಳಿಗೆ ಚಾಲನೆ ನೀಡಲಾಗಿದೆ. 9,000 ಯೋಜನೆಗಳನ್ನು ವಿಸ್ತರಿಸಲಾಗಿದೆ. ಆರ್ಥಿಕ ಬೆಳವಣಿಗೆಯಲ್ಲಿ ಇದು ಗಣನೀಯ ಕೊಡುಗೆ ನೀಡುತ್ತಿದೆ ಎಂದರು. 2021 ರ ಆಗಸ್ಟ್ 23 ರಂದು ರಾಷ್ಟ್ರೀಯ ನಗದೀಕರಣ ಪೈಪ್‌ಲೈನ್ (ಎನ್‌ಎಂಪಿ) ಆರಂಭಿಸಲಾಯಿತು. ಇದು ಸಾರ್ವಜನಿಕ ಆಸ್ತಿಯನ್ನು ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸಲು ಸಹಕಾರಿಯಾಗಿದೆ. ಇದು ಮೂಲ ಸೌಕರ್ಯಗಳನ್ನು ವಿಕಾಸಪಡಿಸುತ್ತದೆ ಎಂದು ವಿವರಿಸಿದರು.

2021ರ ಅಕ್ಟೋಬರ್ 13ರಂದು ಜಾರಿಯಾದ ಗತಿ ಶಕ್ತಿ ಯೋಜನೆಯ ಮೂಲ ಸೌಕರ್ಯ ಯೋಜನೆಗಳನ್ನು ಅಭಿವೃದ್ಧಿಪಡಿಸಲು ಸಂಬಂಧಿಸಿದ ಎಲ್ಲ ಸಚಿವಾಲಯಗಳು, ಇಲಾಖೆಗಳನ್ನು ಡಿಜಿಟಲೀಕರಣದೊಂದಿಗೆ ಸಂಯೋಜಿಸುತ್ತದೆ. ಮೂಲ ಸೌಕರ್ಯ ಯೋಜನೆಗಳನ್ನು ದೇಶದ ಮೂಲೆಮೂಲೆಗೂ ಮುಟ್ಟಿಸಲು ಸಹಕಾರಿಯಾಗಿದೆ. ಇದರಿಂದ ಜನತೆಗೆ ಅವರ ಪ್ರಯಾಣದ ಅವಧಿಯು ಉಳಿತಾಯವಾಗುತ್ತದೆ ಎಂದರು. ಹಣದುಬ್ಬರವನ್ನು ನಿಯಂತ್ರಿಸುವ ಉದ್ದೇಶದಿಂದ ಪ್ರಮುಖ ಸಾಮಾಗ್ರಿಗಳ ದರವನ್ನು ಸರ್ಕಾರ ಗಮನಿಸುತ್ತಿದೆ. ಕೇಂದ್ರ ಸರ್ಕಾರ 2021ರ ನವೆಂಬರ್ 4

ರಿಂದ ಪೆಟ್ರೋಲ್ ಮತ್ತು ಡೀಸೆಲ್ ಮೇಲಿನ ಅಬಕಾರಿ ಸುಂಕವನ್ನು ಲೀಟರ್‌ಗೆ ಅನುಕ್ರಮವಾಗಿ ರೂ.5 ಮತ್ತು ರೂ.10 ಕಡಿತಗೊಳಿಸಿದೆ ಎಂದು ವಿವರಿಸಿದರು.

ಆಧಾರ: ವಿಜಯಕರ್ನಾಟಕ, ದಿನಾಂಕ:30.11.2021

## 13. ಅಮಾನತ್ತು ಹಿಂಪಡೆಯದ ನಾಯ್ಡು: ಪ್ರತಿಪಕ್ಷಗಳ ಭಾರಿ ಗದ್ದಲ ಸಭಾತ್ಯಾಗ

ಮುಂಗಾರು ಅಧಿವೇಶನದಲ್ಲಿ ದುರ್ವರ್ತನೆ, ಉದ್ಧಟತನ, ಅಶಿಸ್ತು ಮತ್ತು ಹಿಂಸಾತ್ಮಕ ವರ್ತನೆ ತೋರಿದ ಆರೋಪದಲ್ಲಿ ರಾಜ್ಯಸಭೆಯ 12 ಸದಸ್ಯರುಗಳನ್ನು ಚಳಿಗಾಲದ ಅಧಿವೇಶನದ ಉಳಿದ ಅವಧಿಗೆ ಅಮಾನತ್ತು ಮಾಡಲಾಗಿರುವ ಕ್ರಮವನ್ನು ಹಿಂತೆಗೆದುಕೊಳ್ಳುವುದಿಲ್ಲ ಎಂದು ರಾಜ್ಯಸಭಾ ಅಧ್ಯಕ್ಷ ಎಂ.ವೆಂಕಯ್ಯ ನಾಯ್ಡು ತಿಳಿಸಿದರು. ಈ ಹಿನ್ನೆಲೆ ಪ್ರತಿಪಕ್ಷಗಳು ಸಭಾತ್ಯಾಗ ನಡೆಸಿದವು.

**ಮಲ್ಲಿಕಾರ್ಜುನ ಖರ್ಗೆ ಕಿಡಿ ಕಿಡಿ:** 12 ಸದಸ್ಯರ ಮೇಲಿನ ಕ್ರಮ ಸಂಸತ್ತಿಗೆ ವಿರುದ್ಧವಾಗಿದ್ದಾಗಿದೆ. ಅಮಾನತ್ತುಗೊಳಿಸುವ ಮೊದಲು ಸದಸ್ಯರ ಹೆಸರನ್ನು ಹೇಳಬೇಕು. ಅದಾದ ನಂತರವೇ ಅಮಾನತ್ತು ಸೂಚನೆ ಹೊರಡಿಸಬೇಕು ಎಂಬ ರಾಜ್ಯಸಭೆ ಪ್ರತಿಪಕ್ಷ ನಾಯಕ ಮಲ್ಲಿಕಾರ್ಜುನ ಖರ್ಗೆ ವಾದಿಸಿದರು. ನನ್ನ ವಾದವನ್ನು ಮಂಡಿಸಲು ನನಗೆ ಅವಕಾಶವನ್ನು ನೀಡಲಿಲ್ಲ. ಇದು ಸಂಸತ್ತಿನ ನಡವಳಿಯ ಉಲ್ಲಂಘನೆಯಾಗಿದೆ ಎಂದು ಮಲ್ಲಿಕಾರ್ಜುನ್ ಖರ್ಗೆ ಕಿಡಿಕಾರಿದರು.

**ಪಶ್ಚಾತಾಪ ವ್ಯಕ್ತಪಡಿಸಲಿಲ್ಲ :** ಅಮಾನತ್ತುಗೊಂಡಿರುವ ಸದಸ್ಯರು ತಮ್ಮ ವರ್ತನೆ ಬಗ್ಗೆ ಪಶ್ಚಾತಾಪ ವ್ಯಕ್ತಪಡಿಸಲಿಲ್ಲ. ತಮ್ಮ ಕೃತ್ಯವನ್ನು ಸಮರ್ಥಿಸಿಕೊಂಡರು. ಆ ದಿನ ನಡೆದ ಘಟನೆಯಲ್ಲಿ ಸಭಾಧ್ಯಕ್ಷರ ತೆಗೆದುಕೊಂಡ ಕ್ರಮವಲ್ಲ. ಅದು ಮೇಲ್ಮನೆ ತೆಗೆದು ಕೊಂಡ ಕ್ರಮ ಆಗಸ್ಟ್ 10ರ ದಾಖಲೆಗಳನ್ನು ಗಮನಿಸಿ. ನಾವು ಸದಸ್ಯರ ಹೆಸರುಗಳನ್ನು ಹೇಳಿದ್ದೇವೆ ಮತ್ತು ತಮ್ಮ ಸ್ಥಾನಗಳಲ್ಲಿ ಕುಳಿತು ಕೊಳ್ಳುವಂತೆ ವಿನಂತಿಸಿದ್ದೇವೆ ಎಂದು ವೆಂಕಯ್ಯ ನಾಯ್ಡು ತಿಳಿಸಿದರು.

**ಅಮಾನತ್ತು ಹಿಂತೆಗೆತಕ್ಕೆ ಮನವಿ:** ಪ್ರತಿಪಕ್ಷಗಳ 16 ಮಂದಿ ಸದಸ್ಯರು ಉಪ ರಾಷ್ಟ್ರಪತಿ ವೆಂಕಯ್ಯ ನಾಯ್ಡು ಅವರನ್ನು ಭೇಟಿ ಮಾಡಿ, ಅಮಾನತ್ತುಗೊಂಡಿರುವ 12 ಸದಸ್ಯರಲ್ಲಿ ಐವರು ಮಹಿಳೆಯರಿದ್ದಾರೆ. ಕಾಂಗ್ರೇಸ್ ಸಯ್ಯದ ನಾಸಿರ್ ಹುಸೇನ್, ಶಿವಸೇನಾದ ಪ್ರಿಯಾಂಕ ಚತುರ್ವೇದಿ, ಸಿಪಿಎಂ ನ ಎಳಮರಂ ಕರೀಂ ಅಮಾನತ್ತಾದವರಲ್ಲಿ ಸೇರಿದ್ದಾರೆ.

ಚಳಿಗಾಲದ ಅಧಿವೇಶನದ ಮೊದಲ ದಿನ ಕೃಷಿ ಕ್ಷೇತ್ರದ ಮೂರು ಕಾಯ್ದೆಗಳನ್ನು ಹಿಂದಕ್ಕೆ ಪಡೆಯುವ ಮಸೂದೆಗೆ ಸಂಸತ್ತು ಆತುರದಲ್ಲಿ ಧ್ವನಿಮತದ ಒಪ್ಪಿಗೆ ನೀಡದೆ. ಚರ್ಚೆ ನಡೆಸದೆ ಕೇವಲ 4 ನಿಮಿಷದಲ್ಲಿ ಹಿಂತೆಗೆದುಕೊಂಡ ಬಗ್ಗೆ ಪ್ರತಿಪಕ್ಷ ನಾಯಕರು ಆಕ್ಷೇಪ ವ್ಯಕ್ತಪಡಿಸಿದ್ದರು.

ಆಧಾರ: ವಿಶ್ವವಾಣಿ, ದಿನಾಂಕ:01.12.2021

## 14. ಏಕರೂಪ ನಾಗರಿಕ ಸಂಹಿತೆ ವಿಧೇಯಕ ಮಂಡಿಸಿದ ಬಿಜೆಪಿ

ಖಾಸಗಿ ವಿಧೇಯಕಗಳನ್ನು ಮಂಡಿಸುವ ರಾಜ್ಯಸಭೆಯಲ್ಲಿ ಬಿಜೆಪಿಯ ಇಬ್ಬರು ಸದಸ್ಯರು ಏಕರೂಪ ನಾಗರಿಕ ಸಂಹಿತೆಗೆ ಸಂಬಂಧಿಸಿದ ವಿಧೇಯಕಗಳನ್ನು ಮಂಡಿಸಿದ್ದಾರೆ. ಕಿರೋಡಿಲಾಲ್ ಮೀನಾ ಅವರು 'ಭಾರತದಲ್ಲಿ ಏಕರೂಪ ನಾಗರಿಕ ಸಂಹಿತೆ ವಿಧೇಯಕ 2020' ಅನ್ನು ಮಂಡಿಸಿದರೆ, ಹರನಾಥ್ ಸಿಂಗ್ ಯಾದವ ಅವರು 'ಜನಸಂಖ್ಯೆ ವಿಧೇಯಕವನ್ನು ಮಂಡಿಸಿದರು. ಏಕರೂಪ ನಾಗರಿಕ ಸಂಹಿತೆಯ ಬಿಜೆಪಿಯ ಕಾರ್ಯ ಸೂಚಿಗಳಲ್ಲಿ ಸೇರಿದೆ ಎನ್ನಲಾಗಿದ್ದು, ಖಾಸಗಿ ವಿಧೇಯಕ ಮಂಡನೆ ಮೂಲಕ ಚರ್ಚೆಗೆ ನಾಂದಿ ಹಾಡುವ ಪ್ರಯತ್ನ ನಡೆಸಿದೆ ಎಂದು ಹೇಳಲಾಗಿದೆ. ಸಂಸತ್ ಉಭಯ

ಸದನಗಳಲ್ಲಿ ವಿವಿಧ ವಿಷಯಗಳಿಗೆ ಸಂಬಂಧಿಸಿದ ಒಟ್ಟು 153 ಖಾಸಗಿ ವಿಧೇಯಕಗಳು ಮಂಡನೆಯಾದವು.

ಆಧಾರ: ವಿಜಯಕರ್ನಾಟಕ, ದಿನಾಂಕ:01.12.2021

## 15. ಕಲಾಪ ಗಲಾಟೆ: ದಿನವಿಡೀ ವ್ಯರ್ಥ

ಸಂಸತ್ ಅಧಿವೇಶನದ ಎರಡನೇ ದಿನವೂ ಉಭಯ ಸದನಗಳ ಕಲಾಪಗಳು ಪ್ರತಿಪಕ್ಷಗಳ ಗದ್ದಲಕ್ಕೆ ಬಲಿಯಾಗಿವೆ. ಲೋಕಸಭೆಯಲ್ಲಿ ರೈತರ ಬೇಡಿಕೆಗಳ ಕುರಿತು ಚರ್ಚೆಗೆ ಅವಕಾಶ ನೀಡದ್ದಕ್ಕೆ ಹಾಗೂ ರಾಜ್ಯಸಭೆಯಲ್ಲಿ 12 ಸದಸ್ಯರ ಅಮಾನತ್ತು ವಾಪಸ್ಸು ಪಡೆಯದ್ದಕ್ಕೆ ಆಕ್ರೋಶಗೊಂಡು, ಪ್ರತಿಪಕ್ಷಗಳು ಸಭಾತ್ಯಾಗ ಮಾಡಿದವು. ಎರಡೂ ಸದನಗಳ ಕಲಾಪಗಳನ್ನು ದಿನದ ಮಟ್ಟಿಗೆ ಮುಂದೂಡಲಾಯಿತು.

ಆಗಸ್ಟ್ ಮುಂಗಾರು ಅಧಿವೇಶನದಲ್ಲಿ ದುರ್ವರ್ತನೆ ತೋರಿದ್ದ ಪ್ರತಿಪಕ್ಷಗಳ 12 ಸದಸ್ಯರನ್ನು ಅಮಾನತ್ತು ಮಾಡಲಾಗಿತ್ತು. ಈ ಹಿನ್ನೆಲೆಯಲ್ಲಿ ಬೆಳಗ್ಗೆ ಸಭಾಧ್ಯಕ್ಷ ವೆಂಕಯ್ಯ ನಾಯ್ಡು ಅವರನ್ನು ಭೇಟಿಯಾಗಿದ್ದ ಪ್ರತಿಪಕ್ಷಗಳ ನಿಯೋಗ, ಅಮಾನತ್ತು ವಾಪಸ್ಸು ಪಡೆಯುವಂತೆ ಮನವಿ ಮಾಡಿದ್ದವು. ಆದರೆ, ಅದಕ್ಕೆ ಒಪ್ಪದ ನಾಯ್ಡು ಅವರು, 'ದುರ್ವರ್ತನೆ ತೋರಿದ್ದ ಸದಸ್ಯರು ತಮ್ಮ ತಪ್ಪಿನ ಬಗ್ಗೆ ಸ್ವಲ್ಪವೂ ಪಶ್ಚಾತ್ತಾಪ ಪಟ್ಟಿಲ್ಲ. ಹಾಗಾಗಿ ಅವರನ್ನು ಅಮಾನತ್ತು ಮಾಡಿದ್ದು ಸರಿಯಾಗಿಯೇ ಇದೆ' ಎಂದಿದ್ದರು. ಇದರಿಂದ ಕ್ರುದ್ಧರಾದ ಪ್ರತಿಪಕ್ಷ ನಾಯಕರು, ರಾಜ್ಯಸಭೆ ಕಲಾಪವನ್ನು ಬಹಿಷ್ಕರಿಸಿ ಹೊರನಡೆದವು.

**ಕ್ಷಮೆಗೆ ಪಟ್ಟು:** ಇದೇ ವೇಳೆ, 12 ರಾಜ್ಯ ಸಭಾ ಸದಸ್ಯರು ಕ್ಷಮೆ ಯಾಚಿಸಿದರಷ್ಟೇ ಅವರ ತಪ್ಪನ್ನು ಮನ್ನಿಸಬಹುದು ಎಂದು ಕೇಂದ್ರ ಸಚಿವ ಪಿಯೂಷ್ ಗೋಯಲ್ ಹೇಳಿದ್ದಾರೆ. ಇದಕ್ಕೆ ಪ್ರತಿಕ್ರಿಯಿಸಿರುವ ಕಾಂಗ್ರೆಸ್ ನಾಯಕ ರಾಹುಲ್ ಗಾಂಧಿ, ಕ್ಷಮೆ ಕೇಳುವ ಪ್ರಶ್ನೆಯೇ ಇಲ್ಲ' ಎಂದಿದ್ದಾರೆ.

**ಲೋಕಸಭೆಯಲ್ಲೂ ಗದ್ದಲ:** ಲೋಕಸಭೆಯಲ್ಲಿ ಕಲಾಪ ಆರಂಭವಾಗುತ್ತಿದ್ದಂತೆ, ಟಿಆರ್‌ಎಸ್ ಸದಸ್ಯರು ಸದನದ ಬಾವಿಗಿಳಿದು, ಕನಿಷ್ಠ ಬೆಂಬಲ ಬೆಲೆಗೆ ಕಾನೂನಾತ್ಮಕ ಮಾನ್ಯತೆ ನೀಡಬೇಕು ಮತ್ತು ಕೃಷಿ ಕಾಯ್ದೆ ವಿರೋಧಿ ಪ್ರತಿಭಟನೆ ವೇಳೆ ಮೃತ ಪಟ್ಟ ರೈತರ ಕುಟುಂಬಗಳಿಗೆ ಪರಿಹಾರ ನೀಡಬೇಕು ಎಂದು ಕೋರಿ ಘೋಷಣೆ ಕೂಗತೊಡಗಿದರು. ಇದೇ ವೇಳೆ, ಕಾಂಗ್ರೆಸ್, ಎಡಪಕ್ಷಗಳು ಕೂಡ ತಮ್ಮ ಆಸನದಲ್ಲೇ ಕುಳಿತು ರೈತರ ವಿಚಾರ ಕುರಿತು ಚರ್ಚೆಗೆ ಅವಕಾಶ ನೀಡಬೇಕು ಎಂದು ಕೋರಿಕೊಂಡರು. ಅವಕಾಶ ಸಿಗದ ಹಿನ್ನಲೆಯಲ್ಲಿ ಆಕ್ರೋಶಗೊಂಡ ಪ್ರತಿಪಕ್ಷಗಳು, ಸರ್ಕಾರವು ಪ್ರತಿ ಪಕ್ಷಗಳ ಧ್ವನಿ ಅಡಗಿಸುತ್ತಿದೆ ಎಂದು ಆರೋಪಿಸಿ ಸಭಾತ್ಯಾಗ ಮಾಡಿದವು. ಕೊನೆಗೆ ಕಲಾಪವನ್ನು ದಿನದ ಮಟ್ಟಿಗೆ ಮುಂದೂಡಲಾಯಿತು.

**ವಿಧೇಯಕ ಮಂಡನೆ:** ಹೈಕೋರ್ಟ್ ಮತ್ತು ಸುಪ್ರೀಂಕೋರ್ಟ್ ನ್ಯಾಯಮೂರ್ತಿಗಳ (ವೇತನ ಮತ್ತು ಸೇವಾ ನಿಬಂಧನೆಗಳು) ತಿದ್ದುಪಡಿ ವಿಧೇಯಕ, 2021 ಅನ್ನು ಲೋಕಸಭೆಯಲ್ಲಿ ಮಂಡಿಸಲಾಗಿದೆ. ಸುಪ್ರೀಂ ಕೋರ್ಟ್ ಮತ್ತು ಹೈಕೋರ್ಟ್ ಜಡ್ಜ್‌ಗಳು ಯಾವಾಗ ಹೆಚ್ಚುವರಿ ಪಿಂಚಣಿ ಅಥವಾ ಕೌಟಂಬಿಕ ಪಿಂಚಣಿಗೆ ಅರ್ಹರಾಗುತ್ತಾರೆ ಎಂಬುದರ ಬಗ್ಗೆ ಸ್ಪಷ್ಟ ಮಾಹಿತಿಯಿರುವ ವಿಧೇಯಕ ಇದಾಗಿದೆ.

ಆಧಾರ: ಉದಯವಾಣಿ, ದಿನಾಂಕ:01.12.2021

## 16. ಸಂಸದರ ಅಮಾನತ್ತು ವಾಪಸ್‌ಗೆ ಸಭಾಪತಿ ನಕಾರ

ಸಂಸತ್ತಿನ ಚಳಿಗಾಲದ ಅಧಿವೇಶನದ ಉಳಿದ ಅವಧಿಗೆ ಅಮಾನತ್ತಾಗಿರುವ ವಿರೋಧಪಕ್ಷಗಳ 12 ರಾಜ್ಯಸಭಾ ಸದಸ್ಯರ, ಅಮಾನತ್ತು ಆದೇಶ ವಾಪಸ್ಸು ಪಡೆಯಬೇಕೆಂದರೆ ಅವರು ಕ್ಷಮೆ ಯಾಚಿಸಬೇಕು

ಎಂದು ಸಭಾಪತಿ ಎಂ.ವೆಂಕಯ್ಯ ನಾಯ್ಡು ಅವರು ಹೇಳಿರುವುದನ್ನು ವಿರೋಧ ಪಕ್ಷಗಳು ಖಂಡಿಸಿವೆ. ಬದಲಿಗೆ ಅಮಾನತ್ತು ರದ್ದಾಗುವವರೆಗೆ ಅಥವಾ ಅಧಿವೇಶನ ಮುಗಿಯುವವರೆಗೆ ಧರಣಿ ನಡೆಸಲು ನಿರ್ಧರಿಸಿವೆ.

ಕಲಾಪ ಅರಂಭವಾಗುವುದಕ್ಕೂ ಮುನ್ನ ಸಭಾಪತಿ ವೆಂಕಯ್ಯ ನಾಯ್ಡು ಅವರನ್ನು ವಿರೋಧ ಪಕ್ಷಗಳ ನಿಯೋಗವು ಭೇಟಿ ಮಾಡಿತು. ಸದಸ್ಯರ ಅಮಾನತ್ತು ಆದೇಶವನ್ನು ವಾಪಸ್ ಪಡೆಯಿರಿ ಎಂದು ಕೋರಿತು. ಈ ಕೋರಿಕೆಯನ್ನು ಸಭಾಪತಿ ತಿರಸ್ಕರಿಸಿದರು. ಅಮಾನತ್ತಾದ ಸದಸ್ಯರು ಪಶ್ಚಾತ್ತಾಪ ತೋರದೇ ಇದ್ದರೆ ಆದೇಶ ವಾಪಸ್ಸು ಪಡೆಯಲು ಸಾಧ್ಯವಿಲ್ಲ ಎಂದು ಸಭಾಪತಿ ಹೇಳಿದರು ಎಂದು ಮೂಲಗಳು ಹೇಳಿವೆ. ನಂತರ ವಿರೋಧ ಪಕ್ಷಗಳು ಇದರ ವಿರುದ್ಧ ಪ್ರತಿಭಟನೆ ನಡೆಸಿವೆ.

ಕ್ಷುಲಕ ಕಾರಣಗಳನ್ನು ತೋರಿಸಿ ವಿರೋಧ ಪಕ್ಷಗಳ ಸದಸ್ಯರನ್ನು ಅಮಾನತ್ತು ಮಾಡಲಾಗಿದೆ. ಅಮಾನತ್ತು ಪ್ರಕ್ರಿಯೆಯಲ್ಲಿ ನಿಯಮಗಳನ್ನು ಉಲ್ಲಂಘಿಸಲಾಗಿದೆ. ಹೀಗಿರುವಾಗ ಕ್ಷಮೆ ಕೇಳಲು ಅನಿವಾರ್ಯ ಇರುವುದಿಲ್ಲ. ಬದಲಿಗೆ ಅಮಾನತ್ತಾಗಿರುವ 12 ಸದಸ್ಯರು ಧರಣಿ ನಡೆಸಲು ತೀರ್ಮಾನಿಸಲಾಗಿದೆ ಎಂದು ವಿರೋಧಪಕ್ಷಗಳು ಹೇಳಿವೆ.

**ಕಲಾಪ ಬಹಿಷ್ಕರಿಸದಿರಲು ನಿರ್ಧಾರ:** 12 ಸದಸ್ಯರ ಅಮಾನತ್ತನ್ನು ವಿರೋಧಿಸಿ ಅಧಿವೇಶನದ ಉಳಿದ ಅವಧಿಯನ್ನು ಬಹಿಷ್ಕರಿಸಲು, ಈ ಮೊದಲು ವಿರೋಧ ಪಕ್ಷಗಳು ನಿರ್ಧರಿಸಿದ್ದವು. ಆದರೆ ಈ ನಿರ್ಧಾರವನ್ನು ಬದಲಿಸಿವೆ. ದಿನದಮಟ್ಟಿಗಷ್ಟೇ ಸದನದಿಂದ ಹೊರನಡೆದಿವೆ. ರಾಜ್ಯಸಭೆಯ ವಿರೋಧ ಪಕ್ಷದ ನಾಯಕ, ಕಾಂಗ್ರೆಸ್ ಮಲ್ಲಿಕಾರ್ಜುನ ಖರ್ಗೆ ಅವರ ನೇತೃತ್ವದಲ್ಲಿ ವಿರೋಧ ಪಕ್ಷಗಳೂ ನಡೆಸಿದ ಸಭೆಯಲ್ಲಿ ಈ ತೀರ್ಮಾನ ತೆಗೆದುಕೊಳ್ಳಲಾಗಿದೆ.

ಸಭೆ ಆರಂಭವಾದಾಗ ಅಧಿವೇಶನವನ್ನು ಸಂಪೂರ್ಣವಾಗಿ ಬಹಿಷ್ಕರಿಸಬೇಕು ಎಂದು ಕಾಂಗ್ರೆಸ್ ಮತ್ತು ಡಿಎಂಕೆ ಸೇರಿದಂತೆ ಹಲವು ಪಕ್ಷಗಳ ನಾಯಕರು ಹೇಳಿದರು. 'ಅಧಿವೇಶನವನ್ನು ಬಹಿಷ್ಕರಿಸಿದರೆ ಸದನದಲ್ಲಿ ಸರ್ಕಾರದ ಮೇಲುಗೈ ಆಗುತ್ತದೆ. ಬದಲಿಗೆ ನಾವು ಸದನದಲ್ಲಿ ಪ್ರತಿದಿನ ಒಂದಿಲ್ಲೊಂದು ವಿಷಯಗಳನ್ನು ಪ್ರಸ್ತಾಪಿಸಿದ ಚರ್ಚಿಸಬೇಕು ಎಂದು ಕಾಂಗ್ರೆಸ್‌ನ ರಾಹುಲ್ ಗಾಂಧಿ ಅವರು ಹೇಳಿದರು. ಅನಂತರ ದಿನದಮಟ್ಟಿಗಷ್ಟೇ ಕಲಾಪವನ್ನು ಬಹಿಷ್ಕರಿಸಿ, ಪ್ರತಿಭಟನೆ ನಡೆಸಲಾಯಿತು' ಎಂದು ಮೂಲಗಳು ಹೇಳಿವೆ.

ಆಧಾರ: ಪ್ರಜಾವಾಣಿ, ದಿನಾಂಕ:01.12.2021

## 17. Rajya Sabha passes Dam Safety Bill after four-hour discussion

The Rajya Sabha passed the Dam Safety Bill, 2019 after a four-hour discussion. This is one of the first legislation to be passed this week as the upper House has witnessed vociferous protests and disruption from the Opposition over the suspension of 12 members.

Union Minister Gajendra Singh Shekhawat said a national policy on the safe management of dams had been pending for 40 years. Opposition members raised concerns that the Bill encroached on the federal structure as dams and rivers are state subjects. An amendment moved by Tiruchi Siva of the Dravida Munnetra Kazhagam (DMK) to send the Bill to a Select committee was defeated with 80 votes against and 26 votes in favour.

"When a dam breaks, it impacts the entire ecology. The safety of dams is an important issue. The Bills was passed in the Lok Sabha on 2 August, 2019. The Bill will

ensure that accountability is fixed in case of a lapse. Forty-two dams have broken so far. In 1982. It was decided to prepare a national policy . We sought the advice of the Solicitor General. Parliament can make the law. Entry 17 of the State list doesn't act as an embargo for the Union to make a legislation on this subject,'' Mr Shekhawat said.

Shaktisingh Gohil of the Congress said this legislation was a right of the States. "I know they will say that the Bill first came in 2010, when Congress was in power, but the preamble of the Bill mentioned that it will be applicable only if a two-thirds majority of the State Assembly accepts it. We warned you on farm laws-don't pass the Bills in a hurry. We asked for division of votes; you had to take back the (farm) Bills eventually… but even after this, you haven't learnt anything and have come up with this Bill," Mr.Gohil said.

Manoj Kumar Jha of the RJD said there was "always a temptation to encroach on a state subject but they forget they will not be there( in power) forever".

Courtesy:The Hindu, Dated:03.12.2021

## 18. Lok Sabha records 204% productivity

The Productivity of Lok sabha increased to 204% on as the House sat for extra hours till midnight to discuss the COVID-19 pandemic, a historic milestone in Parliament.

Commending MPs. Lok Sabha Speaker Om Birla said in the Lok Sabha that it was the highest ever recorded productivity in a single day of legislative business.

"It shows how our people's representatives are engaged in public welfare and the message of such an engagement percolates down the system in a beneficial way," he said.

According to officials, the productivity of the Lower House had touched 117% Overall, the productivity during the winter Session of parliament, which began on Monday, has been 83%.

Courtesy:The Hindu, Dated:04.12.2021.

## 19. Naidu for wider debate on 'freebies'

As various governments does out 'freebies' to keep voters under its spell during election seasons, Vice president M Venkaiah Naidu sought a wider debate on 'freebies' to ensure " most effective utilization" of scare resources.

Naidu said resource base and their best use separates the developing economies from the developed while urging the Public Accounts Committee(PAC) of the parliament, which is celebrating the 100th anniversary of its existence, to to examine this aspect to enable wider public discussion.

Lauding the role of the PAC, he said its constant pursuit of action taken by the government creates a " fear of scrutiny" and this results in systemic improvement and

prevention of " financial murders", which are large-scale irregularities and wasteful expenditure.

Addressing a function in Central Hall, inaugurated by President Ram Nath Kovind, Naidu said the " wise, faithful and economical" utilistion of the money granted by the parliament is spent for realizing the stated socio-economic outcomes.

"We are all alive to the present scenario of the governments indulging in doling out freebies for obvious reasons. While ensuring the welfare and social security of the needy people is an important obligation of the governments, it is time that there is a wider debate on harmonising the welfare and development objectives," Naidu said.

"Expenditures must be carefully balanced so that both the short-term and long-term development objectives get equal attention. Since PAC has to examine the effectiveness of resource use in terms of socio-economic outcomes, it may be in order for the Committee to examine the issue of balancing these two objectives for wider consideration," he said.

When it comes to people getting benefits, Naidu said was of the view that there should be "no line, no queue, no shaking of hands and no doing in between hands" and referred to the Direct Benefits Transfer (DBT) which has led to " substantial savings".

**Accountability central to governance in parliamentary democracy: President**

Parliament it is the embodiment of the people's will and accountability is central to governance in a parliamentary democracy, President Ram Nath Kovind said inaugurating the centenary celebrations of the Public Accounts Committee (PAC).

He said the parliamentary commitees in general and the PAC, in particular, ensure administrative accountability of the Executive towards the Legislature. Emphasising that various parliamentary panels work as its extension and enhance its functioning he said the committee system is a welcome division of labour as they allow the Houses to discuss and debate all issues while select groups of MPs can devote more focus on select matters.

"Without Parliamentary Committees, parliamentary democracy would be rendered incomplete. It is through the PAC that citizens keep a check on the government finances" he said.

In a Parliamentary democracy, accountability is central to governance. |Therefore, it is obvious that a committee of people's representatives doing scrutiny of public accounts plays an important role," the President said.

Courtesy: Deccan Hearld, Dated:05.12.2021

## 20. Parliament an embodiment of people's will, sys President

President Ram Nath Kovind inaugurated the centennial year celebration of the Public Accounts Committee(PAC) in the Central Hall of parliament The PAC is one of the most powerful financial committees of Parliament.

Speaking at the function, President Kovind said that Parliament was the embodiment of people's will and parliamentary committees work as its extension. "It is a welcome division of labour as they allow the Houses to discuss and debate all issues while select groups of the Members of Parliament can devote more focus on select matters. The importance of the frame work thus created cannot be overstated," he said.

Vice-President M. Venkaiah Naidu, Lok Sabha speaker Om Birla and chairperson, Public Accounts Committee of Parliament of India, Adhir Ranjan chowdhury, along with Union Ministers, MPs and presiding officers of the State Legislative bodies, were present in the House.

Mr. Naidu, In his address, called for harmonizing the expenditure on freebies under welfare obligations of the Governments with developmental needs, and urged the PAC of parliament to examine this aspect to enable wider public discussion .

"While ensuring the welfare and social security of the needy people is and important obligation of the Governments, it is time that there is a wider debate on harmnoising the welfare and development objectives. Expenditures must be carefully balanced so that both the short-term and long-term development objectives get equal attention," he said.

The Vice-President urged the PAC to reinvent itself to more effectively ensure financial discipline in the context of the Union Government's budgetary expenditure increasing from a mere 197 core in the first Budget to 35 Lakh crore now, marking an increase of 17,766 times, making its monitoring that much more complex and challenging.

Courtesy:The Hindu, Dated:05.12.2021

## 21. TRS member Banda Prakash resigns from Rajya Sabha

Telangana Rashtra Samithi MP Banda Prakash resigned from the Rajya sabha His resignation was accepted by House Chairman M. Venkaiah Naidu.

Telangana Chief Minister K Chandrasekhar Rao nominated Mr. Prakash to the Legislative Council, along with five others. Mr. Prakash was to retire from the upper House in April 2024.

According to sources, Mr Rao's daughter Kalvakuntla Kavitha, whose term as MLC would expire in January, could be nominated in his place.

His nomination to the council is also linked to the TRS's humiliating defeat in the Huzurabad byelection where party turncoat Rajender had won on BJP ticket.

Mr.Prakash and Mr. Rajender belong to the Mudiraj community. Sources claim that he is likely to be inducted in the cabinet in the next reshuffle to win over the community. The byelection result has spurred the TRS to distance itself from the BJP.

**Change in stance:** Mr. Prakash told The Hindu that though the party had sided with the BJP on many controversial legislation in Parliament, the ruling party had done precious little in return for Telangana. The TRS, in the ongoing winter session, has firmly placed itself with the opposititon bloc.

In both the Houses, the party members have been protesting against the Central Government’s paddy procurement policy.

Courtesy:The Hindu, Dated:05.12.2021

## 22. House committees should take inputs from people : Lok Sabha Speaker

Lok Sabha Speaker Om Birla advised Parliamentary committees to directly interact with people and take inputs from them so that it can make "more effective and meaningful" recommendations to the government for the development of the country.

Birla was addressing the valedictory ceremony of the centenary celebrations of Parliament's Public Accounts Committee.

"It is the responsibility of the PAC to evolve itself and to be flexible in their processes and procedures. As part of our endeavour to ensure that the Committee works for the benefit and welfare of the last person standing in the row, it should make the Executive accountable for the development of the country and ensure transparency in the working of the government," he said.

He suggested that a common digital platform of the Public Accounts Committees of the Parliament of India and State Legislatures should be created where such Committees can share their best practices and monitor execution of their recommendations.

"Parliamentary committees should directly interact with people - and take inputs from them. The more they will interact with people, the more effective and meaningful their recommendations will be," he said.

Courtesy: Deccan Herald – dated:- 06.12.2021

## 23. ರಾಜ್ಯಸಭೆ ಕಲಾಪದ 52% ಸಮಯ ವ್ಯರ್ಥ

ಚಳಿಗಾಲದ ಅಧಿವೇಶನದಲ್ಲಿ ರಾಜ್ಯಸಭೆಯ ಮೊದಲ ವಾರದ ಕಲಾಪದ ಅವಧಿಯಲ್ಲಿ ಶೇಕಡ 52 ಸಮಯ ವ್ಯರ್ಥವಾಗಿದೆ. ಆರಂಭದಲ್ಲೇ 12 ಸದಸ್ಯರ ಅಮಾನತ್ತು ಪ್ರಕ್ರಿಯೆಯೊಂದಿಗೆ ಆರಂಭವಾದ ಪ್ರತಿಭಟನೆ, ಗದ್ದಲಗಳು ಇದಕ್ಕೆ ಕಾರಣ. ಆದಾಗ್ಯೂ ಗುರುವಾರ ಮತ್ತು ಶುಕ್ರವಾರ ಕಲಾಪದ ಉತ್ಪಾದಕತೆ ಹೆಚ್ಚಾಗಿದ್ದು, ಕಲಾಪ ಸಹಜ ಸ್ಥಿತಿಗೆ ಮರಳುವ ಆಶಾವಾದ ಹುಟ್ಟಿಸಿದೆ. ಮಳೆಗಾಲದ ಅಧಿವೇಶನದ ಕೊನೆಯ ಕಲಾಪದ ದಿನದ 12 ಸದಸ್ಯರು ಸದನದಲ್ಲಿ ಅಸಾಂಸದೀಯ ನಡವಳಿಕೆ ಪ್ರದರ್ಶಿಸಿದ್ದರು. ಈ ಕುರಿತು ತನಿಖೆ ಆದೇಶಿಸಿದ್ದ ರಾಜ್ಯಸಭೆ ಅಧ್ಯಕ್ಷರು ತಪ್ಪಿತಸ್ಥರ ವಿರುದ್ಧ ಚಳಿಗಾಲದ ಅಧಿವೇಶನ ಶುರುವಾಗುತ್ತಿದಂತೆ ಕ್ರಮ ಜರುಗಿಸಿದ್ದರು. ಕಳೆದವಾರ ಕಲಾಪಕ್ಕೆಂದು ನಿಗದಿಯಾಗಿದ್ದ ಸಮಯದಲ್ಲಿ 47.70% ಸಮಯ ಮಾತ್ರ ಕಲಾಪ ನಡೆದಿತ್ತು. ಆದಾಗ್ಯೂ, ಗುರುವಾರ ನಿಗದಿಯಾದ ಸಮಯ ಮೀರಿ

33 ನಿಮಿಷ ಕಲಾಪ ನಡೆದಿತ್ತು. ಇದು ಉತ್ಪಾದಕತೆಯನ್ನು 49.70%ಕ್ಕೆ ಏರಿಕೆ ಮಾಡಿದೆ. ಗುರುವಾರ ಮತ್ತು ಶುಕ್ರವಾರ ಉತ್ಪಾದಕತೆ ಶೇಕಡ 95 ಮತ್ತು ಶೇಕಡ 100 ದಾಖಲಾಗಿತ್ತು.

ಆಧಾರ: ವಿಜಯವಾಣಿ, ದಿನಾಂಕ: 06.12.2021

## 24. ವಿರೋಧ ಪಕ್ಷಗಳ ಗದ್ದಲ : ರಾಜ್ಯಸಭೆ ಕಲಾಪ ಮುಂದೂಡಿಕೆ

ಸಂಸದರ ಅಮಾನತ್ತು ಹಿಂಪಡೆಯುವಂತೆ ರಾಜ್ಯಸಭೆಯಲ್ಲಿ ವಿರೋಧ ಪಕ್ಷಗಳು ಭಾರಿ ಗದ್ದಲ ಎಬ್ಬಿಸಿವೆ. ಕೊನೆ ತನಕವೂ ಗದ್ದಲವನ್ನು ಕಡಿಮೆ ಮಾಡಲು ಸಾಧ್ಯವಾಗಲಿಲ್ಲ. ಹೀಗಾಗಿ ಕಲಾಪವನ್ನು ಮುಂದೂಡಲಾಯಿತು.

**ಗದ್ದಲದೊಂದಿಗೆ ಆರಂಭ:** 11 ಗಂಟೆಗೆ ಕಲಾಪ ಆರಂಭವಾಗುತ್ತಿದ್ದಂತೆ ಪ್ರತಿಪಕ್ಷಗಳ ಗದ್ದಲದಿಂದಾಗಿ ಮೊದಲಿಗೆ ಮಧ್ಯಾಹ್ನ 2 ಗಂಟೆವರೆಗೆ ಸದನವನ್ನು ಮುಂದೂಡಲಾಯಿತು. ಮತ್ತೆ 3 ಗಂಟೆಗೆ ಮುಂದೂಡಲಾಯಿತು. ಬಳಿಕ ಬಾಡಿಗೆ ತಾಯ್ತನ ಮಸೂದೆಯ ವಿಚಾರವಾಗಿ ಚರ್ಚೆ ಆರಂಭವಾಗುತ್ತಿದ್ದಂತೆ ಪ್ರತಿಪಕ್ಷಗಳ ಪ್ರತಿಭಟನೆ ನಡೆಸಿದವು.

**ಖರ್ಗೆ ಖಡಕ್ ಪ್ರಶ್ನೆ:** ವಿರೋಧ ಪಕ್ಷದ ನಾಯಕ ಮಲ್ಲಿಕಾರ್ಜುನ ಖರ್ಗೆ ಕಲಾಪದಿಂದ 12 ಮಂದಿ ಸಂಸದರನ್ನು ಅಮಾನತ್ತು ಮಾಡಿರುವ ವಿಚಾರವನ್ನು ಪ್ರಸ್ತಪಿಸಿದರು. ಆರ್‌ಜೆಡಿ ಸಂಸದ ಮನೋಜ್ ಝಾ ಕೂಡ ಅಮಾನತ್ತು ಆದೇಶವನ್ನು ಹಿಂಪಡೆಯುವಂತೆ ಕೋರಿದು. ಈ ವೇಳ ಸಭಾಪತಿ ಇಬ್ಬರ ಮನವಿಯನ್ನು ತಿರಸ್ಕರಿಸಿದರು.

**ಘೋಷಣೆ ಕೂಗಿದ ಕೈ ನಾಯಕರು :** ಇದೇ ವಿಚಾರವಾಗಿ ಪರಿಸರ ಖಾತೆ ಸಚಿವ ಭೂಪೇಂದರ್ ಯಾದವ್ ಮಾತನಾಡಲು ಮುಂದಾಗುತ್ತಿದ್ದಂತೆ ಕಾಂಗ್ರೆಸ್ ನಾಯಕ ಜೈರಾಮ್ ರಮೇಶ್ ಮಧ್ಯೆ ಪ್ರವೇಶಿಸಿ ಘೋಷಣೆ ಕೂಗಲು ಆರಂಭಿಸಿದರು. ಈ ವೇಳೆ ಉಪ ಸಭಾಪತಿ ಸದನವನ್ನು ಒಂದು ದಿನಕ್ಕೆ ಮುಂದೂಡಿದರು. ಆಡಳಿತ ಪಕ್ಷದ ಸದಸ್ಯರು, ಅಮಾನತ್ತುಗೊಂಡಿರುವ ಸದಸ್ಯರು ಕ್ಷಮೆಯಾಚಿಸಬೇಕೆಂದು ಪಟ್ಟು ಹಿಡಿದರೆ, ವಿರೋಧ ಪಕ್ಷದ ಸದಸ್ಯರು ಕ್ಷಮೆ ಕೇಳುವ ಅಗತ್ಯವಿಲ್ಲ, ಅಮಾನತ್ತು ಆದೇಶವನ್ನು ಹಿಂಪಡೆಯಬೇಕು ಎಂದು ಒತ್ತಾಯಿಸಿದರು.

ಅಮಾನತ್ತುಗೊಂಡವರಲ್ಲಿ ಕಾಂಗ್ರೆಸ್‌ನ 6, ತೃಣಮೂಲ ಕಾಂಗ್ರೆಸ್ ಮತ್ತು ಶಿವಸೇನೆಯ ತಲಾ ಒಬ್ಬರು, ಸಿಪಿಐ ಮತ್ತು ಸಿಪಿಎಂನ ತಲಾ ಒಬ್ಬರು ಸಂಸದರು ಇದ್ದಾರೆ.

**ಕ್ಷಮೆಯಾಚಿದರೆ ಅಮಾನತ್ತು ವಾಪಸ್ :** ಕ್ಷಮೆಯಾಚಿಸಿದರೆ 12 ಮಂದಿ ರಾಜ್ಯಸಭಾ ಸಂಸದರ ಅಮಾನತ್ತನ್ನು ವಾಪಸ್ ಪಡೆಯಲು ಸರ್ಕಾರ ಸಿದ್ಧಿವಿದೆ ಎಂದು ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ್ ಜೋಶಿ ಹೇಳಿದ್ದಾರೆ.

ಸಂಸದರ ಅಮಾನತ್ತು ನಿರ್ಧಾರ ವಾಪಸ್ ಪಡೆಯುವಂತೆ ಪ್ರತಿಪಕ್ಷಗಳಿಂದ ಭಾರಿ ಪ್ರತಿಭಟನೆ ವ್ಯಕ್ತವಾಗುತ್ತಿರುವ ಬೆನ್ನಲ್ಲೇ ಅವರು ಈ ಹೇಳಿಕೆ ನೀಡಿದ್ದಾರೆ. ಸಂಸದರನ್ನು ಏಕೆ ಅಮಾನತ್ತು ಮಾಡಲಾಗಿದೆ ಎಂಬುದನ್ನು ನಾವು ವಿವರಿಸಿದ್ದೇವೆ. ಏನು ನಡೆದಿತ್ತು ಎಂಬುದಕ್ಕೆ ದೇಶವೇ ಸಾಕ್ಷಿಯಾಗಿದೆ. ಅದು ದಾಖಲೆಗಳಲ್ಲಿಯೂ ಇದೆ. ಇವತ್ತಾದರೂ ಸರಿ, ಅವರು ಕ್ಷಮೆ ಯಾಚಿಸಿದರೆ ಅಮಾನತ್ತು ನಿರ್ಧಾರ ವಾಪಸ್ ಪಡೆಯಲು ಸಿದ್ಧರಿದ್ದೇವೆ ಎಂದು ಜೋಶಿ ಹೇಳಿದ್ದಾರೆ. ಈ ಮಧ್ಯೆ, ಸಂಸದರ ಅಮಾನತ್ತು ಹಿಂಪಡೆಯುವಂತೆ ಆಗ್ರಹಿಸಿ ಪ್ರತಿಪಕ್ಷಗಳು ಸಂಸತ್‌ನಲ್ಲಿ ಧರಣಿ ನಡೆಸಿವೆ.

ಆಧಾರ: ವಿಶ್ವವಾಣಿ, ದಿನಾಂಕ: 08.12.2021

## 25. ಜಡ್ಜ್ ವೇತನ ತಿದ್ದುಪಡಿಗೆ ಒಪ್ಪಿಗೆ

ಹೈಕೋರ್ಟ್ ಮತ್ತು ಸುಪ್ರೀಂಕೋರ್ಟ್ ನ್ಯಾಯಮೂರ್ತಿಗಳ (ಸೇವಾ ವೇತನ ಮತ್ತು ಷರತ್ತುಗಳು) ತಿದ್ದುಪಡಿ ಮಸೂದೆಯನ್ನು ಲೋಕಸಭೆ ಅನುಮೋದಿಸಿದೆ. ಹಿಂದಿದ್ದ ಕಾಯ್ದೆಗಳ ಪ್ರಕಾರ ಎಲ್ಲಾ ನಿವೃತ್ತ ನ್ಯಾಯಾಧೀಶರು ಮತ್ತು ಅವರ ಕುಟುಂಬ ಸದಸ್ಯರು ಪಿಂಚಣಿ ಅಥವಾ ಕುಟುಂಬ ಪಿಂಚಣಿಗೆ ಅರ್ಹರಾಗಿದ್ದರು. ಅವರ ವೇತನ ಪ್ರಮಾಣಕ್ಕೆ ಅನುಗುಣವಾಗಿ ನಿರ್ದಿಷ್ಟ ವಯಸ್ಸನ್ನು ತಲುಪಿದಾಗ ಹೆಚ್ಚುವರಿ ಪ್ರಮಾಣದ ಪಿಂಚಣಿ ಅಥವಾ ಕುಟುಂಬ ಪಿಂಚಣಿಗೆ ಅರ್ಹರಾಗುತ್ತಾರೆ. ಲೋಕಸಭೆ ಅನುಮೋದನೆಗೊಳಿಸಿದ ತಿದ್ದುಪಡಿ ಮಸೂದೆಯು – ನ್ಯಾಯಾಧೀಶ ಅಥವಾ ಕುಟುಂಬ ಸದಸ್ಯರು, ಹೆಚ್ಚುವರಿ ಪಿಂಚಣಿಗೆ ಅರ್ಹರಾಗುವ ನಿರ್ದಿಷ್ಟ ಕನಿಷ್ಠ ವಯಸ್ಸನ್ನು ಪೂರ್ಣಗೊಳಿಸಿದ ತಿಂಗಳ ಮೊದಲ ದಿನದಿಂದ ಹೆಚ್ಚುವರಿ ಪಿಂಚಣಿಗೆ ಅರ್ಹರಾಗುತ್ತಾರೆ ಎಂದು ಸ್ಪಷ್ಟಪಡಿಸಿದೆ. ನ್ಯಾಯಾಧೀಶರ ವೇತನ ಮತ್ತು ಪಿಂಚಣಿ ಪಡೆಯುವ ಅರ್ಹತೆಯನ್ನು ಮೊಟಕುಗೊಳಿಸುತ್ತಿಲ್ಲ. ಶಾಸಕಾಂಗದ ಉದ್ದೇಶವನ್ನು ಇಲ್ಲಿ ಸ್ಪಷ್ಟಪಡಿಸುತ್ತಿದ್ದೇವೆ. ಸದನದ ಶಾಸಕಾಂಗ ಶ್ರೇಷ್ಠತೆಯನ್ನು ಯಾರೂ ಪ್ರಶ್ನಿಸಲಾಗುವುದಿಲ್ಲ. ಅಸ್ಸಾಂ ಹೈಕೋರ್ಟ್ ತೀರ್ಪಿನ ಆಧಾರದಲ್ಲಿ ಕ್ರಮ ಕೈಗೊಂಡರೆ, ಅಖಿಲ ಭಾರತ ಸೇವೆಯಲ್ಲಿರುವ ಎಲ್ಲರೂ ಪಿಂಚಣಿ ವಿಷಯದಲ್ಲಿ ಒತ್ತಡ ಹೇರಲಾರಂಭಿಸುತ್ತಾರೆ. ಇದು ಸರ್ಕಾರಕ್ಕೆ ಅತಿದೊಡ್ಡ ಹೊರೆಯಾಗಲಿದೆ ಎಂದು ಸಚಿವ ಕಿರಣ್ ರಿಜಿಜು ಹೇಳಿದ್ದಾರೆ.

**ಸಿಲಿಂಡರ್ ತೂಕ ಇಳಿಸಲು ಚಿಂತನೆ :** ಯುವತಿಯರು ಮತ್ತು ಮಹಿಳೆಯರಿಗೆ ಅನುಕೂಲವಾಗುವ ದೃಷ್ಟಿಯಿಂದ ಎಲ್‌ಪಿಜಿ ಸಿಲಿಂಡರ್‌ಗಳ ತೂಕ ಕಡಿಮೆ ಮಾಡಲು ಕೇಂದ್ರ ಸರ್ಕಾರ ಚಿಂತನೆ ನಡೆಸಿದೆ. ಈ ಬಗ್ಗೆ ಸಂಸತ್ತಿಗೆ ತಿಳಿಸಿರುವ ಕೇಂದ್ರ ಪೆಟ್ರೋಲಿಯಂ ಮತ್ತು ನೈಸರ್ಗಿಕ ಇಂಧನ ಸಚಿವ ಹರ್ದೀಪ್ ಸಿಂಗ್ ಪುರಿ, ಹೆಣ್ಣುಮಕ್ಕಳಿಗೆ ಸಿಲಿಂಡರ್‌ಗಳ ವಿಪರೀತ ಭಾರ ಹೊರಲು ಕಷ್ಟವಾಗುತ್ತಿದೆ. ಹೀಗಾಗಿ ಇದಕ್ಕೊಂದು ಪರಿಹಾರದ ಯೋಚನೆಯಲ್ಲಿದ್ದೇವೆ. ಸಿಲಿಂಡರ್ ತೂಕವನ್ನು 14.2 ಕೆ.ಜಿ.ಯಿಂದ 5 ಕೆಜಿಗೆ ಇಳಿಸುವ ಚಿಂತನೆಯೂ ಇದೆ. ಈ ಬಗ್ಗೆ ಸೂಕ್ತ ಕ್ರಮಕೈಗೊಳ್ಳಲಿದ್ದೇವೆ ಎಂದು ತಿಳಿಸಿದ್ದಾರೆ.

**ಸಂಸತ್‌ಗೆ ಸರ್ಕಾರದ ಮಾಹಿತಿ:**

- ಕಳೆದ ಸಾಲಿನಲ್ಲಿ 3,54 ಲಕ್ಷ ಟನ್ ಇ–ತ್ಯಾಜ್ಯ ಸಂಗ್ರಹಿಸಿ ಸಂಸ್ಕರಿಸಲಾಗಿದೆ. ಅದಕ್ಕೂ ಹಿಂದಿನ ಆರ್ಥಿಕ ವರ್ಷದಲ್ಲಿ 2.24 ಲಕ್ಷ ಇ–ತ್ಯಾಜ್ಯ ಸಂಗ್ರಹವಾಗಿತ್ತು.
- 2020 ರಲ್ಲಿ 9,849 ಯುಆರ್‌ಎಲ್‌ಗಳನ್ನು ತಡೆಹಿಡಿಯಲಾಗಿದೆ. ಇದಕ್ಕೂ ಹಿಂದಿನ ವರ್ಷ 3,635 ಯುಆರ್‌ಎಲ್‌ಗಳನ್ನು ಬ್ಲಾಕ್ ಮಾಡಲಾಗಿತ್ತು. ಐಟಿ ಕಾಯ್ದೆ ಅನ್ವಯ ಈ ಕ್ರಮ ಕೈಗೊಳ್ಳಲಾಗಿದೆ.
- ಜಮ್ಮು–ಕಾಶ್ಮೀರದ ವಿಶೇಷ ಸ್ಥಾನಮಾನ ರದ್ದತಿಯ ನಂತರ ಅಲ್ಲಿ 96 ನಾಗರಿಕರು, 366 ಉಗ್ರಗಾಮಿಗಳು ಸಾವನ್ನಪ್ಪಿದ್ದಾರೆ. 81 ಯೋಧರು ಹುತಾತ್ಮರಾಗಿದ್ದಾರೆ.
- ದೇಶದ ಶೇ.93ಕ್ಕೂ ಹೆಚ್ಚು ಗ್ರಾಂಕ್ಕೆ 3ಜಿ ಮತ್ತು 4ಜಿ ಬ್ರಾಡ್‌ಬ್ಯಾಂಡ್ ಇಂಟರ್‌ನೆಟ್ ಸೇವೆ ಲಭ್ಯವಾಗುತ್ತಿದೆ.
- 28 ರಾಜ್ಯಗಳ 256 ಜಿಲ್ಲೆಗಳ 1.26 ಲಕ್ಷ ಚಿನ್ನಾಭರಣ ಮಳಿಗೆಗಳು ಹಾಲ್‌ಮಾರ್ಕ್‌ಗೆ ನೋಂದಣಿ ಮಾಡಿಕೊಂಡಿದೆ.
- 2021–22ನೇ ಕಬ್ಬಿನ ಋತುವಿನಲ್ಲಿ ಸಕ್ಕರೆ ಕಾರ್ಖಾನೆಗಳು 30 ಲಕ್ಷ ಟನ್ ಸಕ್ಕರೆ ರಫ್ತು ಮಾಡುವ ಒಪ್ಪಂದಕ್ಕೆ ಸಹಿ ಹಾಕಿವೆ. 2020–21ರಲ್ಲಿ ಈ ಪ್ರಮಾಣ 70 ಲಕ್ಷ ಟನ್ ಇತ್ತು.

- ➢ 12 ಸಂಸದರ ಅಮಾನತ್ತು ಹಿಂಪಡೆಯಬೇಕು ಎಂದು ಪ್ರತಿಪಕ್ಷಗಳು ಗದ್ದಲ ನಡೆಸಿದ ಕಾರಣ ರಾಜ್ಯಸಭೆಯ ಕಲಾಪವನ್ನು ಕೆಲವು ಕಾಲ ಮುಂದೂಡಲಾಗಿತ್ತು.

**ಅನುಮೋದನೆಗೊಂಡ ಮಸೂದೆಗಳು**

- ➢ ಅಣೆಕಟ್ಟು ಸುರಕ್ಷತಾ ಮಸೂದೆಗೆ ಲೋಕಸಭೆ ಒಪ್ಪಿಗೆ ನೀಡಿದೆ. ಈ ವಿಧೇಯಕಕ್ಕೆ ರಾಜ್ಯಸಭೆ ಡಿ. 2ರಂದೇ ಸಮ್ಮತಿಸಿತ್ತು.
- ➢ ನೆರವಿನ ಸಂತಾನೋತ್ಪತ್ತಿ ತಂತ್ರಜ್ಞಾನ ಚಿಕಿತ್ಸಾಲಯಗಳನ್ನು ನಿಯಂತ್ರಿಸುವ ವಿಧೇಯಕಕ್ಕೆ ರಾಜ್ಯಸಭೆ ಒಪ್ಪಿಗೆ.
- ➢ ಬಾಡಿಗೆ ತಾಯ್ತನದ ನಿಯಮ ಬಿಗಿಗೊಳಿಸಿದ ತಿದ್ದುಪಡಿಗೆ ರಾಜ್ಯಸಭೆ ಅನುಮೋದನೆ.

ಆಧಾರ: ವಿಜಯವಾಣಿ, ದಿನಾಂಕ: 09.12.2021

## 26. House panel recommends more subsidy for e-vehicles

A Parlimentary panel has recommended the government to give more subsidies and incentives to electric vehicles to accelerate the transition to electric mobility.

India is primarily a two-wheeler (2w) driven market, with almost 22 million sales per year. The government recently under FAME-II (Faster Adoption and Manufacturing of Hybird and Electric vehicles in India) scheme has increased the subsidy/incentive from Rs 10,000/-per Kwh(Kilowatt hour) to Rs 15,000/- per Kwh, and the cap on incentive for electric two-wheelers increased from 20% to 40% of the cost of vehicles. The committee hopes that the increase in subsidy and the ceiling limit would help in demand creation int the electric vehicle segment, the panel said.

The Department Related Standing Committee on Industry in its report on ‘Electric and Hybird Mobility-Prospects and challenges in Automobile Industry’, said, the scope of the FAME-II should be broadened to include funding/grants for electrified vehicle components development and R&D, Development of components for charging infrastructure & capital subsidy/incentive for manufacturing e-vehicles components.

The panel suggested that sub-meter or separate meter arrangements may be installed for billing the charging point used exclusively for EV charging by domestic consumers to keep the electricity bill affordable to encourage potential buyers to go for EVs.

“To improve the mobility services, it is advisable to have a live database of active charging stations installed all over the vountry and the locations readily available for the consumers for their reference enabling them to easily track the nearest charging station at times of need while on the move. The committee, therefore, urges that the government may put in place such a facility for enhancing the e-mobility services,” the panel said.

Courtesy:Deccan Herald, Dated:13.12.2021

## 27. Varun proposes private members'bill on MSP

After backing farmers in their protest against the contentious farm laws, BJP MP Varun Gandhi has now put his weight behind a law for providing legal backing for Minimum Support Price (MSP) for crops with annual financial outlay of Rs1 lakh crore through a bill he proposes to place in Parliament.

He placed the bill, which he believes to be an "actionable piece of legislation", in public domain and welcomed "any critique" of it.

"India's farmers and her governments have long debated the agricultural crisis, in & out of commissions. The time has come for an MSP law. I have created and submitted to parliament what I believe to be an actionable piece of legislation," he said.

The bill proposed by Gandhi envisages guaranteed realization of MSP for 22 agricultural commodities with an option of more inclusions on need basis. The MSP should be set at a profit margin of 50% over the comprehensive cost of production, which includes actual paid expenses on inputs, value of unpaid family labour, and forgone rentals on farmland and fixed agricultural assets, as recommended by the Swaminathan Committee in 2006, the bill proposes.

"A close look at acreage and declared MSP, especially for pulses and oilseeds in recent years, illustrate that MSP has limited impact on acreage under a crop, as farmers have inadequate information and Government procurement agencies have focused comparatively more on selected crops in selected geographies," he says in the Statements of object and Reasons of the proposed bill.

The bill proposes price announcements two months before the start of the harvest season to help farmers plan their woeing in advance and a separate Department under the Misnistry of Agriculture and Farmers Welfare for the Implementation of the law.

It also demands establishing well-equipped procurement ceentres and creation of supply chain infrastructure.

Courtesy:Deccan Herald, Dated:13.12.2021

## 28. LS okays NDPS (Amendment) Bill

The Centre passed the Narcotic Drugs and Psychotropic Substances (NDPS), Amendment Bill, 2021 to replace a drafting error in the amendment to the Act in 2014.

The Bill replaces an Ordinance promulgated by President Ram Nath Kovind in September this year, which was brought to rectify the error. Due to the drafting error, a penal section of the anti-drug law for financing illicit drug activities did not find its way into the amendment.

Several Opposition MPs including Congress MP Manish Tewari and BJD MP Bhatruhari Mahtab raised questions and opposed the Bill on several grounds, including the

## 8. ಜಮ್ಮುವಿಗೆ ಮೆಟ್ರೋ ಸೇವೆ

ಜಮ್ಮುವಿಗೆ ಮೆಟ್ರೋ ವಿಸ್ತೃತ ವಿಮಾನ ನಿಲ್ದಾಣ ಸಹಿತ ಹೆಲಿಕಾಪ್ಟರ್ ಸೇವೆ ಸಿಗಲಿದೆ ಕೇಂದ್ರ ಗೃಹ ಸಚಿವ ಅಮಿತ್ ಶಾ ಈ ಘೋಷಣೆ ಮಾಡಿದ್ದಾರೆ.

ಜಮ್ಮು ಮತ್ತು ಕಾಶ್ಮೀರದ ಮೂರು ದಿನಗಳ ಭೇಟಿಯಲ್ಲಿರುವ ಅವರು ಶ್ರೀನಗರ ಸಮೀಪ ಇರುವ ಭಗವತಿ ನಗರ ಎಂಬಲ್ಲಿ ಆಯೋಜಿಸಲಾಗಿದ್ದ ಸಾರ್ವಜನಿಕ ಕಾರ್ಯಕ್ರಮದಲ್ಲಿ ಗೃಹ ಸಚಿವರು ಈ ಘೋಷಣೆ ಮಾಡಿದ್ದಾರೆ. ಜಮ್ಮುವಿನಲ್ಲಿ ಸದ್ಯ ಇರುವ ವಿಮಾನ ನಿಲ್ದಾಣವನ್ನು ವಿಸ್ತರಿಸಲಾಗುತ್ತದೆ. ಈ ಸಂದರ್ಭದಲ್ಲಿ ಹೆಲಿಕಾಪ್ಟರ್ ಸೇವೆಗಳನ್ನು ಆರಂಭಿಸಲು ಸಾಧ್ಯವಾಗುತ್ತದೆ. ಇದರ ಜೊತೆಗೆ ಕೇಂದ್ರಾಡಳಿತ ಪ್ರದೇಶದ ಪ್ರತಿ ಜಿಲ್ಲೆಯಲ್ಲಿ ಕೂಡ ಹೆಲಿಕಾಪ್ಟರ್ ಸೇವೆಗಳನ್ನು ಆರಂಭಿಸಲು ಇದರಿಂದ ನೆರವಾಗಲಿದೆ ಎಂದರು ಗೃಹ ಸಚಿವರು. ಇದರ ಜೊತೆಗೆ ಜಮ್ಮುವಿಗೆ ಮೆಟ್ರೋ ರೈಲು ಸೇವೆ ನೀಡುವ ಬಗ್ಗೆಯೂ ವಾಗ್ದಾನ ಮಾಡಿದ್ದಾರೆ.

**ತಡೆಯಲು ಸಾಧ್ಯವಿಲ್ಲ:** ಕೇಂದ್ರಾಡಳಿತ ಪ್ರದೇಶದಲ್ಲಿ ಸದ್ಯ ನಡೆಯುತ್ತಿರುವ ಅಭಿವೃದ್ಧಿಯ ಸರಣಿ ಮತ್ತು ಶಾಂತಿ–ನೆಮ್ಮದಿಯನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ ಎಂದು ಕೇಂದ್ರ ಗೃಹ ಸಚಿವರು ಪ್ರತಿಪಾದಿಸಿದ್ದಾರೆ. ಹಿಂದಿನ ಅವಧಿಗಳಲ್ಲಿ ಜಮ್ಮು ಮತ್ತು ಕಾಶ್ಮೀರ, ಲಡಾಖ್‌ಗಳಿಗೆ ಅಭಿವೃದ್ಧಿ ಕಾಮಗಾರಿಗಳಲ್ಲಿ ಅನ್ಯಾಯ ಉಂಟಾಗುತ್ತಿತ್ತು. ಆದರೆ, ಈಗ ಪರಿಸ್ಥಿ ಹಾಗಿಲ್ಲ ಎಂದಿದ್ದಾರೆ.

**ಭಾರೀ ಬಂಡವಾಳ:** ಕೇಂದ್ರಾಡಳಿತ ಪ್ರದೇಶಕ್ಕೆ ಈಗಾಗಲೇ ರೂ.12 ಸಾವಿರ ಕೋಟಿ ಮೌಲ್ಯದ ಬಂಡವಾಳ ಹೂಡಿಕೆ ಪ್ರಸ್ತಾಪ ಬಂದಿದೆ. 2022ರ ವರ್ಷಾಂತ್ಯಕ್ಕೆ ರೂ.51 ಸಾವಿರ ಕೋಟಿ ಮೌಲ್ಯದ ಬಂಡವಾಳ ಹೂಡಿಕೆ ಬರಲಿದೆ ಎಂದರು ಗೃಹ ಸಚಿವರು. ಕಾಂಗ್ರೆಸ್ ಮತ್ತು ಎನ್‌ಸಿಪಿಯ ಹೆಸರೂ ಪ್ರಸ್ತಾಪಿಸದೆ, ಕೇಂದ್ರಾಡಳಿತ ಪ್ರದೇಶದಲ್ಲಿ ಅಭಿವೃದ್ಧಿ ಕುಂಠಿತವಾಗಲು ಕುಟುಂಬಗಳೇ ಕಾರಣ ಎಂದು ಟೀಕಿಸಿದರು.

2004 ರಿಂದ 2014ರ ಅವಧಿಯಲ್ಲಿ 2,081 ಮಂದಿ ನಾಗರಿಕರು ಅಸುನೀಗಿದ್ದಾರೆ. ಅಂದರೆ, ಸರಾಸತಿ ವರ್ಷವೊಂದಕ್ಕೆ 239 ಮಂದಿ ಅಸು ನೀಗಿದಂತಾಗಿದೆ ಎಂದರು. ಇದಕ್ಕೂ ಮೊದಲು ಗೃಹ ಸಚಿವರು ಗುರುದ್ವಾರಕ್ಕೆ ಭೇಟಿ ನೀಡಿ ಪ್ರಾರ್ಥನೆ ಸಲ್ಲಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:25.10.2021

## 9. ಆರೋಗ್ಯ ಮರೆತಿದ್ದ ಸರ್ಕಾರಗಳು

ದೀರ್ಘಾವಧಿಯಿಂದ ದೇಶದಲ್ಲಿ ಆಡಳಿತ ನಡೆಸಿದವರು, ಆರೋಗ್ಯ ಸೇವೆಯನ್ನು ಎಲ್ಲ ರೀತಿಯ ಅಭಿವೃದ್ಧಿ ಕಾರ್ಯಗಳಿಂದಲೂ ಹೊರಗಿಟ್ಟಿದ್ದರು. ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಆಸ್ಪತ್ರೆಯನ್ನು ನಿರ್ಮಿಸಲಿಲ್ಲ. ಬೇಕಾದಷ್ಟು ವೈದ್ಯರನ್ನು ನೀಡಲಿಲ್ಲ. ಬ್ಲಾಕ್ ಮಟ್ಟದಲ್ಲಿ ಪರೀಕ್ಷಾ ಕೇಂದ್ರಗಳನ್ನು ಸ್ಥಾಪಿಸಲಿಲ್ಲ. ಈ ಎಲ್ಲ ಕೊರತೆಗಳನ್ನು ನೀಗಿಸುವ ನಿಟ್ಟಿನಲ್ಲಿ ನಾವು ಹೆಜ್ಜೆಯಿಟ್ಟಿದ್ದೇವೆ.

ಇದು ಪ್ರಧಾನಿ ನರೇಂದ್ರ ಮೋದಿಯವರ ಮಾತುಗಳು ಉತ್ತರಪ್ರದೇಶದ ವಾರಾಣಾಸಿಯಲ್ಲಿ ರೂ.64 ಸಾವಿರ ಕೋಟಿ ಮೊತ್ತದ ಆಯುಷ್ಮಾನ್ ಭಾರತ್ ಆರೋಗ್ಯ ಮೂಲಸೌಕರ್ಯ ಯೋಜನೆಗೆ ಚಾಲನೆ ನೀಡಿ ಅವರು ಈ ಮಾತುಗಳನ್ನಾಡಿದ್ದಾರೆ. ಇದಲ್ಲದೇ ತಮ್ಮ ಲೋಕಸಭಾ ಕ್ಷೇತ್ರವಾದ ವಾರಾಣಾಸಿಯಲ್ಲಿ ರೂ.5,200 ಕೋಟಿ ವೆಚ್ಚದ ವಿವಿಧ ಅಭಿವೃದ್ಧಿ ಯೋಜನೆಗಳಿಗೂ ಅವರು ಚಾಲನೆ ನೀಡಿದ್ದಾರೆ. ಮುಂದಿನ ವರ್ಷದ ವಿಧಾನಸಭೆ ಚುನಾವಣೆ ಹಿನ್ನೆಲೆಯಲ್ಲಿ ಈ ಪ್ರವಾಸ ಮಹತ್ವದ್ದಾಗಿದೆ. ಪೂರ್ವಾಂಚಲ ವ್ಯಾಪ್ತಿಯ 28 ಜಿಲ್ಲೆಗಳ 164 ವಿಧಾನಸಭಾ ಕ್ಷೇತ್ರಗಳ ಪೈಕಿ 125ರಲ್ಲಿ 2017ರ ಚುನಾವಣೆಯಲ್ಲಿ ಬಿಜೆಪಿ ಜಯ ಸಾಧಿಸಿತ್ತು.

ಆಯುಷ್ಮಾನ್ ಭಾರತ್ ಆರೋಗ್ಯ ಮೂಲ ಸೌಕರ್ಯ ಮಿಷನ್ ಎಂಬುದು ದೇಶದ ಆರೋಗ್ಯ ಮೂಲಸೌಕರ್ಯವನ್ನು ಬಲಿಷ್ಠಗೊಳಿಸುವ ಅತಿದೊಡ್ಡ ದೇಶವ್ಯಾಪಿ ಯೋಜನೆಯಾಗಿದೆ ಇದರಿಂದ ಭವಿಷ್ಯದ ಸೋಂಕುಗಳನ್ನು ಎದುರಿಸಲು ಹಾಗೂ ಆರೋಗ್ಯ ಕ್ಷೇತ್ರದಲ್ಲಿ ಸ್ವಾವಲಂಬನೆ ಸಾಧಿಸಲು ನೆರವಾಗಲಿದೆ ಎಂದು ಮೋದಿ ಹೇಳಿದ್ದಾರೆ.

ಆರೋಗ್ಯ (ಯೋಗಕ್ಷೇಮ) ಎನ್ನುವುದು ಎಲ್ಲದಕ್ಕೂ ಮೂಲವಾಗಿದೆ. ದೇಹವನ್ನು ಆರೋಗ್ಯವಾಗಿಡಲು ಮಾಡುವ ಹೂಡಿಕೆಯು ಯಾವತ್ತು ಅತ್ಯುತ್ತಮ ಹೂಡಿಕೆ ಎಂದೆ ಪರಿಗಣಿಸಲ್ಪಡುತ್ತದೆ. ಸ್ವಾತಂತ್ರ್ಯಾ ನಂತರ ಈ ನಿಟ್ಟಿನಲ್ಲಿ ಸಾಕಷ್ಟು ಕೆಲಸಗಳಾಗಿಲ್ಲ ಎಂದು ಅವರು ಹೇಳಿದ್ದಾರೆ.

**ಸರ್ಕಾರದ ಗುರಿಯೇನು:** ನಾವು ಮುಂದಿನ 4 ವರ್ಷಗಳಲ್ಲಿ ಗ್ರಾಮಮಟ್ಟದಿಂದ ಬ್ಲಾಕ್ ಮಟ್ಟ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಆರೋಗ್ಯ ಸೇವಾ ಜಾಲವನ್ನು ಬಲಿಷ್ಠಗೊಳಿಸುವ ಗುರಿ ಹಾಕಿಕೊಂಡಿದ್ದೇವೆ. ಅದರಲ್ಲೂ ಈಶಾನ್ಯ ರಾಜ್ಯಗಳಿಗೆ ಹೆಚ್ಚಿನ ಆದ್ಯತೆ ನೀಡಲಿದ್ದೇವೆ ಎಂದಿದ್ದಾರೆ ಮೋದಿ. ಮೊದಲಿಗೆ ಗ್ರಾಮೀಣ ಪ್ರದೇಶಗಳಲ್ಲಿ ರೋಗ ಪತ್ತೆ ಮತ್ತು ಚಿಕಿತ್ಸೆಗಾಗಿ ವಿಸ್ತೃತ ಆರೋಗ್ಯ ಮತ್ತು ಕ್ಷೇಮಾಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಲಾಗುವುದು. ನಂತರ, ದೊಡ್ಡ ದೊಡ್ಡ ಮಟ್ಟದ ಪರೀಕ್ಷಾ ಜಾಲವನ್ನು ರಚಿಸಲಾಗುವುದು. ಮೂರನೇಯದಾಗಿ ದೇಶದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಪ್ರಯೋಗಾಲಯಗಳನ್ನು ಸುಧಾರಿಸಲಾಗುವುದು ಎಂದು ಮೋದಿ ತಿಳಿಸಿದ್ದಾರೆ.

**ಸಾಕಷ್ಟು ಉದ್ಯೋಗಾವಾಕಾಶ:** ಈ ಎಲ್ಲ ಆರೋಗ್ಯ ಮೂಲ ಸೌಕರ್ಯಗಳ ಸ್ಥಾಪನೆಯಿಂದಾಗಿ ವೈದ್ಯರು, ಅರೆವೈದ್ಯಕೀಯ ಸಿಬ್ಬಂದಿ ಲ್ಯಾಬ್‌ಗಳು, ಫಾರ್ಮಸಿಗಳು, ಸಾರಿಗೆ ಕ್ಷೇತ್ರದಲ್ಲಿ ಸಾಕಷ್ಟು ಉದ್ಯೋಗಾವಕಾಶ ಸೃಷ್ಟಿಯಾಗಲಿದೆ. ಒಂದು ದೊಡ್ಡ ಆಸ್ಪತ್ರೆ ತಲೆಎತ್ತಿದೊಡನೆ, ಅದರ ಸುತ್ತಮುತ್ತಲಿನ ಪ್ರದೇಶಗಳು ಅಭಿವೃದ್ಧಿ ಹೊಂದುತ್ತವೆ ಮತ್ತು ಹಣಕಾಸು ಚಟುವಟಿಕೆಗಳ ಕೇಂದ್ರಗಳಾಗಿ ಮಾರ್ಪಾಟಾಗುತ್ತದೆ ಎಂದಿದ್ದಾರೆ ಪ್ರಧಾನಿ.

ಆಧಾರ: ಉದಯವಾಣಿ, ದಿನಾಂಕ:26.10.2021.

## 10. ಕಡತ ಯಜ್ಞದಿಂದ ಕಚೇರಿ ಖಾಲಿ ಖಾಲಿ

ಪ್ರಧಾನಿ ನರೇಂದ್ರ ಮೋದಿಯವರ ಸೂಚನೆಯ ಮೇರೆಗೆ ಎಲ್ಲ ಸರ್ಕಾರಿ ಕಚೇರಿಗಳಲ್ಲಿ ಸಂಸದರ ಕಚೇರಿಗಳಲ್ಲಿ ದೀರ್ಘಕಾಲದಿಂದ ವರ್ಷಾನುವರ್ಷದಿಂದ ಧೂಳು ತಿನ್ನುತ್ತಿದ ಸಾವಿರಾರು ಕಡತಗಳಿಗೆ ಮುಕ್ತಿ ಸಿಕ್ಕಿದೆ. ಅಕ್ಟೋಬರ್‌ರಿಂದಲೇ ಶುರುವಾಗಿರುವ ಈ ಕಡತಯಜ್ಞದಿಂದಾಗಿ ಈ ಎಲ್ಲ ಕಡತಗಳು ಸದ್ಯದಲ್ಲೇ ಪೂರ್ತಿಯಾಗಿ ವಿಲೇವಾರಿಯಾಗಲಿದ್ದು, ಅದರಿಂದ ನಾನಾ ಕಚೇರಿಗಳಲ್ಲಿ ರಾಷ್ಟ್ರಪತಿ ಭವನದ ಎರಡು ಪಟ್ಟು ಜಾಗ ಅಂದರೆ ಸುಮಾರು 4 ಲಕ್ಷ ಚದರ ಅಡಿ ಜಾಗ ಉಪಯೋಗಕ್ಕೆ ಸಿಗಲಿದೆ. ಭಾರತದ ಇತಿಹಾಸದಲ್ಲೇ ಈ ದೊಡ್ಡಮಟ್ಟದ ಕಡತ ಯಜ್ಞ ನಡೆಯುತ್ತಿರುವುದು ಇದೆ ಮೊದಲು ಎಂದು ಹೇಳಲಾಗಿದೆ.

**ಮಾಸಾಂತ್ಯಕ್ಕೆ ಕಡತ "ಮುಕ್ತ... ಮುಕ್ತ... ಮುಕ್ತ" :** ಕಡತ ಯಜ್ಞದಿಂದಾಗಿ ಸರ್ಕಾರಿ ಕಚೇರಿಗಳಲ್ಲಿ ಸಮರೋಪಾದಿಯಲ್ಲಿ ಕೆಲಸಗಳಾಗುತ್ತಿವೆ. ಶೇ.78ರಷ್ಟು ಕಡತಗಳು ವಿಲೇವಾರಿಯಾಗಿದ್ದು, ಸುಮಾರು 3.18 ಲಕ್ಷ ಚದರಡಿ ಜಾಗ ತೆರವಾಗಿದೆ. ಸರಾಗವಾಗಿ ವಿಲೇವಾರಿಯಾಗ ಬಲ್ಲಂಥ 9,31,442 ಕಡತಗಳನ್ನು ಗುರುತು ಮಾಡಲಾಗಿದ್ದು, ಅವು ಕೂಡ ಈ ಮಾಸಾಂತ್ಯದ ಹೊತ್ತಿಗೆ ಕಚೇರಿ ಧೂಳಿನಿಂದ ಮುಕ್ತಿಪಡೆಯಲಿವೆ. ಇಷ್ಟು ವೇಗವಾಗಿ ಕಡತಗಳ ವಿಲೇವಾರಿ ನಾನು ಹಿಂದೆಂದೂ ನೋಡಿರಲಿಲ್ಲ ಎಂದು ಕೇಂದ್ರ ಸರ್ಕಾರಿ ಕಚೇರಿಯೊಂದರ ಅಧಿಕಾರಿಯೊಬ್ಬರು ತಿಳಿಸಿದ್ದಾರೆ.

**ಸಚಿವಾಲಯಗಳಲ್ಲೂ ಯಜ್ಞ:** ವಿವಿಧ ಸರ್ಕಾರಿ ಸಚಿವಾಲಯಗಳಲ್ಲಿ ಸಂಸದರಿಂದ ಹಾಗೂ ಸಂಸದೀಯ ಸಮಿತಿಗಳಿಂದ ಅನುಮೋದನೆಗೊಂಡ ಕಡತಗಳನ್ನು ತ್ವರಿತವಾಗಿ ವಿಲೇವಾರಿ ಗೊಳಿಸಲಾಗುತ್ತದೆ. ಸಂಸದರಿಂದ 10,273 ಕಡತಗಳು ನೆನೆಗುದಿಗೆ ಬಿದ್ದಿರುವುದರ ಬಗ್ಗೆ ಕೇಂದ್ರ ಸರ್ಕಾರ ಮಾಹಿತಿ ಕಲೆಹಾಕಿದೆ. ಇದಕ್ಕೆ ಕಾರಣವನ್ನು 15 ದಿನದೊಳಗೆ ವಿಲೇವಾರಿ ಮಡುವಂತೆ ಸೂಚಿಸಲಾಗಿದೆ. 5,500 ಕಡತಗಳಿಗೆ ಮುಕ್ತಿ ಸಿಕ್ಕಿದೆ. ನೆನೆಗುದಿಗೆ ಬಿದ್ದಿದ ಪ್ರತಿಯೊಂದು ಕಡತಗಳು ವಿಲೇವಾರಿಯಾಗಿರುವುದಕ್ಕೆ ಪತ್ರವೊಂದನ್ನು ಸಿದ್ಧಪಡಿಸಿ. ಆ ಸಚಿವಾಲಯಗಳ ಸಚಿವರು ಸಹಿ ಹಾಕಿ ಕಳುಹಿಸಬೇಕಿದೆ. ಹೆಚ್ಚು ಕಡತಗಳಿದ್ದ ರೈಲ್ವೆ ಸಚಿವ ಅಶ್ವಿನಿ ವೈಷ್ಣವ್ ಹಾಗೂ ಹೆದ್ದಾರಿ ನಿತಿನ್ ಗಡ್ಕರಿ ಈಗ ಇಂಥ ಪತ್ರಗಳ ಸರಣಿಗೆ ಸಹಿ ಹಾಕುವುದರಲ್ಲಿ ಮಗ್ನರಾಗಿದ್ದಾರೆ ಎನ್ನಲಾಗಿದೆ.

ರೈಲ್ವೆ ಇಲಾಖೆಯಲ್ಲಿ ಸಂಸದರಿಂದ ಬಂದಿದ್ದ ಕಡತಗಳು 2,700 ರಷ್ಟಿದ್ದು, 1700ಕ್ಕೆ ಒಪ್ಪಿಗೆ ಸಿಕ್ಕಿದೆ. ಹೆದ್ದಾರಿ ಸಚಿವಾಲಯದಲ್ಲಿ 990 ಇಂಥ ಕಡತಗಳಿದ್ದರೆ ಅವುಗಳಲ್ಲಿ 400 ಕಡತಗಳಿಗೆ ಒಪ್ಪಿಗೆ ನೀಡಲಾಗಿದೆ.

**ರದ್ದಿಯಿಂದ ರೂ.4 ಕೋಟಿ ಆದಾಯ**: ವಿಲೇವಾರಿಗೊಂಡ ಹಳೆಯ ಕಡತಗಳನ್ನು ರದ್ದಿಗೆ ಹಾಕಿದ್ದರಿಂದ ಸುಮಾರು ರೂ.4.29 ಕೋಟಿ ಆದಾಯವು ಸರ್ಕಾರಕ್ಕೆ ಬಂದಿದೆ. ಈ ವಿಚಾರದಲ್ಲಿ ಹೆಚ್ಚು ಆದಾಯ ಬಂದಿರುವುದು ಕೇಂದ್ರ ಪರಿಸರ ಇಲಾಖೆಯಿಂದ ಆ ಇಲಾಖೆಯಿಂದಲೇ ಅತಿ ಹೆಚ್ಚು (99,000) ಕಡತಗಳನ್ನು ರದ್ದಿಗೆ ಹಾಕಲಾಗಿದೆ. ಆ ನಂತರದ ಸ್ಥಾನ, ಕೇಂದ್ರ ಗೃಹ ಇಲಾಖೆಯದ್ದು (81,000) ಹಾಗೂ ರೈಲ್ವೆ ಇಲಾಖೆಯದ್ದು (80,000) ಇನ್ನುಳಿದ ಸ್ಥಾನಗಳಲ್ಲಿ ಸಿಬಿಐ ಹಾಗೂ ಕೇಂದ್ರ ನೇರ ತೆರಿಗೆಗಳ ಮಂಡಳಿ (ತಲಾ 50,000) ಇವೆ.

ಆಧಾರ: ಉದಯವಾಣಿ, ದಿನಾಂಕ:28.10.2021

## 11. ಪೆಗಾಸಸ್ ಕೇಸ್ ತನಿಖೆಗೆ ಆದೇಶ

ಮಹತ್ವದ ಬೆಳವಣಿಗೆಯೊಂದರಲ್ಲಿ, ಇಸ್ರೇಲ್ ಗುಪ್ತಚರ ತಂತ್ರಾಂಶವಾದ ಪೆಗಾಸಸ್ ಬಳಸಿ ಭಾರತದ ರಾಜಕಾರಣಿಗಳು, ಪತ್ರಕರ್ತರು ಹಾಗೂ ಇತರ ಕೆಲವು ಗಣ್ಯರು ಸೇರಿ 300 ಮಂದಿಯ ದೂರವಾಣಿ ಸಂಖ್ಯೆಗಳ ಮೇಲೆ ಗೂಢಚಾರಿಕೆ ನಡೆಸಿದ ಆರೋಪದ ಕುರಿತು ತನಿಖೆ ನಡೆಸಲು ಸುಪ್ರೀಂಕೋರ್ಟ್ ಮೂವರು ತಜ್ಞರ ಸಮಿತಿಯೊಂದನ್ನು ರಚಿಸಿದೆ.

ತನಿಖೆ ಕೋರಿ ಸಲ್ಲಿಸಿದ ಹಲವು ಅರ್ಜಿಗಳ ಕುರಿತು ಮಧ್ಯಂತರ ಆದೇಶ ಹೊರಡಿಸಿದ ಮುಖ್ಯ ನ್ಯಾಯಮೂರ್ತಿ ಎನ್.ವಿ.ರಮಣ ಅವರನ್ನೊಳಗೊಂಡ ನ್ಯಾಯಪೀಠ, ಸರ್ಕಾರ ರಾಷ್ಟ್ರೀಯ ಭದ್ರತೆಯ ಕಾರಣ ನೀಡಿದೆ ಎಂಬ ಕಾರಣಕ್ಕೆ ನ್ಯಾಯಾಂಗ ಮೂಕ ಪ್ರೇಕ್ಷಕನಾಗಿ ಕುಳಿತಿರುವುದು ಸಾಧ್ಯವಿಲ್ಲ ಮತ್ತು ಪ್ರಜಾಪ್ರಭುತ್ವ ದೇಶವೊಂದಲ್ಲಿ ಜನರ ಮೇಲೆ ವಿವೇಚನೆಯಿಲ್ಲದೆ ಗೂಢಚರ್ಯೆ ನಡೆಸಲು ಬಿಡಲಾಗದು ಎಂದು ಕಟು ಮಾತುಗಳಲ್ಲಿ ಹೇಳಿದೆ.

ನಾಗರಿಕ ಪ್ರಜಾಪ್ರಭುತ್ವ ಸಮಾಜ ಕನಿಷ್ಠ ಖಾಸಗಿತನವನ್ನು ಬಯಸುತ್ತದೆ. ಖಾಸಗಿತನ ಎಂಬುದು ಪತ್ರಕರ್ತರು, ಸಾಮಾಜಿಕ ಕಾರ್ಯಕರ್ತರಿಗೆ ಮಾತ್ರ ಕಳವಳದ ವಿಷಯವಲ್ಲ. ದೇಶದ ಪ್ರತಿ ಪ್ರಜೆಗೂ ಖಾಸಗಿತನ ಉಲ್ಲಂಘನೆಯಿಂದ ರಕ್ಷಣೆ ನೀಡಬೇಕಾಗುತ್ತದೆ. ಈ ಅಪೇಕ್ಷೆಗಳೆ ನಮಗೆ ನಮ್ಮ ಆಯ್ಕೆಗಳಾದ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ಚಲಾಯಿಸಲು ಅವಕಾಶ ಕಲ್ಪಿಸುತ್ತದೆ ಎಂದು ನ್ಯಾಯಪೀಠ ಹೇಳಿತು.

ರಾಷ್ಟ್ರೀಯ ಭದ್ರತೆಯ ವಿಷಯ, ಸಂಸ್ಥೆಗಳ ಅಧಿಕಾರ ಮತ್ತು ಇಂಥ ವಿಷಯಗಳ ಪರಿಶೀಲನೆಯಲ್ಲಿ ನ್ಯಾಯಾಂಗದ ಸೀಮಿತ ಪಾತ್ರವನ್ನು ನಾವು ಒಪ್ಪುತ್ತೇವೆಯಾದರೂ, ಪ್ರತಿ ಬಾರಿಯೂ ರಾಷ್ಟ್ರೀಯ ಭದ್ರತೆ ವಿಷಯ ಪ್ರಸ್ತಾಪಿಸಿದಾಗ ಸರ್ಕಾರಗಳಿಗೆ ವಿನಾಯಿತಿ ನೀಡಲಾಗದು. ಕೇವಲ

ರಾಷ್ಟ್ರೀಯ ಭದ್ರತೆ ಎಂದು ಹೇಳಿ ಸರ್ಕಾರಗಳು ಸುಮ್ಮನೆ ಕೂರಲಾಗದು. ಜನರು ಬಯಸಿರುವ ಮಾಹಿತಿಗಳು, ರಾಷ್ಟ್ರೀಯ ಭದ್ರತೆಯ ಕಾರಣಕ್ಕಾಗಿ ರಹಸ್ಯವಾಗಿಯೇ ಇರಬೇಕು ಎಂಬುದನ್ನು ಸಾಬೀತುಪಡಿಸುವ ಅಂಶಗಳನ್ನು ಸರ್ಕಾರ ಮುಂದಿಡಬೇಕು. ನಿಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವ ಅಂಶಗಳನ್ನು ತೋರಿಸಬೇಕು ಎಂದು ಸರ್ಕಾರದ ವಿರುದ್ಧ ಕಿಡಿಕಾರಿತು.

ಇದೇ ವೇಳೆ ಪತ್ರಿಕಾ ಸ್ವಾತಂತ್ರ್ಯವು ಪ್ರಜಾಪ್ರಭುತ್ವದ ಮಹತ್ವದ ಆಧಾರಸ್ತಂಭ ಎಂದು ಹೇಳಿರುವ ಸುಪ್ರೀಂಕೋರ್ಟ್, ಪೆಗಾಸಸ್ ಕದ್ದಾಲಿಕೆ ವಿವಾದ ಹಿನ್ನೆಲೆಯಲ್ಲಿ ಪತ್ರಿಕಾ ಸ್ವಾತಂತ್ರ್ಯ ರಕ್ಷಣೆಯಲ್ಲಿ ತನ್ನ ಪಾತ್ರ ಮಹತ್ವದ್ದಾಗಿದೆ. ಒಬ್ಬ ವ್ಯಕ್ತಿ ತನ್ನ ಮೇಲೆ ಗೂಢಚಾರಿಕೆ ನಡೆದಿದೆ ಎಂದು ಗೊತ್ತಾದರೆ ಭಯದಲ್ಲಿ ಸಿಲುಕುತ್ತಾನೆ. ಆಗ ಆತನ ಹಕ್ಕುಗಳಿಗೆ ಭಂಘ ಬರುತ್ತದೆ. ಅದೇ ರೀತಿ ಪತ್ರಿಕೆಗಳ ಮೇಲೆ ಗೂಢಚಾರಿಕೆ ನಡೆಸಿದಾಗ ಪತ್ರಿಕಾ ಸ್ವಾತಂತ್ರ್ಯಕ್ಕೆ ದಕ್ಕೆ ಬರುತ್ತದೆ. ಆಗ ಪತ್ರಿಕೆಗಳ ನಿಖರ ಹಾಗೂ ವಿಶ್ವಾಸಾರ್ಹ ವರದಿಗಳನ್ನೇ ಆಧರಿಸಿ ವರದಿಗಾರಿಕೆ ಮಾಡುತ್ತಿರುತ್ತದೆ. ಆದರೆ, ಗೂಢಚಾರಿಕೆ ನಡೆಸಿದ ಪಕ್ಷದಲ್ಲಿ ಮೂಲಗಳು ಜನಹಿತಾಸಕ್ತಿಯ ಮಾಹಿತಿಗಳನ್ನು ನೀಡದೇ ಹೋಗಬಹುದು. ಪೆಗಾಸಸ್ ಗೂಢಚಾರಿಕೆ ಪ್ರಕರಣದಲ್ಲಿ ಪತ್ರಿಕಾ ಸ್ವಾತಂತ್ರ್ಯದ ರಕ್ಷಣೆಗೆ ಪ್ರಮುಖ ಆದ್ಯತೆ ನೀಡಬೇಕಾಗುತ್ತದೆ. ಮೂಲಗಳ ರಕ್ಷಣೆಯತ್ತ ಗಮನ ಹರಿಸಬೇಕಾಗುತ್ತದೆ ಎಂದಿತು.

**ಏನಿದು ಪ್ರಕರಣ:**ಇಸ್ರೇಲ್ ಗುಪ್ತಚರ ತಂತ್ರಾಂಶದ ಪೆಗಾಸಸ್ ಬಳಸಿ ಭಾರತದ ರಾಜಕಾರಣಿಗಳು, ಪತ್ರಕರ್ತರು ಹಾಗೂ ಇತರ ಕೆಲವು ಗಣ್ಯರು ಸೇರಿ 300 ಮಂದಿಯ ದೂರವಾಣಿ ಸಂಖ್ಯೆಗಳ ಮೇಲೆ ಗೂಢಚಾರಿಕೆ ನಡೆಸಲಾಗಿದೆ ಎಂದು ಅಂತರರಾಷ್ಟ್ರೀಯ ತನಿಖಾ ಪತ್ರಕರ್ತರ ಒಕ್ಕೂಟ ಮಾಹಿತಿ ಬಿಡುಗಡೆ ಮಾಡಿತ್ತು. ಈ ತಂತ್ರಾಂಶವು ಕೇವಲ ಸರ್ಕಾರ ಮತ್ತು ಸೇನೆಗೆ ಮಾತ್ರ ಲಭ್ಯವಿರುವ ಕಾರಣ, ಕೇಂದ್ರ ಸರ್ಕಾರವೇ ಇದನ್ನು ಖರೀದಿಸಿ ಗೂಢಚರ್ಯೆ ನಡೆಸಿದೆ ಎಂಬುದು ವಿರೋಧ ಪಕ್ಷಗಳ ಆರೋಪ.

**ಸಮಿತಿಯಲ್ಲಿ ಯಾರ್‍ಯಾರು:**

- ನವೀನ್ ಕುಮಾರ್ ಚೌಧರಿ (ಗುಜರಾತ್‌ನ ರಾಷ್ಟ್ರೀಯ ವಿಧಿವಿಜ್ಞಾನ ವಿವಿಯ ಡೀನ್)
- ಪ್ರಭಾಹರನ್ (ಕೇರಳದ ಅಮೃತ ವಿಶ್ವ ವಿದ್ಯಾಪೀಠಂ ಸ್ಕೂಲ್ ಆಫ್ ಎಂಜಿನಿಯರಿಂಗ್‌ನ ಪ್ರೊಫೆಸರ್)
- ಅಶ್ವಿನ್ ಅನಿಲ್, ಗುಮಸ್ಥೆ (ಬಾಂಬೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಹಿರಿಯ ಪ್ರೊಫೆಸರ್)
- ನ್ಯಾಯಮೂರ್ತಿ ಆರ್‌ವಿಆರ್ (ಉಸ್ತುವಾರಿ)

**ತನಿಖೆಗೆ ಆದೇಶಿಸಲು ಕೋರ್ಟ್ ಕೊಟ್ಟ ಕಾರಣ:**

- ಜನರು ಮಾಹಿತಿ ತಂತ್ರಜ್ಞಾನ ಯುಗದಲ್ಲಿ ಜೀವಿಸುತ್ತಿದ್ದಾರೆ. ಹೀಗಾಗಿ ಅವರು ಕನಿಷ್ಠ ವೈಯಕ್ತಿಕ ಗೌಪ್ಯತೆ ಬಯಸುತ್ತಾರೆ.
- ತಂತ್ರಜ್ಞಾನ ಜನರ ಜೀವನ ಸುಧಾರಣೆಯ ಸಾಧನವಾಗಬೇಕೆ ವಿನ: ಖಾಸಗಿ ಬದುಕು ಉಲ್ಲಂಘನೆ ಅಸ್ತ್ರವಾಗಬಾರದು

- ದೇಶದ ಪ್ರತಿಯೊಬ್ಬ ನಾಗರಿಕನು ತನ್ನ ವೈಯಕ್ತಿಕ ಬದುಕಿನ ಗೌಪ್ಯತೆಗಳನ್ನು ಕಾಪಾಡಿಕೊಳ್ಳುವ ಹಕ್ಕು ಹೊಂದಿದ್ದಾನೆ.
- ಕೇವಲ ರಾಷ್ಟ್ರೀಯ ಭದ್ರತೆಯ ಹೆಸರೇಳಿ ಸರ್ಕಾರಗಳು ಸುಮ್ಮನೆ ಕೂರಲಾಗದು. ಅಂಥ ಅಂಶಗಳನ್ನು ಮುಂದಿಡಬೇಕು.
- ರಾಷ್ಟ್ರೀಯ ಭದ್ರತೆ ಕಾರಣವೊಡ್ಡಿ ಪ್ರತಿ ಬಾರಿ ಸರ್ಕಾರಗಳಿಗೆ ವಿನಾಯಿತಿ ನೀಡಲಾಗದು. ನಾವು ಮೂಕಪ್ರೇಕ್ಷಕರಾಗಲಾರದು.
- ಪ್ರಜಾಪ್ರಭುತ್ವ ದೇಶವೊಂದರಲ್ಲಿ ಯಾವುದೇ ವ್ಯಕ್ತಿಯ ಮೇಲೆ ವಿವೇಕರಹಿತ ಗೂಢಚರ್ಯೆಗೆ ಅವಕಾಶ ನೀಡಲಾಗದು.

ಆಧಾರ: ಕನ್ನಡಪ್ರಭ, ದಿನಾಂಕ:28.10.2021

## 12.ಕರಕುಶಲ, ಉಡುಗೊರೆ ಮೇಳಕ್ಕೆ ಕೇಂದ್ರ ಸಚಿವ ರಾಜೀವ್ ಚಾಲನೆ

ಕರಕುಶಲ ವಸ್ತುಗಳ ರಫ್ತು ಉತ್ತೇಜನಾ ಮಂಡಳಿ (ಇಪಿಸಿಎಚ್) ಆಯೋಜಿಸಿದ್ದ ಭಾರತೀಯ ಕರಕುಶಲ ಮತ್ತು ಉಡುಗೊರೆಗಳ ಮೇಳಕ್ಕೆ ಕೇಂದ್ರ ಸಚಿವ ರಾಜೀವ್ ಚಂದ್ರಶೇಖರ್ ಅವರು ಚಾಲನೆ ನೀಡಿದರು.

1986–87ರಲ್ಲಿ ಆರಂಭವಾದ ಕರಕುಶಲ ವಸ್ತುಗಳ ರಫ್ತು ಉತ್ತೇಜನಾ ಮಂಡಳಿ ಒಂದು ಲಾಭರಹಿತ ಸಂಸ್ಥೆಯಾಗಿದೆ. ಕರಕುಶಲ ವಸ್ತುಗಳ ಮಾರುಕಟ್ಟೆಗೆ ಉತ್ತೇಜನ, ಬೆಂಬಲ, ರಕ್ಷಣೆ, ನಿರ್ವಹಣೆ ಮತ್ತು ರಫ್ತು ಹೆಚ್ಚಿಸುವ ಉದ್ದೇಶದಿಂದ ಈ ಮೇಳ ಆಯೋಜಿಸಿದೆ.

ಅಂತರರಾಷ್ಟ್ರೀಯ ಗುಣಮಟ್ಟ ಮತ್ತು ಮಾನದಂಡಗಳಿಗೆ ಅನುಗುಣವಾಗಿ ಕರಕುಶಲ ವಸ್ತುಗಳನ್ನು ಪೂರೈಸುವ ಹಾಗೂ ರಫ್ತು ಮತ್ತು ಆಮದುದಾರರಿಗೆ ಅಗತ್ಯ ಮೂಲಸೌಕರ್ಯ ಮಾಹಿತಿಯನ್ನು ಸಂಸ್ಥೆ ಒದಗಿಸುತ್ತಿದೆ. ಜೊತೆಗೆ ಇಪಿಸಿಎಚ್ ಕೌನ್ಸಿಲ್ ಸದಸ್ಯರಿಗೆ ವೃತ್ತಿಪರ ಸಲಹೆ, ಸೇವೆ ತಾಂತ್ರಿಕ ಉನ್ನತೀಕರಣ, ಗುಣಮಟ್ಟ ವಿನ್ಯಾಸಗಳ ಅಭಿವೃದ್ಧಿ ಉತ್ಪನ್ನದ ಅಭಿವೃದ್ಧಿ, ನಾವೀನ್ಯತೆ ಕುರಿತು ಕಾರ್ಯಾಗಾರಗಳನ್ನು ಆಯೋಜಿಸುವ ಮೂಲಕ ಕೌಶಲ್ಯ ತರಬೇತಿ ನೀಡುತ್ತಿದೆ.

ಇಪಿಸಿಎಚ್ ಸಂಸ್ಥೆಯು ಕೌನ್ಸಿಲ್ ಸದಸ್ಯರು ಮತ್ತು ರಫ್ತುದಾರ ಸಮುದಾಯಕ್ಕೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಸಮಿತಿಗಳ ಜೊತೆಗೆ ಸಂವಾದಕ್ಕೆ ಅವಕಾಶ ಮಾಡಿಕೊಡುತ್ತಿದೆ. ರಫ್ತು ಮಾರುಕಟ್ಟೆ ಪ್ರಕ್ರಿಯೆ, ದಾಖಲೀಕರಣ ಪ್ಯಾಕೇಜಿಂಗ್, ವಿನ್ಯಾಸ ಅಭಿವೃದ್ಧಿ, ಸರ್ಕಾರಗಳ ನೀತಿ ನಿಯಮಗಳ ಮಾಹಿತಿ ಸೇರಿದಂತೆ ಇತರೆ ಸೇವೆಗಳನ್ನು ಒದಗಿಸುತ್ತಿದೆ.

ಆಧಾರ: ಕನ್ನಡಪ್ರಭ, ದಿನಾಂಕ:31.10.2021

## 13.ಒಂದು ವಿಶ್ವ ಒಂದು ಆರೋಗ್ಯ

ಜಾಗತಿಕ ಆರೋಗ್ಯ ಸಂಕಷ್ಟವನ್ನು ಎದುರಿಸುತ್ತಿರುವ ಈ ಸನ್ನಿವೇಶದಲ್ಲಿ ಒಂದು ಭೂಮಿ ಒಂದು ಆರೋಗ್ಯ ಎಂಬ ದೃಷ್ಟಿಕೋನ ಹೊಂದಿರಬೇಕಾದ್ದು ಅವಶ್ಯ ಎಂಬ ಅಶಯವನ್ನು ಪ್ರಧಾನಿ ನರೇಂದ್ರ ಮೋದಿ ವ್ಯಕ್ತಪಡಿಸಿದರು.

ರೋಮ್‌ನಲ್ಲಿ ಜಿ20 ರಾಷ್ಟ್ರಗಳ 16ನೇ ಶೃಂಗವನ್ನು ಉದ್ದೇಶಿಸಿ ಮಾತನಾಡಿದರು. ಅವರ ಭಾಷಣದ ಸಾರವನ್ನು ಭಾರತದ ವಿದೇಶಾಂಗ ಕಾರ್ಯದರ್ಶಿ ಹರ್ಷವರ್ಧನ್ ಶ್ರಿಂಗ್ಲಾ ಸುದ್ದಿಗಾರರಿಗೆ

ವಿವರಿಸಿದರು. ಕೋವಿಡ್ ಸಂಕಷ್ಟವನ್ನು ಎದುರಿಸುವುದಕ್ಕಾಗಿ ಜಗತ್ತಿನ ನೆರವಿನೊಂದಿಗೆ ಮುಂದಿನ ವರ್ಷದ ಕೊನೆಯ ಹೊತ್ತಿಗೆ 500 ಕೋಟಿಗೂ ಅಧಿಕ ಕೋವಿಡ್ ಲಸಿಕೆ ಉತ್ಪಾದಿಸಿ ಕೊಡಲು ಭಾರತ ಸಿದ್ಧವಿದೆ. ಮಾರಾಣಾಂತಿಕ ಸೋಂಕಿನ ವಿರುದ್ಧ ಹೋರಾಟದಲ್ಲಿ ಭಾರತದ ಕೊಡುಗೆ, ನಿರ್ವಹಿಸಸುತ್ತಿರುವ ಪ್ರಮುಖ ಪಾತ್ರ ಗಮನಾರ್ಹ. ಭಾರತದ ಸ್ವದೇಶಿ ಲಸಿಕೆ ಕೋವ್ಯಾಕ್ಸಿನ್‌ಗೆ ವಿಶ್ವ ಆರೋಗ್ಯ ಸಂಸ್ಥೆ ಇನ್ನು ಒಪ್ಪಿಗೆ ನೀಡಿಲ್ಲ. ಇದಕ್ಕೆ ಒಪ್ಪಿಗೆ ಸಿಕ್ಕರೆ ಭಾರತ ಇತರೆ ದೇಶಗಳಿಗೆ ನೆರವಾಗುವುದಕ್ಕೆ ಸಾಧ್ಯವಿದೆ. ನವೆಂಬರ್ 03 ರಂದು ವಿಶ್ವ ಆರೋಗ್ಯ ಸಂಸ್ಥೆಯ ತಾಂತ್ರಿಕ ಸಮಿತಿ ಸಭೆ ನಡೆಯಲಿದೆ. ಅಲ್ಲಿ ರಿಸ್ಕ್–ಬೆನಿಫಿಟ್‌ಗಳ ಅಂತಿಮ ಮೌಲ್ಯಮಾಪನ ನಡೆದ ಕೋವ್ಯಾಕ್ಸಿನ್‌ಗೆ ತುರ್ತು ಬಳಕೆಗೆ ಅನುಮತಿ ನೀಡಬಹುದೆಂಬ ನಿರೀಕ್ಷೆ ಇದೆ. ಭಾರತ್ ಬಯೋಟೆಕ್‌ನ ಕೋವ್ಯಾಕ್ಸಿನ್ ಮತ್ತು ಆಸ್ಟ್ರಾ ಜೆನಿಕಾ, ಆಕ್ಸ್‌ಫರ್ಡ್ ಯೂನಿವರ್ಸಿಟಿಗಳ ಕೋವಿಶೀಲ್ಡ್ ಲಸಿಕೆಗಳನ್ನು ಭಾರತದಲ್ಲಿ ವ್ಯಾಪಕವಾಗಿ ಬಳಸಲಾಗುತ್ತಿದೆ. ಇದು ಪರಿಣಾಮಕಾರಿ ಎಂಬುದು ಈಗಾಗಲೇ ಸಾಬೀತಾಗಿರುವ ಅಂಶ ಎಂದು ಮೋದಿ ಪ್ರತಿಪಾದಿಸಿದರು.

**ಪ್ರಮುಖ ವಿದ್ಯಮಾನಗಳು:**

- ಇನ್ನು 4 ರ್ಷದಲ್ಲಿ ಕಾರ್ಬನ್ ಕಡಿಮೆ ಮಾಡುವ ಗುರಿ ತಲುಪಲು ಚೀನಾ ಅಧ್ಯಕ್ಷ ಕ್ಸಿ ಜಿನ್‌ಪಿಂಗ್ ಮೇಲೆ ಒತ್ತಡ ಹೇರಿದರೂ ಅದರಿಂದ ಪ್ರಯೋಜನವೇನೂ ಆಗಿಲ್ಲ ಎಂದ ಬ್ರಿಟನ್ ಪ್ರಧಾನಿ ಬೋರಿಕ್ ಜಾನ್ಸನ್.
- ಜಗತ್ತಿನ ಬಡ ರಾಷ್ಟ್ರಗಳಿಗೆ 6.7 ಕೋಟಿ ಲಸಿಕೆ ಡೋಸ್‌ಗಳನ್ನು ಫ್ರಾನ್ಸ್ ವಿತರಿಸಿದೆ. ವಿಶ್ವಸಂಸ್ಥೆ ಬೆಂಬಲಿತ ಕೋವಾಕ್ಸ್ ಅನ್ನು ಅತಿ ಹೆಚ್ಚು ವಿತರಿಸಿದ ಎರಡನೇ ರಾಷ್ಟ್ರ ಎಂಬ ಕೀರ್ತಿ ನಮ್ಮ ದೇಶಕ್ಕೆ ಎಂದ ಫ್ರಾನ್ಸ್ ವಿದೇಶಾಂಗ ಸಚಿವ ಜೀನ್ ಯೇವ್ಸ್ ಲೆ ಡ್ರಿಯಾನ್.
- ರೋಮ್‌ನಲ್ಲಿ ಜಿ 20 ಶೃಂಗದ ಸ್ಥಳಕ್ಕೆ ಸಮೀಪದಲ್ಲಿ ಹವಾಮಾನ ವೈಪರೀತ್ಯ ತಡೆಗೆ ಸರ್ಕಾರಗಳು ಸರಿಯಾದ ಕ್ರಮಗಳನ್ನು ತೆಗೆದುಕೊಂಡಿಲ್ಲ ಎಂದು ರಸ್ತೆ ತಡೆ ಪ್ರತಿಭಟನೆ ನಡೆಸಿದರು. ಪೊಲೀಸರು ಕೂಡಲೇ ಪ್ರತಿಭಟನಾಕಾರರನ್ನು ಅಲ್ಲಿಂದ ಚದುರಿಸಿದರು.

**ಜಾಗತಿಕ ನಾಯಕರ ಜೊತೆ ಮಾತುಕತೆ**: ಜಿ20 ಶೃಂಗದ ವಿರಾಮದ ವೇಳೆ ಭಾರತದ ಪ್ರಧಾನಿ ನರೇಂದ್ರ ಮೋದಿ ಅವರು ಅಮೆರಿಕ ಅಧ್ಯಕ್ಷ ಜೋ ಬೈಡೆನ್, ಫ್ರಾನ್ಸ್ ಅಧ್ಯಕ್ಷ ಇಮ್ಯಾನುವೆಲ್ ಮಾಕ್ರನ್, ಬ್ರಿಟನ್ ಪ್ರಧಾನಿ ಬೋರಿಸ್ ಜನ್ಸನ್, ಕೆನಡ ಪ್ರಧಾನಿ ಜಸ್ಟಿನ್ ಟ್ರೂಡ್ ಮತ್ತಿತರ ನಾಯಕರೊಂದಿಗೆ ದ್ವಿಪಕ್ಷೀಯ ಮಾತುಕತೆ ನಡೆಸಿದರು. ಸಿಂಗಾಪುರ ಪ್ರಧಾನಿ ಲೀ ಹ್ಸಿನ್ ಲೂಂಗ್ ಅವರೊಂದಿಗೆ ಕೂಡ ಪ್ರಧಾನಿ ಮೋದಿ ಅವರು ಫಲಪ್ರದವಾದ ದ್ವಿಪಕ್ಷೀಯ ಮಾತುಕತೆ ನಡೆಸಿದರು ಎಂದು ಪಿಎಂಒ ಟ್ವೀಟ್ ಮಾಡಿದೆ.

**ಶೃಂಗದ ಥೀಮ್:**ಪೀಪಲ್, ಪ್ಲಾನೆಟ್ ಮತ್ತು ಪ್ರಾಸ್ಪರಿಟಿ (ಪಿಪಿಪಿ) ಎಂಬುದು ಈ ಸಲದ ಜಿ20 ಶೃಂಗದ ಥೀಮ್. ಜಾಗತಿಕ ಆರೋಗ್ಯ ವ್ಯವಸ್ಥೆ, ಮೂಲಸೌಕರ್ಯ ಬಲಪಡಿಸುವ ವಿಚಾರ ಕೊರೋನಾ ಸೋಂಕಿನಿಂದ ಬಚಾವ್ ಆಗುವ ವಿಷಯಗಳ ಕಡೆಗೆ ಈ ಸಲ ಶೃಂಗ ಸಭೆ ಹೆಚ್ಚಿನ ಗಮನಹರಿಸುತ್ತಿದೆ.

**ಎಂಎನ್‌ಸಿಗಳಿಗೆ ಶೇಕಡ 15 ತೆರಿಗೆ ಖಾತ್ರಿ:** ಬಹುರಾಷ್ಟ್ರೀಯ ಕಂಪನಿಗಳಿಗೆ ಜಾಗತಿಕ ಕನಿಷ್ಠ ತೆರಿಗೆ ವಿಧಿಸುವ ಯೋಜನೆ ಜಾರಿಗೆ ಒಲವು ವ್ಯಕ್ತವಾಗಿದೆ. ಇದು ಜಿ20 ಶೃಂಗದಲ್ಲಿ ಅಂಗೀಕಾರವಾಗುವ ನಿರೀಕ್ಷೆಯಲ್ಲಿದೆ. ಅಮೆರಿಕ ಜಿ20 ಶೃಂಗವು ಜಾಗತಿಕ ಆರ್ಥಿಕತೆ, ಕೊರೋನಾ ಸೋಂಕು ಮುಂತಾದ ಕಾರ್ಯಸೂಚಿ ಹೊಂದಿವೆಯಾದರೂ, ಜಾಗತಿಕ ಕನಿಷ್ಠ ತೆರಿಗೆ ಯೋಜನೆಗೆ ಅನುಮೋದನೆ

ಪಡೆಯುವುದು ಮುಖ್ಯ ಉದ್ದೇಶವಾಗಿದೆ. ಬಹುರಾಷ್ಟ್ರೀಯ ಕಂಪನಿ (ಎಂಎನ್‌ಸಿ)ಗಳು ತೆರಿಗೆ ತಪ್ಪಿಸಿ ಕಡಿಮೆ ತೆರಿಗೆ ಇರುವ ರಾಷ್ಟ್ರಗಳಲ್ಲಿ ವಹಿವಾಟು ಮುಂದುವರಿಸುವುದನ್ನು ತಡೆಯುವ ಉದ್ದೇಶ ಹೊಂದಲಾಗಿದೆ.

**ಪ್ರಧಾನಿ ಮೋದಿ –ಪೋಪ್ ಭೇಟಿ:** ಪ್ರಧಾನಿ ಮೋದಿ ವ್ಯಾಟಿಕನ್ ಸಿಟಿಯಲ್ಲಿ ಪೋಪ್ ಫ್ರಾನ್ಸಿಸ್ ಅವರನ್ನು ಭೇಟಿ ಮಾಡಿ ಮಾತುಕತೆ ನಡೆಸಿದರು. 2013ರಲ್ಲಿ ಪೋಪ್ ಅಧಿಕಾರ ಸ್ವೀಕರಿಸಿದ ನಂತರ ಅವರನ್ನು ಭಾರತದ ಪ್ರಧಾನಿ ಭೇಟಿ ಮಾಡಿದ್ದು ಇದೇ ಮೊದಲು. ಅಪೋಸ್ಟೋಲಿಕ್ ಪ್ಯಾಲೇಸ್‌ನಲ್ಲಿ ಪ್ರಧಾನಿ ಮೋದಿ ಮತ್ತು ಪೋಪ್ ಫ್ರಾನ್ಸಿಸ್ ನಡುವೆ 20 ನಿಮಿಷ ನಿಗದಿಯಾಗಿದ್ದ ಮಾತುಕತೆ ಒಂದು ಗಂಟೆಗೂ ಅಧಿಕ ಕಾಲ ಮುಂದುವರಿಯಿತು. 2000ನೇ ಇಸವಿ ಜೂನ್‌ನಲ್ಲಿ ಅಟಲ್ ಬಿಹಾರಿ ವಾಜಪೇಯಿ ಅವರು ಅಂದಿನ ಪೋಪ್ ಎರಡನೇ ಜಾನ್ ಪಾಲ್‌ರನ್ನು ಭೇಟಿ ಮಾಡಿದ್ದರು. ವ್ಯಾಟಿಕನ್‌ನ ಕ್ಯಾಥೋಲಿಕ್ ಚರ್ಚ್ ಮುಖ್ಯಸ್ಥ ಪೋಪ್ ಫ್ರಾನ್ಸಿಸ್ ಅವರನ್ನು ಭಾರತಕ್ಕೆ ಬನ್ನಿ ಎಂದು ಪ್ರಧಾನಿ ನರೇಂದ್ರ ಮೋದಿ ಆಹ್ವಾನಿಸಿದ್ದಾರೆ. ಪೋಪ್ ಫ್ರಾನ್ಸಿಸ್ ಅವರಿಗೆ ಪ್ರಧಾನಿ ಮೋದಿ ಅವರು ವಿಶೇಷ ಬೆಳ್ಳಿಯ ಕ್ಯಾಂಡಲ್ ಹೋಲ್ಡರ್ ಮತ್ತು ಹವಾಮಾನ ವೈಪರೀತ್ಯ ತಡೆಗೆ ಭಾರತ ಕೈಗೊಂಡಿರುವ ಕ್ರಮಗಳ ವಿವರ ಇರುವ ಪುಸ್ತಕವನ್ನು ಕೊಡುಗೆಯಾಗಿ ನೀಡಿದರು. ಇದಕ್ಕೆ ಪ್ರತಿಯಾಗಿ ಪೋಪ್ ಫ್ರಾನ್ಸಿಸ್ ಕೂಡ ಕಂಚಿನ ಫಲಕವನ್ನು ಪ್ರಧಾನಿ ಮೋದಿಗೆ ಹಸ್ತಾಂತರಿಸಿದರು.

ಆಧಾರ: ವಿಜಯವಾಣಿ, ದಿನಾಂಕ:31.10.2021

## 14. ಲಸಿಕಾಕರಣಕ್ಕೆ ಮೋದಿ ಟಾನಿಕ್

ರಾಷ್ಟ್ರೀಯ ಸರಾಸರಿಗಿಂತ ಕಡಿಮೆ ಕೋವಿಡ್ ಲಸಿಕೆ ನೀಡಿದ ಸುಮಾರು 10 ರಾಜ್ಯಗಳ ಮುಖ್ಯಮಂತ್ರಿಗಳ ಜೊತೆ ಹಾಗೂ ಲಸಿಕೆ ನೀಡಿಕೆಯಲ್ಲಿ ಹಿಂದೆ ಬಿದ್ದಿರುವ 40 ಜಿಲ್ಲೆಗಳ ಜಿಲ್ಲಾಧಿಕಾರಿಗಳ ಜೊತೆ ಪ್ರಧಾನಿ ನರೇಂದ್ರ ಮೋದಿ ನವೆಂಬರ್ 3 ರಂದು ವಿಡಿಯೋ ಕಾನ್ಫರೆನ್ಸ್ ನಡೆಸಲಿದ್ದಾರೆ. ಜಿ–20 ಸಮಾವೇಶಕ್ಕಾಗಿ ಇಟಲಿಗೆ ತೆರಳಿರುವ ಅವರು, ಅಲ್ಲಿಂದ ಬಂದ ತಕ್ಷಣ ಸಭೆ ನಡೆಸಲಿದ್ದಾರೆ ಎಂದು ಪ್ರಧಾನಿ ಕಾರ್ಯಾಲಯ ತಿಳಿಸಿದೆ.

ಬಿಹಾರ, ಜಾರ್ಖಂಡ, ಮಹಾರಾಷ್ಟ್ರ, ಮಣಿಪುರ, ಮೇಘಾಲಯ, ನಾಗಾಲ್ಯಾಂಡ್, ಪಂಜಾಬ್, ತಮಿಳುನಾಡು, ಉತ್ತರ ಪ್ರದೇಶ, ಪಶ್ಚಿಮ ಬಂಗಾಳ ಮುಂತಾದ 11 ರಾಜ್ಯಗಳು ಶೇ.50ಕ್ಕಿಂತ ಕಡಿಮೆ ಮೊದಲ ಡೋಸ್ ಅಥವಾ ಎರಡನೇ ಡೋಸ್ ಲಸಿಕೆ ನೀಡಿವೆ. ಈ ರಾಜ್ಯಗಳ 40 ಜಿಲ್ಲೆಗಳು ಲಸಿಕೆಯಲ್ಲಿ ಹಿಂದೆಬಿದ್ದಿವೆ.

ಲಸಿಕಾಕರಣಕ್ಕೆ ವೇಗ ನೀಡಲು ಪ್ರಧಾನಿ ಮೋದಿ ಅವರು ಗೃಹ ಸಚಿವ ಅಮಿತ್ ಶಾ, ಆರೋಗ್ಯ ಸಚಿವ ಮನಸುಖ್ ಮಾಂಡವೀಯ ಅವರೊಂದಿಗೆ ಸೇರಿ ಸಂಬಂಧಿಸಿದ ಮುಖ್ಯಮಂತ್ರಿಗಳು ಮತ್ತು ಜಿಲ್ಲಾಧಿಕಾರಿಗಳ ಜೊತೆ ನವೆಂಬರ್ 3ರ ಮಧ್ಯಾಹ್ನ 12 ಗಂಟೆಗೆ ಸಭೆ ನಡೆಸಲಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:01.11.2021

## 15. No time-bound pacts on climate change at G-20

India pushed for “ safeguarding the interests of the developing world” as Prime Minister Narendra Modi addressed the G-20 summit at sessions on climate change and sustaninable development aid G-20 Sherpa and Commerce Minister Piyush Goyal.

No time-bound agreements were reached as leaders of the world's top economies ended the summit in Rome, recommitting to providing Rs. 100 billion a year to counter climate change and pushing for greater vaccine equality to fight the COVID-19 pandemic. G-20 countries also committed to ending international financing for all new coal plants by the end of 2021, but made no mention of domestic commitments on ending coal power generation.

The final communiqué, agreed upon after negotiations overnight spoke only of the "key relevance of achieving global net Zero" on carbon emission "by or around mid-century".

Amongst the other highlights of the statement was a decision to pursue the recognition of more vaccines by the World Health Organization under a "One Health approach" for the world and providing finances and technology for vaccine production at "mRNA Hubs" in South Africa, Brazil and Argentina and to mobilize more international public private financing for"green" projects.

Mr. Modi later described the summit as "Fruitful".

Addressing the media, G-20 Sherpa and Commerce Minister Piyush Goyal hailsed the communiqué for acknowledging India's concerns on climate justice. "we have also been able to push the commitment of the developed world to provide Rs 100 billion every year through from now until 2025. And the commitment of all the countries to mobilize greater levels of capital for the less developed countries and the emerging economies," he said, referring to the previous commitments made at the Paris agreement, which have not yet been fulfilled.

Climate negotiators from the U.S., EU and U.K had made a number of visits to Delhi over the past few months, pressing for India to update its commitments (NDCS) to include its target of 450 GW of renewable energy by 2030 and to set a date for ending the use of coal in power plants.

However, Mr. Goyal said it would be necessary for developed countries to achieve much quicker emission cuts so that there is more "carbon space for the developing countries to pursue their development agenda."

"There are no adequate technologies to be able to absorb large amounts of clean energy into the grids and to maintain grid stability. And therefore, we will have to look at more technology before we can identify a year for Net Zero," Mr. Goyal said.

UN Secretary General Antonio Guterres said the failure of the G-20 summit to set a specific date for countries to achive "Net Zero" carbon emissions had left his hopes "Unfulfilled" , as the joint communiqué set the stage for tough negotiations at the COP26 climate change summit in Glasgow

Courtesy:The Hindu, Dated:01.11.2021

## 16. 1.5 ಡಿಗ್ರಿ ಸೆಲ್ಸಿಯಸ್‌ಗೆ ಜಗತ್ತಿನ ಒಪ್ಪಿಗೆ

2015ರ ಪ್ಯಾರಿಸ್‌ನಲ್ಲೇ ಆಗಿತ್ತು ತೀರ್ಮಾನ ಜಾಗತಿಕ ತಾಪಮಾನ ದಿನದಿಂದ ದಿನಕ್ಕೆ ಏರಿಕೆಯಾಗುತ್ತಿರುವುದು ಬಹು ಹಿಂದೆಯೇ ಕಂಡು ಬಂದಿದೆ. ಇದರಿಂದಾಗಿಯೇ ಜಗತ್ತಿನಲ್ಲಿ ಸೈಕ್ಲೋನ್‌ಗಳ ಹೆಚ್ಚಳ, ಅತಿವೃಷ್ಟಿಗಳು ಸಂಭವಿಸುತ್ತಲೇ ಇವೆ. 2015ರಲ್ಲಿ ಪ್ಯಾರಿಸ್‌ನಲ್ಲಿ ನಡೆದ ಹವಾಮಾನ ಶೃಂಗದಲ್ಲಿ ಜಾಗತಿಕ ತಾಪಮಾನವನ್ನು ಕಡಿಮೆಗೊಳಿಸಲು ಒಪ್ಪಂದ ಮಾಡಿಕೊಳ್ಳಲಾಗಿತ್ತು. ಆದರೆ ಅಮೆರಿಕದ ಹಿಂದಿನ ಅಧ್ಯಕ್ಷ ಡೋನಾಲ್ಡ್ ಟ್ರಂಪ್ ಅವರ ಮೊಂಡಾಟದಿಂದಾಗಿ ಈ ಪ್ಯಾರಿಸ್ ಶೃಂಗದ ನಿರ್ಧಾರ ಜಾರಿಯಗುವಲ್ಲಿ ತಡವಾಗಿತ್ತು. ಈಗಲೂ ಈ ಬಗ್ಗೆ ನಿರ್ಧಾರವಾಗಿಲ್ಲ.

**ಹೆಚ್ಚು ಮಾಲಿನ್ಯಕ್ಕೆ ಅಭಿವೃದ್ಧಿ ಹೊಂದಿದ ದೇಶಗಳೇ ಕಾರಣ:** ಜಿ20ರ ಗುಂಪಿನಲ್ಲಿ ಬಹುತೇಕ ಮುಂದುವರಿದ ದೇಶಗಳೇ ಇವೆ. ಈ ಗುಂಪಿನಲ್ಲಿ ಅರ್ಜೆಂಟೀನಾ, ಆಸ್ಟ್ರೇಲಿಯ, ಬ್ರೆಜಿಲ್, ಕೆನಡಾ, ಚೀನಾ, ಫ್ರಾನ್ಸ್, ಜರ್ಮನಿ, ಜಪಾನ್, ಭಾರತ, ಇಂಡೋನೇಶಿಯಾ, ಇಟಲಿ, ಮೆಕ್ಸಿಕೋ, ರಷ್ಯಾ, ದಕ್ಷಿಣ ಆಫ್ರಿಕಾ, ಸೌದಿ ಅರೇಬಿಯಾ, ದಕ್ಷಿಣ ಕೊರಿಯಾ, ಟರ್ಕಿ, ಯುನೈಟೆಡ್ ಕಿಂಗ್‌ಡಮ್, ಅಮೆರಿಕ, ಐರೋಪ್ಯ ಒಕ್ಕೂಟ, ಸ್ಪೈನ್. ಜಾಗತಿಕ ಮಾಲಿನ್ಯದಲ್ಲಿ ಈ ದೇಶಗಳ ಪಾಲು ಶೇ.80ರಷ್ಟು. ಈ ರಾಷ್ಟ್ರಗಳು ಮಾಲಿನ್ಯ ನಿಯಂತ್ರಣಕ್ಕೆ ತಂದ ಇಂಗಾಲದ ಡೈ ಆಕ್ಸೈಡ್ ಹೊರಸೂಸುವಿಕೆ ಪ್ರಮಾಣವನ್ನು ಕಡಿಮೆ ಮಾಡಿದರೆ, ತಂತಾನೇ ಜಾಗತಿಕ ತಾಪಮಾನವು ಇಳಿಯಲಿದೆ. ಈಗ ಗ್ಲಾಸ್ಗೋದಲ್ಲಿ ಆರಂಭವಾಗಿರುವ ಶೃಂಗದಲ್ಲಿ ಜಿ20 ಸಭೆಯಲ್ಲಿ ತೆಗೆದುಕೊಂಡ ತೀರ್ಮಾನಗಳ ಬಗ್ಗೆ ಚರ್ಚಿಸಲಾಗುತ್ತದೆ.

ಆಧಾರ: ಉದಯವಾಣಿ, ದಿನಾಂಕ:02.11.2021

## 17. ಕೋವ್ಯಾಕ್ಸೀನ್ ಲಸಿಕೆಗೆ WHO ಗ್ರೀನ್ ಸಿಗ್ನಲ್

ಹೈದರಾಬಾದ್‌ನ ಭಾರತ್ ಬಯೋಟೆಕ್ ಕಂಪನಿ ಅಭಿವೃದ್ಧಿಪಡಿಸಿರುವ ಕೋವಿಡ್–19 ಲಸಿಕೆ ಕೋವ್ಯಾಕ್ಸಿನ್ ತುರ್ತು ಬಳಕೆಗೆ ವಿಶ್ವ ಆರೋಗ್ಯ ಸಂಸ್ಥೆ (ಡಬ್ಲ್ಯುಹೆಚ್‌ಓ) ಅನುಮತಿ ನೀಡಿದೆ.

ತುರ್ತು ಬಳಕೆ ಲಸಿಕೆಗಳ ಪಟ್ಟಿಯಲ್ಲಿ ಕೋವ್ಯಾಕ್ಸೀನ್ ಸೇರ್ಪಡೆಗೆ ಡಬ್ಲ್ಯುಹೆಚ್‌ಓದ ತಾಂತ್ರಿಕ ಸಲಹಾ ಸಮಿತಿ ಅನುಮೋದನೆ ನೀಡಿದ್ದು, ಇದರೊಂದಿಗೆ ಭಾರತದಲ್ಲಿ ಅಭಿವೃದ್ಧಿ ಪಡಿಸಲಾದ ಕೋವಿಡ್ ಲಸಿಕೆಗೆ ಜಾಗತಿಕ ಮಾನ್ಯತೆ ದೊರೆತಂತಾಗಿದೆ.

ಭಾರತದ ಕೋವಿಡ್ ಲಸಿಕೆಯ ಬಗ್ಗೆ ವಿಶ್ವಾಸವಿದೆ. ಭಾರತ್ ಬಯೋಟೆಕ್ ಕಂಪನಿಯು ನಿಯಮಿತವಾಗಿ ಮತ್ತು ತ್ವರಿತವಾಗಿ ಮಾಹಿತಿಗಳನ್ನು ಸಲ್ಲಿಸುವಂತಿದೆ ಎಂದು ವಿಶ್ವ ಆರೋಗ್ಯ ಸಂಸ್ಥೆ ಇತ್ತೀಚಿಗೆ ಹೇಳಿತ್ತು. ಒಮನ್ ಕೂಡ ಕೋವ್ಯಾಕ್ಸಿನ್ ಅನ್ನು ಅನುಮೋದಿತ ಕೋವಿಡ್–19 ಲಸಿಕೆಗಳ ಪಟ್ಟಿಗೆ ಸೇರಿಸಿತ್ತು.

**ಡಬ್ಲ್ಯುಹೆಚ್‌ಓ ಮಾನ್ಯತೆ ಪಡೆದ ಲಸಿಕೆಗಳು ಯಾವವು?**

ಕೋವಿಶೀಲ್ಡ್, ಕೋವ್ಯಾಕ್ಸಿನ್, ಫೈಜರ್, ಬಯೋನೆಟೆಕ್, ಜಾನ್ಸನ್ ಆ್ಯಂಡ್ ಜಾನ್ಸನ್, ಮಾಡರ್ನಾ ಮತ್ತು ಸಿನೋಫಾರ್ಮಾ ಕಂಪನಿಗಳು ಉತ್ಪಾದಿಸುವ ಲಸಿಕೆಯನ್ನು ತುರ್ತು ಬಳಕೆ ಪಟ್ಟಿಗೆ ಸೇರಿಸಲು ವಿಶ್ವ ಆರೋಗ್ಯ ಸಂಸ್ಥೆಯು ಅನುಮೋದನೆ ನೀಡಿದೆ.

**ಐಸಿಎಂಆರ್, ಭಾರತ್ ಬಯೋಟೆಕ್ ವಿಜ್ಞಾನಿಗಳಿಗೆ ಅಭಿನಂದನೆ:**

ಕೋವ್ಯಾಕ್ಸೀನ್ ಲಸಿಕೆಗೆ ಜಾಗತಿಕ ಮನ್ನಣೆ ದೊರೆತ ಬೆನ್ನಲ್ಲೇ ಕೇಂದ್ರ ಆರೋಗ್ಯ ಸಚಿವ ಮನ್ಸುಖ್ ಮಾಂಡವೀಯ ಅವರು ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ (ಐಸಿಎಂಆರ್)

ಮತ್ತು ಭಾರತ್ ಬಯೋಟೆಕ್ ವಿಜ್ಞಾನಿಗಳಿಗೆ ಅಭಿನಂದನೆ ಸಲ್ಲಿಸಿದ್ದಾರೆ. ಐಸಿಎಂಆರ್ ಹಾಗೂ ಭಾರತ್ ಬಯೋಟೆಕ್ ಜಂಟಿಯಾಗಿ ಕೋವ್ಯಾಕ್ಸಿನ್ ಅಭಿವೃದ್ಧಿಪಡಿಸಿದ್ದವು.

- ಕೋವ್ಯಾಕ್ಸಿನ್ ಲಸಿಕೆಯನ್ನು ಮೊದಲು ಭಾರತದಲ್ಲಿ ವಿತರಿಸುವುದಕ್ಕೆ ಸ್ಥಳೀಯ ವೈದ್ಯಕೀಯ ನಿಯಂತ್ರಣ ಪ್ರಾಧಿಕಾರ ಅನುಮತಿ ನೀಡಿತ್ತು.
- ನಂತರ ತುರ್ತು ಬಳಕೆಯ ಲಸಿಕೆಗಳ ಪಟ್ಟಿಗೆ ಕೋವ್ಯಾಕ್ಸಿನ್ ಲಸಿಕೆಯನ್ನು ಸೇರಿಸಲು ಸಂಸ್ಥೆಯು ಆಸಕ್ತಿ ತೋರಿಸಿತು.
- ಈ ಕುರಿತು ಕಳೆದ 2021ರ ಏಪ್ರಿಲ್ 19 ರಂದು ಅಗತ್ಯ ದಾಖಲೆಗಳೊಂದಿಗೆ ವಿಶ್ವ ಆರೋಗ್ಯ ಸಂಸ್ಥೆಗೆ ಮನವಿ ಮಾಡಿತ್ತು.
- ದಾಖಲೆಗಳನ್ನು ಪರಿಶೀಲಿಸಿದ ವಿಶ್ವ ಆರೋಗ್ಯ ಸಂಸ್ಥೆಯ ತಾಂತ್ರಿಕ ಸಲಹಾ ಸಮಿತಿಯು ನವೆಂಬರ್ 3 ರಂದು ತುರ್ತು ಬಳಕೆಗೆ ಅನುಮೋದನೆ ನೀಡಿದೆ.

ಆಧಾರ: ವಿಶ್ವವಾಣಿ, ದಿನಾಂಕ:04.11.2021

## 18. ಮೋದಿ ಕೇದಾರನಾಥಕ್ಕೆ

ಪ್ರಧಾನಿ ನರೇಂದ್ರ ಮೋದಿ ಉತ್ತರಖಾಂಡದ ಕೇದರನಾಥಕ್ಕೆ ಭೇಟಿ ನೀಡಲಿದ್ದಾರೆ. ಈ ವೇಳೆ ಶಿವನ ಮಂದಿರಲ್ಲಿ ಪ್ರಾರ್ಥನೆ ಸಲ್ಲಿಸಲಿರುವ ಅವರು, ಬಳಿಕ ದೇಗುಲದ ಹಿಂದೆ ಶಂಕರಾಚಾರ್ಯರ ಸಮಾಧಿ ಸ್ಥಳದಲ್ಲಿ ನೂತನವಾಗಿ ಸ್ಥಾಪಿಸಲಾಗಿರುವ ಆದಿಗುರು ಶಂಕರಾಚಾರ್ಯ ಅವರ ಪುತ್ಥಳಿ ಅನಾವರಣಗೊಳಿಸಲಿದ್ದಾರೆ.

2013ರ ಜಲ ಪ್ರಳಯದಲ್ಲಿ ಹಾನಿಗೀಡಾದ ಶಂಕರಾಚಾರ್ಯ ಸಮಾಧಿಯನ್ನು ಇದೀಗ ಪುನರ್ ನಿರ್ಮಾಣ ಮಾಡಲಾಗಿದ್ದು, ಅದನ್ನು ಉದ್ಘಾಟಿಸಲಿದ್ದಾರೆ. ಜೊತೆಗೆ ರೂ.400ಕೋಟಿ ಮೌಲ್ಯದ ಕೇದಾರಪುರಿ ಮರು ನಿರ್ಮಾಣ ಯೋಜನೆಗಳು ಸೇರಿ ಇನ್ನಿತರ ಅಭಿವೃದ್ಧಿ ಯೋಜನೆಗಳಿಗೆ ಅವರು ಚಾಲನೆ ನೀಡಲಿದ್ದಾರೆ. ಪುತ್ಥಳಿ ಅನಾವರಣದ ಕಾರ್ಯಕ್ರಮ 12 ಜ್ಯೋತಿರ್ಲಿಂಗಗಳು, 4 ಶಂಕರಚಾರ್ಯರ ಮಠಗಳು, ದೇಶದ ಇತರ ದೇವಾಲಯಗಳಲ್ಲಿ ನೇರ ಪ್ರಸಾರವಾಗಲಿದೆ.

**ಪುತ್ಥಳಿ ಕೆತ್ತಿದ್ದು ಮೈಸೂರು ಶಿಲ್ಪಿ:** ಉತ್ತರಾಖಂಡದ ಕೇದಾರನಾಥದಲ್ಲಿ ಪ್ರಧಾನಿ ನರೇಂದ್ರ ಮೋದಿ ಅವರು ನವೆಂಬರ್ 5 ರಂದು ಉದ್ಘಾಟಿಸಲಿರುವ ಆದಿಗುರು ಶಂಕರಾಚಾರ್ಯರ ಸುಂದರ ಪುತ್ಥಳಿಯನ್ನು ಕೆತ್ತಿದ್ದು ಮೈಸೂರಿನ ಶಿಲ್ಪಿ ಅರುಣ್ ಯೋಗಿರಾಜ್. ಪ್ರಧಾನಿ ಕಾರ್ಯಾಲಯವೇ ದೇಶದೆಲ್ಲೆಡೆ ಶಿಲ್ಪಿಗಾಗಿ ಹುಡುಕಾಡಿ, ಕೊನೆಗೆ ಮೈಸೂರಿನ ಕಲಾವಿದನಿಂದ ಈ ಪುತ್ಥಳಿ ಕೆತ್ತಿಸಿದೆ. 2013ರಲ್ಲಿ ಭಾರಿ ಪ್ರವಾಹ ಉಂಟಾಗಿ ಕೇದಾರನಾಥದಲ್ಲಿರುವ ಆದಿ ಶಂಕರಚಾರ್ಯರ ಸಮಾಧಿ ಕೊಚ್ಚಿ ಹೋಗಿತ್ತು. ಅದರ ಮರುನಿರ್ಮಾಣದ ಭಾಗವಾಗಿ ಶಂಕರಾಚಾರ್ಯರ ಸಮಾಧಿ ಸ್ಥಳದಲ್ಲಿ ಪುತ್ಥಳಿ ಸ್ಥಾಪಿಸಲಾಗಿದೆ.

**ಮೈಸೂರಿನಿಂದ ಪುತ್ಥಳಿ ಸಾಗಿದ ಹಾದಿ:** ಮೈಸೂರಿನಲ್ಲಿ ಪುತ್ಥಳಿ ಬಳಿಕ ಅದನ್ನು ಉತ್ತರಾಖಂಡದ ಚಮೋಲಿ ಏರ್ ಬೇಸ್‌ವರೆಗೆ ರಸ್ತೆಯ ಮೂಲಕ ಸಾಗಿಸಲಾಯಿತು. ಅಲ್ಲಿಂದ ಕೇದಾರನಾಥಕ್ಕೆ ವಾಯು ಪಡೆ ಚಿನೂಕ್ ಹೆಲಿಕಾಪ್ಟರ್ ಮೂಲಕ ಸಾಗಿಸಲಾಗಿದೆ.

**12 ಅಡಿ ಎತ್ತರ 35 ಟನ್ ತೂಕ:** ಶಂಕರಚಾರ್ಯರ ಪುತ್ಥಳಿ 12 ಅಡಿ ಎತ್ತರವಿದ್ದು, ಕುಳಿತ ಭಂಗಿಯಲ್ಲಿದೆ. 35 ಟನ್ ತೂಕದ ಪುತ್ಥಳಿ ಕೆತ್ತಲು ಹೆಗ್ಗಡದೇವನಕೋಟೆಯಿಂದ ತರಲಾದ 120 ಟನ್‌ನ

ಕೃಷ್ಣ ಶಿಲೆ ಬಳಸಲಾಗಿದೆ. ಇದು ಗಾಳಿ–ಮಳೆ, ಬಿಸಿಲು ಮತ್ತು ಕಠಿಣ ಹವಾಮಾನ ತಾಳಿಕೊಳ್ಳುವ ಸಾಮರ್ಥ್ಯ ಹೊಂದಿದೆ. ಪುತ್ಥಳಿ ಹೊಳಪಿಗಾಗಿ ತೆಂಗಿನಕಾಯಿ ನೀರಿನಿಂದ ಪಾಲಿಶ್ ಮಾಡಲಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ:05.11.2021

## 19. ನವೆಂಬರ್ 29ರಿಂದ ಸಂಸತ್ತಿನ ಚಳಿಗಾಲದ ಅಧಿವೇಶನ

ಸಂಸತ್ತಿನ ಚಳಿಗಾಲದ ಅಧಿವೇಶನವನ್ನು ನವೆಂಬರ್ 29ರಿಂದ ಡಿಸೆಂಬರ್ 23ರವರೆಗೆ ನಡೆಸಲು ಸಂಸದೀಯ ವ್ಯವಹಾರಗಳ ಕುರಿತಾದ ಕೇಂದ್ರ ಸಂಪುಟ ಸಮಿತಿ ಶಿಫಾರಸು ಮಾಡಿದೆ. ಈ ಅಧಿವೇಶನ 20 ದಿನಗಳ ಕಾಲ ನಡೆಯಲಿದೆ. ರಾಜ್ಯಸಭೆ ಮತ್ತು ಲೋಕಸಭೆ ಕಲಾಪಗಳು ಕೋವಿಡ್ ನಿಯಮಾವಳಿಗಳ ಪಾಲನೆಯೊಂದಿಗೆ ನಡೆಯಲಿದೆ. ಎಲ್ಲಾ ಸಂಸದರು ಮಾಸ್ಕ್ ಧರಿಸುವುದು ಹಾಗೂ ಅಧಿವೇಶನಕ್ಕೂ ಮೊದಲು ಕೋವಿಡ್ ಪರೀಕ್ಷೆ ನಡೆಸುವುದು ಕಡ್ಡಾಯ ಎಂದು ಸೂಚಿಸಲಾಗಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ:09.11.2021.

## 20. ಎಂಪಿ ಲ್ಯಾಡ್ ಪುನರಾರಂಭ

ಕೋವಿಡ್ ಸಂಕಷ್ಟದ ಕಾರಣ ಸ್ಥಗಿತಗೊಂಡಿದ್ದ ಸಂಸದರ ಪ್ರದೇಶಾಭಿವೃದ್ಧಿ ನಿಧಿ (ಎಂಪಿಲ್ಯಾಡ್) ಯೋಜನೆಗೆ ಮರುಚಾಲನೆ ನೀಡಲು ಪ್ರಧಾನಿ ನರೇಂದ್ರ ಮೋದಿ ಅಧ್ಯಕ್ಷತೆಯಲ್ಲಿ ನಡೆದ ಕೇಂದ್ರ ಸಚಿವ ಸಂಪುಟ ತಿರ್ಮಾನಿಸಿದೆ.

ಕೇಂದ್ರ ಮಾಹಿತಿ ಮತ್ತು ಪ್ರಸಾರ ಖಾತೆ ಸಚಿವ ಅನುರಾಗ್ ಠಾಕೂರ್ ಸಂಪುಟ ಸಭೆಯ ನಿರ್ಧಾರಗಳ ಮಾಹಿತಿ ನೀಡಿದ್ದು, ಈ ಯೋಜನೆಯು 2025–26ರ ತನಕ ಮುಂದುವರಿಯಲಿದೆ. ಈ ವರ್ಷದ ಮಟ್ಟಿಗೆ ಅಂದರೆ 2021–22ನೇ ಹಣಕಾಸು ವರ್ಷದ ಉಳಿದ ಭಾಗಕ್ಕೆ ಅನ್ವಯವಾಗುವಂತೆ ಪ್ರತಿ ಸಂಸದರಿಗೆ ಎಂಪಿಲ್ಯಾಡ್ ಮೂಲಕ ತಲಾ 2 ಕೋಟಿ ರೂಪಾಯಿ ಏಕ ಕಂತಿನಲ್ಲಿ ಹಂಚಿಕೆಯಾಗಲಿದೆ. 2022–23 ರಿಂದ 2025–26 ರ ತನಕ ಪ್ರತಿ ವರ್ಷ ಪ್ರತಿ ಸಂಸದರಿಗೆ ಎಂಪಿಲ್ಯಾಡ್‌ಗೆ 5 ಕೋಟಿ ರೂಪಾಯಿ ಹಂಚಿಕೆಯಾಗಲಿದೆ. ಇದನ್ನು 20.5 ಕೋಟಿ ರೂಪಾಯಿ ಹಂಚಿಕೆಯಾಗಲಿದೆ. ಇದನ್ನು 205 ಕೋಟಿ ರೂಪಾಯಿಯ ಎರಡು ಕಂತುಗಳಲ್ಲಿ ಸರ್ಕಾರ ಹಂಚಿಕೆ ಮಾಡಲಿದೆ ಎಂದು ತಿಳಿಸಿದರು.

**ಕಳೆದ ವರ್ಷ ಏಪ್ರಿಲ್‌ನಲ್ಲಿ ಅಮಾನತ್ತು:** ಕೋವಿಡ್ ಸಂಕಷ್ಟ ಹಿನ್ನೆಲೆಯಲ್ಲಿ ಕಳೆದ ವರ್ಷ ಏಪ್ರಿಲ್‌ನಲ್ಲಿ ಸರ್ಕಾರ ಎಂಪಿಲ್ಯಾಡ್ ಯೋಜನೆಗಳನ್ನು 2020–21 ಮತ್ತು 2021–22ರ ಮಟ್ಟಿಗೆ ಅಮಾನತ್ತುಗೊಳಿಸಿತ್ತು. ಆರೋಗ್ಯ ಮೂಲಸೌಕರ್ಯ ಮತ್ತು ಕೋವಿಡ್ ಸಂಕಷ್ಟ ಪರಿಹಾರ ಕಾರ್ಯಕ್ಕೆ ನಿಧಿಯ ಅವಶ್ಯಕತೆ ಇರುವ ಕಾರಣ ಈ ಕ್ರಮ ತೆಗೆದುಕೊಳ್ಳುತ್ತಿರುವುದಾಗಿ ಕೇಂದ್ರ ಸರ್ಕಾರ ಘೋಷಿಸಿತ್ತು.

**ಏನಿದು ಯೋಜನೆ:**

- ಲೋಕಸಭೆ ಮತ್ತು ರಾಜ್ಯಸಭೆ ಸದಸ್ಯರಿಗೆ (ನಾಮ ನಿರ್ದೇಶಿತರು ಸೇರಿ) ಅವರು ಪ್ರತಿನಿಧಿಸುವ ಕ್ಷೇತ್ರದ ಪ್ರದೇಶಾಭಿವೃದ್ಧಿಗೆ ಪ್ರತಿ ವರ್ಷ 5 ಕೋಟಿ ರೂಪಾಯಿ ಅನುದಾನ ಒದಗಿಸುವ ಯೋಜನೆ ಇದು.
- ಕೇಂದ್ರ ಸರ್ಕಾರ ಪ್ರಧಾನ ಮಂತ್ರಿ ಗರೀಬ್. ಕಲ್ಯಾಣ್ ಯೋಜನೆಗೆ ರೂ.1.7 ಲಕ್ಷ ಕೋಟಿ ಪ್ಯಾಕೇಜ್ ಘೋಷಿಸಿತ್ತು. ಇದರ 4.5% ಅಂದರೆ 7,800 ಕೋಟಿ ರೂಪಾಯಿಯನ್ನು ಎಂಪಿಲ್ಯಾಡ್ ಯೋಜನೆ ಸ್ಥಗಿತಗೊಳಿಸಿದ್ದರಿಂದ ಸಿಕ್ಕಿತ್ತು.

- 1993ರ ಡಿಸೆಂಬರ್ 23 ರಂದು ಅಂದಿನ ಪ್ರಧಾನಿ ಪಿ.ವಿ ನರಸಿಂಹರಾವ್ ಈ ಯೋಜನೆ ಘೋಷಿಸಿದ್ದರು.
- 2018ರಲ್ಲಿ ಈ ಯೋಜನೆ ಮುಂದುವರಿಕೆಗೆ ಸರ್ಕಾರ ಒಪ್ಪಿಗೆ ನೀಡಿದಾಗ, ಕುಡಿಯುವ ನೀರು, ಶಿಕ್ಷಣ, ಸಾರ್ವಜನಿಕ ಆರೋಗ್ಯ, ನೈರ್ಮಲ್ಯ, ರಸ್ತೆ ನಿರ್ಮಾಣ ಮುಂತಾದವುಗಳಿಗೆ ಎಂಪಿಲ್ಯಾಡ್ ನಿಧಿ ಬಳಸುವಂತೆ ಸೂಚನೆ ನೀಡಿತ್ತು.
- 2017ರ ತನಕ 19 ಲಕ್ಷದಷ್ಟು ಪ್ರಾಜೆಕ್ಟ್‌ಗಳಿಗೆ 45,000 ಕೋಟಿ ರೂಪಾಯಿ ಅನುದಾನ ಎಂಪಿಲ್ಯಾಡ್ ಯೋಜನೆ ಮೂಲಕ ಬಿಡುಗಡೆಯಾಗಿದೆ.

**ಹತ್ತಿ ವ್ಯವಹಾರಕ್ಕೆ ರೂ.17,409 ಕೋಟಿ:** ಏಳು ಹತ್ತಿ ಬೆಳೆ ಋತುಗಳಿಗೆ ಅನ್ವಯಿಸುವಂತೆ (2014–15ರಿಂದ ಆರಂಭಿಸಿ 2020–21ರ ಅವಧಿ)ಹತ್ತಿ ಸಂಗ್ರಹಣೆಗಾಗಿ 17,409 ಕೋಟಿ ರೂಪಾಯಿಯ ಬದ್ರತಾ ಬೆಂಬಲ ಬೆಲೆಯ ಕಾಟನ್ ಕಾರ್ಪೊರೇಷನ್ ಆಫ್ ಇಂಡಿಯಾ (ಸಿಸಿಐ) ಪ್ರಸ್ತಾವನೆಯನ್ನು ಕೇಂದ್ರ ಸಚಿವ ಸಂಪುಟ ಅನುಮೋದಿಸಿದೆ. ಕನಿಷ್ಟ ಬೆಂಬಲ ಬೆಲೆ ವ್ಯವಹಾರದಲ್ಲಿ ಈ ಅವಧಿಯಲ್ಲಿ ನಷ್ಟ ಭರ್ತಿಗಾಗಿ ನೀಡಿರುವ ವೆಚ್ಚ ಇದಾಗಿದೆ.

ಆಧಾರ: ವಿಜಯವಾಣಿ, ದಿನಾಂಕ:11.11.2021.

## 21. ಆದಿವಾಸಿಗಳ ನಿರ್ಲಕ್ಷ್ಯ ಕಿಡಿ

ಹಲವು ಶತಮಾನಗಳಿಂದಲೂ ಬುಡಕಟ್ಟು ಸಮುದಾಯ ಭಾರತೀಯ ಸಂಸ್ಕೃತಿಗೆ ಅಪಾರವಾದ ಕೊಡುಗೆಯನ್ನು ನೀಡುತ್ತಾ ಬಂದಿದೆ. ವನವಾಸದ ಸಂದರ್ಭದಲ್ಲಿ ಭಗವಾನ್ ಶ್ರೀರಾಮನಿಗೂ ಆದಿವಾಸಿಗಳು ಸ್ಫೂರ್ತಿಯಾಗಿದ್ದರು. ದೇಶದಲ್ಲಿ ಆಡಳಿತ ನಡೆಸಿದ ಹಿಂದಿನ ಸರ್ಕಾರಗಳು ಆದಿವಾಸಿಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದವು.

ಕಾಂಗ್ರೆಸ್ ವಿರುದ್ಧ ಪ್ರಧಾನಿ ನರೇಂದ್ರ ಮೋದಿ ವಾಗ್ದಾಳಿ ನಡೆಸಿದ್ದಾರೆ. ಬುಡಕಟ್ಟು ಜನಾಂಗದ ಸ್ವಾತಂತ್ರ್ಯ ಹೋರಾಟಗಾರ ಬಿರ್ಸಾ ಮುಂಡಾ ಅವರ ಸ್ಮರಣಾರ್ಥ ಮಧ್ಯಪ್ರದೇಶದ ಭೋಪಾಲ್‌ನಲ್ಲಿ ಆಯೋಜಿಸಲಾಗಿದ್ದ ಬೃಹತ್ 'ಜನಜಾತೀಯ ಗೌರವ್ ದಿವಸ್' ಕಾರ್ಯಕ್ರಮದಲ್ಲಿ ಅವರು ಮಾತನಾಡಿದ್ದಾರೆ.

ಹಿಂದಿನ ಸರ್ಕಾರಗಳು ಬುಡಕಟ್ಟು ಸಮುದಾಯಕ್ಕೆ ಆದ್ಯತೆಯನ್ನೇ ನೀಡಲಿಲ್ಲ. ದೇಶದ ಶೇ.10 ರಷ್ಟು ಜನಸಂಖ್ಯೆಯನ್ನೇ ನಿರ್ಲಕ್ಷಿಸಿದವು ಎಂದು ಮೋದಿ ಕಿಡಿಕಾರಿದ್ದಾರೆ. ಪ್ರಸ್ತುತ ಬುಡಕಟ್ಟು ಜನಾಂಗವು ದೇಶದ ಅಭಿವೃದ್ಧಿಯ ಪಾಲುದಾರರಾಗಿದ್ದಾರೆ. ಬಿಜೆಪಿ ನೇತೃತ್ವದ ಸರ್ಕಾರ ಜಾರಿ ಮಾಡಿರುವ ವಿವಿಧ ಯೋಜನೆಗಳಿಂದ ಪ್ರಯೋಜನ ಪಡೆಯುತ್ತಿದ್ದಾರೆ. ಅದರ ಮುಂದುವರಿದ ಭಾಗವಾಗಿ, ಗಾಂಧಿ ಜಯಂತಿ, ಸರ್ದಾರ್ ಪಟೇಲ್ ಜಯಂತಿ, ಅಂಬೇಡ್ಕರ್ ಜಯಂತಿ ಮಾದರಿಯಲ್ಲಿಯೇ ಬುಡಕಟ್ಟು ಜನಾಂಗದ ಸ್ವಾತಂತ್ರ್ಯ ಹೋರಾಟಗಾರ ಬಿರ್ಸಾ ಮುಂಡಾ ಅವರ ಸ್ಮರಣಾರ್ಥ ಪ್ರತಿ ನವೆಂಬರ್ 15 ಅನ್ನು 'ಜನಜಾತಿಯ ಗೌರವ್ ದಿವಸ್' ಎಂದು ಆಚರಿಸಲು ನಿರ್ಧರಿಸಿದ್ದೇವೆ ಎಂದಿದ್ದಾರೆ ಮೋದಿ.

ಜಾರ್ಖಂಡ್‌ನ ರಾಂಚಿಯಲ್ಲಿ ವಿಡಿಯೋ ಕಾನ್ಫರೆನ್ಸ್ ಮೂಲಕ ಬಿರ್ಸಾ ಮುಂಡಾ ಸ್ಮರಣಾರ್ಥ ಮ್ಯೂಸಿಯಂ ಉದ್ಘಾಟಿಸಿದ ಮೋದಿ, 'ಬಿರ್ಸಾ ಅವರು ನಮ್ಮ ಮನಸ್ಸಿನಲ್ಲಿ ದೇವರ ಸ್ಥಾನದಲ್ಲಿದ್ದಾರೆ' ಎಂದಿದ್ದಾರೆ. ಭಾರತದ ಬುಡಕಟ್ಟು ಸಮಾಜದ ಅಸ್ಮಿತೆಯನ್ನೇ ಅಳಿಸಲು ಹೊರಟಿದ್ದ ಸಿದ್ಧಾಂತದ ವಿರುದ್ಧ ಬಿರ್ಸಾ ಮುಂಡಾ ಹೋರಾಡಿದ್ದರು ಎಂದು ಹೇಳಿದ್ದಾರೆ.

**ಮೊಮ್ಮಗನಿಂದ ಇಂದು ಚಾಲನೆ:** ದೆಹಲಿಯಲ್ಲಿ ನಡೆಯಲಿರುವ ಆ ಮಹೋತ್ಸವವನ್ನು ಬಿರ್ಸಾ ಮುಂಡಾ ಅವರ ಮೊಮ್ಮಗ ಸುಖರಾಮ್ ಮುಂಡಾ ಉದ್ಘಾಟಿಸಲಿದ್ದಾರೆ. ಬುಡಕಟ್ಟು ಕಲೆ ಸಂಸ್ಕೃತಿ ಆಹಾರ ಪದ್ಧತಿಯನ್ನು ಪ್ರದರ್ಶಿಸುವ ರಾಷ್ಟ್ರೀಯ ಉತ್ಸವ ಇದಾಗಿದೆ.

**ಪೂರ್ವಾಂಚಲ ಎಕ್ಸ್ ಪ್ರೆಸ್‌ವೇ ಇಂದು ಲೋಕಾರ್ಪಣೆ:** ಉತ್ತರ ಪ್ರದೇಶದ ರಾಜಧಾನಿ ಲಕ್ನೋ ಮತ್ತು ಗಾಜಿಪುರದ ನಡುವೆ ಸಂಪರ್ಕ ಕಲ್ಪಿಸುವ ಹೊಸ ಪೂರ್ವಂಚಲ ಎಕ್ಸ್‌ಪ್ರೆಸ್‌ವೇಯನ್ನು ಪ್ರಧಾನಿ ಮೋದಿ ಲೋಕಾರ್ಪಣೆಗೊಳಿಸಲಿದ್ದಾರೆ. ಈ ಕಾರ್ಯಕ್ರಮದಲ್ಲಿ ಎಸ್‌ಯು–30 ಎಂಕೆಐ, ಜಾಗುವಾರ್, ಮೀರಾಜ್ 2000 ಯುದ್ಧ ವಿಮಾನಗಳ ಅದ್ದೂರಿ ಏರ್ ಶೋ ನಡೆಸಲು ನಿರ್ಧರಿಸಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:16.11.2021.

## 22. ರಾಜ್ಯಗಳಿಗೆ 95 ಸಾವಿರ ಕೋಟಿ

ರಾಜ್ಯಗಳಿಗೆ ತೆರಿಗೆ ಹಂಚಿಕೆಯಾಗಿ ರೂ.95,082 ಕೋಟಿ ಮೊತ್ತ ಬಿಡುಗಡೆ ಮಾಡಲಿದೆ ಎಂದು ಕೇಂದ್ರ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ತಿಳಿಸಿದ್ದಾರೆ. ರಾಜ್ಯಗಳ ವಿತ್ತ ಸಚಿವರ ಜೊತೆಗೆ ಸಭೆಯ ಬಳಿಕ ಅವರು ಮಾತನಾಡಿದ್ದಾರೆ. ನವಂಬರ್ 22 ರಂದು ಸಾಮಾನ್ಯವಾಗಿ ಬಿಡುಗಡೆ ಮಾಡುವ ರೂ.47,541 ಕೋಟಿಗಳಿಗೆ ಬದಲಾಗಿ ಇಂದು ಕಂತು ಮುಂಗಡ ಸಹಿತ ರೂ.95,082 ಕೋಟಿ ಬಿಡುಗಡೆ ಮಾಡಲು ಹಣಕಾಸು ಕಾರ್ಯದರ್ಶಿಗೆ ಸೂಚಿಸಿದ್ದಾಗಿ ಹೇಳಿದ್ದಾರೆ. ಪೆಟ್ರೋಲ್ ಮೇಲೆ ರೂ.5, ಡೀಸೆಲ್ ಮೇಲೆ ರೂ.10 ಅಬಕಾರಿ ಸುಂಕ ಕಡಿತದಿಂದ ಉಂಟಾಗಿರುವ ನಷ್ಟವನ್ನು ಕೇಂದ್ರ ಸರ್ಕಾರವೇ ಭರಿಸಲಿದೆ ಎಂದರು.

ಆಧಾರ: ಉದಯವಾಣಿ, ದಿನಾಂಕ:16.11.2021.

## 23. Tech summit should focus on turbulence-hit farm sector: V-P

Communities, which depend on the agriculture sector, are going through turbulent times because of market disruptions and climatic changes; and rech expositions like Bengaluru Technology summit (BTS) should focus on innovations to solve their woes, said vice-president M.Venkaiah Naidu.

"I would like this summit to focus mire on agriculture, which is the basic culture of our country and also across the globe. So, you must come out with scientific ideas and tech innovations, which will bring happiness and changes in the lives of people of all sections," he said at the inaugural session of BTS-2021, the annual tech event.

Mr. Naidu said Bengaluru and India are " happening places" in terms of technology innovations for the entire globe. "I would like to remind people that the basic philosophy of India is share and care. So, we should share knowledge, share success stories and also share our experiences with the world around and continue to come out with new ideas and new innovations.. Eventually, knowledge, research, development, technology, IT, BT and every thing should be for the happiness of the people, that was the ultimate goal," he said.

Mr. Naidu said policies and programmes are decided by parliament. But, at the end of the day, delivery, reaching out to the people is the mist important thing " for that, we must advancements and constantly look for new ideas," he said. "Active private sector

participation is essential for generating jobs and also to bring in real transformation through out the country".

He urged entrepreneurs and private sector players to actively participate in creating more jobs by launching innovative ideas and applications that would lead to a digital revolution and technological transformation throughout the country.

**Touching every section:** Karnataka Chief Minister Basavaraj Bommai said his government was committed to creating a new order through innovations that had the potential to touch every section of the social pyramid.

'we invite all innovators with open arms and open hearts to come, invoate and participate. Success is a small world, but achievement is something much larger. I am looking at bigger and specific take aways from BTS this time. This event should be something that touches the entire ecosystem," said the Chief Minister.

'**India's GCC model, innovation, tech expertise attractions for global markets':** The GCC (global capability centre) model is redefining what it means to operate as influencers and innovative thought leaders within global organizations, said John Waldron, President and Chief Operating Officer, Goldman Sachs group, in a virtual meet.

In his keynote address on 'Harnessing the Global Innovation through Capability Center Model' at Bengaluru Technology Summit-2021 (BTS), he said,"We are encouraged by the significant progress across India in applying cutting-edge technology to build products and solutions to serve the domestic and the world markets." India is home to over 1,000 GCC and deep fintech hubs in Bengaluru and Hyderabad have been driven by a couple of critical factors. The first and most important one is the investment we make in our people and the talent of this country while the other key enabler of our success has been connectivity," Mr. Waldron said. Goldman |Sachs's GCC currently has over 8,000 employees across Bengaluru and Hyderabad.

"Together, they represent one of the firm's deepest fintech hubs, with established track records across engineering, emerging technologies as well as business execution," he said, Also speaking at BTS, Martin Schroter, Chairman and CEO, Kyndryl, the 19 billion infrastructure services business of IBM which was recently spun off as a separate entity, said, the world had been increasingly turning towards India as a leader in pushing innovation and nurturing technical expertise.

"India is buring with innovative ideas and the country has helped industries transform globally. The BTS reflects the tech mindset of Karnataka. We are keen to partner with India in building next-gen of digital infrastructure for the entire country,' Mr. Schroter said. Kyndryl was working towards building the next–generation digital infrastructure across India by supporting complex infrastructure in areas such as banking, telecom and supply chain that were key to providing citizen-centric services across the country, he said.

It is important for people to have access to digital tools that will offer them economic opportunities. After all, we all compete in an economy, but live in a society," he said. The company found purpose in the country's robust mission for digitization and it had invested in creating 1,000s of jobs in Bengaluru, Chennai, Hyderabad and Gurugram, it said.

Courtesy:The Hindu, Dated:18.11.2021

## 24. 5 ಕೆ.ಜಿ. ಉಚಿತ ಧಾನ್ಯ ಮಾರ್ಚ್‌ವರೆಗೆ ವಿಸ್ತರಣೆ

ಪ್ರಧಾನ ಮಂತ್ರಿ ಗರೀಬ್ ಕಲ್ಯಾಣ್ ಅನ್ನ ಯೋಜನೆ ಅಡಿಯಲ್ಲಿ, ಪ್ರತಿ ತಿಂಗಳು ಐದು ಕೆ.ಜಿ ಆಹಾರ ಧಾನ್ಯವನ್ನು ಉಚಿತವಾಗಿ ನೀಡುವುದನ್ನು 2022ರ ಮಾರ್ಚ್‌ವರೆಗೆ ವಿಸ್ತರಿಸಲಾಗಿದೆ. ಈ ನಿರ್ಧಾರದಿಂದಾಗಿ ಸರ್ಕಾರದ ಬೊಕ್ಕಸಕ್ಕೆ 53,344 ಕೋಟಿ ಹೊರೆ ಬೀಳಲಿದೆ. ಈಗಿನ ವಿಸ್ತರಣೆಯಿಂದಾಗಿ ಯೋಜನೆಯ ಒಟ್ಟು ವೆಚ್ಚವು 2.6 ಲಕ್ಷ ಕೋಟಿಗೆ ಹೆಚ್ಚಲಿದೆ.

ರಾಷ್ಟ್ರೀಯ ಆಹಾರ ಭದ್ರತೆ ಕಾಯ್ದೆ (ಎನ್‌ಎಫ್‌ಎಸ್‌ಎ) ವ್ಯಾಪ್ತಿಯಲ್ಲಿ ಬರುವ 80 ಕೋಟಿಗೂ ಹೆಚ್ಚು ಜನರಿಗೆ ಯೋಜನೆಯಿಂದ ಅನುಕೂಲ ಆಗಲಿದೆ. ಪ್ರಧಾನಿ ನರೇಂದ್ರ ಮೋದಿ ನೇತೃತ್ವದಲ್ಲಿ ನಡೆದ ಕೇಂದ್ರ ಸಚಿವ ಸಂಪುಟ ಸಭೆಯಲ್ಲಿ ಈ ನಿರ್ಧಾರ ತೆಗೆದುಕೊಳ್ಳಲಾಗಿದೆ.

ಕೋವಿಡ್ ಸಾಂಕ್ರಮಿಕವು ತೀವ್ರವಾಗಿದ್ದ ಸಂದರ್ಭದಲ್ಲಿ ಸಂಕಷ್ಟಕ್ಕೆ ಒಳಗಾದ ಬಡಜನರಿಗೆ ನೆರವಾಗುವುದಕ್ಕಾಗಿ 2020ರ ಮಾರ್ಚ್‌ನಲ್ಲಿ ಈ ಯೋಜನೆಯನ್ನು ಘೋಷಿಸಲಾಗಿತ್ತು. ಎನ್‌ಎಫ್‌ಎಸ್‌ಎ ಅಡಿಯಲ್ಲಿ 2 ರಿಂದ 3ರ ದರದಲ್ಲಿ ಜನರಿಗೆ ನೀಡಲಾಗುತ್ತಿರುವ ಆಹಾರ ಧಾನ್ಯದ ಜೊತೆಗೆ ಹೆಚ್ಚುವರಿಯಾಗಿ ಐದು ಕೆ.ಜಿ.ಯನ್ನು ನೀಡಲಾಗುತ್ತಿದೆ.

ಹಲವು ಬಾರಿ ಈ ಯೋಜನೆ ಅವಧಿ ವಿಸ್ತರಣೆ ನಡೆದಿದೆ. ಯೋಜನೆಯ ಮೊದಲ ಹಂತವು 2020ರ ಏಪ್ರಿಲ್–ಜೂನ್, ಎರಡನೇ ಹಂತವು 2020ರ ಜುಲೈ–ನವೆಂಬರ್, ಮೂರನೇ ಹಂತವು 2021ರ ಮೇ–ಜೂನ್ ಮತ್ತು ನಾಲ್ಕನೇ ಹಂತವು 2021ರ ಜುಲೈ–ನವೆಂಬರ್‌ವರೆಗೆ ಜಾರಿಯಲ್ಲಿತ್ತು. ಈ ತಿಂಗಳಲ್ಲಿ ಯೋಜನೆಯು ಕೊನೆಯಾಗಬೇಕಿತ್ತು. ಈಗ, ಇನ್ನು ನಾಲ್ಕು ತಿಂಗಳಿಗೆ ಯೋಜನೆಯನ್ನು ವಿಸ್ತರಿಸಲಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ:25.11.2021.

## 25. Over 14 lakh bank transactions failed in PM's Kisan scheme

Nearly 375 crore is pending for reprocessing due to transactions failures in the government's flagship scheme-Pradhan Mantri Kisan Samman Nidhi Yojana (PM-KISAN) since its launch in 2019.

Under the scheme, eligible marginal farmers have been electronically given 6,000 annually in three equal instalments. There were 14.22 lakh transfers pending due to transaction failure during the 2019-20 fiscal. As per a reply in parliament by the Ministry of Agriculture, the number of failed transactions came down to 8.19 lakh in the 2020-21 fiscal. In the ongoing 2021-22 fiscal, failed transactions were 9.11 lakh till November 30.

The amount pending for reprocessing due to failed transactions was 182.78 crore in 2019-20, 163.99 crore in 2020-21 and 28.47 crore in 2021-22.

In a written reply to the Upper House, Agriculture Minister Narendra Singh Tomar said failed transactions were less than one percent since the launch of the PM-KISAN scheme. “Under the PM-KISAN scheme, the total number of transactions is 80,27,44,674, of which the number of failed transactions is less than one per cent ,” he said. Tomar said the cumulative number of failed transactions was 69,02,227 from February 1, 2019, till November 30 of this year. Of these, 32,02,408 were successfully reprocessed. The Minister said transactions failed due to various reasons such as an account closed or transferred, invalid IFSC code, account inactive, account dormant, amount exceeding the limit set on account by the bank for credit/debit per transaction and others.

The ministry informed an SoP has been developed to curb transaction failures. Tomar mentioned that his ministry in weekly video meetings takes up the matter with states. Under the |Scheme, more than 11.60 crore farmers have been given financial benefits of approximately 1.60 lakh crore.

Courtecy:Indian Express, Dated:04.12.2021

## 26. ಬಿಟ್ ಮಾಹಿತಿಗೆ ಕೇಂದ್ರ ಹಿಂದೇಟು

ರಾಜ್ಯದಲ್ಲಿ ನಡೆದಿದೆ ಎನ್ನಲಾದ ಬಿಟ್ ಕಾಯಿನ್ ಹಗರಣ ಬಗ್ಗೆ ಹೆಚ್ಚಿನ ಮಾಹಿತಿ ಹಂಚಿಕೊಳ್ಳಲು ಕೇಂದ್ರ ಹಣಕಾಸು ಇಲಾಖೆ ಹಿಂದೇಟು ಹಾಕಿದೆ.

ಹಾಸನ ಲೋಕಸಭಾ ಸದಸ್ಯ ಪ್ರಜ್ವಲ್ ರೇವಣ್ಣ ಅವರು ಬಿಟ್ ಕಾಯಿನ್ ಹಗರಣದ ಬಗ್ಗೆ ತನಿಖೆಯಾಗುತ್ತಿದೆಯೇ ಅಥವಾ ತನಿಖೆಯನ್ನು ಇಡಿ ಅಥವಾ ಸಿಬಿಐಗೆ ವರ್ಗಾವಣೆ ಮಾಡುವ ಉದ್ದೇಶವಿದೆಯೇ ಎಂದು ಕೇಂದ್ರ ಹಣಕಾಸು ಇಲಾಖೆಯನ್ನು ಲೋಕಸಭೆಯಲ್ಲಿ ಪ್ರಶ್ನಿಸಿದ್ದರು. ಇದಕ್ಕೆ ಉತ್ತರಿಸಿರುವ ಕೇಂದ್ರ ಹಣಕಾಸು ಇಲಾಖೆ ರಾಜ್ಯ ಸಚಿವ ಪಂಕಜ್ ಚೌಧುರಿ, ಪೊಲೀಸ್ ಮತ್ತು ಸಾರ್ವಜನಿಕ ಸುವ್ಯವಸ್ಥೆ ರಾಜ್ಯ ವಿಷಯವಾಗಿದ್ದು ಹಣಕಾಸು ಹಗರಣ ಸೇರಿದಂತೆ ವಿವಿಧ ಮಾದರಿಯ ಹಗರಣಗಳನ್ನು ಆಯಾ ರಾಜ್ಯಗಳ ತನಿಖಾ ಏಜೆನ್ಸಿಗಳು ಕೈಗೊಳ್ಳುತ್ತವೆ.

ಆದೇ ರೀತಿ ಕರ್ನಾಟಕ ಪೊಲೀಸರು ಈ ಬಗ್ಗೆ ತನಿಖೆ ನಡೆಸುತ್ತಿದ್ದಾರೆ. ಬೆಂಗಳೂರಿನಲ್ಲಿರುವ ಕೇಂದ್ರ ಸರ್ಕಾರದ ಜಾರಿ ನಿರ್ದೇಶನಾಲಯ ಘಟಕದ ಅಧಿಕಾರಿಗಳು ಬಿಟ್ ಕಾಯಿನ್ ಹಗರಣದ ಬಗ್ಗೆ ಕೇಸು ದಾಖಲಿಸಿಕೊಂಡಿದ್ದಾರೆ. ಆದರೆ ಸಾರ್ವಜನಿಕ ಹಿತಾಸಕ್ತಿ ಗಮನದಲ್ಲಿಟ್ಟುಕೊಂಡು ಈ ಸಂದರ್ಭದಲ್ಲಿ ಮಾಹಿತಿ ಹಂಚಿಕೊಳ್ಳದಿರಲು ತೀರ್ಮಾನಿಸಲಾಗಿದೆ ಎಂದು ಲೋಕಸಭೆಗೆ ತಿಳಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:05.12.2021.

## 27. ಮತ್ತಿಬ್ಬರಲ್ಲಿ ಒಮಿಕ್ರಾನ್ ದೃಢ

ಜಗತ್ತಿನಲ್ಲಿ ಆತಂಕಕ್ಕೆ ಕಾರಣವಾಗಿರುವ ಕೊರೋನಾ ವೈರಸ್‌ನ ಹೊಸ ಪ್ರಭೇದ ಒಮಿಕ್ರಾನ್ ತಲಾ ಒಂದು ಪ್ರಕರಣ ಗುಜರಾತ್‌ನ ಜಾಮ್‌ನಗರ ಮತ್ತು ಮಹಾರಾಷ್ಟ್ರದ ಮುಂಬೈಯಲ್ಲಿ ಪತ್ತೆಯಾಗಿದ್ದು ದೇಶದಲ್ಲಿ ದೃಢಪಟ್ಟ ಒಮಿಕ್ರಾನ್ ಸೋಂಕಿತರ ಸಂಖ್ಯೆ ನಾಲ್ಕಕ್ಕೆ ಏರಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸೋಂಕಿಗೆ ಬೇಲಿ ಹಾಕಲು ಕಠಿಣ ಕ್ರಮಗಳಿಗೆ ಮುಂದಾಗುತ್ತಿವೆ.

ಒಮಿಕ್ರಾನ್ ಮೊದಲು ಪತ್ತೆಯಾದ ದಕ್ಷಿಣ ಆಫ್ರಿಕಾದಿಂದ ಮುಂಬೈಗೆ ಮರಳಿದ್ದ ಒಬ್ಬ ವ್ಯಕ್ತಿಯಲ್ಲಿ ಈ ರೂಪಾತರಿ ಇರುವುದು ದೃಢಪಟ್ಟಿದೆ ಎಂದು ಅಧಿಕಾರಿಗಳು ತಿಳಿಸಿದ್ದಾರೆ. ಗುಜರಾತ್‌ನ

ಜಾಮ್‌ನಗರಕ್ಕೆ ಜಿಂಬಾಬ್ವೆಯಿಂದ ಮರಳಿದ್ದ ವ್ಯಕ್ತಿಯಲ್ಲಿ ಒಮಿಕ್ರಾನ್ ತಳಿಯ ಸೋಂಕಿರುವುದು ದೃಢಪಟ್ಟಿದೆ ಎಂದು ರಾಜ್ಯದ ಆರೋಗ್ಯ ಇಲಾಖೆ ಅಧಿಕಾರಿಗಳು ತಿಳಿಸಿದ್ದಾರೆ. ಬೆಂಗಳೂರಿನಲ್ಲಿ ಪತ್ತೆಯಾದ ಎರಡು ಕೇಸ್ ಸೇರಿ ಇದು ದೇಶದ ಮೂರನೇ ಒಮಿಕ್ರಾನ್ ಪ್ರಕರಣವಾಗಿದೆ. ಜಾಮ್‌ನಗರದ ನಿವಾಸಿಯಾದ 72 ವರ್ಷದ ಪುರುಷನಲ್ಲಿ ಕೊರೋನಾ ಸೋಂಕಿರುವುದು ದೃಢಪಟ್ಟ ನಂತರ ಆತನ ಗಂಟಲು ದ್ರವದ ಸ್ಯಾಂಪಲ್ ಅನ್ನು ಜಿನೋಮ್ ಸೀಕ್ವೆನ್ಸಿಂಗ್‌ಗಾಗಿ ಕಳಿಸಲಾಗಿತ್ತು. ಆತನಲ್ಲಿ ಒಮಿಕ್ರಾನ್ ಸೋಂಕಿರುವುದು ಪರೀಕ್ಷೆಯಲ್ಲಿ ಖಚಿತಪಟ್ಟಿದೆ ಎಂದು ಗುಜರಾತ್ ಆರೋಗ್ಯ ಇಲಾಖೆ ಆಯುಕ್ತ ಜೈ ಪ್ರಕಾಶ್ ಶಿವಹರೆ ತಿಳಿಸಿದ್ದಾರೆ.

**ಕಂಟೇನ್ಮೆಂಟ್ ವಲಯ:** ಒಮಿಕ್ರಾನ್ ಸೋಂಕಿತ ವ್ಯಕ್ತಿ ವಾಸವಿರುವ ಪ್ರದೇಶದಲ್ಲಿ ಮೈಕ್ರೋ– ಕಂಟೇನ್ಮೆಂಟ್ ವಲಯವನ್ನು ರಚಿಸಲಾಗಿದೆ. ಅಧಿಕಾರಿಗಳು ಅಲ್ಲಿರುವ ಜನರನ್ನು ಪತ್ತೆ ಹಚ್ಚಿ ಪರೀಕ್ಷೆ ನಡೆಸುತ್ತಿದ್ದಾರೆ. ಸೋಂಕಿತ ವ್ಯಕ್ತಿಯನ್ನು ಪ್ರತ್ಯೇಕವಾಗಿಟ್ಟು ನಿಗಾ ಇರಿಸಲಾಗಿದೆ ಎಂದು ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಮನೋ ಅಗರ್‌ವಾಲ್ ತಿಳಿಸಿದ್ದಾರೆ. ಒಮಿಕ್ರಾನ್ ಅಪಾಯದ ಕಾರಣ ದೇಶಕ್ಕೆ ಬರುತ್ತಿರುವ ಎಲ್ಲಾ ಅಂತರರಾಷ್ಟ್ರೀಯ ಪ್ರಯಾಣಿಕರ ಮೇಲೆ ತೀವ್ರ ನಿಗಾ ಇಡಲಾಗುತ್ತಿದೆ ಹಾಗೂ ಅವರ ಪರೀಕ್ಷೆ ಮಾಡಲಾಗುತ್ತಿದೆ.

**ಮುಂಬೈಯಲ್ಲಿ ಹೊಸ ನಿಯಮಗಳು:** ದೇಶದ ಆರ್ಥಿಕ ರಾಜಧಾನಿ ಮುಂಬೈ ಮಹಾನಗರಿಯಲ್ಲಿ ಸೋಂಕು ತಡೆಗೆ ಕಠಿಣ ನಿಯಮಗಳನ್ನು ಜಾರಿಗೊಳಿಸಲಾಗುತ್ತಿದೆ. ಮುಂಬೈಯ ವಾರ್ಡ್ ವಾರ್ ರೂಂ ತಂಡ ಹೋಂ ಕ್ವಾರಂಟೈನ್‌ನಲ್ಲಿರುವವರಿಗೆ ದಿನಕ್ಕೆ ಕನಿಷ್ಠ ಐದು ಸಲ ಫೋನ್ ಮಾಡಿ ಅವರ ಆರೋಗ್ಯವನ್ನು ವಿಚಾರಿಸಿಕೊಳ್ಳಲಿದೆ. ನಿಯಮಗಳನ್ನು ಪಾಲಿಸುತ್ತಿದ್ದಾರೆಯೇ ಎನ್ನುವುದನ್ನು ಖಚಿತಪಡಿಸಿಕೊಳ್ಳಲಾಗುತ್ತದೆ.

**ಡೆಲ್ಟಾಗಿಂತ ದುಪ್ಪಟ್ಟು ವೇಗ**: ಒಮಿಕ್ರಾನ್ ಡೆಲ್ಟಾಗಿಂತ ಎರಡುಪಟ್ಟು ವೇಗದಲ್ಲಿ ಹರಡುತ್ತಿದೆ. ವೈರಾಣುವಿನ ಸೋಂಕುಕಾರಕತೆ ಮತ್ತು ದೇಹದ ರೋಗ ನಿರೋಧಕ ಶಕ್ತಿಯಿಂದ ತಪ್ಪಿಸಿಕೊಳ್ಳುವ ಸಾಮರ್ಥ್ಯ ಸಂಯೋಜನೆಯಿಂದಾಗಿ ಹರಡುವ ಪ್ರಮಾಣ ಹೆಚ್ಚಿದೆ ಎಂದು ಅಧ್ಯಯನದ ನೇತೃತ್ವ ವಹಿಸಿದ ಕಾರ್ಲ್ ಪಿಯರ್‌ಸನ್ ಹೇಳಿದ್ದಾರೆ. ಪುರ್‌ಸನ್ ಲಂಡನ್ ಸೂಲ್ ಆಫ್ ಹೈಜೀನ್ ಆ್ಯಂಡ್ ಟ್ರಾಪಿಕಲ್ ಮೆಡಿಸಿನ್‌ನ ಗಣತಿಯ ಮಾಡೆಲರ್ ಆಗಿದ್ದಾರೆ. ಡೆಲ್ಟಾ ತಳಿ ಕೊರೋನಾ ವೈರಸ್‌ನ ಇದುವರೆಗಿನ ರೂಪಾಂತರಿಗಳಲ್ಲೇ ಹೆಚ್ಚು ಅಪಾಯಕಾರಿಯಾಗಿತ್ತು. ಒಮಿಕ್ರಾನ್ ಕೂಡ 2 ಪಟ್ಟು ಜಾಸ್ತಿ ವೇಗದಲ್ಲಿ ಹರಡುತ್ತದೆ ಎಂದು ವಿಜ್ಞಾನಿಗಳು ಹೇಳಿದ್ದಾರೆ.

**ಕರ್ನಾಟಕ ಸಹಿತ 5 ರಾಜ್ಯಗಳಿಗೆ ಅಲರ್ಟ್**: ಒಮಿಕ್ರಾನ್ ಭೀತಿಯ ನಡುವೆಯೇ ಕೋವಿಡ್ ಪ್ರಕರಣಗಳು ಹೆಚ್ಚುತ್ತಿರುವ ಐದು ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶ ಜಮ್ಮು ಮತ್ತು ಕಾಶ್ಮೀರಕ್ಕೆ ಕೇಂದ್ರ ಸರ್ಕಾರ ಎಚ್ಚರಿಕೆ ನೀಡಿದೆ. ಕರ್ನಾಟಕ, ಒಡಿಶಾ, ಕೇರಳ, ತಮಿಳುನಾಡು, ಮಿಜೋರಾಂ ಮತ್ತು ಜಮ್ಮು ಮತ್ತು ಕಾಶ್ಮೀರ ಸರ್ಕಾರಗಳಿಗೆ ಪತ್ರ ಬರೆದಿರುವ ಕೇಂದ್ರ ಆರೋಗ್ಯ ಇಲಾಖೆ ಕಾರ್ಯದರ್ಶಿ ರಾಜೇಶ್ ಭೂಷಣ್, ಕೋವಿಡ್‌ನ ದೈನಿಕ ಕೇಸ್ ಹಾಗೂ ಸಾವಿನ ಸಂಖ್ಯೆ ಹೆಚ್ಚುತ್ತಿರುವುದಕ್ಕೆ ಕಳವಳ ವ್ಯಕ್ತಪಡಿಸಿದ್ದಾರೆ. ಒಮಿಕ್ರಾನ್ ಭೀತಿ ಹಿನ್ನೆಲೆಯಲ್ಲಿ ಇದು ಕಳವಳಕಾರಿ ಎಂದಿದ್ದಾರೆ. ವಿಶೇಷವಾಗಿ ರಿಸ್ಕ್ ದೇಶಗಳಿಂದ ಆಗಮಿಸುವವರು ಮತ್ತು ಹಾಟ್ ಸ್ಪಾಟ್‌ಗಳ ಮೇಲೆ ನಿಗಾ, ಎಲ್ಲ ಕೋವಿಡ್ ರೋಗಿಗಳ ಸ್ಯಾಂಪಲ್‌ಗಳನ್ನು ಜಿನೋಮ್ ಸೀಕ್ವರನ್ಸಿಂಗ್‌ಗೆ ಕಲಿಸುವುದನ್ನು ಖಾತರಿಪಡಿಸುವಂತೆ ಪತ್ರದಲ್ಲಿ ಸೂಚಿಸಿದ್ದಾರೆ. ಜಮ್ಮು ಮತ್ತು ಕಾಶ್ಮೀರದ ಅಥವಾ ಜಿಲ್ಲೆಯಲ್ಲಿ ನವೆಂಬರ್ 26 ರಿಂದ ಡಿಸೆಂಬರ್ 2ರ ನಡುವೆ ಹಿಂದಿನ ವಾರಕ್ಕೆ ಹೋಲಿಸಿದರೆ ದೈನಿಕ ಕೇಸ್‌ಗಳಲ್ಲಿ ಶೇಕಡ 727 ರಷ್ಟು ಆಘಾತಕಾರಿ ಪ್ರಮಾಣದ ಏರಿಕೆಯಾಗಿದೆ.

**ವಿದೇಶಿ ಪ್ರಯಾಣಿಕರು ನಾಪತ್ತೆ:** ಒಮಿಕ್ರಾನ್ ಆತಂಕ ನಡುವೆ, ವಿದೇಶಗಳಿಂದ ಆಗಮಿಸುವ ಪ್ರಯಾಣಿಕರು ಅದರಲ್ಲೂ ವಿಶೇಷವಾಗಿ ಅಪಾಯಕಾರಿ (ರಿಸ್ಕ್) ದೇಶಗಳಿಂದ ಬರುವವರು ಕಡ್ಡಾಯ ಪರೀಕ್ಷೆಯಿಂದ ತಪ್ಪಿಸಿಕೊಂಡು ತಲೆಮರೆಸಿಕೊಳ್ಳುತ್ತಿರುವ ವಿದ್ಯಮಾನ ಸರ್ಕಾರಕ್ಕೆ ತಲೆನೋವಾಗಿ ಪರಿಣಮಿಸಿದೆ. ಕ್ವಾರಂಟೈನ್ ಶಿಷ್ಟಾಚಾರ ಕೂಡ ಪಾಲಿಸದೆ ಸೋಂಕು ಇನ್ನಷ್ಟು ಹರಡಲು ಕಾರಣವಾಗುತ್ತಿದ್ದಾರೆ ಎನ್ನುವುದು ಆತಂಕಕ್ಕೆ ಕಾರಣವಾಗಿದೆ. ಉತ್ತರ ಪ್ರದೇಶ ಮೀರತ್‌ಗೆ ಆಗಮಿಸಿದ್ದ ಸುಮಾರು 300 ಪ್ರಯಾಣಿಕರಲ್ಲಿ 13 ಜನರು ಸುಳ್ಳು ವಿಳಾಸ ನೀಡಿ ನಾಪತ್ತೆಯಾಗಿದ್ದಾರೆ. ಆ ಪೈಕಿ ಏಳು ಮಂದಿ ಒಮಿಕ್ರಾನ್ ಮೊದಲ ಬಾರಿಗೆ ಪತ್ತೆಯಾದ ದಕ್ಷಿಣ ಆಫ್ರಿಕಾದಿಂದ ಬಂದವರಾಗಿದ್ದಾರೆ. ಅವರನ್ನು ಪತ್ತೆ ಮಾಡಿ ಕೋವಿಡ್ ಪರೀಕ್ಷೆಗೆ ಒಳಪಡಿಸಲು ಅಧಿಕಾರಿಗಳು ಪ್ರಯತ್ನಿಸುತ್ತಿದ್ದಾರೆ. ದಕ್ಷಿಣ ಆಫ್ರಿಕಾದಿಂದ ಬಂದ ಒಬ್ಬ ಮಹಿಳೆ ಕ್ವಾರಂಟೈನ್ ನಿಯಮ ಉಲ್ಲಂಘಿಸಿದ್ದಕ್ಕಾಗಿ ಚಂಡೀಗಢದ ಅಧಿಕಾರಿಗಳು ಆಕೆ ವಿರುದ್ಧ ಮೊಕದ್ದಮೆ ದಾಖಲಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:06.12.2021.

## 28. ಸಮಾಪ್ತಿಯತ್ತ ರೈತರ ಪ್ರತಿಭಟನೆ

ರೈತರ ಬೇಡಿಕೆಗಳನ್ನು ಈಡೇರಿಸುವುದಾಗಿ ಕೇಂದ್ರ ಸರ್ಕಾರ ಲಿಖಿತ ಭರವಸೆ ನೀಡಿರುವ ಹಿನ್ನೆಲೆಯಲ್ಲಿ ಮೂರು ಕೃಷಿ ಕಾಯಿದೆಗಳ ವಿರುದ್ಧ ರಾಷ್ಟ್ರ ರಾಜಧಾನಿಯ ಗಡಿಗಳಲ್ಲಿ ರೈತರು ಒಂದು ವರ್ಷದಿಂದ ನಡೆಸುತ್ತಿರುವ ಪ್ರತಿಭಟನೆ ಡಿಸೆಂಬರ್ –8ಕ್ಕೆ ಅಂತ್ಯಗೊಳ್ಳುವುದು ಬಹುತೇಕ ಖಚಿತವಾಗಿದೆ.

ಪ್ರತಿಭಟನೆಯಲ್ಲಿ ಭಾಗವಹಿಸಿರುವ 40 ರೈತ ಸಂಘಟನೆಗಳ ಒಕ್ಕೂಟವಾದ ಸಂಯುಕ್ತ ಕಿಸಾನ್ ಮೋರ್ಚಾ (ಎಸ್‌ಕೆಎಂ) ಸಂಘು ಗಡಿಯಲ್ಲಿ ನಡೆಸಿದ ಸಭೆಯಲ್ಲಿ ಪ್ರತಿಭಟನೆ ಹಿಂಪಡೆಯುವ ಒಲವು ವ್ಯಕ್ತವಾಗಿದೆ. ಮತ್ತೊಂದು ಸುತ್ತಿನ ಸಭೆ ನಡೆಸಿ ಅಧಿಕೃತವಾಗಿ ಘೋಷಿಸುವ ಸಾಧ್ಯತೆ ಇದೆ.

ಪ್ರಧಾನಿ ನರೇಂದ್ರ ಮೋದಿ ಅವರು ಗುರುನಾನಕ್ ಜಯಂತಿ ದಿನವಾದ ನವೆಂಬರ್ 19 ರಂದು ಮೂರು ಕೃಷಿ ಕಾಯಿದೆಗಳನ್ನು ಹಿಂಪಡೆಯುವ ನಿರ್ಧಾರ ಘೋಷಿಸಿದ್ದರು. ಕೃಷಿ ಉತ್ಪನ್ನ ವ್ಯಾಪಾರ ಮತ್ತು ವಾಣಿಜ್ಯ (ಉತ್ತೇಜನ ಮತ್ತು ಅನುಕೂಲ) ಕಾಯಿದೆ–2020, ಬೆಲೆ ಖಾತಿ ಮತ್ತು ಕೃಷಿ ಸೇವೆಗಳಿಗೆ ರೈತರ (ಸಬಲೀಕರಣ ಮತ್ತು ರಕ್ಷಣೆ) ಒಪ್ಪಿಗೆ ಕಾಯಿದೆ, ಅಗತ್ಯ ಸರಕುಗಳ (ತಿದ್ದುಪಡಿ) ಕಾಯಿದೆಗಳನ್ನು ಹಿಂಪಡೆಯುವ ವಿಧೇಯಕವನ್ನು ಸಂಸತ್‌ನ ಚಳಿಗಾಲದ ಅಧಿವೇಶನದ ಮೊದಲ ದಿನವೇ ಸರ್ಕಾರ ಮಂಡಿಸಿತು ಮತ್ತು ಉಭಯ ಸದನಗಳ ಒಪ್ಪಿಗೆಯೂ ಲಭಿಸಿತು. ಡಿಸೆಂಬರ್–1 ರಂದು ವಿಧೇಯಕಕ್ಕೆ ರಾಷ್ಟ್ರಪತಿ ಅಂಕಿತ ಹಾಕಿದ್ದಾರೆ. ಅದಾಗ್ಯೂ ಪ್ರತಿಭಟನೆ ಹಿಂಪಡೆಯಲು ರೈತ ಸಂಘಟನೆಗಳು ನಿರಾಕರಿಸಿದ್ದವು.

ಕೃಷಿ ಕಾಯಿದೆಗಳನ್ನು ಹಿಂಪಡೆಯುವ ನಿರ್ಧಾರವನ್ನು ಪ್ರಧಾನಿ ಘೋಷಿಸಿದಾಗ ಈ ಕುರಿತು ಸಂಸತ್‌ನಲ್ಲಿ ವಿಧೇಯಕ ಅಂಗೀಕಾರ ಆಗುವವರೆಗೂ ಪ್ರತಿಭಟನೆ ಮುಂದುವರಿಯುತ್ತದೆ ಎಂದು ರೈತ ಸಂಘಟನೆಗಳು ಘೋಷಿಸಿದ್ದವು. ಆ ಬಳಿಕ ಕನಿಷ್ಠ ಬೆಂಬಲ ಬೆಲೆ (ಎಂಎಸ್‌ಪಿ) ವ್ಯವಸ್ಥೆಗೆ ಕಾನೂನು ಖಾತರಿ ನೀಡಬೇಕು ಎಂಬ ಬೇಡಿಕೆ ಇಟ್ಟಿದ್ದವು. ಎಂಎಸ್‌ಪಿ ವಿಚಾರ ಪರಿಶೀಲಿಸಲು ಸಮಿತಿ ರಚಿಸುವ ಭರವಸೆ ನೀಡಿದ ಸರ್ಕಾರವು ಎಸ್‌ಕೆಎಂನ ಐವರು ಸದಸ್ಯರು ಸಮಿತಿಯಲ್ಲಿರುತ್ತಾರೆ ಎಂದು ಪ್ರಕಟಿಸಿತು. ಅದರಂತೆ ಐವರೂ ಸದಸ್ಯರ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ. ನಂತರ ಪ್ರತಿಭಟನಾ ನಿರತ ರೈತರ ವಿರುದ್ಧ ದಾಖಲಾಗಿರುವ ಪ್ರಕರಣಗಳನ್ನು ಹಿಂಪಡೆಯಬೇಕು ಮತ್ತು ಪ್ರತಿಭಟನೆ ವೇಳೆ ಮೃತಪಟ್ಟ ರೈತರ ಕುಟುಂಬಗಳಿಗೆ ಪರಿಹಾರ ನೀಡಬೇಕು ಎಂಬ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಪ್ರತಿಭಟನೆ ಮುಂದುವರಿಸಲಾಗಿತ್ತು.

ಜಾಣ ನಡೆ ಪ್ರದರ್ಶಿಸಿದ ಕೇಂದ್ರ ಸರ್ಕಾರವು ರೈತರ ಬೇಡಿಕೆಗಳನ್ನು ಈಡೇರಿಸುವ ನಿಟ್ಟಿನಲ್ಲಿ ಕೈಗೊಂಡಿರುವ ಕ್ರಮಗಳ ಮಾಹಿತಿ ಒಳಗೊಂಡ ಪತ್ರವನ್ನು ಎಸ್‌ಕೆಎಂ ಮುಖಂಡರಿಗೆ ಹಸ್ತಾಂತರಿಸಿತು. ಬಳಿಕ ನಡೆದ ಎಸ್‌ಕೆಎಂ ಸಭೆಯಲ್ಲಿ ಬಹುತೇಕ ರೈತ ಸಂಘಟನೆಗಳು ಪ್ರತಿಭಟನೆ ಹಿಂಪಡೆಯುವ ಕುರಿತು ಒಲವು ವ್ಯಕ್ತಪಡಿಸಿದರು. ಕೃಷಿ ಕಾಯಿದೆಗಳು ರದ್ದಾಗಿವೆ. ಉಳಿದ ಬೇಡಿಕೆಗಳ ಈಡೇರಿಕೆ ಸಂಬಂಧ ಕೇಂದ್ರ ಸರ್ಕಾರ ಲಿಖಿತ ಭರವಸೆ ನೀಡಿದೆ. ಹೀಗಿರುವಾಗ ಒಂದಿಲ್ಲೊಂದು ನೆಪ ಇಟ್ಟುಕೊಂಡು ಪ್ರತಿಭಟನೆ ಮುಂದುವರಿಸುವುದರಲ್ಲಿ ಅರ್ಥವಿಲ್ಲ ಎಂಬುದಾಗಿ ಬಹುತೇಕ ಸಂಘಟನೆಗಳು ಅಭಿಪ್ರಾಯಪಟ್ಟರು ಎಂದು ಮೂಲಗಳು ತಿಳಿಸಿವೆ.

**ರೈತರ ಈಗಿನ ಬೇಡಿಕೆಗಳು:**

- ಸಮಗ್ರ ಉತ್ಪಾದನೆ ವೆಚ್ಚದ ಜೊತೆಗೆ ಶೇ.50 ರಷ್ಟು ಲಾಭದ ಮೊತ್ತ ಸೇರಿದಂತೆ ರೈತರ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ ನೀಡಲು ಪೂರಕವಾದ ವಿಧೇಯಕ ಮಂಡನೆ ಹಾಗೂ ಅನುಮೋದನೆ.
- 2020–2021ನೇ ಸಾಲಿನ ವಿದ್ಯುತ್ ತಿದ್ದುಪಡಿ ವಿಧೇಯಕ ಕರಡು ಹಿಂಪಡೆಯಬೇಕು. ಸಂಸತ್ತಿನಲ್ಲಿ ಈ ಬಗ್ಗೆ ಚರ್ಚೆಗೆ ಸಿದ್ಧತೆ ನಡೆಸಲಾಗಿದ್ದರೂ ಮಂಡನೆ ಆಗಿಲ್ಲ.
- ರಾಷ್ಟ್ರ ರಾಜಧಾನಿ ಪ್ರದೇಶ (ಎನ್‌ಸಿಆರ್) ಮತ್ತು ಸುತ್ತ ವಾಯುಗುಣಮಟ್ಟ ಸುಧಾರಣೆ ಕಾರಣದಿಂದ ಕೂಳೆ ಸುಡುವವರ ಮೇಲೆ ಹೇರಲಾಗಿರುವ ನಿರ್ಬಂಧಗಳಲ್ಲಿ ವಿನಾಯಿತಿ. ಪ್ರಮುಖವಾಗಿ ರೈತರಿಗೆ ಕೂಳೆ ಸುಡಲು ಅನುಕೂಲ ಮಾಡಿಕೊಡಬೇಕು.
- 2020ರ ಜೂನ್‌ನಿಂದ ಕೃಷಿ ಕಾನೂನು ವಿರೋಧಿಸಿ ದಿಲ್ಲಿ ಹರಿಯಾಣ, ಚಂಡೀಗಢ, ಉತ್ತರಪ್ರದೇಶದಲ್ಲಿ ಪ್ರತಿಭಟನೆ ನಡೆಸಿದ ಅನೇಕ ರೈತರ ವಿರುದ್ಧ ದಾಖಲಿಸಿರುವ ಪ್ರಕರಣಗಳು ರದ್ದಾಗಬೇಕು. ಕೆಲವು ಕ್ರಿಮಿನಲ್ ಕೇಸ್‌ಗಳನ್ನು ಕೂಡ ಆಯಾ ರಾಜ್ಯ ಸರ್ಕಾರಗಳು ಹಿಂಪಡೆಯಬೇಕು.
- ಲಖೀಂಪುರ ಖೇರಿಯಲ್ಲಿ ಪ್ರತಿಭಟನಾ ನಿರತ ರೈತರ ಮೇಲೆ ವಾಹನ ಹರಿಸಿದ ಆರೋಪ ಹೊತ್ತಿರುವ ಆಶಿಶ್ ಮುಶ್ರಾನ ತಂದೆ, ಕೇಂದ್ರ ಸಚಿವರಾಗಿರುವ ಅಜಯ್ ಮಿಶ್ರಾರನ್ನು ಸಚಿವ ಸಂಪುಟದಿಂದ ವಜಾಗೊಳಿಸಬೇಕು.
- ಪ್ರತಿಭಟನೆಯಲ್ಲಿ ಮೃತ 700 ರೈತರ ಸಂತ್ರಸ್ತ ಕುಟುಂಬಗಳಿಗೆ ಕೇಂದ್ರ ಸರ್ಕಾರದಿಂದ ಪರಿಹಾರ ಘೋಷಣೆ, ಜೊತೆಗೆ ಸ್ಮಾರಕ ನಿರ್ಮಾಣಕ್ಕೆ ಭೂಮಿ ಹಂಚಿಕೆ ಆಗಬೇಕು.

**ಹೋರಾಟದ ಹಾದಿ:**

- 2020 ನವೆಂಬರ್ 25 ಪಂಜಾಬ್ ಹರಿಯಾಣ ರೈತರಿಂದ ದಿಲ್ಲಿ ಚಲೋಗೆ ಕರೆ ಕೊರೋನಾ ಹಿನ್ನಲೆ ಪ್ರತಿಭಟನೆಗೆ ಅವಕಾಶ ನಿರಾಕರಿಸಿದ ದಿಲ್ಲಿ ಪೊಲೀಸರು.
- 2020 ನವೆಂಬರ್ 26 ದಿಲ್ಲಿಗೆ ತೆರಳಲು ಮುಂದಾದ ರೈತರು, ಹರಿಯಾಣದ ಅಂಬಾಲದಲ್ಲಿ ರೈತರ ಮೇಲೆ ಅಶ್ರು ವಾಯು, ಜಲ ಫಿರಂಗಿ ಪ್ರಯೋಗ.
- 2020 ನವೆಂಬರ್ 28 ರೈತರ ಜೊತೆ ಮಾತುಕತೆಗೆ ನಾವು ಸಿದ್ಧ ಪ್ರತಿಭಟನೆ ಸ್ಥಳದಿಂದ ತೆರಳಿ ಎಂದು ಕೇಂದ್ರ ಗೃಹ ಸಚಿವ ಅಮಿತ್ ಶಾ ಮನವಿ, ಕೋರಿಕೆ ತಿರಸ್ಕರಿಸಿದ ರೈತರು.
- 2020 ಡಿಸೆಂಬರ್ 3 ರೈತ ಮುಖಂಡರ ಜೊತೆ ಕೇಂದ್ರ ಸರ್ಕಾರ ಮೊದಲ ಸುತ್ತಿನ ಮಾತುಕತೆ.

- 2020 ಡಿಸೆಂಬರ್ 8 ಭಾರತ್ ಬಂದ್‌ಗೆ ಕರೆ ನೀಡಿದ ರೈತರು, ಹಲವು ರಾಜ್ಯಗಳಲ್ಲಿ ಬೆಂಬಲ.
- 2021 ಫೆಬ್ರವರಿ 6 ಸಾಮಾಜಿಕ ಚಳುವಳಿಗಾರರಾದ ರಿಹನ್ನಾ, ಗ್ರೇಟಾಥನ್‌ಬರ್ಗ್ ಸೇರಿ ಹಲವರನ್ನು ರೈತರ ಚಳುವಳಿಯತ್ತ ಸೆಳೆಯಲು ಟೂಲ್ ಕಿಟ್ ರಚನೆ, ದೇಶಾದ್ಯಂತ ರೈತರಿಂದ ಚಕ್ಕಾ ಜಾಮ್.
- 2021 ಮೇ 27 ಪ್ರತಿಭಟನೆ ಆರು ತಿಂಗಳು ತುಂಬಿದ ಹಿನ್ನಲೆಯಲ್ಲಿ ರೈತ ಸಂಘಟನೆಗಳಿಂದ ದೇಶಾದ್ಯಂತ ಕರಾಳ ದಿನ ಆಚರಣೆ.
- 2021 ಜುಲೈ 22 ಸಂಸತ್ ಮುಂಗಾರು ಅಧಿವೇಶನ ಆರಂಭವಾಗುತ್ತಲೇ ಸಂಸತ್ ಭವನದ ಬಳಿ ರೈತರಿಂದ ಕಿಸಾನ್ ಸಂಸತ್ ಆರಂಭ.
- 2021 ನವೆಂಬರ್ 19 ಕೃಷಿ ಕಾಯಿದೆಗಳನ್ನು ಹಿಂಪಡೆಯುವುದಾಗಿ ಪ್ರಧಾನಿ ಘೋಷಣೆ, ಸಂಸತ್‌ನಲ್ಲಿ ವಿಧೇಯಕ ಅಂಗೀಕಾರ ಆಗುವ ತನಕ ಪ್ರತಿಭಟನೆ ಮುಂದುವರಿಸಲು ರೈತರ ನಿರ್ಧಾರ.

ಆಧಾರ: ವಿಜಯ ಕರ್ನಾಟಕ, ದಿನಾಂಕ:08.12.2021

## 29. ರೂ.900 ಕೋಟಿ ವೆಚ್ಚದ ಕಾಶಿ ವಿಶ್ವನಾಥ ಧಾಮ್ ಕಾರಿಡಾರ್

ಪಟ್ಟಭದ್ರ ಹಿತಾಸಕ್ತಿಗಳು ವಾರಾಣಸಿಯ ಬಗ್ಗೆ ಆರೋಪಗಳನ್ನು ಹಬ್ಬಿಸುತ್ತಿದ್ದರು, ಕಾಶಿಯಲ್ಲಿರುವುದು ಒಂದೇ ಸರ್ಕಾರ. ಅದು ಕೈಲಿ ಢಮರು ಹಿಡಿದಿರುವ ವಿಶ್ವನಾಥನ ಸರ್ಕಾರ. ಮಹಾದೇವನ ಇಚ್ಚೇ ಇಲ್ಲದೇ ಇಲ್ಲಿಗೆ ಯಾರೂ ಬರಲು ಸಾಧ್ಯವಿಲ್ಲ. ಇಲ್ಲಿ ಏನೇ ಆದರೂ ಅದನ್ನು ಮಹಾದೇವನೇ ಮಾಡಿಸುತ್ತಾನೆ ಎಂದು ಪ್ರಧಾನ ಮಂತ್ರಿ ನರೇಂದ್ರ ಮೋದಿ ತಿಳಿಸಿದ್ದಾರೆ.

ಉತ್ತರ ಪ್ರದೇಶದ ತಮ್ಮ ಸ್ವ ಕ್ಷೇತ್ರವಾದ ವಾರಾಣಸಿಯಲ್ಲಿ ರೂ.339 ಕೋಟಿ ವೆಚ್ಚದ ವಿಶ್ವಾನಾಥ ಕಾರಿಡಾರ್ ಉದ್ಘಾಟಿಸಿ ಪ್ರಧಾನಿ ಮಾತನಾಡಿದರು. ಭೋಜ್‌ಪುರಿ ಭಾಷೆಯಲ್ಲಿ ತಮ್ಮ ಭಾಷಣ ಪ್ರಾರಂಭಿಸಿದ ಮೋದಿ ಈ ವೈಭವೋಪೇತ ಕಾರಿಡಾರ್ ಅನ್ನು ನಿರ್ಮಿಸಿರುವ ಎಲ್ಲಾ ಕಾರ್ಮಿಕರಿಗೂ ಧನ್ಯವಾದ ತಿಳಿಸಿದರು.

ವಾರಾಣಾಸಿ ಹಲವು ದಾಳಿಗಳನ್ನು ಎದುರಿಸಿಯೂ ಸುದೀರ್ಘ ಕಾಲದಿಂದ ಅಚ್ಚಳಿಯದೇ ನಿಂತಿದೆ. ಹಲವಾರು ಸಂಸ್ಕೃತಿಯನ್ನು ನಾಶ ಮಾಡಲು ಯತ್ನಿಸಿದ್ದಾರೆ. ಒಬ್ಬ ಔರಂಗಜೇಬ ಬಂದಾಗಲೆಲ್ಲ ಒಬ್ಬ ಶಿವಾಜಿ ತಲೆ ಎತ್ತಿ ನಿಲ್ಲುತ್ತಾನೆ ಎಂದು ಮಾರ್ಮಿಕವಾಗಿ ನುಡಿದ ಪ್ರಧಾನಿ, 1700ರಲ್ಲಿ ಅಹಲ್ಯಾಬಾಯಿ ಹೋಳ್ಕರ್ ಅವರು ದೇವಾಲಯವನ್ನು ಪುನರ್ ನಿರ್ಮಾಣ ಮಾಡಿದಾಗ ಕಾಶಿಯಲ್ಲಿ ಹೆಚ್ಚಿನ ಕಾಮಗಾರಿಗಳು ನಡೆದಿದ್ದವು ಎಂದು ಸ್ಮರಿಸಿದರು.

ವಾರಣಾಸಿಯ ನಾಗರಿಕ ಪರಂಪರೆ ಶ್ರೇಷ್ಠವಾದುದು ಎಷ್ಟೇ ಸುಲ್ತಾನರು ಬಂದರು, ಹೋದರು ಬನಾರಸ್ಸು ಮಾತ್ರ ಹಾಗೆಯೇ ಉಳಿದುಕೊಂಡಿದೆ. ಅಕ್ರಮಣಕಾರರು ಈ ನಗರದ ಮೇಲೆ ದಾಳಿ ಮಾಡಿದ್ದಾರೆ. ನಾಶ ಮಾಡಲು ಪ್ರಯತ್ನಿಸಿದ್ದಾರೆ. ಇತಿಹಾಸವು ಔರಂಗಜೇಬನ ಕ್ರೌರ್ಯ, ಅವರ ಭಯೋತ್ಪಾದನೆಗೆ ಸಾಕ್ಷಿಯಾಗಿದೆ. ಆತ ಕತ್ತಿಯಿಂದ ನಾಗರಿಕತೆಯನ್ನು ಬದಲಾಯಿಸಲು ಪ್ರಯತ್ನಿಸಿದ್ದ. ಆತ ಮತಾಂಧತೆಯಿಂದ ಸಂಸ್ಕೃತಿಯನ್ನು ತುಳಿಯಲು ಪ್ರಯತ್ನಿಸಿದ. ಆದರೆ, ಜಗತ್ತಿನ ಉಳಿದ ಭಾಗಗಳಿಗಿಂತಲೂ ಭಿನ್ನವಾದ ಈ ಮಣ್ಣು ಒಬ್ಬ ಮೊಗಲ್ ಚಕ್ರವರ್ತಿಗೆ ಬದಲಾಗಿ ಶಿವಾಜಿಯೊಬ್ಬನನ್ನು

ಹುಟ್ಟುಹಾಕಿತು. ಸಲಾರ್ ಮಸೂದನಂತಹವರು ಎದ್ದು ನಿಂತಾಗ ರಾಜಾ ಸುಹಾಲ್ ದೇವ್ ಅವರಂತಹ ಯೋಧರು ಒಗ್ಗಟ್ಟಿನ ಶಕ್ತಿಯನ್ನು ಪ್ರದರ್ಶಿಸಿದರು ಎಂದು ಭಾರತದ ವೀರ ಪರಂಪರೆಯನ್ನು ಸ್ಮರಿಸಿದರು.

**ಕೊರೋನಾದಲ್ಲೂ ಸ್ಥಗಿತವಾಗಿಲ್ಲ:** ಕೋವಿಡ್ ಸಾಂಕ್ರಮಿಕದ ಅವಧಿಯಲ್ಲೂ ಕಾರಿಡಾರ್ ನಿರ್ಮಾಣ ಕಾಮಗಾರಿ ಸ್ಥಗಿತಗೊಳ್ಳಲಿಲ್ಲ. ಈ ಹಿಂದೆ ದೇವಾಲಯದ ಪ್ರಾಂಗಣ ಕೇವಲ 3,00 ಚದರ ಅಡಿಯಷ್ಟಿತ್ತು. ಈಗ 5 ಲಕ್ಷ ಚದರ ಅಡಿಯಷ್ಟಾಗಿದೆ. 50,000–75,000 ಮಂದಿ ಭಕ್ತಾಧಿಗಳು ದೇವಾಲಯ ಹಾಗೂ ದೇವಾಲಯದ ಪ್ರಾಗಂಣಕ್ಕೆ ಏಕ ಕಾಲದಲ್ಲಿ ಬರಬಹುದಾಗಿದೆ ಎಂದು ಮೋದಿ ಹೇಳಿದ್ದಾರೆ.

**ಕಟ್ಟಡವಲ್ಲ ಸಂಸ್ಕೃತಿಯ ಪ್ರತೀಕ:** ಕಾಶಿ ವಿಶ್ವನಾಥ ಧಾಮದ ಹೊಸ ಸಂಕೀರ್ಣವು ಭವ್ಯವಾದ ಕಟ್ಟಡ ಮಾತ್ರವಲ್ಲ. ಭಾರತದ ಸನಾತನ ಸಂಸ್ಕೃತಿಯ ಪ್ರತೀಕ. ನಮ್ಮ ಆಧ್ಯಾತ್ಮಿಕ ಆತ್ಮ ಮತ್ತು ಭಾರತದ ಪ್ರಾಚೀನತೆ ಸಂಪ್ರದಾಯಗಳ ಸಂಕೇತವಾಗಿದೆ ಎಂದು ಮೋದಿ ಹೇಳಿದರು.

**ಸ್ವಾವಲಂಬಿ ಭಾರತಕ್ಕೆ ಸಂಕಲ್ಪ:** ಸ್ವಾವಲಂಬಿ ಭಾರತದ ನಿರ್ಮಾಣಕ್ಕಾಗಿ ಮೂರು ಸಂಕಲ್ಪಗಳನ್ನು ಭಾರತೀಯವರು ಮಾಡಬೇಕಿದೆ. ಸ್ವಚ್ಚತೆ ಸೃಷ್ಟಿ ಆವಿಷ್ಕಾರ ಮತ್ತು ನಿರಂತರ ಪ್ರಯತ್ನಗಳೇ ಆ ಮೂರು ಸಂಕಲ್ಪಗಳೆಂದು ಪ್ರಧಾನಿ ಮೋದಿ ಪ್ರತಿಪಾದಿಸಿದರು.

ನನ್ನ ಪ್ರಕಾರ ಪ್ರತಿಯೊಬ್ಬ ಭಾರತೀಯರು ದೇಶದ ಭಾಗವೇ ಹೀಗಾಗಿ ಅವರ ಬಳಿ ನಾನು ಒಂದು ಕೋರಿಕೆಯನ್ನು ಸಲ್ಲಿಸುತ್ತೇನೆ. ಇದು ನನಗಾಗಿ ಅಲ್ಲ. ದೇಶಕ್ಕಾಗಿ ಭಾರತೀಯರು ಮೂರು ನಿರ್ಣಯಗಳನ್ನು ಕೈಗೊಳ್ಳಬೇಕು. ಸ್ವಚ್ಛತೆ ಆವಿಷ್ಕಾರ ಮತ್ತು ಸೃಷ್ಟಿ ಸ್ವಾವಲಂಬಿ ಭಾರತದ ನಿರ್ಮಾಣಕ್ಕಾಗಿ ನಿರಂತರ ಪ್ರಯತ್ನ ನಡೆಸುವ ಸಂಕಲ್ಪವನ್ನು ದೇಶದ ಜನ ತೊಡಬೇಕು ಎಂದು ಮೋದಿ ತಿಳಿಸಿದರು.

**ಸ್ವಚ್ಛತೆ ಜೀವನದ ಮಾರ್ಗ:** ಸ್ವಚ್ಛತೆಯು ಜೀವನದ ಮಾರ್ಗ ಈ ಜೀವನ ಮಾರ್ಗದಲ್ಲಿ ವಿಶೇಷವಾಗಿ ನಮಾಮಿ ಗಂಗಾ ಮಿಷನ್‌ನಲ್ಲಿ ಜನರು ಭಾಗವಹಿಸಬೇಕು. ಎರಡನೇ ಸಂಕಲ್ಪ ಇಂದು ಈ ಸಾವಿರ ವರ್ಷಗಳಷ್ಟು ಹಳೆಯದಾದ ಕಾಶಿಯಿಂದ, ನಾನು ಪ್ರತಿಯೊಬ್ಬ ದೇಶವಾಸಿಗಳಿಗೆ ಕರೆ ನೀಡುತ್ತೇನೆ. ಸಂಪೂರ್ಣ ಆತ್ಮವಿಶ್ವಾಸದೊಂದಿಗೆ ಆವಿಷ್ಕಾರದಲ್ಲಿ ತೊಡಗಿಸಿಕೊಳ್ಳಿ, ಹೊಸದನ್ನು ರಚಿಸಿ, ಸೃಷ್ಟಿ ಮಾಡಿ ಅದನ್ನು ನವೀನ ರೀತಿಯಲ್ಲಿ ಮಾಡಿ ಎಂದು ಉತ್ಪಾದಕತೆಯ ಅಗತ್ಯವನ್ನು ಪ್ರತಿಪಾದಿಸಿದರು. ಭಾರತವು 100 ವರ್ಷಗಳ ಸ್ವಾತಂತ್ರ್ಯವನ್ನು ಆಚರಿಸುವ ಹೊತ್ತಿಗೆ, ದೇಶ ಹೇಗಿರಬೇಕು ಎಂಬುದರ ನಿಟ್ಟಿನಲ್ಲಿ ನಾವೂ ಈಗಿನಿಂದಲೇ ಕೆಲಸ ಮಾಡಬೇಕು ಎಂದು ಹೇಳಿದರು.

**ಮೋದಿ ಕನಸಿನ ಯೋಜನೆ:** ಪ್ರಧಾನಿ ಮೋದಿ ಅವರು ಧಾರ್ಮಿಕತೆಗೆ ಹೆಚ್ಚು ಆಸಕ್ತಿ ಇದೆ. ಧಾರ್ಮಿಕ ಮತ್ತು ಆಧ್ಯಾತ್ಮಕ ನಗರ ಕಾಶಿ ಮತ್ತು ವಾರಾಣಸಿಯೊಂದಿಗೆ ಮೋದಿ ಸುದೀರ್ಘ ಒಡನಾಟದ ಇತಿಹಾಸವನ್ನು ಹೊಂದಿದ್ದಾರೆ. ವಾರಾಣಾಸಿಯಿಂದಲೇ ಲೋಕಸಭೆ ಚುನಾವಣೆಯಲ್ಲಿ ಜಯಿಸಿ ಅವರು ಪ್ರಧಾನಿಯಾದರು. ಪ್ರಧಾನಿ ಆದ ನಂತರವು ಅನೇಕ ಬಾರಿ ವಾರಾಣಸಿಗೆ ಭೇಟಿ ನೀಡಿ ನಗರದೊಂದಿಗಿನ ತಮ್ಮ ಅವಿನಾಭಾವ ಭಾಂಧವ್ಯ ಹೊರ ಹಾಕಿದ್ದಾರೆ. ಹೀಗಾಗಿ ಕಾಶಿ ನಗರದ ಆಧ್ಯಾತ್ಮಿಕ ಕೊಡುಗೆ ಮತ್ತು ಅದು ಕಳೆದುಕೊಂಡಿರುವ ಭವ್ಯತೆಯನ್ನು ಹಿಂದಿರುಗಿಸುವುದು ಅವರ ಬಹುದೊಡ್ಡ ಬಯಕೆಯಾಗಿತ್ತು. ಕಾಶಿ ಪುನರ್ ನಿರ್ಮಾಣ ಮತ್ತು ಪುನರುಜ್ಜೀವನದ ಬಗ್ಗೆ ಭರವಸೆ ನೀಡಿದ್ದರು. ಹೀಗಾಗಿ ಅವರು ಕಾಶಿ ವಿಶ್ವನಾಥ ಕಾರಿಡಾರ್ ಅಭಿವೃದ್ಧಿಗೆ ಮುಂದಾದರು. ಮೋದಿ ತಮ್ಮ ಕನಸಿನ ಯೋಜನೆಗೆ ಮಾರ್ಚ್ 2019 ರಂದು ಶಂಕುಸ್ಥಾಪನೆ ನೆರವೇರಿಸಿದ್ದರು.

ಆಧಾರ: ವಿಶ್ವವಾಣಿ, ದಿನಾಂಕ:15.12.2021

## 30. ಪ್ರಧಾನಿ ಮೋದಿಗೆ ಭೂತಾನ್‌ನ ಅತ್ಯುನ್ನತ ಪ್ರಶಸ್ತಿ

ಪ್ರಧಾನಿ ನರೇಂದ್ರ ಮೋದಿ ಅವರು ಪಡೆದ ಅತ್ಯುನ್ನತ ಪ್ರಶಸ್ತಿಗಳ ಸಾಲಿಗೆ ಈಗ ಮತ್ತೊಂದು ವಿದೇಶಿ ಪ್ರಶಸ್ತಿ ಸೇರ್ಪಡೆಯಾಗಿದೆ. ಭೂತಾನ್ ಸರ್ಕಾರವು ತನ್ನ ರಾಷ್ಟ್ರೀಯ ದಿನದಂದು ಪ್ರಧಾನಿ ನರೇಂದ್ರ ಮೋದಿಯುವರಿಗೆ ದೇಶದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ ಆರ್ಡರ್ ಆಫ್ ದಿ ಡ್ರಕ್ ಗ್ಯಾಲ್ಪೋವನ್ನು ಘೋಷಿಸಿದೆ.

ಭೂತಾನ್ ಪ್ರಧಾನಿ ಲೋಟೇ ಶೆರಿಂಗ್ ಈ ಬಗ್ಗೆ ಪ್ರಕಟಿಸಿದ್ದು, ಅರ್ಹ ವ್ಯಕ್ತಿಗೆ ದೇಶದ ಅತ್ಯುನ್ನತ ಪ್ರಶಸ್ತಿಯನ್ನು ನೀಡಿ ಗೌರವಿಸಲಿದ್ದೇವೆ ಎಂದಿದ್ದಾರೆ. ಜೊತೆಗೆ ಎರಡು ದೇಶಗಳ ನಡುವಿನ ಸ್ನೇಹ ಕೊರೋನಾ ಸಾಂಕ್ರಾಮಿಕ ಸಮಯದಲ್ಲಿ ಪ್ರಧಾನಿ ಮೋದಿ ಅವರು ನೀಡಿದ ಬೆಂಬಲವನ್ನು ಅವರು ಶ್ಲಾಘಿಸಿದ್ದಾರೆ.

**ಇತರೆ ಸಂಘ ಸಂಸ್ಥೆಗಳು ನೀಡಿರುವ ಗೌರವಗಳು:**

- ಸಿಯೋಲ್ ಶಾಂತಿ ಪ್ರಶಸ್ತಿ – 2018
- ವಿಶ್ವಸಂಸ್ಥೆಯ ಅತ್ಯುನ್ನತ ಪರಿಸರ ಗೌರವ ಚಾಂಪಿಯನ್ಸ್ ಆಫ್ ದಿ ಅರ್ಥ್ ಅವಾಡ್–2018
- ಫಸ್ಟ್ ಫಿಲಿಪ್ ಕೋಟ್ಲರ್ ಪ್ರೆಸಿಡೆನಿಯಲ್ ಅವಾರ್ಡ್ –2019
- ಬಿಲ್ ಆ್ಯಂಡ್ ಮಿಲಿಂಡಾ ಗೇಟ್ಸ್ ಪ್ರತಿಷ್ಠಾನದ ಗ್ಲೋಬಲ್ ಗೋಲ್‌ಕೀಪರ್ ಪ್ರಶಸ್ತಿ–2019
- ಕೇಂಬ್ರಿಡ್ಜ್ ಎನರ್ಜಿ ರಿಸರ್ಚ್ ಅಸೋಸಿಯೇಟ್ಸ್ ನೀಡುವ ಜಾಗತಿಕ ಇಂಧನ ಮತ್ತು ಪರಿಸರ ನಾಯಕತ್ವ ಪ್ರಶಸ್ತಿ – 2021.

**ನಮೋಗೆ ಸಿಕ್ಕಿರುವ ಪ್ರಶಸ್ತಿಗಳು**

- ಸೌದಿ ಅರೇಬಿಯಾವು ಮುಸ್ಲಿಮೇತರ ಗಣ್ಯರಿಗೆ ನೀಡುವ ಅತ್ಯುನ್ನತ ನಾಗರಿಕ ಗೌರವ –2016.
- ಅಫ್ಘಾನಿಸ್ತಾನದ ಅತ್ಯುನ್ನತ ನಾಗರಿಕ ಪ್ರಶಸ್ತಿ –2016
- ವಿದೇಶಿ ಗಣ್ಯರಿಗೆ ಪ್ಯಾಲೆಸ್ತೀನ್ ನೀಡುವ ಅತ್ಯುನ್ನತ ಪ್ರಶಸ್ತಿ –2018
- ಯುಎಇ ನೀಡುವ ಅರ್ಡರ್ ಆಫ್ ಝುಯೇದ್ ಪ್ರಶಸ್ತಿ –2019
- ರಷ್ಯಾದ ಆರ್ಡರ್ ಆಫ್ ಸೈಂಟ್ ಆ್ಯಂಡ್ರ್ಯೂಸ್ ಪ್ರಶಸ್ತಿ –2019
- ಮಾಲ್ಡೀವ್ಸ್ ವಿದೇಶಿ ಗಣ್ಯರಿಗೆ ನೀಡುವ ಅತ್ಯುನ್ನತ ಗೌರವ –2019
- ಬಹರೈನ್‌ನ ಕಿಂಗ್ ಹಮತ್ ಆರ್ಡರ್ ಆಫ್ ದಿ ರಿನಯಸ್ಸೆನ್ಸ್ – ಫಸ್ಟ್ ಕ್ಲಾಸ್ –2019
- ಅಮೆರಿಕ ಸರ್ಕಾರದ ಸಶಸ್ತ್ರ ಪಡೆಗಳ ಪ್ರಶಸ್ತಿ ಲೀಜನ್ ಆಫ್ ಮೆರಿಟ್ –2020

ಆಧಾರ: ಉದಯವಾಣಿ, ದಿನಾಂಕ:18.12.2021.

## 31. ಕುಗ್ರಾಮಗಳಿಗೆ 4ಜಿ

ದೇಶದ 7,287 ಕುಗ್ರಾಮಗಳಿಗೆ 4ಜಿ ಮೊಬೈಲ್ ಆಧಾರಿತ ಯುಎಸ್‌ಒಎಫ್ ಯೋಜನೆಯನ್ನು ಕೇಂದ್ರ ಸಚಿವ ಸಂಪುಟ ಅನುಮೋದಿಸಿದೆ. ಆಂಧ್ರಪ್ರದೇಶ, ಛತ್ತೀಸ್‌ಗಢ, ಜಾರ್ಖಂಡ್, ಮಹಾರಾಷ್ಟ್ರ

ಮತ್ತು ಒಡಿಶಾಗಳ 44 ಜಿಲ್ಲೆಗಳನ್ನು ಈ ಯೋಜನೆಗೆ ಆಯ್ಕೆ ಮಾಡಲಾಗಿದೆ. ಇದಕ್ಕಾಗಿ ಮುಂದಿನ ಐದು ವರ್ಷ ರೂ.6,466 ಕೋಟಿ ರೂಪಾಯಿಯನ್ನು ಸಾರ್ವತ್ರಿಕ ಸೇವಾ ಬಧ್ಯತಾ ನಿಧಿ (ಯುಎಸ್‌ಒಎಫ್) ಯಲ್ಲಿ ಮೀಸಲು ಇರಿಸಲು ಒಪ್ಪಿಗೆ ಸೂಚಿಸಿದೆ. ಈ ಯೋಜನೆಯು 18 ತಿಂಗಳಲ್ಲಿ ಪೂರ್ಣಗೊಳ್ಳಲಿದ್ದು, ಈ ಒಪ್ಪಂದಕ್ಕೆ ನವೆಂಬರ್ 23 ಸಹಿ ಬೀಳುವ ಸಾಧ್ಯತೆ ಇದೆ. 4ಜಿ ನೆಟ್ ವರ್ಕ್ ಲಭ್ಯವಾಗುವುದರಿಂದ ಈ ಜಿಲ್ಲೆಗಳಲ್ಲಿ ಕೌಶಲ ಆಧಾರಿತ ತರಬೇತಿ ಕಾರ್ಯಕ್ರಮ ವಿಪತ್ತು ನಿರ್ವಹಣೆ, ಇ–ಆಡಳಿತ, ಇ–ಕಾಮರ್ಸ್ ಹೆಚ್ಚಳ, ಶಿಕ್ಷಣ ಸಂಸ್ಥೆಗಳಿಗೆ ಜ್ಞಾನ ಹಂಚಿಕೆ ಉದ್ಯೋಗ ಸೃಷ್ಟಿಗೆ ಅನುಕೂಲ ಆಗಲಿದೆ. ಒಟ್ಟಾರೆ ಆತ್ಮ ನಿರ್ಭರ ಭಾರತದ ಕಾರ್ಯಕ್ರಮಗಳಿಗೆ ಇದು ಪೂರಕವಾಗಿರಲಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:18.12.2021

## 32. ವಂಚಕರಿಗೆ ಶಿಕ್ಷೆ ಖಚಿತ

ಹೈಪ್ರೊಫೈಲ್ ಆರ್ಥಿಕ ಅಪರಾಧಿಗಳನ್ನು ದೇಶಕ್ಕೆ ಕರೆತಂದು ಶಿಕ್ಷಿಸಲು ನಮ್ಮ ಸರ್ಕಾರವು ರಾಜ ತಾಂತ್ರಿಕವಾಗಿ ಸೇರಿದಂತೆ ಸಾಧ್ಯವಿರುವ ಎಲ್ಲ ಮಾಧ್ಯಮಗಳ ಮೂಲಕ ಪ್ರಯತ್ನ ನಡೆಸುತ್ತಿದೆ. ಅವರಿಗೆ ಭಾರತಕ್ಕೆ ವಾಪಸಾಗದೇ ಅನ್ಯ ದಾರಿಯಿಲ್ಲ. "ಆರ್ಥಿಕ ಅಪರಾಧಿಗಳೆ, ದೇಶಕ್ಕೆ ವಾಪಸ್ ಬನ್ನಿ" ಭಾರತದಲ್ಲಿ ಬ್ಯಾಂಕುಗಳಿಗೆ ವಂಚಿಸಿ ಬೇರೆ ದೇಶಗಳಿಗೆ ಪರಾರಿಯಾಗಿರುವ ವಿಜಯ್ ಮಲ್ಯ, ನೀರವ್ ಮೋದಿಯಂಥ ಆರ್ಥಿಕ ಅಪರಾಧಿಗಳಿಗೆ ಪ್ರಧಾನಿ ನರೇಂದ್ರ ಮೋದಿ ಅವರು ನೀಡಿರುವ ಖಡಕ್ ಎಚ್ಚರಿಕೆಯಿದು.

ಸಾಲದ ಹರಿವು ಮತ್ತು ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ವಿಚಾರ ಸಂಕೀರಣದಲ್ಲಿ ಮಾತನಾಡಿದ ಮೋದಿ ದೇಶ ಭ್ರಷ್ಟ ಅಪರಾಧಿಗಳನ್ನು ವಾಪಸ್ ಕರೆತರಲು ನಾವು ನಮ್ಮ ನೀತಿ ನಿಬಂಧನೆಗಳು ಹಾಗೂ ಕಾನೂನನ್ನು ಮಾತ್ರವಲ್ಲದೇ, ರಾಜ ತಾಂತ್ರಿಕ ಮಾಧ್ಯಮಗಳನ್ನು ಬಳಸಿಕೊಂಡಿದ್ದೇವೆ ನಮ್ಮ ಸಂದೇಶ ಸ್ಪಷ್ಟವಾಗಿದೆ ದೇಶಕ್ಕೆ ವಾಪಸ್ ಬನ್ನಿ ಎಂದಿದ್ದಾರೆ.

**ಬ್ಯಾಲೆನ್ಸ್ ಶೀಟ್ ಸುಧಾರಿಸಿ:** ಇದೇ ವೇಳೆ 2014ರ ಬಳಿಕ ನಮ್ಮ ಸರ್ಕಾರವು ದೇಶದ ಎಲ್ಲ ಬ್ಯಾಂಕುಗಳು ಎದುರಿಸುತ್ತಿದ್ದ ಸಮಸ್ಯೆಗಳನ್ನು ಪರಿಹಾರ ಮಾಡುವ ದಾರಿ ಕಂಡುಕೊಂಡಿದೆ. ಈಗ ಬ್ಯಾಂಕುಗಳ ಆರ್ಥಿಕ ಆರೋಗ್ಯ ಉತ್ತಮ ಸ್ಥಿತಿಯಲ್ಲಿದೆ. ಈಗ ಸಂಪತ್ತು ಮತ್ತು ಉದ್ಯೋಗ ಸೃಷ್ಟಿ ಮಾಡುವವರಿಗೆ ಹೆಚ್ಚಿನ ಬೆಂಬಲ ನೀಡುವ ಸಮಯ ಬ್ಯಾಂಕುಗಳು ಈ ಕೆಲಸವನ್ನು ಆಸಕ್ತಿಯಿಂದ ಮಾಡುವ ಮೂಲಕ ದೇಶದ ಬ್ಯಾಲೆನ್ಸ್ ಶೀಟ್ ಅನ್ನು ಸುಧಾರಿಸಬೇಕು. ನೀವು ಮಂಜೂರು ಮಾಡುವವರು. ಗ್ರಾಹಕರು ಅರ್ಜಿ ಹಾಕುವವರು ಎಂಬ ಸಂಸ್ಕೃತಿಯನ್ನು ಬಿಟ್ಟು ಪಾಲುದಾರಿಕೆಯ ಮಾದರಿಯನ್ನು ಅನುಸರಿಸಬೇಕು ಎಂದು ಬ್ಯಾಂಕ್‌ಗಳಿಗೆ ಮೋದಿ ಸಲಹೆ ನೀಡಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:19.12.2021

## 33. ಸುಧಾರಿಸಿದೆ ಉತ್ತರ ಪ್ರದೇಶ ಆಡಳಿತ

ಶೀಘ್ರದಲ್ಲಿಯೇ ವಿಧಾನಸಭೆ ಚುನಾವಣೆ ನಡೆಯಲಿರುವ ಉತ್ತರ ಪ್ರದೇಶ ಉತ್ತಮ ಆಡಳಿತ ಸೂಚ್ಯಂಕ 2021 ಉತ್ತಮ ಸಾಧನೆ ಮಾಡಿದೆ. ಈ ಸೂಚ್ಯಂಕದಲ್ಲಿ ಗುಜರಾತ್ ಮೊದಲ ಸ್ಥಾನದಲ್ಲಿದ್ದರೆ ಮಹಾರಾಷ್ಟ್ರ ವಿಕಾಸ ಅಘಾಡಿ ಅಧಿಕಾರದಲ್ಲಿರುವ ಮಹಾರಾಷ್ಟ್ರ ದ್ವಿತೀಯ ಮತ್ತು ಗೋವಾ ತೃತೀಯ ಸ್ಥಾನದಲ್ಲಿದೆ. ಕೇಂದ್ರ ಗೃಹ ಸಚಿವ ಅಮಿತ್ ಶಾ ಅವರು ನವದೆಹಲಿಯಲ್ಲಿ ಸೂಚ್ಯಂಕ ಬಿಡುಗಡೆಗೊಳಿಸಿದ್ದಾರೆ. ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರ ಜನ್ಮದಿನವನ್ನು ಉತ್ತಮ ಆಡಳಿತ ದಿನ ಎಂದು ಆಚರಿಸಲಾಗುತ್ತಿದೆ. ಆ ಪ್ರಯುಕ್ತ ಈ ಸೂಚ್ಯಂಕ ಬಿಡುಗಡೆ ಮಾಡಲಾಗಿದೆ.

ದೇಶದ ಒಟ್ಟು 20 ರಾಜ್ಯಗಳು ಮತ್ತು ಕೇಂದ್ರಾಳಿತ ಪ್ರದೇಶಗಳು ಈ ಸೂಚ್ಯಂಕದಲ್ಲಿ ಭಾಗವಹಿಸಿದ್ದವು ಒಟ್ಟು 58 ಸೂಚ್ಯಂಕದಲ್ಲಿ ಒಟ್ಟಾರೆ ಅಂಕಗಳ ಆಧಾರದಲ್ಲಿ ಗುಜರಾತ್ ಮೊದಲ ಸ್ಥಾನದಲ್ಲಿದೆ. ಗಮನಾರ್ಹ ಅಂಶವೆಂದರೆ ಶೀಘ್ರದಲ್ಲಿಯೇ ಚುನಾವಣೆ ನಡೆಯಲಿರುವ ಉತ್ತರ ಪ್ರದೇಶದಲ್ಲಿ ಶೇ.8.9 ರಷ್ಟು ಅಂಕಗಳ ಸುಧಾರಣೆ ಕಂಡು ಬಂದಿದೆ. ಜಮ್ಮು ಮತ್ತು ಕಾಶ್ಮೀರದಲ್ಲಿನ ಆಡಳಿತ ವ್ಯವಸ್ಥೆಯಲ್ಲಿ ಸುಧಾರಣೆ ಕಂಡು ಬಂದ ಹಿನ್ನೆಲೆಯಲ್ಲಿ ಶೇ.3.7 ರಷ್ಟು ಅಂಕಗಳಲ್ಲಿ ಸುಧಾರಣೆ ಕಂಡು ಬಂದಿದೆ.

**ದೆಹಲಿಗೆ ಮೊದಲ ಸ್ಥಾನ:** ಕೇಂದ್ರಾಡಳಿತ ಪ್ರದೇಶಗಳ ಪೈಕಿ ದೆಹಲಿ ಶೇ.14ರಷ್ಟು ಅಂಕ ಹೆಚ್ಚಿಸಿಕೊಂಡು ಮೊದಲ ಸ್ಥಾನದಲ್ಲಿದೆ. ಅದು ಕೃಷಿ ಮತ್ತು ಸಂಬಂಧಿತ ಕ್ಷೇತ್ರಗಳಲ್ಲಿ ಹೆಚ್ಚಿನ ಸಾಧನೆ ಮಾಡಿದೆ ಈಶಾನ್ಯ ರಾಜ್ಯಗಳು ಮತ್ತು ಗುಡ್ಡಗಾಡು ರಾಜ್ಯಗಳ ವಿಭಾಗದಲ್ಲಿ ಮಿಜೋರಾಂ, ಜಮ್ಮು ಮತ್ತು ಕಾಶ್ಮೀರ ಕ್ರಮವಾಗಿ ಶೇ.10.4 ಶೇ.3.7 ರಷ್ಟು ಸಾಧನೆ ಮಾಡಿವೆ.

**ಒಳ್ಳೆಯ ನಿರ್ಧಾರ:** ನರೇಂದ್ರ ಮೋದಿ ನೇತೃತ್ವದ ಕೇಂದ್ರ ಸರ್ಕಾರ ಜನರಿಗೆ ಒಳ್ಳೆಯದಾಗುವ ನಿರ್ಧಾರಗಳನ್ನೇ ಕೈಗೊಳ್ಳುತ್ತದೆ ಎಂದು ಕೇಂದ್ರ ಗೃಹ ಸಚಿವ ಅಮಿತ್ ಶಾ ಹೇಳಿದ್ದಾರೆ. ಸೂಚ್ಯಂಕ ಬಿಡುಗಡೆ ಮಾಡಿ ಮಾತನಾಡಿದ ಅವರು ಹಿಂದಿನ ಸರ್ಕಾರಗಳ ಅವಧಿಯಲ್ಲಿ ಕೆಲವೊಂದು ಬಾರಿ ವೋಟ್ ಬ್ಯಾಂಕ್ ಅನ್ನು ಗಮನದಲ್ಲಿರಿಸಿಕೊಂಡು ಯೋಜನೆ–ನಿರ್ಧಾರಗಳನ್ನು ಕೈಗೊಳ್ಳಲಾಗುತ್ತಿತ್ತು. ನರೇಂದ್ರ ಮೋದಿ ನೇತೃತ್ವದ ಸರ್ಕಾರ ಅಧಿಕಾರಕ್ಕೆ ಬಂದ ಬಳಿಕ ಜನರ ಹಿತ ಗಮನದಲ್ಲಿರಿಸಿಕೊಂಡು ನಿರ್ಧಾರಗಳನ್ನು ಕೈಗೊಳ್ಳಲಾಗುತ್ತಿದೆ. ಇದೊಂದು ವ್ಯತ್ಯಾಸ ಗಮನಿಸಬೇಕಾಗಿದೆ ಎಂದು ಗೃಹ ಸಚಿವ ಅಮಿತ್ ಶಾ ಹೇಳಿದ್ದಾರೆ.

ಈಗಿನ ಕೇಂದ್ರ ಸರ್ಕಾರ ದೇಶವಾಸಿಗಳಿಗೆ ಮನೆ ಶೌಚಾಲಯ, ಅಡುಗೆ ಅನಿಲ ಸಂಪರ್ಕ ಕುಡಿಯವ ನೀರು, ವೈದ್ಯಕೀಯ ವಿಮೆ ಸೇರಿದಂತೆ ಹಲವು ಸೌಲಭ್ಯಗಳನ್ನು ನೀಡಿದೆ. ಕೊರೋನಾ ಅವಧಿಯಲ್ಲಿ ರೂ.80 ಕೋಟಿ ಮಂದಿ ಬಡವರಿಗೆ ಉಚಿತ ಆಹಾರ ಧಾನ್ಯಗಳನ್ನು ವಿರತಿಸಲಾಗುತ್ತಿದೆ ಎಂದು ಹೇಳಿದ್ದಾರೆ.

**ಕರ್ನಾಟಕಕ್ಕೆ ಹೇಗೆ:** ಕೈಗಾರಿಕೆ ಮತ್ತು ವಾಣಿಜ್ಯ ವಿಚಾರದಲ್ಲಿ ಕರ್ನಾಟಕಕ್ಕೆ 3ನೇ ಸ್ಥಾನ ಕೃಷಿ ಮತ್ತು ಸಂಬಂಧಿತ ಕ್ಷೇತ್ರಗಳಲ್ಲಿ 5ನೇ ಸ್ಥಾನ, ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ 7ನೇ ಸ್ಥಾನ, ಆರ್ಥಿಕ ವ್ಯವಹಾರಗಳ ನಿರ್ವಹಣೆಯಲ್ಲಿ 3ನೇ ಸ್ಥಾನ ಇದೆ.

**ಯಾವ ಕ್ಷೇತ್ರಗಳು:** ಕೃಷಿ ಮತು ಸಂಬಂಧಿತ ಚಟುವಟಿಕೆಗಳು ವಾಣಿಜ್ಯ ಮತ್ತು ಕೈಗಾರಿಕೆ ಮಾನವ ಸಂಪನ್ಮೂಲ ಅಭಿವೃದ್ಧಿ, ಸಾರ್ವಜನಿಕ ಆರೋಗ್ಯ ಮೂಲ ಸೌಕರ್ಯ, ಸಾಮಾಜಿಕ ಕಲ್ಯಾಣ ಮತ್ತು ಅಭಿವೃದ್ಧಿ, ನ್ಯಾಯಾಂಗ ಮತ್ತು ಸಾರ್ವಜನಿಕ ಭದ್ರತೆ, ಪರಿಸರ ಜನರನ್ನು ಕೇಂದ್ರೀಕರಿಸಿದ ಆಡಳಿತ ವ್ಯವಸ್ಥೆ.

**ರೂ.3 ಕೋಟಿ ಅರ್ಜಿ, 6 ಕೋಟಿ ದೂರು ವಿಲೇವಾರಿ:** ಕೇಂದ್ರ ಸರ್ಕಾರ ಡಿಸೆಂಬರ್ 20 ರಂದು ಶುರು ಮಾಡಿದ ಉತ್ತಮ ಆಡಳಿತ ದಿನ ಪ್ರಯುಕ್ತ ವಿವಿಧ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ರೂ.3 ಕೋಟಿ ಅರ್ಜಿಗಳು, 6 ಕೋಟಿ ದೂರುಗಳನ್ನು ವಿಲೇವಾರಿ ಮಾಡಿವೆ. ಗ್ರಾಮ ಮಟ್ಟದವರೆಗೆ ಆಡಳಿತ ವ್ಯವಸ್ಥೆ ತಲುಪುವ ನಿಟ್ಟಿನಲ್ಲಿ ಪ್ರಧಾನಿ ನರೇಂದ್ರ ಮೋದಿ ಇಂಥ ಅಭಿಯಾನ ಕೈಗೊಳ್ಳಲು ಸೂಚನೆ ನೀಡಿದ್ದರು.

ಆಧಾರ: ಉದಯವಾಣಿ, ದಿನಾಂಕ:26.12.2021

## 34. ಚಿಣ್ಣರಿಗೂ ಬಂತು ಲಸಿಕೆ

ಹೊಸ ವರ್ಷದ ಆರಂಭದಿಂದಲೇ ದೇಶದ ಮಕ್ಕಳಿಗೂ ಕೊರೋನಾ ಲಸಿಕೆ ವಿತರಣೆ ಆರಂಭವಾಗಲಿದೆ. ಪ್ರಧಾನಿ ನರೇಂದ್ರ ಮೋದಿ ಅವರೇ ಈ ಮಹತ್ವದ ಘೋಷಣೆ ಮಾಡಿದ್ದಾರೆ. ರಾತ್ರಿ ದೇಶವನ್ನು ಉದ್ದೇಶಿಸಿ ಮಾತನಾಡಿದ ಅವರು 2022ರ ಜನವರಿ 3 ರಿಂದಲೇ 15 ರಿಂದ 18ರ ವಯೋಮಾನದವರಿಗೆ ಲಸಿಕೆ ನೀಡುವ ಪ್ರಕ್ರಿಯೆ ಶುರುವಾಗಲಿದೆ ಎಂದು ತಿಳಿಸಿದ್ದಾರೆ. ಅಷ್ಟೇ ಅಲ್ಲ ಜನವರಿ 10 ರಿಂದ ಬೂಸ್ಟರ್ ಡೋಸ್ ವಿತರಣೆಯನ್ನು ದೇಶಾದ್ಯಂತ ಆರಂಭಿಸಲಾಗುತ್ತದೆ ಎಂದಿದ್ದಾರೆ. ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರ ಜನ್ಮದಿನದಂದೇ ಈ ಘೋಷಣೆ ಹೊರಬಿದ್ದಿದೆ.

ಈ ಕೋರೋನಾ ಸಾಂಕ್ರಾಮಿಕದ ಸಮಯದಲ್ಲಿ ದೇಶವನ್ನು ಸುರಕ್ಷಿತವಾಗಿಡಲು ಆರೋಗ್ಯ ಸೇವಾ ಕಾರ್ಯಕರ್ತರು ಮತ್ತು ಮುಂಚೂಣಿ ಕಾರ್ಯಕರ್ತರು ಭಾರಿ ಕೊಡುಗೆಗಳನ್ನು ನೀಡಿದ್ದಾರೆ. ಅವರಿಗೆ ಮೊದಲು ಮುನ್ನೆಚ್ಚರಿಕಾ ಡೋಸ್ (ಬೂಸ್ಟರ್ ಡೋಸ್) ನೀಡಲು ತೀರ್ಮಾನಿಸಿದ್ದೇವೆ. ಅದರಂತೆ, ಜನವರಿ 10 ರಿಂದಲೇ ಆರೋಗ್ಯ ಕಾರ್ಯಕರ್ತರು ಹಾಗೂ ಮುಂಚೂಣಿ ಕಾರ್ಯಕರ್ತರಿಗೆ ಬೂಸ್ಟರ್ ಡೋಸ್ ನೀಡಲಾಗುತ್ತದೆ. ವಿವಿಧ ಕಾಯಿಲೆಗಳಿಂದ ಬಳಲುತ್ತಿರುವ 60 ವರ್ಷ ಮೇಲ್ಪಟ್ಟವರು ಕೂಡ ವೈದ್ಯರ ಶಿಫಾರಸ್ಸಿನ ಮೇರೆಗೆ ಬೂಸ್ಟರ್ ಡೋಸ್ ಪಡೆಯಲು ಅರ್ಹರಾಗುತ್ತಾರೆ ಎಂದು ಮೋದಿ ಘೋಷಿಸಿದ್ದಾರೆ.

**ಆತಂಕ ಬೇಡ**: ಕೊರೋನಾದ ಹೊಸ ರೂಪಾಂತರಿಯ ಪ್ರವೇಶದಿಂದಾಗಿ ಹಲವು ದೇಶಗಳಲ್ಲಿ ಸೋಂಕಿತರ ಸಂಖ್ಯೆಯಲ್ಲಿ ಹೆಚ್ಚಳವಾಗುತ್ತಿದೆ. ಭಾರತದಲ್ಲೂ ಹಲವರಿಗೆ ಒಮಿಕ್ರಾನ್ ದೃಢಪಟ್ಟಿದೆ. ಕೊರೋನಾ ಸೋಂಕು ಇನ್ನು ಹೋಗಿಲ್ಲ. ನೀವ್ಯಾರು ಸುಖಾಸುಮ್ಮನೆ ಆತಂಕಕ್ಕೆ ಒಳಗಾಗಬೇಕಾಗಿಲ್ಲ. ಆದರೆ, ಎಚ್ಚರಿಕೆ ವಹಿಸಿ, ಮಾಸ್ಕ್ ಧರಿಸುವಿಕೆ, ಶಾರೀರಿಕ ಅಂತರ ಕಾಯ್ದು ಕೊಳ್ಳುವಿಕೆ ಹಾಗೂ ಕೈಗಳನ್ನು ಆಗಾಗ್ಗೆ ಸ್ವಚ್ಛಗೊಳಿಸುವುದು ಮುಂತಾದ ಮುನ್ನೆಚ್ಚರಿಕಾ ಕ್ರಮಗಳನ್ನು ಪಾಲಿಸುವುದನ್ನು ಬಿಡಬಾರದು ಎಂದು ದೇಶವಾಸಿಗಳಿಗೆ ಕಿವಿಮಾತು ಹೇಳಿದ್ದಾರೆ.

**141 ಕೋಟಿ ಡೋಸ್ ಪೂರ್ಣ**: ಈವರೆಗಿನ ಜಾಗತಿಕ ಅನುಭವವನ್ನು ನೋಡುವುದಾದರೆ ವೈಯಕ್ತಿಕ ಮಟ್ಟದಲ್ಲಿ ಎಲ್ಲ ಮಾರ್ಗಸೂಚಿಗಳನ್ನು ಪಾಲಿಸುವುದೇ ಕೊರೋನಾ ವಿರುದ್ಧದ ಹೋರಾಟಕ್ಕಿರುವ ಮೊದಲ ಅಸ್ತ್ರವಾಗಿದೆ. ಸೋಂಕಿನ ವಿರುದ್ಧ ಗೆಲವು ಸಾಧಿಸಲು ಇರುವಂತಹ ಎರಡನೇ ಪರಿಣಾಮಕಾರಿ ಅಸ್ತ್ರವೇ ಲಸಿಕೆ. ಈವರೆಗೆ 141 ಕೋಟಿ ಡೋಸ್ ಲಸಿಕೆ ವಿರಣೆ ಪೂರ್ಣಗೊಂಡಿದೆ. ಶೇ.90ಕ್ಕಿಂತಲೂ ಹೆಚ್ಚು ಅರ್ಹ ಫಲಾನುಭವಿಗಳಿಗೆ ಮೊದಲ ಡೋಸ್ ವಿತರಣೆ ಪೂರ್ಣಗೊಂಡಿದೆ ಎಂದು ಪ್ರಧಾನಿ ಮಾಹಿತಿ ನೀಡಿದ್ದಾರೆ. ದೇಶದಲ್ಲೀಗ 18 ಲಕ್ಷ ಐಸೋಲೇಷನ್ ಹಾಸಿಗೆಗಳು, 5 ಲಕ್ಷ ಆಕ್ಸಿಜನ್ ಬೆಡ್‌ಗಳು, 1.40 ಲಕ್ಷ ಐಸಿಯು ಬೆಡ್‌ಗಳು, 90 ಸಾವಿರ ಮಕ್ಕಳ ಐಸಿಯು ಮತ್ತು ಐಸಿಯು ಯೇತರ ಬೆಡ್‌ಗಳು ಇವೆ ಎಂದು ಅವರು ಹೇಳಿದ್ದಾರೆ. ಜೊತೆಗೆ 3 ಸಾವಿರಕ್ಕೂ ಅಧಿಕ ಪಿಎಸ್‌ಎ ಆಮ್ಲಜನರ ಸ್ಥಾವರಗಳು ಕಾರ್ಯನಿರ್ವಹಿಸುತ್ತಿದ್ದು 4 ಲಕ್ಷ ಆಕ್ಸಿಜನ್ ಸಿಲಿಂಡರ್‌ಗಳನ್ನು ದೇಶಾದ್ಯಂತ ವಿತರಣೆ ಮಾಡಲಾಗಿದೆ ಎಂದು ಮಾಹಿತಿ ನೀಡಿದ್ದಾರೆ.

**ಯಾರಿಗೆ ಬೂಸ್ಟರ್:**

- ಕೊರೋನಾ ವಿರುದ್ಧ ಮುಂಚೂಣಿ ನಿಂತು ಹೋರಾಡಬೇಕಾದ ಮುಂಚೂಣಿ ಕಾರ್ಯಕರ್ತರು, ಆರೋಗ್ಯ ಕಾರ್ಯಕರ್ತರಿಗೆ ಬೂಸ್ಟರ್ ಡೋಸ್ ಅಭಿಯಾನ ಆರಂಭ,

- ಹಲವು ಆರೋಗ್ಯ ಸಮಸ್ಯೆ ಇರುವ 60 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರಿಗೆ ವೈದ್ಯರ ಸಲಹೆ ಮೇರೆಗೆ ಬೂಸ್ಟರ್ ಡೋಸ್ ಪಡೆಯಲು ಅವಕಾಶ.

**ಮಕ್ಕಳಿಗೆ ಯಾವ ಲಸಿಕೆ:**

- ಝೈಡಸ್ ಕ್ಯಾಡಿಲಾ ಕಂಪನಿ ಉತ್ಪಾದಿಸಿದ ಝೈಕೋವ್ ಡಿ (ಡಿಎನ್‌ಎ ಲಸಿಕೆ)
- ಭಾರತ್ ಬಯೋಟೇಕ್ ಸಿದ್ಧಪಡಿಸಿದ ಕೋವ್ಯಾಕ್ಸಿನ್

**ರಾಜ್ಯಕ್ಕೆ ಕೇಂದ್ರ ತಜ್ಞರ ತಂಡ:** ದೇಶದಲ್ಲಿ ಒಮಿಕ್ರಾನ್ ರೂಪಾಂತರಿ ಪ್ರಕರಣಗಳ ಸಂಖ್ಯೆ 400ರ ಗಡಿ ದಾಟುತ್ತಿದ್ದಂತೆಯೇ ಎಚ್ಚೆತ್ತುಕೊಂಡಿರುವ ಕೇಂದ್ರ ಸರ್ಕಾರವು ಕರ್ನಾಟಕ ಸೇರಿದಂತೆ 10 ರಾಜ್ಯಗಳಿಗೆ ಪರಿಣತರ ತಂಡ ರವಾನಿಸಲು ನಿರ್ಧರಿಸಿದೆ. ಕೊರೋನಾ ಹಾಗೂ ಒಮಿಕ್ರಾನ್ ಸೋಂಕಿತರ ಸಂಖ್ಯೆ ಹೆಚ್ಚಿರುವಂತಹ ಹಾಗೂ ಲಸಿಕೆ ವಿತರಣೆ ಪ್ರಮಾಣ ಕಡಿಮೆಯಿರುವಂಥ ರಾಜ್ಯಗಳಿಗೆ ಈ ತಂಡವನ್ನು ಕಳುಹಿಸಲಾಗುವುದು ಎಂದು ಕೇಂದ್ರ ತಂಡ ಬರಲಿರುವ ರಾಜ್ಯಗಳ ಪಟ್ಟಿಗೆ ಕರ್ನಾಟಕವು ಸೇರ್ಪಡೆಗೊಂಡಿದೆ. ಪರಿಣತರ ತಂಡವು ಮೂರರಿಂದ ಐದು ದಿನಗಳ ಕಾಲ ರಾಜ್ಯದಲ್ಲಿ ತಂಗಲಿದ್ದು ರಾಜ್ಯ ಆರೋಗ್ಯ ಅಧಿಕಾರಿಗಳೊಂದಿಗೆ ಕಾರ್ಯನಿರ್ವಹಿಸಲಿದೆ ಮತ್ತು ಸೂಕ್ತ ಸಲಹೆ ಹಾಗೂ ಮಾರ್ಗದರ್ಶನಗಳನ್ನು ನೀಡಲಿದೆ.

ಆಧಾರ: ವಿಶ್ವವಾಣಿ, ದಿನಾಂಕ:28.12.2021

# ಭಾಗ – 4

# ರಾಜ್ಯ ಸರ್ಕಾರದ ಸುದ್ದಿಗಳು

## 1. ಶಾಸಕರ ಸಮಸ್ಯೆಗೆ ಬೊಮ್ಮಾಯಿ ಸ್ಪಂದನೆ

ರಾಜ್ಯದ ಆರ್ಥಿಕ ಪರಿಸ್ಥಿತಿ ಸುಧಾರಣೆಗೆ ಅನುಗುಣವಾಗಿ ಅಭಿವೃದ್ಧಿ ಯೋಜನೆಗಳಿಗೆ ಅನುದಾನ ನೀಡಿ, ಆದ್ಯತೆ ಮೇರೆಗೆ ರಸ್ತೆ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳುವುದಾಗಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಪಕ್ಷದ ಶಾಸಕರಿಗೆ ಭರವಸೆ ನೀಡಿದ್ದಾರೆ.

ತಮ್ಮ ಸಮಸ್ಯೆ, ಅಹವಾಲು ಆಲಿಸಲು ಮುಖ್ಯಮಂತ್ರಿಗಳು ಲಭ್ಯವಾಗುವುದಿಲ್ಲ ಎಂಬ ಶಾಸಕರ ಅಸಮಾಧಾನ ನಿವಾರಿಸುವ ನಿಟ್ಟಿನಲ್ಲಿ ತಮ್ಮ ಯೋಜನೆಯನ್ನು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಕಾರ್ಯರೂಪಕ್ಕೆ ತಂದರು. ರೇಸ್‌ಕೋರ್ಸ್ ರಸ್ತೆಯ ತಮ್ಮ ನಿವಾಸದಲ್ಲಿ ಬೆಳಗ್ಗೆ 11 ರಿಂದ ಮಧ್ಯಾಹ್ನ 3 ಗಂಟೆವರೆಗೆ ಪ್ರತ್ಯೇಕವಾಗಿ ಭೇಟಿಯಾದ ಪಕ್ಷದ 25ಕ್ಕೂ ಹೆಚ್ಚು ಶಾಸಕರ ಬೇಡಿಕೆ, ಕ್ಷೇತ್ರದಲ್ಲಿನ ಸಮಸ್ಯೆಗಳನ್ನು ಆಲಿಸಿದರು.

ಯಾವ ಶಾಸಕರನ್ನು ನಿರ್ಲಕ್ಷ್ಯ ಮಾಡುವುದಿಲ್ಲ. ಕೋವಿಡ್‌ನಿಂದಾಗಿ ಅನುದಾನ ಸ್ವಲ್ಪ ವಿಳಂಬವಾಗಿರಬಹುದು. ಆದರೆ, ಅದು ನಿರ್ಲಕ್ಷ್ಯ ಎಂಬ ಮನೋಭಾವ ಬೇಡ. ಎಲ್ಲ ಶಾಸಕರನ್ನು ಸಮಾನವಾಗಿ ನೋಡಲಾಗುವುದು. ನಿಗದಿತ ಕಾಲಾವಧಿಯಲ್ಲಿ ಸಮಸ್ಯೆ ಬಗೆಹರಿಸುವ ಪ್ರಯತ್ನ ಮಾಡುವುದಾಗಿ ಶಾಸಕರಿಗೆ ಅವರು ಭರವಸೆ ನೀಡಿದರು.

ಮುಖ್ಯಮಂತ್ರಿಗಳನ್ನು ಭೇಟಿ ಮಾಡಿದ ಶಾಸಕರು ಅನುದಾನ, ಕಾಮಗಾರಿ, ಕುಡಿಯುವ ನೀರು, ಜಾನುವಾರುಗಳಿಗೆ ಮೇವು ಸೇರಿದಂತೆ ಕ್ಷೇತ್ರದ ಹಲವು ಸಮಸ್ಯೆ ಕುರಿತು ಗಮನಕ್ಕೆ ತಂದು, ಅನುದಾನಕ್ಕೆ ಮನವಿ ಮಾಡಿದರು.

ಶಾಸಕರಾದ ಅಮೃತ್ ದೇಸಾಯಿ, ಜಯರಾಂ, ಬೆಳ್ಳಿ ಪ್ರಕಾಶ್, ಕೃಷ್ಣಪ್ಪ, ಎಸ್.ರಘು, ರವಿ ಸುಬ್ರಹ್ಮಣ್ಯ, ಪೂರ್ಣಿಮಾ ಶ್ರೀನಿವಾಸ್, ಪ್ರೀತಂಗೌಡ, ಸತೀಶ್ ರೆಡ್ಡಿ, ಉದಯ ಗರುಡಾಚಾರ್ ಸೇರಿದಂತೆ 25ಕ್ಕೂ ಹೆಚ್ಚು ಶಾಸಕರು ಮುಖ್ಯಮಂತ್ರಿಗಳನ್ನು ಭೇಟಿಯಾಗಿ ತಮ್ಮ ಅಹವಾಲು ಸಲ್ಲಿಸಿದರು.

ಬಹುತೇಕ ಶಾಸಕರು ತಮ್ಮ ಕ್ಷೇತ್ರದಲ್ಲಿ ನೀರಿನ ಸಮಸ್ಯೆ ಕುರಿತು ಮುಖ್ಯಮಂತ್ರಿಯವರ ಅವರ ಗಮನ ಸೆಳೆದರು. ನೀರು ಪೂರೈಕೆ ಮಾಡುವ ಸಂಬಂಧ ಕೆರೆಗಳಿಗೆ ನೀರು ತುಂಬಿಸುವ ಯೋಜನೆಗಳಿಗೆ ಆದ್ಯತೆ ನೀಡಿ ಅನುದಾನ ನೀಡಬೇಕು. ಇಲ್ಲದಿದ್ದರೆ ಕ್ಷೇತ್ರದ ಜನರ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ ಎಂದು ಬೇಸರವನ್ನು ವ್ಯಕ್ತಪಡಿಸಿದರೆಂದು ಹೇಳಲಾಗಿದೆ. ಇದಕ್ಕೆ ಸ್ಪಂದಿಸಿದ ಮುಖ್ಯಮಂತ್ರಿಗಳು ಯೋಜನೆಗೆ ತಗಲುವ ವೆಚ್ಚ ಸೇರಿದಂತೆ ಇತ್ಯಾದಿಗಳ ಬಗ್ಗೆ ವರದಿ ಸಿದ್ಧಪಡಿಸಿ ನೀಡಿದರೆ ಹಿರಿಯ ಅಧಿಕಾರಿಗಳ ಜೊತೆ ಚರ್ಚಿಸಿ ಕ್ರಮಕೈಗೊಳ್ಳಲಾಗುವುದು ಎಂದರು.

ಜಾನುವಾರುಗಳಿಗೆ ಮೇವಿನ ಕೊರತೆ ಬಗ್ಗೆ ಮುಖ್ಯಮಂತ್ರಿಯವರಿಗೆ ತಿಳಿಸಲಾಯಿತು. ಇದಕ್ಕೆ ಮುಖ್ಯಮಂತ್ರಿಗಳು ಸ್ಥಳೀಯವಾಗಿ ಬೋರ್‌ವೆಲ್ ಇರುವ ಖಾಸಗಿ ವ್ಯಕ್ತಿಗಳಿಗೆ ಹಣ ನೀಡಿ ಮೇವು ಬೆಳೆಯಲು ಕ್ರಮ ಕೈಗೊಳ್ಳಬೇಕು. ಸರ್ಕಾರದಿಂದ ಯಾವ ಕ್ರಮಕೈಗೊಳ್ಳಬೇಕೋ, ಅದನ್ನು ಮಾಡಲಾಗುವುದು ಎಂಬ ಭರವಸೆ ನೀಡಿದರು ಎಂದು ತಿಳಿದುಬಂದಿದೆ.

**ಮೋದಿ ಶೈಲಿಯಲ್ಲಿ ಶಾಸಕರ ಭೇಟಿ**

ಹಾಲಿ ಪ್ರಧಾನಿ ನರೇಂದ್ರ ಮೋದಿ ಅವರು ಹಿಂದೆ ಗುಜರಾತ್ ಮುಖ್ಯಮಂತ್ರಿಯಾಗಿದ್ದಾಗ ಪಕ್ಷದ ಶಾಸಕರು, ನಾಯಕರನ್ನು ಭೇಟಿಯಾಗಲು ವಾರದಲ್ಲಿ ಒಂದು ದಿನ ನಿರ್ದಿಷ್ಟ ಸಮಯವನ್ನು ಮೀಸಲಿಡುತ್ತಿದ್ದರು. ಶಾಸಕರ ಅಹವಾಲುಗಳಿಗೆ ಕಿವಿಯಾಗುತ್ತಿದ್ದರು. ಪ್ರಧಾನಿ ಆದ ಬಳಿಕವೂ ಪ್ರತಿ ಸಂಸದರ ಭೇಟಿಗೆ ಅವಕಾಶ ಕಲ್ಪಿಸುತ್ತಿದ್ದರು. ಇದೀಗ ಕರ್ನಾಟಕ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರೂ ಅದೇ ಶೈಲಿ ಅಳವಡಿಸಿಕೊಂಡು ಶಾಸಕರ ಸಮಸ್ಯೆ ಆಲಿಸುವ ಪರಿಪಾಠ ಆರಂಭಿಸಿದ್ದಾರೆ.

ಆಧಾರ: ಕನ್ನಡ ಪ್ರಭ, ದಿನಾಂಕ: 01.10.2021

## 2. ಕನ್ನಡಿಗರಿಗೆ ಉದ್ಯೋಗ ಪ್ರಾತಿನಿಧ್ಯದ ನಿಯಮಾವಳಿ ಅಗತ್ಯ

ರಾಜ್ಯದಲ್ಲಿರುವ ಸಾರ್ವಜನಿಕ ಉದ್ಯಮಗಳು, ಕೈಗಾರಿಕೆಗಳು, ಖಾಸಗಿ ಸಂಸ್ಥೆಗಳು ಹಾಗೂ ಸಣ್ಣ ಉದ್ಯಮಗಳಲ್ಲಿ ಕನ್ನಡಿಗರಿಗೆ ಹೆಚ್ಚಿನ ಉದ್ಯೋಗ ಸಿಗುವ ಪೂರಕ ನಿಯಮಾವಳಿ ರೂಪಿಸುವ ಬಗ್ಗೆ ಸರ್ಕಾರವನ್ನು ನಿರಂತರ ಎಚ್ಚರಿಸಲಾಗುವುದು ಎಂದು ಕನ್ನಡ ಮತ್ತು ಸಂಸ್ಕೃತಿ ಸಚಿವ ವಿ.ಸುನೀಲ್‌ಕುಮಾರ್ ತಿಳಿಸಿದ್ದಾರೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರ ಆಯೋಜಿಸಲಾಗಿದ್ದ 'ಬದಲಾದ ಉದ್ಯೋಗ ಪರ್ವ' ವಿಚಾರ ಸಂಕೀರಣ ಉದ್ಘಾಟಿಸಿ ಮಾತನಾಡಿದರು. ರಾಜ್ಯದಲ್ಲಿ ಸರ್ಕಾರಿ, ಅರೆ ಸರ್ಕಾರಿ ಮತ್ತು ಖಾಸಗಿ ಉದ್ಯಮಗಳು ದೊಡ್ಡ ಮಟ್ಟದಲ್ಲಿ ಬೆಳೆದಿವೆ. ವಿದೇಶಿ ಕಂಪನಿಗಳು ಕೂಡ ಬಂದಿದ್ದು, ಸ್ಥಳೀಯರಿಗೆ ಉದ್ಯೋಗ ಲಭ್ಯತೆ ಬಗ್ಗೆ ಸ್ಪಷ್ಟ ಮಾಹಿತಿ ಇಲ್ಲ. 1984ರಲ್ಲಿ ಸಲ್ಲಿಕೆಯಾದ ಸರೋಜಿನಿ ಮಹಿಷಿ ವರದಿಯಲ್ಲಿ ವಿದೇಶಿ ಕಂಪನಿಗಳಲ್ಲಿ ಸ್ಥಳೀಯರ ಉದ್ಯೋಗ ಆಯ್ಕೆ ಬಗ್ಗೆ ವಿಷಯಗಳಿಲ್ಲ. ಜೊತೆಗೆ, ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ಯಮ ಸಂಸ್ಥೆಗಳಲ್ಲಿಯೂ ಕನ್ನಡಿಗರಿಗೆ ಉದ್ಯೋಗ ಲಭ್ಯತೆ ಪ್ರಮಾಣ ಹೆಚ್ಚಾಗಬೇಕಿದೆ. ಈ ನಿಟ್ಟಿನಲ್ಲಿ ಕೆಲ ಮಾರ್ಪಾಡುಗಳನ್ನು ಜಾರಿಗೆ ತರುವ ಬಗ್ಗೆ ಸರ್ಕಾರಕ್ಕೆ ಎಚ್ಚರಿಸಲಾಗುವುದು ಎಂದರು.

ಎಚ್‌ಇಎಲ್, ಬಿಎಚ್‌ಇಎಲ್, ಬಿಇಎಲ್, ಬಿಎಂಎಎಲ್, ಐಐಎಸ್‌ಸಿ, ಐಐಟಿ ಸೇರಿದಂತೆ ಅನೇಕ ಸಾರ್ವಜನಿಕ ಉದ್ಯಮ ಮತ್ತು ಬ್ಯಾಂಕಿಂಗ್ ಕ್ಷೇತ್ರದಲ್ಲಿಯೂ ಕನ್ನಡಿಗರಿಗೆ ಹೆಚ್ಚಿನ ಆದ್ಯತೆ ಸಿಗಬೇಕಿದೆ. ಮೆಟ್ರೋ, ನ್ಯಾಯಾಲಯ, ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಮ್ಮ ಯುವಕರಿಗೆ ಉದ್ಯೋಗ ಲಭ್ಯವಾಗುವ ಮಾದರಿಯಲ್ಲಿ ಹೊಸ ನಿಯಮ ಜಾರಿಗೊಳಿಸಬೇಕಿದೆ ಎಂದು ತಿಳಿಸಿದರು.

ವಿಜಯವಾಣಿ ಡೆಪ್ಯೂಟಿ ಎಡಿಟರ್ ನಾಗರಾಜ ಇಳೆಗುಂಡಿ, ವಾಣಿಜ್ಯ ಮತ್ತು ಕೈಗಾರಿಕೆ ಜಂಟಿ ಕಾರ್ಯದರ್ಶಿ ಎಚ್.ಎಸ್.ಜಯಕುಮಾರ್, ಆರ್ಥಿಕ ತಜ್ಞ ಪ್ರೊ.ಚಂದ್ರಕಾಂತ, ಮಾಹಿತಿ ತಂತ್ರಜ್ಞಾನ ತಜ್ಞ ಟಿ.ಜಿ.ಶ್ರೀನಿಧಿ ಮತ್ತಿತರು ಉಪಸ್ಥಿತರಿದ್ದರು.

ಆಧಾರ: ವಿಜಯವಾಣಿ, ದಿನಾಂಕ: 01.10.2021

## 3. ಪಂಚಮಸಾಲಿ ಮೀಸಲು ಆತುರದ ಕ್ರಮ ಅಸಾಧ್ಯ

ಪಂಚಮಸಾಲಿ ಸಮುದಾಯ ಸೇರಿದಂತೆ ಯಾವುದೇ ವರ್ಗಕ್ಕೆ ಮೀಸಲಾತಿ ಕಲ್ಪಿಸಬೇಕಾದಲ್ಲಿ ವೈಜ್ಞಾನಿಕ ಹಾಗೂ ವಾಸ್ತವಿಕ ಅಧ್ಯಯನ ಅತ್ಯಗತ್ಯ. ಈ ನಿಟ್ಟಿನಲ್ಲಿ ಹಿಂದುಳಿದ ವರ್ಗಗಳ ಶಾಶ್ವತ ಆಯೋಗ ತನ್ನ ಪ್ರಕ್ರಿಯೆ ಆರಂಭಿಸಿದೆ. ಆದರೆ ಇದು ಕೆಲವರು ಅಂದುಕೊಂಡಷ್ಟು ಸುಲಭದ ಕೆಲಸವಲ್ಲ. ಹಾಗಾಗಿ ಎಲ್ಲ ಸಾಧಕ–ಬಾಧಕ ಅಭ್ಯಸಿಸಿದ ಬಳಿಕವಷ್ಟೇ ಸರ್ಕಾರಕ್ಕೆ ಸಮಗ್ರ ವರದಿ ಸಲ್ಲಿಕೆಯಾಗಲಿದೆ.

ಪಂಚಮಸಾಲಿ ಸಮುದಾಯ 2ಎ ವರ್ಗಕ್ಕೆ ಸೇರ್ಪಡೆಗೆ ಒತ್ತಾಯಿಸಿ ಹೋರಾಟ, ಪ್ರತಿಭಟನೆ ಮೂಲಕ ಸರ್ಕಾರದ ಮೇಲೆ ಒತ್ತಡ ಹೇರುತ್ತಿರುವ ಬೆನ್ನಲ್ಲೇ 'ಸಂಯುಕ್ತ ಕರ್ನಾಟಕ' ಇದೆಲ್ಲದರ ಕೇಂದ್ರ ಬಿಂದು ಎನಿಸಿರುವ ಕರ್ನಾಟಕ ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ಅಧ್ಯಕ್ಷ ಕೆ.ಜಯಪ್ರಕಾಶ್‌ಹೆಗ್ಡೆ ಅವರನ್ನು ಮಾತನಾಡಿಸಿದ ಸಂದರ್ಭ ಹಲವು ಮಹತ್ವದ ಅಂಶಗಳು ಬಹಿರಂಗವಾಗಿವೆ.

ಸರ್ಕಾರದ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಿದ ಬಳಿಕ ಪಂಚಮಸಾಲಿ ಸಮುದಾಯದ ಶೈಕ್ಷಣಿಕ ಮತ್ತು ಸಾಮಾಜಿಕ ಸ್ಥಿತಿಗತಿ ಅಧ್ಯಯನ ಪ್ರಕ್ರಿಯೆ ಶುರುವಾಗಿದೆ. ಈಗಾಗಲೇ ಸರ್ಕಾರದ ಎಲ್ಲ ಇಲಾಖೆಗಳು, ರಾಜೀವ್‌ಗಾಂಧಿ ವಿವಿ ಸೇರಿದಂತೆ ಎಲ್ಲ ಡೀಮ್ಡ್ ವಿಶ್ವವಿದ್ಯಾನಿಲಯಗಳಿಗೆ ಶೈಕ್ಷಣಿಕ ಮಾಹಿತಿ ಕೋರಿ ಆಯೋಗ ಪತ್ರ ಬರೆದಿದೆ. ಮಾಹಿತಿ ಬಂದ ಬಳಿಕ ಇದನ್ನು ಹೋಲಿಕೆ ಮಾಡಿ ನೋಡಬೇಕಿದೆ.

ಇನ್ನು ಸಾಮಾಜಿಕ ಸ್ಥಿತಿಗತಿ ಮಾಹಿತಿ ಪಡೆಯುವುದು ಅತಿಮುಖ್ಯ. ಇದಕ್ಕಾಗಿಯೇ ಆಯೋಗ ಆ ಸಮುದಾಯ ದೊಡ್ಡ ಸಂಖ್ಯೆಯಲ್ಲಿರುವ ರಾಜ್ಯದ ಹಲವೆಡೆ ಹಳ್ಳಿಗಳಿಗೆ ಖುದ್ದು ಭೇಟಿ ವಾಸ್ತವಾಂಶ ಪಡೆಯಲಿದೆ. ಅಕ್ಟೋಬರ್ 15ರ ದಸರಾ ಬಳಿಕ ಈ ಪ್ರಕ್ರಿಯೆ ಆರಂಭವಾಗಲಿದೆ. ಇದಕ್ಕೆ ಸ್ವಲ್ಪ ಹೆಚ್ಚಿನ ಸಮಯಾವಕಾಶವೂ ಬೇಕಿದೆ. ಅಧ್ಯಯನ ವರದಿಗೆ ಈ ಮಾಹಿತಿ ಅತ್ಯಂತ ಮಹತ್ವದ್ದಾಗಿದೆ. ಇದೇ ವೇಳೆ ಮೀಸಲಿಗೆ ಬೇಡಿಕೆ ಇಟ್ಟಿರುವ ಇತರ ಸಮುದಾಯಗಳ ಸ್ಥಿತಿಗತಿ ಅರಿಯುವ ಪ್ರಯತ್ನ ಮಾಡುವ ಚಿಂತನೆ ಇದೆ. ಆಯೋಗ ಮೀಸಲಾತಿ ಸಂಬಂಧ ಈಗಾಗಲೇ ಹಲವು ಸಮುದಾಯಗಳ ಅಹವಾಲು ಆಲಿಸಿದೆ. ಬೇಡಿಕೆ ಸಹಜ. ಆದರೆ ಇಂತಿಷ್ಟೇ ಸಮಯದಲ್ಲಿ ವರದಿ ತಯಾರಾಗಬೇಕೆಂದು ಆಯೋಗದ ಮೇಲೆ ಯಾರೂ ಒತ್ತಡ ಹೇರಲಾಗದು. ಅಷ್ಟೇ ಅಲ್ಲ ಈ ಪ್ರಕ್ರಿಯೆಯಲ್ಲಿ ತರಾತುರಿ ನಿರ್ಧಾರಗಳು ಅಸಾಧ್ಯ. ಏಕೆಂದರೆ ಮಹಾರಾಷ್ಟ್ರದಲ್ಲಿ ಮರಾಠ ಸಮುದಾಯಕ್ಕೆ ನೀಡಿದ್ದ ಮೀಸಲಾತಿ ಅಸಮರ್ಪಕ ಎಂದು ಸುಪ್ರೀಂಕೋರ್ಟ್ ಸೌಲಭ್ಯಕ್ಕೆ ನಿರಾಕರಿಸಿದೆ. ಹಾಗಾಗಿ ನಮ್ಮಲ್ಲಿ ಅಂತಹ ಯಾವುದೇ ಲೋಪಗಳಾಗದಂತೆ ಎಚ್ಚರ ವಹಿಸಿಯೇ ಸಮಗ್ರ ವರದಿ ಸಿದ್ಧಪಡಿಸಲಾಗುತ್ತಿದೆ.

ಕುಡು ಒಕ್ಕಲಿಗ, ಶಿವಾಚಾರ್ಯ ನಗರ್ತ, ಕಾಡು ಗೊಲ್ಲ, ಕುಂಬಾರ, ಹಳ್ಳಿಕಾರ ಒಕ್ಕಲಿಗ ಹೀಗೆ ಸುಮಾರು ಹತ್ತರಿಂದ ಹದಿನೈದು ಇತರ ಸಮುದಾಯ ಮೀಸಲಾತಿ ಸೇರ್ಪಡೆ ಜೊತೆ ಕೆಲವು ತಿದ್ದುಪಡಿಗಳಿಗೂ ಅರ್ಜಿ ಸಲ್ಲಿಸಿವೆ. ಇವೆಲ್ಲದರ ಬಗ್ಗೆ ಸೂಕ್ಷ್ಮವಾಗಿ ಅಧ್ಯಯನ ನಡೆಸಿ, ಭವಿಷ್ಯದಲ್ಲಿ ಯಾರಿಗೂ ಅನ್ಯಾಯವಾಗದಂತೆ ಆಯೋಗ ಕ್ರಮ ಕೈಗೊಳ್ಳಬೇಕಾಗಿದೆ. ಮಂಗಳಮುಖಿಯರಿಗೆ ಮೀಸಲಾತಿ ಬಗ್ಗೆಯೂ ಇನ್ನೂ ಸ್ಪಷ್ಟ ನಿರ್ಧಾರ ಮಾಡಬೇಕಿದೆ. ಇದಲ್ಲದೆ ರಾಜ್ಯದ ಅನಾಥಾಶ್ರಮಗಳಲ್ಲಿ ಇರುವ ಮಕ್ಕಳ ಬಗ್ಗೆಯೂ ಆಯೋಗ ಸಮೀಕ್ಷೆ ನಡೆಸಲಿದೆ. ಈ ಮಕ್ಕಳ ಭವಿಷ್ಯದ ದೃಷ್ಟಿಯಿಂದ ಜಾತಿ ನಮೂದನೆ ಅಗತ್ಯ. ಈಗಾಗಲೇ ತೆಲಂಗಾಣದಲ್ಲಿ ಈ ಸಂಬಂಧ ವರದಿ ಸಿದ್ಧಪಡಿಸಿ ಜಾರಿಗೊಳಿಸಲಾಗಿದೆ. ಅಲ್ಲಿಗೆ ತೆರಳಿ ಮಾಹಿತಿ ಪಡೆದು ರಾಜ್ಯದಲ್ಲಿಯೂ ಅನಾಥ ಮಕ್ಕಳಿಗೆ ಜಾತಿ ವಿಷಯದಲ್ಲಿ ಸ್ಪಷ್ಟತೆ ಕೊಡಬೇಕಿದೆ ಎಂದು ವಿವರಿಸಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 02.10.2021

## 4. ವಿಜಯನಗರ ಸಾಮ್ರಾಜ್ಯದಂತೆ ಸುಭಿಕ್ಷವಾಗಲಿ

ರಾಜ್ಯದ 31ನೇ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿರುವ ವಿಜಯನಗರ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ರಾಜ್ಯ ಸರ್ಕಾರ ಬದ್ಧವಾಗಿದೆ. ವಿಜಯನಗರ ಸಾಮ್ರಾಜ್ಯದಲ್ಲಿದ್ದಂತೆ ಎಲ್ಲರಿಗೂ ಸುಖ–ಶಾಂತಿ ನೆಮ್ಮದಿ ಎಲ್ಲರ ಬದುಕಲ್ಲಿ ನೆಲೆ ಕಾಣುವಂತೆ ಮಾಡುತ್ತೇವೆ. ಅಭಿವೃದ್ಧಿಯ ನಿಮ್ಮ ಕನಸನ್ನು ನಾವು ನನಸು ಮಾಡಿ ತೋರಿಸುತ್ತೇವೆ ಎಂದು ಮುಖ್ಯಮಂತ್ರಿ ಘೋಷಿಸಿದ್ದಾರೆ.

ವಿಜಯನಗರ ಜಿಲ್ಲೆ ಅಸ್ತಿತ್ವಕ್ಕೆ ಬರುವ ಮೂಲಕ ವಿಜಯನಗರ ಸಾಮ್ರಾಜ್ಯ ಪುನರಸ್ಥಾಪನೆಯಾದಂತಾಗಿದೆ ಎಂದು ತಿಳಿಸಿದ ಅವರು, ಐಕೋನಿಕ್ ಟೂರಿಸಂ, ಹೆಲಿಟೂರಿಸಂ ಮೂಲಕ ಪ್ರವಾಸೋದ್ಯಮದಲ್ಲಿ ಹೆಚ್ಚಿನ ಅಭಿವೃದ್ಧಿ ಸಾಧಿಸಲಾಗುವುದು ಎಂದು ತಿಳಿಸಿದರು.

ವಿಜಯನಗರದ ಕ್ರೀಡಾಂಗಣದಲ್ಲಿ ಆಯೋಜಿಸಿದ್ದ ವಿಜಯನಗರ ಜಿಲ್ಲೆಯನ್ನು ಅಧಿಕೃತವಾಗಿ ಉದ್ಘಾಟಿಸಿ ಅವರು ಮಾತನಾಡಿದರು.

ವಿಜಯನಗರ ಸಾಮ್ರಾಜ್ಯದಲ್ಲಿ ಶಾಂತಿ–ಸುಖ, ನೆಮ್ಮದಿ, ಅಭಿವೃದ್ಧಿ ಸಮೃದ್ಧಿ ಎಲ್ಲವೂ ಇತ್ತು. ಪ್ರತಿಯೊಬ್ಬರೂ ಸುಭಿಕ್ಷವಾಗಿ, ನೆಮ್ಮದಿಯಾಗಿದ್ದರು. ಆಗ ಬೀದಿ ಬದಿಗಳಲ್ಲಿ ವಜ್ರ, ವೈಢೂರ್ಯಗಳನ್ನು ಮಾರಾಟ ಮಾಡುತ್ತಿದ್ದರು ಅಷ್ಟೊಂದು ಆಗ ಆರ್ಥಿಕವಾಗಿ ಸಬಲವಾಗಿತ್ತು. ಆಗಿನ ವಿಜಯನಗರ ಸಾಮ್ರಾಜ್ಯಕ್ಕೆ ವಿದ್ಯಾರಣ್ಯರ ಆಶೀರ್ವಾದವಿತ್ತು. ಈ ನೂತನ ಜಿಲ್ಲೆಗೆ ನಿಕಟಪೂರ್ವ ಮುಖ್ಯಮಂತ್ರಿ ಯಡಿಯೂರಪ್ಪ ಅವರ ಆಶೀರ್ವಾದವಿದೆ.

**250 ಬೆಡ್‌ಗಳ ಆಸ್ಪತ್ರೆ :** ವಿಜಯನಗರ ಜಿಲ್ಲೆಯ ಸಮಗ್ರ ಅಭಿವೃದ್ಧಿಗೆ ಸರ್ಕಾರ ಕಟಿಬದ್ಧವಾಗಿದೆ. ಇಲ್ಲಿಂದ ಅಭಿವೃದ್ಧಿ ಪರ್ವ ಶುರುವಾಗಿದೆ. 250 ಹಾಸಿಗೆಯುಳ್ಳ ಆಸ್ಪತ್ರೆಗೆ ಮಂಜೂರಾತಿ ನೀಡಿದ್ದೇವೆ. ಶೀಘ್ರದಲ್ಲಿ ಅದರ ಕಾಮಗಾರಿಯೂ ಶುರುವಾಗಲಿದೆ. ಹೊಸ ಜಿಲ್ಲೆಯಾದ ಹಿನ್ನೆಲೆಯಲ್ಲಿ ಇಲ್ಲಿ ವಿವಿಧ ಕಛೇರಿಗಳನ್ನು ತರಬೇಕಿದೆ. ವಿವಿಧ ಕಛೇರಿಗಳ ನಿರ್ಮಾಣಕ್ಕೆ ರೂ. 50 ಕೋಟಿ ಬಿಡುಗಡೆ ಮಾಡಲಾಗಿದೆ. ಇನ್ನೂ ಹೆಚ್ಚಿನ ಹಣಕಾಸನ್ನು ನೀಡಲು ಸರ್ಕಾರ ಬದ್ಧವಿದೆ. ವಿದೇಶಿಗರು ಹೆಚ್ಚೆಚ್ಚು ಬರುವಂತಹ ಪ್ರದೇಶವಿದು. ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ವಿದೇಶಿಗರು ಇಲ್ಲಿಗೆ ಬರಬೇಕು. ಇದಕ್ಕಾಗಿ ಪ್ರವಾಸೋದ್ಯಮಕ್ಕೆ ಹೆಚ್ಚಿನ ಒತ್ತು ನೀಡುತ್ತಿದ್ದೇವೆ. ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ರೂ.600 ಕೋಟಿಗೂ ಹೆಚ್ಚಿನ ಅನುದಾನದಿಂದ ಐಕಾನಿಕ್ ಟೂರಿಸಂ ಜಾರಿಗೊಳಿಸುವ ಹೊಸ ಯೋಜನೆ ಇದೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ: 03.10.2021

## 5. ಸಚಿವರು, ಶಾಸಕರ ಸ್ವಚ್ಛತಾ ಅಭಿಮಾನ

ಮಹಾತ್ಮ ಗಾಂಧಿ ಜಯಂತಿ ಮತ್ತು ಮೋದಿ ಯುಗ್ ಉತ್ಸವ ಪ್ರಯುಕ್ತ ನಡೆದ ಸ್ವಚ್ಛತಾ ಅಭಿಯಾನದಲ್ಲಿ ರಾಜ್ಯದ ವಿವಿಧೆಡೆ ಸಚಿವರು, ಶಾಸಕರು ಸೇರಿದಂತೆ ವಿವಿಧ ಜನಪ್ರತಿನಿಧಿಗಳು ಭಾಗವಹಿಸಿದ್ದರು. ಸ್ವತಃ ಪೊರಕೆ ಹಿಡಿದು ಶ್ರಮದಾನ ನಡೆಸಿದರು. ಕೇಂದ್ರ ಸಚಿವ ನಾರಾಯಣಸ್ವಾಮಿ, ಸಚಿವ ಶ್ರೀರಾಮುಲು, ಶಾಸಕರಾದ ಸಿ.ಟಿ.ರವಿ, ರಾಮದಾಸ್, ಸಭಾಧ್ಯಕ್ಷರಾದ ಕಾಗೇರಿ ಮತ್ತಿತರರು ಸ್ವಚ್ಛತಾ ಕಾರ್ಯ ನಡೆಸಿದರು.

ಬೆಳಗಾವಿ ಸಂಗಮೇಶ ನಗರದಲ್ಲಿರುವ ಸಮಾಜ ಕಲ್ಯಾಣ ಇಲಾಖೆಯ ಬಾಲಕರ ವಸತಿ ನಿಲಯದ ಆವರಣದಲ್ಲಿ ನಡೆದ ಸ್ವಚ್ಛತಾ ಕಾರ್ಯದಲ್ಲಿ ಕೇಂದ್ರ ಸಚಿವ ನಾರಾಯಣಸ್ವಾಮಿ ಅವರು ತಾವೇ ಸ್ವತಃ ಪೊರಕೆ ಹಿಡಿದು ವಿದ್ಯಾರ್ಥಿಗಳೊಂದಿಗೆ ಕಸ ಗುಡಿಸಿದರು. ಈ ಸಂದರ್ಭದಲ್ಲಿ ರಾಜ್ಯಸಭಾ ಸದಸ್ಯ ಈರಣ್ಣ ಕಡಾಡಿ ಕೂಡ ಸಾಥ್ ನೀಡಿದರು.

ಸಾರಿಗೆ ಸಚಿವ ಬಿ.ಶ್ರೀರಾಮುಲು ಅವರು ಬಳ್ಳಾರಿಯ ಹವಂಬಾವಿ ಪ್ರದೇಶದಲ್ಲಿ ರಸ್ತೆಯಲ್ಲಿ ಕಸಗೂಡಿಸಿ ಜಾಗೃತಿ ಮೂಡಿಸಿದರು. ಬಿಜೆಪಿ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ ಸಿ.ಟಿ.ರವಿ ಅವರು ಚಿಕ್ಕಮಗಳೂರು ರಾಮನಹಳ್ಳಿಯ ವಿದ್ಯಾರ್ಥಿ ನಿಲಯದ ಶೌಚಾಲಯವನ್ನು ಶುಚಿಗೊಳಿಸಿದರು. ಶಿರಸಿಯಲ್ಲಿ ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ನಗರ ಬಿಡ್ಕಿ ಬಯಲಿನಲ್ಲಿ ಕಸ ಪೊರಗೆ ಹಿಡಿದು ಸ್ವಚ್ಛತಾ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವ ಮೂಲಕ ಗಮನಸೆಳೆದರು.

ಆಧಾರ: ಕನ್ನಡ ಪ್ರಭ, ದಿನಾಂಕ: 03.10.2021

## 6. ದೇಶದಲ್ಲಿ ಜಾತಿ ಗಣತಿ ಅಧ್ಯಯನಕ್ಕೆ ಸಮಿತಿ ರಚನೆ

ದೇಶದಲ್ಲಿ ಯಾವ ರೀತಿ ಜಾತಿ ಗಣತಿ ನಡೆಸಬೇಕು ಎಂಬುದರ ಬಗ್ಗೆ ಮಾಹಿತಿ ಪಡೆಯಲು ಸಮಿತಿ ರಚನೆ ಮಾಡಲಾಗಿದೆ ಎಂದು ಕೇಂದ್ರ ಸರ್ಕಾರದ ಸಾಮಾಜಿಕ ನ್ಯಾಯ ಹಾಗೂ ಸಬಲೀಕರಣ ಇಲಾಖೆ ರಾಜ್ಯ ಖಾತೆ ಸಚಿವ ಎ.ನಾರಾಯಣಸ್ವಾಮಿ ತಿಳಿಸಿದರು.

ಸುದ್ದಿಗಾರರೊಂದಿಗೆ ಮಾತನಾಡಿ, "ಜಾತಿ ಗಣತಿ ನಡೆಸುವಂತೆ ಒತ್ತಾಯವಿದ್ದು, ಗಣತಿ ನಡೆಸುವ ಸಂಬಂಧ ಸಮಿತಿ ರಚನೆ ಮಾಡಲಾಗಿದೆ. ಸಮಿತಿಯ ವರದಿ ಬಳಿಕ ನಿರ್ಧರಿಸಲಾಗುವುದು," ಎಂದು ಹೇಳಿದರು.

"ಬಿಹಾರ, ಮಹಾರಾಷ್ಟ್ರ ಸೇರಿ ಹಲವು ರಾಜ್ಯಗಳಲ್ಲಿ ಜಾತಿಗಣತಿಗೆ ಒತ್ತಾಯವಿದೆ. ಈಗಾಗಲೇ ನಡೆದಿರುವ ಜಾತಿ ಗಣತಿ ಬಗ್ಗೆಯೂ ಅಧ್ಯಯನ ನಡೆಸಲಾಗುತ್ತಿದೆ. ವಿದೇಶಗಳಲ್ಲಿ ನಡೆದಿರುವ ಗಣತಿಯನ್ನು ಪರಿಶೀಲಿಸಲಾಗುತ್ತಿದೆ," ಎಂದರು.

**ಪರಿಶಿಷ್ಟರಿಗೆ ಸಮರ್ಪಕ ಸ್ಕಾಲರ್‌ಶಿಪ್**

ಇದಕ್ಕೆ ಪ್ರತಿಕ್ರಿಯಿಸಿದ ಸಚಿವ ನಾರಾಯಣಸ್ವಾಮಿ, "ಡಿಜಿಟಲ್ ಆಡಳಿತದಿಂದ ಪಾರದರ್ಶಕವಾಗಿ ವಿದ್ಯಾರ್ಥಿ ವೇತನ ತಲುಪುತ್ತಿದೆ. ಶಾಲೆ, ಕಾಲೇಜಿಗೆ ಪ್ರವೇಶಾತಿ ಪಡೆದ ವಿದ್ಯಾರ್ಥಿ, ತನ್ನ ಕಾಲೇಜು, ಜಾತಿ ವಿವರದ ಮಾಹಿತಿಯನ್ನು ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಬೇಕು. ರಾಜ್ಯ ಸರ್ಕಾರ ತನ್ನ ಪಾಲಿನ ಮೊತ್ತವನ್ನು ಹಾಕಿದ 48 ಗಂಟೆಯೊಳಗೆ ಕೇಂದ್ರದ ಪಾಲು ವಿದ್ಯಾರ್ಥಿ ಖಾತೆಗೆ ಜಮೆ ಆಗಲಿದೆ", ಎಂದು ತಿಳಿಸಿದರು. ಇದಕ್ಕೂ ಮುನ್ನ ಶಾಸಕ ಎನ್.ಮಹೇಶ್ ಅವರು ವಿದ್ಯಾರ್ಥಿ ವೇತನಕ್ಕೆ ಕೇಂದ್ರದ ಪಾಲನ್ನು ಬಿಡುಗಡೆ ಮಾಡಬೇಕೆಂದು ಸಚಿವರ ಗಮನಕ್ಕೆ ತಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 04.10.2021

## 7. ರಾಜಕೀಯಕ್ಕಾಗಿ ಸಹಕಾರ ಸಂಘ

ಜಿಲ್ಲಾ ಸಹಕಾರ ಬ್ಯಾಂಕ್ (ಡಿಸಿಸಿ) ಅಧಿಕಾರ ಚುಕ್ಕಾಣಿ ಹಿಡಿಯಬೇಕೆಂಬ ಏಕೈಕ ರಾಜಕೀಯ ಅಜೆಂಡಾ ಇಟ್ಟುಕೊಂಡು ಸಚಿವರು ಮತ್ತು ಶಾಸಕರು ಸಹಕಾರ ನಿಯಮ ಉಲ್ಲಂಘಿಸಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಕೃಷಿ ಪತ್ತಿನ ಸಹಕಾರ ಸಂಘ (ಪ್ಯಾಕ್ಸ್) ಸ್ಥಾಪನೆಯಲ್ಲಿ ತೊಡಗಿದ್ದಾರೆ. ಪಂಚಾಯಿತಿಗೊಂದು ಸಂಘ ರಚಿಸಿದರೆ, ಈಗಾಗಲೇ ಇರುವ ಸಂಘಗಳ ಅಸ್ತಿತ್ವಕ್ಕೆ ಧಕ್ಕೆ ಬರಲಿದೆ ಎಂಬ ಸರ್ಕಾರದ ಸ್ಪಷ್ಟ ಆದೇಶವಿದ್ದರೂ, ಅದನ್ನು ನಿರ್ಲಕ್ಷಿಸಿದ್ದಾರೆ.

ಹೊಸ ಸಂಘ ರಚನೆ ಮಾಡುವ ಮುನ್ನ ಕೆಲವು ಮಾನದಂಡ ಪಾಲಿಸಬೇಕು. ಆ ನಿಯಮಗಳ ಪ್ರಕಾರವೇ 2020ರಲ್ಲೇ ಆದೇಶ ಹೊರಡಿಸಿದ್ದರು. ಆದರೆ ಈ ಆದೇಶ ಬದಿಗಿಟ್ಟು ರಾಜಕಾರಣಿಗಳು ಅಧಿಕಾರಿಗಳ ಮೇಲೆ ಪ್ರಭಾವ ಬೀರಿ ತಮ್ಮ ಕೆಲಸ ಸಾಧಿಸುತ್ತಿದ್ದಾರೆ. ಹೀಗಾದರೆ ಗ್ರಾಮೀಣ ಭಾಗದಲ್ಲಿ ಸಹಕಾರ ವ್ಯವಸ್ಥೆಗೆ ಕುತ್ತು ಬರಲಿದೆ ಎಂದು ಸಹಕಾರ ಧುರೀಣರು ಆತಂಕ ವ್ಯಕ್ತಪಡಿಸಿದ್ದಾರೆ.

ಸಾವಿರಾರು ಕೋಟಿ ರೂ. ವಹಿವಾಟು ಹೊಂದಿರುವ ಡಿಸಿಸಿ ಬ್ಯಾಂಕ್ ಚುಕ್ಕಾಣಿ ಹಿಡಿಯುವುದೇ ರಾಜಕಾರಣಿಗಳ ಮೂಲ ಉದ್ದೇಶ. ಹೊಸ ಸಹಕಾರ ಸಂಘಗಳನ್ನು ಸ್ಥಾಪನೆ ಮಾಡಿ ಅಲ್ಲಿ ತಮ್ಮ ಬೆಂಬಲಿಗರನ್ನು ಆಯ್ಕೆಯಾಗುವಂತೆ ನೋಡಿಕೊಂಡರೆ, ಆಡಳಿತ ಮಂಡಳಿಯ ಚುನಾವಣೆ ವೇಳೆ ತಮ್ಮ ಬೆಂಬಲಿಗರನ್ನು ನಿರ್ದೇಶಕರನ್ನಾಗಿ ಆಯ್ಕೆ ಮಾಡಿ, ಆ ಮೂಲಕ ಡಿಸಿಸಿ ಬ್ಯಾಂಕ್ ಆಡಳಿತದ ಚುಕ್ಕಾಣಿ ಹಿಡಿಯಬಹುದು ಎಂಬುದು ಇವರ ಲೆಕ್ಕಾಚಾರವಾಗಿದೆ.

**ಕಾರಣ ಕೇಳಿ ನೋಟಿಸ್:** ಬೈಲಹೊಂಗಲ ತಾಲ್ಲೂಕು ಹಾಗೂ ಕಿತ್ತೂರು ವಿಧಾನಸಭೆ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ನೋಂದಣಿ ಮಾಡಲು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಮಾರ್ಗಸೂಚಿಗಳನ್ನು ಸ್ಪಷ್ಟವಾಗಿ ಉಲ್ಲಂಘಿಸಲಾಗಿದೆ. ಈಗಾಗಲೇ ರಚನೆಗೊಂಡಿದ್ದ ಸಂಘ ರದ್ದಾಗಿದ್ದಲ್ಲಿ ಹೊಸ ಸಂಘ ರಚಿಸಲು ಅವಕಾಶವಿದೆ. ಆದರೆ ನೀವು ನಿಯಮಗಳನ್ನು ಉಲ್ಲಂಘಿಸಿರುವುದರಿಂದ ನಿಮ್ಮ ಮೇಲೆ ಕ್ರಮ ತೆಗೆದುಕೊಳ್ಳಬಾರದೇಕೆ ಎಂದು ಕಳೆದ ಜುಲೈ 7 ರಂದು ಸಹಕಾರ ಸಂಘಗಳ ನಿಬಂಧಕರು ಬೈಲಹೊಂಗಲ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಿಗೆ ನೋಟಿಸ್ ನೀಡಿದ್ದಾರೆ.

**ಮುಲಾಜಿಲ್ಲದೆ ರದ್ದುಪಡಿಸಲಿ : ಪಾಟೀಲ್**

ಸಹಕಾರ ವ್ಯವಸ್ಥೆಯಲ್ಲಿ ಯಾವುದೇ ಕಾರಣಕ್ಕೂ ರಾಜಕಾರಣಿಗಳು ಹಸ್ತಕ್ಷೇಪ ಮಾಡಬಾರದು. ರಾಜಕೀಯ ನುಸುಳಿದರೆ ಸಹಕಾರ ವ್ಯವಸ್ಥೆಯೇ ಹಳಿ ತಪ್ಪುತ್ತದೆ. ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳನ್ನು (ಪ್ಯಾಕ್ಸ್) ಸ್ಥಾಪನೆ ಮಾಡುವಾಗ ನಿಗದಿಪಡಿಸಿದ ಮಾನದಂಡಗಳನ್ನು ಉಲ್ಲಂಘಿಸುವುದು ಅಕ್ಷಮ್ಯ ಎಂದು ಮಾಜಿ ಸಚಿವ ಎಚ್.ಕೆ.ಪಾಟೀಲ್ ಅಭಿಪ್ರಾಯಪಟ್ಟಿದ್ದಾರೆ.

"ಸಹಕಾರ ಸಂಘಗಳ ಉಳಿವಿಗಾಗಿ ನಾವೇ ರೂಪಿಸಿದ ನಿಯಮಗಳನ್ನು ರಾಜಕಾರಣಿಗಳು ತಮ್ಮ ಅನುಕೂಲಕ್ಕಾಗಿ ಬಳಸಿಕೊಳ್ಳುವುದು, ಅಧಿಕಾರಿಗಳ ಮೇಲೆ ಒತ್ತಡ ತಂದು ಬೇಕಾಬಿಟ್ಟಿ ರಚನೆ ಮಾಡಿದರೆ ಈಗಾಗಲೇ ಅಸ್ತಿತ್ವದಲ್ಲಿ ಇರುವ ಸಂಘಗಳಿಗೆ ಧಕ್ಕೆ ಬರಲಿದೆ. ಸಹಕಾರ ಸಂಘಗಳನ್ನು ರಚಿಸಿದರೆ ಸಾಲದು. ಅವು ಆರೋಗ್ಯಪೂರ್ಣವಾಗಿ ಬೆಳವಣಿಗೆಯಾಗಲು ಪೂರಕ ಮೂಲಸೌಕರ್ಯ, ಸಿಬ್ಬಂದಿ, ಹಣಕಾಸಿನ ವಹಿವಾಟು ಹೊಂದಿರಬೇಕಾಗುತ್ತದೆ. ಇದಕ್ಕಾಗಿಯೇ 'ಪ್ಯಾಕ್ಸ್' ರಚನೆ ಮಾಡಲು ನೀತಿ ನಿಯಮಗಳನ್ನು ರೂಪಿಸಲಾಗಿದೆ. ಇದಕ್ಕೆ ವಿರುದ್ಧವಾಗಿ ರಾಜಕೀಯ ಕಾರಣಗಳಿಗೆ ತಮಗೆ ಬೇಕಾದಂತೆ ರಚನೆ ಮಾಡಿರುವ ಸಹಕಾರ ಸಂಘಗಳನ್ನು ಮುಲಾಜಿಲ್ಲದೆ ಸಹಕಾರ ಸಂಘಗಳ ನಿಬಂಧಕರು ಹಾಗೂ ರಾಜ್ಯ ಸರ್ಕಾರ ರದ್ದುಪಡಿಸಬೇಕು ಎಂದು ಈ ಮೂಲಕ ನಾನು ಅಗ್ರಹಿಸುತ್ತೇನೆ," ಎಂದು ಪಾಟೀಲ್ ಹೇಳಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 05.10.2021

## 8. ಸಮಗ್ರ ಕನ್ನಡ ಭಾಷಾ ಮಸೂದೆ

ಕಾನೂನು ರಚನೆ, ಭಾಷಾ ಬಳಕೆ, ಶಿಕ್ಷಣ ಮತ್ತು ಸಂಶೋಧನೆ, ಉದ್ಯೋಗ, ನ್ಯಾಯಾಲಯ, ಮಾಹಿತಿ ತಂತ್ರಜ್ಞಾನ, ಸಾರ್ವಜನಿಕವಾಗಿ ಎಲ್ಲ ಹಂತಗಳಲ್ಲೂ ಕನ್ನಡ ಬಳಕೆಗಾಗಿ ಪ್ರತ್ಯೇಕ ಮಾರ್ಗಸೂಚಿ ರೂಪಿಸಲು ಸಮಗ್ರ ಕನ್ನಡ ಭಾಷಾ (ಪ್ರಸಾರ ಮತ್ತು ವ್ಯಾಪಕ ಬಳಕೆ) ಮಸೂದೆ ಮಂಡಿಸಬೇಕು ಎಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಸರ್ಕಾರವನ್ನು ಒತ್ತಾಯಿಸಿದೆ.

ವಿಧಾನಮಂಡಲದ ಮುಂದಿನ ಅಧಿವೇಶನದಲ್ಲಿ ಈ ಮಸೂದೆ ಮಂಡಿಸಬೇಕು. ಈ ಮೂಲಕ ಕನ್ನಡ ಭಾಷೆ ಬಳಕೆಗೆ ಅಧಿಕೃತ ಮಾನ್ಯತೆ ತಂದುಕೊಡಬೇಕು ಎಂದೂ ಹೇಳಿದೆ. ಪ್ರಾಧಿಕಾರ ಕರೆದಿದ್ದ ಸಭೆಯಲ್ಲಿ ಕನ್ನಡ ಪರ ಚಿಂತಕರು, ಕಾನೂನು ಸಲಹೆಗಾರರು, ಸಾಹಿತಿಗಳು, ಹೋರಾಟಗಾರರು ಈ ನಿರ್ಣಯ ತೆಗೆದುಕೊಂಡಿದ್ದಾರೆ.

ಮಸೂದೆಯನ್ನು ರೂಪಿಸುವ ಸಂಬಂಧ ಕನ್ನಡ ಪರ ಚಿಂತಕರು, ಕಾನೂನು ಪಂಡಿತರು, ಸಾಹಿತಿಗಳು, ಹೋರಾಟಗಾರರು, ಕನ್ನಡ ಮತ್ತು ಸಂಸ್ಕೃತಿ ಚಿಂತಕರು, ವಾಣಿಜ್ಯ ಮತ್ತು ಕೈಗಾರಿಕಾ ತಜ್ಞರು, ಭಾಷಾ ವಿಜ್ಞಾನಿಗಳನ್ನು ಒಳಗೊಂಡ ಸಮಿತಿ ರಚಿಸಲು ತೀರ್ಮಾನಿಸಲಾಗಿದೆ ಎಂದು ಪ್ರಾಧಿಕಾರದ ಅಧ್ಯಕ್ಷ ಟಿ.ಎಸ್.ನಾಗಾಭರಣ ತಿಳಿಸಿದ್ದಾರೆ.

ಕರ್ನಾಟಕದಲ್ಲಿ ಕನ್ನಡದ ಅಭಿವೃದ್ಧಿ ಮತ್ತು ಬಳಕೆಗೆ ಕಾಲ ಕಾಲಕ್ಕೆ ಆದೇಶಗಳನ್ನು ಹೊರಡಿಸುತ್ತಾ ಬಂದಿದ್ದರೂ, ಸಮನ್ವಯದ ಕೊರತೆಯಿಂದ ಕನ್ನಡಪರ ಕಾಳಜಿಯ ಆದೇಶಗಳು ಅನುಷ್ಠಾನಗೊಂಡಿಲ್ಲ. ಬೇರೆ ರಾಜ್ಯಗಳಲ್ಲೂ ಇಂತಹದೇ ಸ್ಥಿತಿ ಉದ್ಭವಿಸಿದಾಗ ಅದಕ್ಕೆ ಪರಿಹಾರವಾಗಿ ಭಾಷಾ ಬಳಕೆಗೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ಒಟ್ಟುಗೂಡಿಸಿ 'ಸಮಗ್ರ ಭಾಷಾ ಬಳಕೆ ಕಾಯ್ದೆ' ರೂಪಿಸಿವೆ. ಆದ್ದರಿಂದ, ರಾಜ್ಯದಲ್ಲಿ ಮಸೂದೆಯ ಅಗತ್ಯವಿದೆ ಎಂದು ಸಭೆಯಲ್ಲಿ ಒಮ್ಮತಕ್ಕೆ ಬರಲಾಯಿತು.

ರಾಜ್ಯಸಭಾ ಸದಸ್ಯ ಎಲ್.ಹನುಮಂತಯ್ಯ, ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ ಟಿ.ಎಂ.ವಿಜಯಭಾಸ್ಕರ್, ಅಡ್ವೊಕೇಟ್ ಜನರಲ್ ಪ್ರಭುಲಿಂಗ ನಾವಡಗಿ, ಹೆಚ್ಚುವರಿ ಅಡ್ವೊಕೇಟ್ ಜನರಲ್ ಸುಬ್ರಹ್ಮಣ್ಯ, ಸಾಹಿತಿ ದೊಡ್ಡರಂಗೇಗೌಡ, ಸಾಮಾಜಿಕ ಕಾರ್ಯಕರ್ತೆ ಮಾಳವಿಕಾ ಅವಿನಾಶ್, ಸಂಸದೀಯ ವ್ಯವಹಾರಗಳ ಇಲಾಖೆ ನಿವೃತ್ತ ಕಾರ್ಯದರ್ಶಿ ದ್ವಾರಕನಾಥ ಬಾಬು, ಕನ್ನಡಪರ ಹೋರಾಟಗಾರ ರಾ.ನಂ. ಚಂದ್ರಶೇಖರ್ ಸಭೆಯಲ್ಲಿ ಇದ್ದರು.

ಆಧಾರ: ಪ್ರಜಾವಾಣಿ, ದಿನಾಂಕ: 05.10.2021

## 9. ರೈತರ ಆದಾಯ ದ್ವಿಗುಣಕ್ಕೆ ಸಮಿತಿ

ರಾಜ್ಯದಲ್ಲಿ 2023 ರ ವೇಳೆಗೆ ರೈತರ ಆದಾಯ ದ್ವಿಗುಣಗೊಳಿಸಲು ನಾನಾ ಯೋಜನೆಗಳನ್ನು ರೂಪಿಸುವ ಸಂಬಂಧ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿ ರಚಿಸಲಾಗಿದೆ ಎಂದು ಕೃಷಿ ಸಚಿವ ಬಿ.ಸಿ.ಪಾಟೀಲ್ ಹೇಳಿದರು.

"ರೈತರ ಆದಾಯ ದ್ವಿಗುಣಗೊಳಿಸುವ ಕುರಿತು ಸಮಗ್ರ ಕೃಷಿ ಪದ್ಧತಿಯ ವಿಸ್ತರಣೆ ಹಾಗೂ ಜನಪ್ರಿಯ ಕೃಷಿ ಪದ್ಧತಿಯ ವಿಸ್ತರಣೆ ಹಾಗೂ ಜನಪ್ರಿಯ ಕಾರ್ಯಕ್ರಮ ಅಳವಡಿಸಲು ಆರ್‌ಕೆವಿವೈ ಯೋಜನೆಯಡಿ 7,234 ಕೋಟಿ ರೂ. ಅನುದಾನ ಒದಗಿಸಲಾಗಿದ್ದು, ಮುಂದಿನ ಎರಡು ವರ್ಷಗಳಲ್ಲಿ ರಾಜ್ಯದ ಎಲ್ಲ ಗ್ರಾಮ ಪಂಚಾಯತಿಗಳಲ್ಲಿ ಸಮಗ್ರ ಕೃಷಿ ಪದ್ಧತಿಯ ಮಾದರಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ," ಎಂದು ಅವರು ತಿಳಿಸಿದರು.

ಕೃಷಿ ಬೆಳೆಗಳು, ಬಿತ್ತನೆ ಬೀಜ, ತಂತ್ರಜ್ಞಾನಗಳು, ರೈತರ ಸಮಸ್ಯೆಗಳ ಬಗ್ಗೆ ಸಮಾಲೋಚನೆ ನಡೆಸಲು ಕೃಷಿ ಇಲಾಖೆ ಅಧಿಕಾರಿಗಳ ಸಭೆ ನಡೆಸಿದ ಬಳಿಕ ಕರೆದಿದ್ದ ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು, "ಕೃಷಿ ಮೂಲಭೂತ ಸೌಕರ್ಯ ನಿಧಿ ಯೋಜನೆಯಡಿ ಕೊಯ್ಲೋತ್ತರ ನಿರ್ವಹಣೆಗಾಗಿ ಮೂಲಭೂತ ಸೌಕರ್ಯಗಳನ್ನು ಸೃಷ್ಟಿಸಲು ಮತ್ತು ಸಾಮೂಹಿಕ ಕೃಷಿ ಆಸ್ತಿಯನ್ನು ಸೃಷ್ಟಿಸಲು ಮಧ್ಯಮಾವಧಿ ಮತ್ತು ಧೀರ್ಘಾವಧಿ ಸಾಲದ ಬಡ್ಡಿಗೆ ಶೇ.3 ರಂತೆ ಸಹಾಯಧನ ನೀಡಲಾಗುವುದು. ಯೋಜನೆಯ ಪ್ರಯೋಜನ ಪಡೆಯಲು ಅರ್ಹ ಫಲಾನುಭವಿಗಳು ಪ್ರಸ್ತಾವನೆಯನ್ನು ನೇರವಾಗಿ ಕೇಂದ್ರ ಸರ್ಕಾರದ (ಎಐಎಫ್) ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಬೇಕು ಅಥವಾ ಸಂಬಂಧಿಸಿದ ಬ್ಯಾಂಕ್ ಅಧಿಕಾರಿಗಳನ್ನು ಸಂಪರ್ಕಿಸಬೇಕು," ಎಂದು ಸಚಿವರು ವಿವರಿಸಿದರು.

ಕೃಷಿ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ರಾಜಕುಮಾರ್ ಖತ್ರಿ, ಆಯುಕ್ತ ಬ್ರಿಜೇಶ್ ಕುಮಾರ್ ದೀಕ್ಷಿತ್, ಇಲಾಖೆ ನಿರ್ದೇಶಕ ಬಿ.ವೈ.ಶ್ರೀನಿವಾಸ್ ಮತ್ತಿತರರು ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 05.10.2021

## 10.ನಾನಾ ಉದ್ದೇಶದ ಸಂಪುಟ ಉಪಸಮಿತಿ ರಚನೆ

ನೀರಾವರಿ, ಹೂಡಿಕೆ ಆಕರ್ಷಣೆ, ಬರ, ನೆರೆ, ಕೃಷಿ ಉತ್ಪನ್ನ ಬೆಲೆ ಕುಸಿತ ಸೇರಿದಂತೆ ನಾನಾ ವಿಷಯಗಳಿಗೆ ಸಂಬಂಧಪಟ್ಟಂಗತೆ ಪರಿಶೀಲನೆ, ಮೇಲ್ವಿಚಾರಣೆ, ಜಾರಿ, ಶಿಫಾರಸ್ಸು ಸಲ್ಲಿಕೆಗಾಗಿ ಸಂಪುಟ

ಉಪಸಮಿತಿಗಳನ್ನು ರಚಿಸಲಾಗಿದೆ. ನಾನಾ ಉದ್ದೇಶದ ಸಂಪುಟ ಉಪಸಮಿತಿ ಹಾಗೂ ಅಧ್ಯಕ್ಷರ ವಿವರ ಹೀಗಿದೆ.

**ಬಸವರಾಜ ಬೊಮ್ಮಾಯಿ** : ಕೃಷ್ಣ, ಮಹದಾಯಿ, ಕಾವೇರಿ ಇತರೆ ನೀರಾವರಿ ಯೋಜನೆಗಳ ಜಾರಿ / ನ್ಯಾಯಾಧಿಕರಣಗಳ ತೀರ್ಪು ಅನುಷ್ಠಾನ, ಭೂಮಿಗಳಿಗೆ ಪರಿಹಾರ ದರ ನಿಗದಿ.

**ಬಸವರಾಜ ಬೊಮ್ಮಾಯಿ** : ಹೂಡಿಕೆ ಪ್ರಸ್ತಾವ ಪರಿಶೀಲಿಸಿ ವಿಶೇಷ ರಿಯಾಯ್ತಿ, ಉತ್ತೇಜನ ಮಂಜೂರು ಉಪಸಮಿತಿ.

**ಆರ್.ಅಶೋಕ್** : ಬರ, ನೆರೆ ಪರಿಸ್ಥಿತಿ, ಇತರೆ ನೈಸರ್ಗಿಕ ವಿಪತ್ತುಗಳಿಂದ ಉದ್ಭವಿಸುವ ಪರಿಸ್ಥಿತಿ ಪರಾಮರ್ಶೆ.

**ಆರ್.ಅಶೋಕ್** : ನಾನಾ ಇಲಾಖೆ/ಕಛೇರಿಗಳ ವಿಲೀನ, ರದ್ಧತಿ, ಮಂಜೂರಾಗಿರುವ ವೃಂದಗಳ ಬಲದ ವೈಜ್ಞಾನಿಕ ಪರಿಷ್ಕರಣೆ / ಹುದ್ದೆಗಳ ರದ್ಧತಿ, ಮರು ವಿನ್ಯಾಸ ಹಾಗೂ 6ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸು.

**ಗೋವಿಂದ ಕಾರಜೋಳ** : ಪರಿಶಿಷ್ಟ ಜಾತಿ / ಪಂಗಡದ ಬ್ಯಾಕ್‌ಲಾಗ್ ಹುದ್ದೆಗಳ ಭರ್ತಿ ಪರಾಮರ್ಶೆ.

**ಗೋವಿಂದ ಕಾರಜೋಳ** : ರಾಜ್ಯ ಜಲ ನೀತಿ ಕುರಿತು ಪರಾಮರ್ಶಿಸಿ ಸಚಿವ ಸಂಪುಟಕ್ಕೆ ಸೂಕ್ತ ಶಿಫಾರಸ್ಸು.

**ಸಿ.ಸಿ.ಪಾಟೀಲ್** : ನೈಸ್ ಯೋಜನೆಯಡಿ ಬರುವ ಜಮೀನುಗಳ ಕುರಿತಂತೆ ವ್ಯಾಜ್ಯಗಳನ್ನು ಪರಿಶೀಲಿಸಿ ಸೂಕ್ತ ಶಿಪಾರಸ್ಸು.

**ಉಮೇಶ್ ಕತ್ತಿ** : ಕೃಷಿ ಮತ್ತು ತೋಟಗಾರಿಕೆ ಉತ್ಪನ್ನಗಳ ಬೆಲೆ ಕುಸಿದಾಗ ಬೆಲೆಗಳ ಸ್ಥಿರೀಕರಣಕ್ಕಾಗಿ ಬೆಂಬಲ ಬೆಲೆ ನಿಗದಿ.

**ಉಮೇಶ್ ಕತ್ತಿ** : ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿಧಾಮಗಳ ಪರಿಸರ ಸೂಕ್ಷ್ಮ ವಲಯದ ಘೋಷಣೆ ಪ್ರಸ್ತಾವವನ್ನು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಹಾಗೂ ಡಾ.ಕಸ್ತೂರಿ ರಂಗನ್ ವರದಿ, ಇತರೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಸೂಕ್ತ ತೀರ್ಮಾನ.

**ಬಿ.ಶ್ರೀರಾಮುಲು** : 371ಜೆ ವಿಶೇಷ ಸ್ಥಾನ ಮಾನದಡಿ ಹೊರಡಿಸಲಾದ ಆದೇಶಗಳ ಅನುಷ್ಠಾನದ ಪ್ರಗತಿ ಪರಿಶೀಲನೆ.

**ಜೆ.ಸಿ.ಮಾಧುಸ್ವಾಮಿ** : ನ್ಯಾಯಾಲಯಗಳಲ್ಲಿ ವಿಚಾರಣೆಯಲ್ಲಿರುವ ಅಪರಾಧ ಪ್ರಕರಣಗಳ ಪರಿಶೀಲನೆ.

**ಜೆ.ಸಿ.ಮಾಧುಸ್ವಾಮಿ** : ರಾಜ್ಯ ಸಿವಿಲ್ ಸೇವೆಗಳಲ್ಲಿನ 'ಗ್ರೂಪ್–ಎ' ವೃಂದದ ಅಧಿಕಾರಿಗಳ ವಿರುದ್ಧ ವಿಚಾರಣೆ / ದಂಡನೆ ವಿಧಿಸುವ ಸಂಬಂಧ ಲೋಕಾಯುಕ್ತರ / ಉಪ ಲೋಕಾಯುಕ್ತರ ಶಿಫಾರಸ್ಸು ತಿರಸ್ಕರಿಸುವ / ಮಾರ್ಪಡಿಸುವ ಪ್ರಸ್ತಾವ ಪರಾಮರ್ಶೆ.

**ಆನಂದ್ ಸಿಂಗ್** : ಗಣಿ ಪ್ರಭಾವಿತ ಪರಿಸರ ಸಂರಕ್ಷಣಾ ನಿಗಮದ ಯೋಜನೆ ಬಗ್ಗೆ ಸುಪ್ರೀಂ ಕೋರ್ಟ್‌ನ ಪ್ರಕರಣದಲ್ಲಿ ಕಾನೂನಾತ್ಮಕ ಕ್ರಮ ಜರುಗಿಸುವುದರ ಮೇಲ್ವಿಚಾರಣೆ ನಡೆಸಲು / ನಿರ್ಣಯ ಕೈಗೊಳ್ಳುವ ಸಮಿತಿ.

**ಕೆ.ಎಸ್.ಈಶ್ವರಪ್ಪ** : ಆನೇಕಲ್ ತಾಲೂಕಿನ ಸೂರ್ಯನಗರ ಮತ್ತು ಸುತ್ತಮುತ್ತಲಿನ 52 ಜನವಸತಿಗಳಿಗೆ ಜಲ ಜೀವನ್ ಮಿಷನ್‌ನಡಿ ನೀರು ಪೂರೈಕೆ ಯೋಜನೆ ಪರಾಮರ್ಶೆ.

**ಕೆ.ಎಸ್.ಈಶ್ವರಪ್ಪ :** ಗ್ರಾಮೀಣ ಪ್ರದೇಶಗಳಲ್ಲಿ 'ಇ-ಸ್ವತ್ತು' ಮತ್ತು ನಗರ ಪ್ರದೇಶಗಳಲ್ಲಿ 'ಇ-ಖಾತಾ' ನೀಡುವ ಬಗ್ಗೆ ಪರಾಮರ್ಶಿಸಲು ಸಚಿವ ಸಂಪುಟ ಉಪಸಮಿತಿ ರಚಿಸಿರುವ ಬಗ್ಗೆ ಪರಾಮರ್ಶೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 06.10.2021

## 11. ಹಿರಿಯರಿಗೆ ಸಂಧ್ಯಾಸುರಕ್ಷೆ

ರಾಜ್ಯದಲ್ಲಿ ಜಾರಿಯಲ್ಲಿರುವ ಎರಡು ಬಗೆಯ ವೃದ್ಧಾಪ್ಯ ವೇತನವನ್ನು ಪರಿಷ್ಕರಿಸುವ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರ ಘೋಷಣೆಗೆ ನಡೆದ ಸಂಪುಟ ಸಭೆ ಅನುಮೋದನೆ ನೀಡಿದೆ. ಈ ಮೂಲಕ 36ಲಕ್ಷ ಹಿರಿಯ ಫಲಾನುಭವಿಗಳಿಗೆ ರೂ.200 ಹೆಚ್ಚು ಪಿಂಚಣಿ ಸಿಗಲಿದೆ.

ಸಂಧ್ಯಾ ಸುರಕ್ಷಾ ಯೋಜನೆಯಲ್ಲಿ ಎರಡು ಹಂತಗಳಿವೆ. 60 ವರ್ಷ ಮೇಲ್ಪಟ್ಟವರಿಗೆ ಮತ್ತು 65 ವರ್ಷ ಮೇಲ್ಪಟ್ಟವರಿಗೆ ಪಿಂಚಣಿ ನೀಡಲಾಗುತ್ತಿದೆ. ಕೇಂದ್ರ ಸರ್ಕಾರ 65 ವರ್ಷ ಮೇಲ್ಪಟ್ಟವರಿಗೆ ರೂ. 600 ನೀಡುತ್ತಿದ್ದರೆ, ರಾಜ್ಯ ಸರ್ಕಾರ 60 ವರ್ಷ ಮೇಲ್ಪಟ್ಟವರಿಗೆ ಒಂದು ಸಾವಿರ ರೂ. ನೀಡುತ್ತಿದೆ. ಈ ಎರಡೂ ಯೋಜನೆಗಳಿಗೆ ಅನ್ವಯವಾಗುವಂತೆ ರೂ.200 ನೀಡಲು ಉದ್ದೇಶಿಸಿ ಈ ಸಂಬಂಧ ಆದೇಶವನ್ನು ಹೊರಡಿಸಲಾಗಿದೆ. ಈ ತೀರ್ಮಾನಕ್ಕೆ ಘಟನೋತ್ತರ ಅನುಮೋದನೆ ನೀಡಲಾಗಿದೆ. ಕೇಂದ್ರ ಸರ್ಕಾರದ ಫಲಾನುಭವಿಗಳಿಗೂ ರೂ.200 ಹೆಚ್ಚಿಗೆ ಪಿಂಚಣಿ ಸಿಗಲಿದೆ. ಈ ತೀರ್ಮಾನದಿಂದ ರಾಜ್ಯ ಸರ್ಕಾರದ ಬೊಕ್ಕಸಕ್ಕೆ ರೂ.207 ಕೋಟಿ ಹೆಚ್ಚು ಹೊರೆ ಬೀಳಲಿದೆ.

ಆಧಾರ: ವಿಜಯ ವಾಣಿ, ದಿನಾಂಕ:06.10.2021

## 12.ಮೈಷುಗರ್ ಬಿಕ್ಕಟ್ಟಿಗೆ ಶೀಘ್ರ ತೆರೆ

ಮಂಡ್ಯ ಸಕ್ಕರೆ ಕಾರ್ಖಾನೆಯನ್ನು ಖಾಸಗಿಗೆ ಕೊಡಬೇಕೇ ಅಥವಾ ಸರ್ಕಾರ ನಿರ್ವಹಿಸಬೇಕೆ ಎಂಬ ವಿಚಾರ ಬಹಳ ದಿನಗಳಿಂದ ಚರ್ಚೆ ನಡೆಯುತ್ತಿತ್ತು. ಈ ವಿಚಾರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸಂಪುಟ ಸಮಿತಿ ರಚನೆಯಾಗಿದೆ. ಈ ಸಮಿತಿಯ ಶಿಫಾರಸ್ಸು ನೋಡಿಕೊಂಡು ಮುಂದಿನ ತೀರ್ಮಾನ ಕೈಗೊಳ್ಳಲು ಸಚಿವ ಸಂಪುಟ ತೀರ್ಮಾನ ಮಾಡಿದೆ ಎಂದು ಸಚಿವ ಮಾಧುಸ್ವಾಮಿ ತಿಳಿಸಿದರು. ಇದೇ ವೇಳೆ ವರದಿಯನ್ನು ಶೀಘ್ರವೇ ಕೊಡಲು ಸಂಪುಟ ಸಭೆ ಉಪ ಸಮಿತಿಗೆ ಸೂಚಿಸಿತು. ಸಂಪುಟ ಉಪ ಸಮಿತಿಯಲ್ಲಿ ಸಕ್ಕರೆ ಸಚಿವ ಶಂಕರ ಪಾಟೀಲ್ ಮುನೇನಕೊಪ್ಪ, ನಾರಾಯಣಗೌಡ, ಗೋವಿಂದ ಕಾರಜೋಳ, ಆರ್.ಅಶೋಕ್ ಇರಲಿದ್ದಾರೆ. ಕಾರ್ಖಾನೆಯನ್ನು ಖಾಸಗಿಗೆ ಕೊಡಬಾರದೆಂದು ತೀವ್ರ ವಿರೋಧ ಬಂದ ಹಿನ್ನೆಲೆಯಲ್ಲಿ ಸಂಪುಟ ಉಪ ಸಮಿತಿ ರಚಿಸಿ, ಅಧ್ಯಯನ ಮಾಡಿ ತೀರ್ಮಾನಿಸಲು ನಿರ್ಧರಿಸಲಾಗುತ್ತದೆ ಎಂದು ಕಾನೂನು ಮತ್ತು ಸಂಸದೀಯ ಸಚಿವ ಜೆ.ಸಿ.ಮಾಧುಸ್ವಾಮಿ ತಿಳಿಸಿದರು.

ಆಧಾರ: ವಿಜಯವಾಣಿ, ದಿನಾಂಕ: 06.10.2021

## 13. ಕಾರ್ಮಿಕ ಇಲಾಖೆಯ 2.83 ಲಕ್ಷ ಕಡತಗಳಿಗೆ ಮುಕ್ತಿ

ಪರಿಹಾರ ಕೋರಿ ಸಲ್ಲಿಕೆಯಾಗಿ, ಧೂಳು ಹಿಡಿದಿದ್ದ ಅರ್ಜಿಗಳಿಗೆ ಮುಕ್ತಿ ಕಾಣಿಸುವಲ್ಲಿ ಕಾರ್ಮಿಕ ಇಲಾಖೆ ಕೊನೆಗೂ ಯಶಸ್ವಿಯಾಗಿದೆ. ಆನ್‌ಲೈನ್-ಆಫ್‌ಲೈನ್‌ನಲ್ಲಿ ಬಂದಿದ್ದ 2–3 ವರ್ಷ ಅವಧಿಯವು ಸೇರಿದಂತೆ ಒಟ್ಟು 1,76,049 ಅರ್ಜಿಗಳ ಜೊತೆಗೆ, ಅದಾಲತ್ ನಡೆಸಿ ಹೊಸದಾಗಿ ಪಡೆದ 1,24,951 ಅರ್ಜಿಯಲ್ಲಿ ದಾಖಲೆಯ 2,82,081 ಅರ್ಜಿಯನ್ನು ವಿಲೇವಾರಿ ಮಾಡಲಾಗಿದೆ. ಅಷ್ಟೇಅಲ್ಲ, 1213 ಅರೆ ನ್ಯಾಯಿಕ ಪ್ರಕರಣಗಳಿದ್ದು ಇವೆಲ್ಲವನ್ನೂ ಇತ್ಯರ್ಥ ಮಾಡಲಾಗಿದೆ.

ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಕಟ್ಟಡ ಕಾರ್ಮಿಕರ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಧನ ಸಹಾಯ, ವಿವಾಹಕ್ಕೆ ಆರ್ಥಿಕ ನೆರವು, ಪಿಂಚಣಿ–ದುರ್ಬಲತೆ ಪಿಂಚಣಿ, ವಸತಿ ಸೌಲಭ್ಯ, ಅಂತ್ಯಕ್ರಿಯೆ ವೆಚ್ಚ ಸೇರಿದಂತೆ ವಿವಿಧ ಸೌಲಭ್ಯದಡಿ ಧನ ಸಹಾಯ ನೀಡಲಾಗುತ್ತಿದೆ. ಹೀಗೆ ಸಲ್ಲಿಕೆಯಾದ ಅರ್ಜಿಗಳಲ್ಲಿ ಸಮರ್ಪಕ ದಾಖಲೆ ಇಲ್ಲದಿರುವುದು, ಮಾಹಿತಿ ಕೊರತೆಯಿಂದಾಗಿ ಬಹಳಷ್ಟು ಅರ್ಜಿಗಳು ಮೂಲೆ ಸೇರಿದ್ದವು.

ಇದನ್ನು ಗಮನಿಸಿದ ಕಾರ್ಮಿಕ ಸಚಿವ ಶಿವರಾಂ ಹೆಬ್ಬಾರ್ ಅವರು, ಹೊಸದಾಗಿ ಕಾರ್ಮಿಕ ಅದಾಲತ್ ನಡೆಸಿ ಅರ್ಜಿ ಸ್ವೀಕರಿಸಿ, ಇವುಗಳ ಜೊತೆಗೆ ಹಳೆಯ ಅರ್ಜಿಗಳಿಗೂ ಮುಕ್ತಿ ನೀಡಿ ಎಂದು ಕಟ್ಟುನಿಟ್ಟಾಗಿ ಸೂಚನೆ ನೀಡಿದರು. ಪರಿಣಾಮವಾಗಿ ರಾಜ್ಯಾದ್ಯಂತ ಕಾರ್ಮಿಕ ಅದಾಲತ್ ನಡೆಸಿ ಅರ್ಜಿ ಸ್ವೀಕರಿಸಿ ಇತ್ಯರ್ಥ ಮಾಡಲಾಗಿದೆ. ಅರ್ಜಿ ವಿಲೇವಾರಿ ಸಮರ್ಪಕವಾಗಿ ನಡೆಯಲು ನೋಡೆಲ್ ಅಧಿಕಾರಿಗಳನ್ನು ಸಚಿವರು ನೇಮಿಸಿದ್ದರು.

**18,919 ಅರ್ಜಿ ಬಾಕಿ :** ಮಂಡಳಿಯ ಬೆಂಗಳೂರು ಕೇಂದ್ರ ಕಛೇರಿ, ಬೆಂಗಳೂರಿನ ಎರಡು ಉಪ ಕಾರ್ಮಿಕ ಆಯುಕ್ತರ ಪ್ರಾದೇಶಿಕ ಕಚೇರಿಗಳು, ಹಾಸನ, ಕಲಬುರಗಿ ಮತ್ತು ಬೆಳಗಾವಿ ಉಪ ಕಾರ್ಮಿಕ ಆಯುಕ್ತರ ಪ್ರಾದೇಶಿಕ ಕಚೇರಿಯಲ್ಲಿ ಆಗಸ್ಟ್ 16 ಕ್ಕಿಂತ ಮೊದಲೇ 1,76,049 ಅರ್ಜಿ ಬಾಕಿ ಇದ್ದವು. ಆಗಸ್ಟ್ 16 ರಿಂದ ಸೆಪ್ಟೆಂಬರ್ 15 ರವರೆಗೆ ಹೊಸದಾಗಿ 1,24,951 ಅರ್ಜಿ ಸ್ವೀಕರಿಸಿದ್ದು ಅರೆ ನ್ಯಾಯಿಕ ಪ್ರಕರಣದಡಿ 1,213 ಅರ್ಜಿ ಸಲ್ಲಿಕೆಯಾಗಿದ್ದವು. ಒಟ್ಟಾರೆ 3,02,213 ಅರ್ಜಿಯಲ್ಲಿ 2,83,294 ಅರ್ಜಿ ವಿಲೇವಾರಿ ಮಾಡಲಾಗಿದೆ. ಇದರಿಂದಾಗಿ 1,53,996 ಕಾರ್ಮಿಕರಿಗೆ ಪ್ರಯೋಜನವಾಗಿದ್ದು ಒಟ್ಟಾರೆ ಬರೋಬ್ಬರಿ ರೂ. 89,04,97,718 ಕೋಟಿ ಪರಿಹಾರ ಪಾವತಿಸಲಾಗಿದೆ. ದೂರವಾಣಿ ಸಂಖ್ಯೆ ಬದಲಾವಣೆ ಮತ್ತಿತರ ಕಾರಣಗಳಿಂದಾಗಿ ಮಾತ್ರ ಇನ್ನೂ 18,919 ಅರ್ಜಿ ಇತ್ಯರ್ಥವಾಗಿಲ್ಲ.

ಅರೆ ನ್ಯಾಯಿಕ ಪ್ರಕರಣದಡಿ ಹೊಸದಾಗಿ 1,213 ಅರ್ಜಿ ಸಲ್ಲಿಕೆಯಾಗಿದ್ದವು. ಇವುಗಳಲ್ಲಿ ಹೆಚ್ಚಿನವು ಕನಿಷ್ಠ ವೇತನ ಕಾಯ್ದೆ, ಉಪಧನ ಪಾವತಿ ಕಾಯ್ದೆ ಹಾಗೂ ದೂರುಗಳಿಗೆ ಸಂಬಂಧಿಸಿದ ಅರ್ಜಿಗಳಿದ್ದವು. ಮಾಲೀಕರು ಕಾರ್ಮಿಕರ ನಡುವೆ ಸಂಧಾನ ನಡೆಸಿ ಕಾರ್ಮಿಕರಿಗೆ ಬರಬೇಕಾದ 4 ಕೋಟಿ ರೂಪಾಯಿ ಪರಿಹಾರ ಮತ್ತಿತರ ಸೌಲಭ್ಯಗಳನ್ನು ಒದಗಿಸಿ ಈ ಎಲ್ಲ ಪ್ರಕರಣಗಳನ್ನೂ ಮುಕ್ತಾಯಗೊಳಿಸಲಾಗಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ: 06.10.2021

## 14. ದತ್ತಪೀಠ : ಮುಂದಿನ ಕ್ರಮ ಚರ್ಚೆಗೆ ಉಪಸಮಿತಿ

ತೀವ್ರ ವಿವಾದಕ್ಕೆ ಎಡೆಮಾಡಿಕೊಟ್ಟಿದ್ದ ಬಾಬಾ ಬುಡನ್‌ಗಿರಿ ಗುರು ದತ್ತಾತ್ರೇಯ ಪೀಠದ ಪೂಜೆಗೆ ಮೌಲ್ವಿ ಅವರ ನೇಮಕ ಆದೇಶವನ್ನು ಹೈಕೋರ್ಟ್ ರದ್ದು ಮಾಡಿರುವ ಹಿನ್ನೆಲೆಯಲ್ಲಿ ಕೈಗೊಳ್ಳಬಹುದಾದ ಮುಂದಿನ ನಿರ್ಣಯಗಳ ಬಗ್ಗೆ ಚರ್ಚಿಸಲು ಕಾನೂನು ಸಚಿವ ಜೆ.ಸಿ.ಮಾಧುಸ್ವಾಮಿ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟದ ಉಪ ಸಮಿತಿ ರಚನೆ ಮಾಡಲು ಸಚಿವ ಸಂಪುಟ ಮಹತ್ವದ ತೀರ್ಮಾನ ಕೈಗೊಂಡಿದೆ.

ವಿಧಾನಸೌಧದಲ್ಲಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅಧ್ಯಕ್ಷತೆಯಲ್ಲಿ ನಡೆದ ಸಚಿವ ಸಂಪುಟ ಸಭೆಯಲ್ಲಿ ಈ ನಿರ್ಣಯ ಕೈಗೊಳ್ಳಲಾಗಿದ್ದು, ಕಂದಾಯ ಸಚಿವ ಆರ್.ಅಶೋಕ್, ಕನ್ನಡ ಮತ್ತು ಸಂಸ್ಕೃತಿ ಸಚಿವ ಸುನಿಲ್ ಕುಮಾರ್ ಮತ್ತು ಮುಜರಾಯಿ ಸಚಿವೆ ಶಶಿಕಲಾ ಜೊಲ್ಲೆ ಸಮಿತಿಯ ಸದಸ್ಯರಾಗಿರಲಿದ್ದಾರೆ.

ಸಭೆಯ ಬಳಿಕ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಸಚಿವ ಮಾಧುಸ್ವಾಮಿ, ದತ್ತಪೀಠದ ಪೂಜೆಗೆ ಮೌಲ್ವಿ ನೇಮಕ ಆದೇಶವನ್ನು ನ್ಯಾಯಾಲಯವು ರದ್ದುಗೊಳಿಸಿದೆ. ಈ ಸಂಬಂಧ ಸರ್ಕಾರದ ಮುಂದಿನ ನಡೆಯ ಬಗ್ಗೆ ಚರ್ಚಿಸುವ ಸಂಬಂಧ ನನ್ನ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟದ ಉಪಸಮಿತಿ ರಚನೆ

ಮಾಡಲು ನಿರ್ಧರಿಸಲಾಗಿದೆ. ನ್ಯಾಯಾಲಯಕ್ಕೆ ಪ್ರಮಾಣ ಪತ್ರ ಸಲ್ಲಿಕೆ ಮಾಡುವುದು, ಮುಂದಿನ ರೂಪುರೇಷೆಗಳೇನು, ನ್ಯಾಯಾಲಯದ ಆದೇಶ ಉಲ್ಲಂಘನೆಯಾಗದಂತೆ ಯಾವ ಕ್ರಮಗಳನ್ನು ಕೈಗೊಳ್ಳಬೇಕು ಸೇರಿದಂತೆ ಇತರೆ ಅಂಶಗಳ ಕುರಿತು ಸಮಿತಿಯು ಸಮಾಲೋಚನೆ ನಡೆಸಲಿದೆ. ಮುಂದೆ ಕೈಗೊಳ್ಳಬಹುದಾದ ಪ್ರಕ್ರಿಯೆಗಳ ಕುರಿತು ಚರ್ಚಿಸಿ ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಲಾಗುವುದು ಎಂದರು.

ಕರ್ನಾಟಕ ಧಾರ್ಮಿಕ ಕಟ್ಟಡಗಳ ಸಂರಕ್ಷಣೆ ವಿಧೇಯಕ ಇನ್ನೂ ಕಾಯ್ದೆಯಾಗಿಲ್ಲ. ಸಭಾಪತಿ ಬಸವರಾಜ ಹೊರಟ್ಟಿ ಅವರ ಸಹಿ ಹಾಕಬೇಕಿದೆ. ಅವರ ಸಹಿ ಬಳಿಕ ರಾಜ್ಯಪಾಲರಿಗೆ ವಿಧೇಯಕ ಕಳುಹಿಸಲಾಗುವುದು. ರಾಜ್ಯಪಾಲರ ಒಪ್ಪಿಗೆ ಬಳಿಕೆ ಕಾಯ್ದೆಯಾಗಲಿದೆ. ನಂತರ ಸುಪ್ರೀಂಕೋರ್ಟ್‌ಗೆ ಕಾಯ್ದೆ ಕುರಿತು ಗಮನಕ್ಕೆ ತರಲಾಗುವುದು ಎಂದು ತಿಳಿಸಿದರು.

ಆಧಾರ: ಕನ್ನಡ ಪ್ರಭ, ದಿನಾಂಕ: 06.10.2021

## 15. ಖಾರ್‌ಲ್ಯಾಂಡ್ ಕ್ರಿಯಾ ಯೋಜನೆಗೆ ಒಪ್ಪಿಗೆ

ರಾಜ್ಯದ ಕರಾವಳಿಯಲ್ಲಿ ಹರಿಯುವ ನದಿಗಳಿಗೆ ಪ್ರಾಯೋಗಿಕ ಹಂತದಲ್ಲಿ ಜಾರಿ ಮಾಡುತ್ತಿರುವ 'ಖಾರ್‌ಲ್ಯಾಂಡ್ ಯೋಜನೆ'ಗೆ ರೂ.300 ಕೋಟಿ ವೆಚ್ಚದ ಕಾಮಗಾರಿಯ ಕ್ರಿಯಾ ಯೋಜನೆ ಜಾರಿಗೆ ಆಡಳಿತಾತ್ಮಕ ಅನುಮೋದನೆ ನೀಡಿದೆ.

ವಿಧಾನ ಸೌಧದಲ್ಲಿ ನಡೆದ ಸಚಿವ ಸಂಪುಟ ಸಭೆ ಬಳಿಕ ಪತ್ರಿಕಾಗೋಷ್ಠಿಯಲ್ಲಿ ಮಾಹಿತಿ ನೀಡಿದ ಜೆ.ಸಿ.ಮಾಧುಸ್ವಾಮಿ, ರಾಜ್ಯದ ಕರಾವಳಿ ಪ್ರದೇಶಗಳಲ್ಲಿ ಹರಿಯುವ ನದಿಗಳಿಗೆ ಸಂಬಂಧಪಟ್ಟಂತೆ ಸಣ್ಣ ನೀರಾವರಿ ಇಲಾಖೆಯಿಂದ ರೂ.1500 ಕೋಟಿ ಮೊತ್ತದ 'ಖಾರ್‌ಲ್ಯಾಂಡ್ ಯೋಜನೆ'ಯ ಮಾಸ್ಟರ್ ಪ್ಲಾನ್ ರೂಪಿಸಲಾಗಿದೆ. ಸಭೆಯು ಉತ್ತರ ಕನ್ನಡ ಜಿಲ್ಲೆಯ ನದಿಗಳಿಗೆ ಸಂಬಂಧಪಟ್ಟಂತೆ ಮಾತ್ರ ಇವತ್ತು ಅನುಮೋದನೆ ನೀಡಿದೆ," ಎಂದು ವಿವರ ನೀಡಿದರು.

"ನದಿ ನೀರು, ಸಮುದ್ರದ ನೀರು ಸೇರುವ ಕಡೆ ದೊಡ್ಡದಾಗಿ ಒಂದು ಏರಿ ನಿರ್ಮಿಸಲಾಗುತ್ತದೆ. ಅಲ್ಲಿ ಸಮುದ್ರದ ಕಡೆಯಿಂದ ಸಿಹಿ ನೀರಿಗೆ ಬರುವ ಉಪ್ಪು ನೀರು ತಡೆಗೆ ಗೇಟ್‌ಗಳನ್ನು ಅಳವಡಿಸಲಾಗುತ್ತದೆ. ಸುಮಾರು 2-3 ತಿಂಗಳು ಸಿಹಿನೀರು ಶೇಖರಣೆಯಿಂದ ಕೃಷಿ, ಕುಡಿಯುವ ನೀರು ಸೇರಿದಂತೆ ಇತರೆ ಬಳಕೆಗೂ ನೆರವಾಗಲಿದೆ. ಒಂದು ತಾಲ್ಲೂಕಿಗೆ ರೂ.100 ಕೋಟಿಯಂತೆ 3 ತಾಲೂಕುಗಳಿಗೆ ರೂ.300 ಕೋಟಿ ವೆಚ್ಚ ಮಾಡಲಾಗುವುದು," ಎಂದು ಹೇಳಿದರು.

**ಧಾರ್ಮಿಕ ಕಟ್ಟಡ ಬಿಲ್‌ಗೆ ಸಭಾಪತಿ ಸಹಿ ಬಾಕಿ :** "ಕರ್ನಾಟಕ ಧಾರ್ಮಿಕ ಕಟ್ಟಡಗಳ ಸಂರಕ್ಷಣಾ ವಿಧೇಯಕ" ವಿಧಾನ ಪರಿಷತ್‌ನಲ್ಲಿ ಅಂಗೀಕಾರವಾಗಿದ್ದರೂ ಸಭಾಪತಿಯವರ ಸಹಿಯಾಗಿಲ್ಲ. ಸಭಾಪತಿಗಳು ಸಹಿ ಮಾಡಿ ಕಳುಹಿಸಿದ ನಂತರ ರಾಜ್ಯಪಾಲರ ಅಂಕಿತ ಪಡೆಯಬೇಕಾಗುತ್ತದೆ. ನಂತರ ಸರ್ಕಾರಿ ಆದೇಶ ಹೊರಡಿಸಿ ನ್ಯಾಯಾಲಯಕ್ಕೆ ಮಾಹಿತಿ ನೀಡಲಾಗುವುದು. ಉಳಿದಂತೆ ವಿಧೇಯಕ ವಿಚಾರದಲ್ಲಿ ಯಾವುದೇ ಸಮಸ್ಯೆಯಾಗಿಲ್ಲ," ಎಂದು ಮಾಧುಸ್ವಾಮಿ ಸ್ಪಷ್ಟಪಡಿಸಿದರು.

**ಹಿಪ್ಪರಗಿ ಬ್ಯಾರೇಜ್ :** ಹಿಪ್ಪರಗಿ ಬ್ಯಾರೇಜ್ ಎಡಭಾಗದ ತಿರುವಿನಲ್ಲಿ ಕಾಂಕ್ರಿಟ್ ತಡೆಗೋಡೆಯನ್ನು ರೂ.28.20 ಕೋಟಿ ವೆಚ್ಚದಲ್ಲಿ ನಿರ್ಮಿಸಲು ಸಂಪುಟ ಅನುಮೋದನೆ ನೀಡಿದೆ. ಮಳೆಗಾಲದಲ್ಲಿ ಬ್ಯಾರೇಜಿನಿಂದ ನೀರನ್ನು ಹೊರಬಿಟ್ಟಾಗ, ಬ್ಯಾರೇಜಿನ ಗೇಟ್ ಮೂಲಕ ರಭಸವಾಗಿ ಹರಿಯುವ ನೀರಿನಿಂದ ಎಡಭಾಗದ ತಿರುವಿನಲ್ಲಿ ಎರೆಮಣ್ಣು ಸವಕಳಿಯಾಗಿ ನದಿ ದಂಡೆಯಲ್ಲಿ ಕೊರೆತ ಉಂಟಾಗುತ್ತಿತ್ತು. ಇದರಿಂದ ರೈತರ ಭೂಮಿಗೆ ನೀರು ನುಗ್ಗಿ, ನಷ್ಟವಾಗುತ್ತಿತ್ತು. ಇದನ್ನು ತಡೆಗಟ್ಟಲು

ಸುಮಾರು 500 ಮೀ. ಉದ್ದ ಹಾಗೂ 15 ಮೀ. ಎತ್ತರದ ಕಾಂಕ್ರೀಟ್ ತಡೆಗೋಡೆ ನಿರ್ಮಾಣಕ್ಕೆ ಸಂಪುಟ ಸಭೆ ಅಸ್ತು ಎಂದಿದೆ.

**ಬೆಂಗಳೂರು ನಗರ ಪೊಲೀಸ್ ಆಧುನೀಕರಣ :** ಪೊಲೀಸ್ ಆಧುನೀಕರಣ ಯೋಜನೆಯಡಿ ಬೆಂಗಳೂರು ನಗರಕ್ಕೆ ಅಗತ್ಯವಿರುವ ಡಿಜಿಟಲ್ ಯು.ಎಚ್.ಎಫ್. ರೇಡಿಯೊ ಸಂಪರ್ಕ ವ್ಯವಸ್ಥೆಯ ವಿನ್ಯಾಸ, ಸರಬರಾಜು, ಅಳವಡಿಕೆ ಹಾಗೂ ನಿರ್ವಹಣೆ ಕಾರ್ಯ ರೂ.14.65 ಕೋಟಿ ವೆಚ್ಚದಲ್ಲಿ ಜಾರಿ. ಈ ಮೊತ್ತದಲ್ಲಿ ರಾಜ್ಯ ಸರ್ಕಾರ ಸುಮಾರು ರೂ.9 ಕೋಟಿ ಮತ್ತು ಕೇಂದ್ರ ಸರ್ಕಾರ ಸುಮಾರು ರೂ.6 ಕೋಟಿ ಭರಿಸಲಿದೆ.

**ವೃದ್ಧಾಪ್ಯ ವೇತನ ಹೆಚ್ಚಳಕ್ಕೆ ಹಣ :** ಸಾಮಾಜಿಕ ಭದ್ರತೆ ಯೋಜನೆಯಡಿ 60 ವರ್ಷ ಮೀರಿದವರಿಗೆ ರೂ. 600 ಮತ್ತು 65 ವರ್ಷ ಮೀರಿದವರಿಗೆ ರೂ.1000 ಮಾಸಿಕ ವೃದ್ಧಾಪ್ಯ ವೇತನ ನೀಡಲಾಗುತ್ತಿದೆ. ಮಾಸಿಕ ವೃದ್ಧಾಪ್ಯ ವೇತನ ನೀಡಲಾಗುತ್ತಿದೆ. ಅದನ್ನು ಕ್ರಮವಾಗಿ ರೂ.800 ಹಾಗೂ ರೂ.1,200 ಕ್ಕೆ ಹೆಚ್ಚಿಸಲು ಸೆಪ್ಟೆಂಬರ್ 18ರಂದು ಆದೇಶ ಹೊರಡಿಸಲಾಗಿದ್ದು, ಅದಕ್ಕಾಗಿ ಹೆಚ್ಚುವರಿ ಮೊತ್ತವಾಗಿ ರೂ.207 ಕೋಟಿ ಭರಿಸಲು ಸಂಪುಟ ಸಭೆ ಘಟನೋತ್ತರ ಅನುಮೋದನೆ ನೀಡಿದೆ. ಇದರಿಂದ 36 ಲಕ್ಷ ಮಂದಿಗೆ ಅನುಕೂಲವಾಗಲಿದೆ ಎಂದು ತಿಳಿಸಿದರು.

**ಪ್ರಮುಖ ನಿರ್ಣಯಗಳು :**

1. 2021–22ನೇ ಸಾಲಿಗೆ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್‌ಗೆ ನಬಾರ್ಡ್ ಮೂಲಕ ಪುನರ್ಧನ ಪಡೆಯಲು ರೂ.1550 ಕೋಟಿಗೆ ಸರ್ಕಾರದ ಖಾತರಿ.

2. ಲೋಕಾಯುಕ್ತ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದಲ್ಲಿ ಲೆಕ್ಕಪರಿಶೋಧನಾಧಿಕಾರಿ ಹುದ್ದೆಯಲ್ಲಿದ್ದ ಎಸ್.ಬಿ.ಲೋಕೇಶ್, ಟಿ.ಎಸ್.ಜಯರಾಮಯ್ಯ ಸೇವೆ ಒಂದು ವರ್ಷ ವಿಸ್ತರಣೆ.

3. ಖಾನಾಪುರ–ತಾಳಗುಪ್ಪ ರಾಜ್ಯ ಹೆದ್ದಾರಿ–93ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ 5 ಕಿ.ಮೀ. ಮಾರ್ಗ ದ್ವಿಪಥಕ್ಕೆ ರೂ.15 ಕೋಟಿ ಅನುಮೋದನೆ.

4. ಬೆಳಗಾವಿ ಜಿಲ್ಲೆಯ ಸವದತ್ತಿ ಗ್ರಾಮದಲ್ಲಿ 32 ಎಕರೆ ಗಾಯರಾಣ ಭೂಮಿಯನ್ನು ಪವನ ವಿದ್ಯುತ್ ಯೋಜನೆಗಾಗಿ ಬೆಂಗಳೂರಿನ ರೋಹನ್ ಸೋಲಾರ್ ಪವರ್ ಪ್ರೈವೇಟ್ ಲಿಮಿಟೆಡ್‌ಗೆ 30 ವರ್ಷಕ್ಕೆ ಗುತ್ತಿಗೆ.

5. ಉಡುಪಿ ಜಿಲ್ಲೆಯ ನೂತನ ಹೆಬ್ರಿ ತಾಲ್ಲೂಕಿಗೆ ಸೇರ್ಪಡೆಯಾಗಿರುವ ಕಾರ್ಕಳ ತಾಲ್ಲೂಕಿನ ಅಜೆಕಾರು ಹೋಬಳಿಯ 12 ಗ್ರಾಮಗಳು, ಕುಂದಾಪುರ ಹೋಬಳಿಯ 4 ಗ್ರಾಮ ಸೇರಿಸಿ ಹೊಸದಾಗಿ ಹೆಬ್ರಿ ಹೋಬಳಿ ರಚನೆ.

6. ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯ ವಸತಿ ಶಾಲೆ / ಕಾಲೇಜುಗಳಲ್ಲಿನ ವಿದ್ಯಾರ್ಥಿಗಳಿಗೆ ಶುಚಿ ಸಂಭ್ರಮ ಕಿಟ್‌ಗಳನ್ನು ಸಾಬೂನು ಮತ್ತು ಮಾರ್ಜಕಗಳ ಸಂಸ್ಥೆಯಿಂದ ರೂ. 24.85 ಕೋಟಿ ವೆಚ್ಚದಲ್ಲಿ ಖರೀದಿಸಿ ವಿತರಣೆಗೆ ಒಪ್ಪಿಗೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 07.10.2021

## 16. ಕೇಂದ್ರದಿಂದ ರಾಜ್ಯಕ್ಕೆ 275 ಪಶು ಸಂಜೀವಿನಿ ವಾಹನ

ಕಳೆದ ಒಂದು ವರ್ಷದಿಂದ ಕೇಂದ್ರದೊಂದಿಗೆ ಸಂವಹನ ನಡೆಸಿದ ಪರಿಣಾಮ ರಾಜ್ಯಕ್ಕೆ 275 ಪಶುಸಂಜೀವಿನಿ ಸಂಚಾರಿ ಪಶು ಚಿಕಿತ್ಸಾ ವಾಹನಗಳು ಲಭ್ಯವಾಗಿವೆ ಎಂದು ಪಶುಸಂಗೋಪನೆ ಸಚಿವ ಪ್ರಭು ಚವ್ಹಾಣ್ ಅಭಿಪ್ರಾಯಪಟ್ಟಿದ್ದಾರೆ.

ವಿಕಾಸಸೌಧಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಪಶುಸಂಜೀವಿನಿ ಯೋಜನೆ ಯಶಸ್ವಿಯಾಗಿದ್ದು, ರೈತರ ಮನೆ ಬಾಗಿಲಿಗೆ ಸಂಚಾರಿ ಪಶು ಚಿಕಿತ್ಸಾ ವಾಹನ ತೆರಳಿ ಚಿಕಿತ್ಸೆ ನೀಡುತ್ತಿರುವುದರಿಂದ ರೈತರಿಗೆ ಈ ಯೋಜನೆ ಉಪಯೋಗವಾಗಿದೆ. ಎಲ್ಲ ತಾಲ್ಲೂಕುಗಳಿಗೆ ಇದನ್ನು ವಿಸ್ತರಿಸಬೇಕು ಎಂದು ಪಕ್ಷಾತೀತವಾಗಿ ಎಲ್ಲ ಜನಪ್ರತಿನಿಧಿಗಳು ಮನವಿ ಮಾಡಿದ್ದಾರೆ. ಈ ಹಿನ್ನಲೆಯಲ್ಲಿ ಕೇಂದ್ರ ಪಶುಸಂಗೋಪನೆ ಸಚಿವ ಪುರುಷೋತ್ತಮ್ ರೂಪಲಾ ಮತ್ತು ಇಲಾಖೆಯೊಂದಿಗೆ ನಿರಂತರವಾಗಿ ಚರ್ಚೆ ನಡೆಸಿದ ಪರಿಣಾಮ ಕಾರ್ಯಕ್ರಮದ ಅಡಿಯಲ್ಲಿ ರಾಜ್ಯಕ್ಕೆ 275 ಪಶು ಚಿಕಿತ್ಸಾ ವಾಹನಗಳು ದೊರೆತಿವೆ ಎಂದು ತಿಳಿಸಿದರು.

ವಾಹನ ಒದಗಿಸಲು ಕೇಂದ್ರದಿಂದ ರೂ.44 ಕೋಟಿ ಅನುದಾನ ಬಿಡಗಡೆ ಮಾಡಲಾಗಿದ್ದು, ಪ್ರತಿ ಪಶು ಚಿಕಿತ್ಸಾ ವಾಹನಕ್ಕೆ ರೂ.16 ಲಕ್ಷ ವೆಚ್ಚವಾಗಲಿದೆ. ವಾರ್ಷಿಕವಾಗಿ ವಾಹನ ನಿರ್ವಹಣೆ ಪಿಪಿಪಿ ಮಾದರಿಯಲ್ಲಿ ನಡೆಯಲಿದೆ. ಪ್ರತಿ ವರ್ಷ ವಾಹನ ಮತ್ತು ಸಿಬ್ಬಂದಿಯ ನಿರ್ವಹಣೆಗೆ ಹೆಚ್ಚುವರಿಯಾಗಿ ರೂ.50 ಕೋಟಿ ಅನುದಾನವನ್ನು ಕೇಂದ್ರ ಮತ್ತು ರಾಜ್ಯದ ಪಾಲುದಾರಿಕೆಯಲ್ಲಿ ನೀಡಲಾಗಿದೆ. ರಾಜ್ಯದ ಪಾಲು ಶೇ.60 ಇರಲಿದೆ. ವಾಹನದಲ್ಲಿ ಓರ್ವ ಪಶುವೈದ್ಯರು, ಪಶು ವೈದ್ಯಕೀಯ ಸಹಾಯಕ ಮತ್ತು ನುರಿತ ಚಾಲಕ/ಪರಿಚಾರಕ ಇರಲಿದ್ದಾರೆ. ಪಶು ಕಲ್ಯಾಣ ಸಹಾಯವಾಣಿ ದೇಶದಲ್ಲಿಯೇ ಮೊದಲ ಬಾರಿಗೆ ರಾಜ್ಯದಲ್ಲಿ ಸ್ಥಾಪನೆಯಗಿದ್ದು, ಅತ್ಯಂತ ಯಶಸ್ವಿಯಾಗಿ ರೈತರ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಪಶುಸಂಗೋಪನೆ ಇಲಾಖೆ ಕಾರ್ಯಪ್ರವೃತವಾಗಿದೆ ಎಂದು ಮಾಹಿತಿ ನೀಡಿದರು.

ಮುಖ್ಯಮಂತ್ರಿಗಳೊಂದಿಗೆ ಚರ್ಚಿಸಿ ಅತಿ ಶೀಘ್ರದಲ್ಲಿಯೇ ಸಮಯ ನಿಗದಿಗೊಳಿಸಿ ಸಂಚಾರಿ ಪಶು ಶಸ್ತ್ರ ಚಿಕಿತ್ಸಾ ವಾಹನವನ್ನು ಲೋಕಾರ್ಪಣೆ ಮಾಡಲಾಗುವುದು. ಟಾಟಾ ಕಂಪನಿ ಜೊತೆ ಮಾತುಕತೆ ನಡೆಸಲಾಗಿದ್ದು, ಆದಷ್ಟು ಬೇಗ ರಾಜ್ಯದ ಎಲ್ಲ ಜಿಲ್ಲೆಯಲ್ಲಿ ಸಂಚಾರಿ ಪಶು ಶಸ್ತ್ರ ಚಿಕಿತ್ಸಾವಾಹನ ಕಾರ್ಯನಿರ್ವಹಿಸಲಿವೆ ಎಂದು ಹೇಳಿದರು.

ಪತ್ರಿಕಾಗೋಷ್ಠಿಯಲ್ಲಿ ಪಶುಸಂಗೋಪನೆ ಇಲಾಖೆ ನಿರ್ದೇಶಕ ಮಂಜುನಾಥ ಪಾಳೇಗಾರ ಸೇರಿದಂತೆ ಇತರರು ಉಪಸ್ಥಿತರಿದ್ದರು.

ಆಧಾರ: ಕನ್ನಡ ಪ್ರಭ, ದಿನಾಂಕ: 07.10.2021

## 17. ಆರ್‌ಎಸ್‌ಎಸ್ ಇಲ್ಲದಿದ್ದರೆ ಭಾರತ ಪಾಕಿಸ್ತಾನವಾಗ್ತಿತ್ತು

ಆರ್‌ಎಸ್‌ಎಸ್ ಇಲ್ಲದಿದ್ದರೆ ಭಾರತವು ಪಾಕಿಸ್ತಾನವಾಗುತ್ತಿತ್ತು ಎಂದು ಸಚಿವ ಪ್ರಭು ಚವ್ಹಾಣ್ ಹೇಳಿದ್ದಾರೆ. ವಿಕಾಸಸೌಧದಲ್ಲಿ ಸುದ್ದಿಗಾರರ ಜೊತೆ ಮಾತನಾಡಿದ ಅವರು, ಆರ್‌ಎಸ್‌ಎಸ್ ಏನು ಎಂಬುದು ಜನರಿಗೆ ಗೊತ್ತಿದೆ. ಕುಮಾರಸ್ವಾಮಿ ಮತ್ತು ಸಿದ್ದರಾಮಯ್ಯ ಹೇಳಿಕೆಯನ್ನು ಖಂಡಿಸುತ್ತೇನೆ. ಆರ್‌ಎಸ್‌ಎಸ್ ಇರುವುದರಿಂದಲೇ ದೇಶ ಇದೆ ಎಂದರು.

ಪಾಕಿಸ್ತಾನ, ತಾಲಿಬಾನ್ ಎಲ್ಲವೂ ಕಾಂಗ್ರೆಸ್‌ನವರೇ. ಕೇಂದ್ರ ಮತ್ತು ರಾಜ್ಯದಲ್ಲಿ ಬಿಜೆಪಿ ಸರ್ಕಾರ ಇದೆ. ಇದನ್ನು ಸಹಿಸಲು ಆಗದೆ ಹೀಗೆಲ್ಲಾ ಮಾತನಾಡುತ್ತಿದ್ದಾರೆ. ಆರ್‌ಎಸ್‌ಎಸ್ ದೇಶಭಕ್ತಿಯ ಸಂಸ್ಥೆ. ದೇಶದ ಪರ ಕೆಲಸ ಮಾಡುತ್ತಿದೆ. ಪ್ರಧಾನಿ ನರೇಂದ್ರ ಮೋದಿ ನಾವೆಲ್ಲಾ ಒಂದು ಎನ್ನುತ್ತಿದ್ದಾರೆ. ಇದನ್ನು

ಎಲ್ಲರೂ ಅರ್ಥ ಮಾಡಿಕೊಳ್ಳಬೇಕು. ಇಬ್ಬರು ಮಾಜಿ ಮುಖ್ಯಮಂತ್ರಿಗಳು ಹೇಗೆ ಮಾತನಾಡಬೇಕು ಎಂಬುದನ್ನು ತಿಳಿದುಕೊಳ್ಳಬೇಕು ಎಂದು ವಾಗ್ದಾಳಿ ನಡೆಸಿದರು.

ಆಧಾರ: ಕನ್ನಡಪ್ರಭ, ದಿನಾಂಕ: 07.10.2021

## 18. ಕೊರೋನಾ : ಚಾಮುಂಡೇಶ್ವರಿ ರಕ್ಷಿಸಲಿ

'ಮನುಕುಲಕ್ಕೆ ಬಂದಿರುವ ದೊಡ್ಡ ಗಂಡಾಂತರವಾದ ಕೊರೊನಾದಿಂದ ಎಲ್ಲರನ್ನೂ ಚಾಮುಂಡೇಶ್ವರಿ ಪಾರು ಮಾಡಲಿ' ಎಂದು ಬಿಜೆಪಿ ನಾಯಕ ಎಸ್.ಎಂ.ಕೃಷ್ಣ ಕೋರಿದ್ದರು.

ಚಾಮುಂಡಿ ಬೆಟ್ಟದಲ್ಲಿ ದಸರಾ ಮಹೋತ್ಸವಕ್ಕೆ ಚಾಲನೆ ನೀಡಿದ ಅವರು, 'ಕಷ್ಟ ಕಾಲದಲ್ಲಿ ದೇವಿಯ ಅಗ್ರಪೂಜೆಯೊಂದಿಗೆ ಆರಂಭವಾದ ಉತ್ಸವ ಸುಲಲಿತವಾಗಿ ನಡೆಯಲಿ. ಎಲ್ಲರಿಗೂ ಒಳಿತು ಮಾಡಲಿ' ಎಂದರು.

ಮಂಜು ಮುಸುಕಿದ ವಾತಾವರಣದಲ್ಲಿ, ಕೋವಿಡ್ ಮೂರನೇ ಅಲೆ ಭೀತಿ ನಡುವೆ ನಡೆದ ನಾಡಹಬ್ಬ ಆಚರಣೆಯ ಆರಂಭದ ಕ್ಷಣಗಳಿಗೆ ಗಣ್ಯರು, ಗ್ರಾಮಸ್ಥರು ಸಾಕ್ಷಿಯಾದರು.

ದೇವಸ್ಥಾನದ ಪ್ರಾಂಗಣದಲ್ಲಿ ನಿರ್ಮಿಸಿದ್ದ ವೇದಿಕೆಯ ಎಡಭಾಗದಲ್ಲಿ ಬೆಳ್ಳಿ ಮಂಟಪದಲ್ಲಿದ್ದ ಚಾಮುಂಡೇಶ್ವರಿ ಉತ್ಸವಮೂರ್ತಿಗೆ ಕೃಷ್ಣ ಅವರು ಬೆಳಿಗ್ಗೆ 8.25ಕ್ಕೆ ಪುಷ್ಪನಮನ ಸಲ್ಲಿಸಿದರು. ಊರುಗೋಲು ನೆರವಿನಲ್ಲಿ ನಿಧಾನವಾಗಿ ನಡೆದುಬಂದು, ದೇವಿಗೆ ಮಂಗಳಾರತಿ ಬೆಳಗಿದರು.

ನಂತರ ಅವರು, 'ಮೈಸೂರು ಜೊತೆಯಲ್ಲೇ ಬೆಳೆದೆ' ಎಂದು ಬಾಲ್ಯವನ್ನು ಸ್ಮರಿಸಿದರು. 'ಕೃಷ್ಣರಾಜ ಜಲಾಶಯವನ್ನು ನಿರ್ಮಿಸಲು ರಾಜಮನೆತನದ ಒಡವೆಗಳನ್ನು ಒತ್ತೆ ಇಟ್ಟು ಹಣ ತಂದ ಅರಸರಿಗೆ ಲಕ್ಷಾಂತರ ರೈತರ ಪರವಾಗಿ ಅನಂತ ವಂದನೆಗಳು. ರಾಜಶಾಹಿಯನ್ನು ನಾವು ವಿರೋಧಿಸುತ್ತೇವೆ. ಆದರೆ, ಅವರು ಮಾಡಿದ ಇಂಥ ಜನಪರ ಕೆಲಸಗಳನ್ನು ಇತಿಹಾಸದಿಂದ ಅಳಿಸಲು ಆಗುವುದಿಲ್ಲ' ಎಂದರು.

'ದಸರಾ ಉತ್ಸವದ ವೇಲೆ ಪ್ರವಾಸಿಗರಿಗೆ ರಾಜ್ಯದ ವಿವಿಧೆಡೆ ಪ್ರವಾಸ ಕರೆದೊಯ್ಯುವ ಪ್ಯಾಕೇಜ್ ಮಾಡಿದರೆ ಆರ್ಥಿಕವಾಗಿ ಲಾಭವಾಗುತ್ತದೆ' ಎಂದು ಸಲಹೆ ನೀಡಿದರು. ಚಾಮುಂಡೇಶ್ವರಿ ಕ್ಷೇತ್ರದ ಶಾಸಕ ಜಿ.ಟಿ.ದೇವೆಗೌಡ ಅಧ್ಯಕ್ಷತೆ ವಹಿಸಿದ್ದರು.

**ಪ್ರಶಸ್ತಿ ಪ್ರದಾನ** : ಅರಮನೆ ಅವರಣದಲ್ಲಿ ಸಂಜೆ ದಸರಾ ಸಾಂಸ್ಕೃತಿಕ ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ ಮೃದಂಗ ವಿದ್ವಾಂಸ ಎ.ವಿ.ಆನಂದ್ ಅವರಿಗೆ 'ರಾಜ್ಯ ಸಂಗೀತ ವಿದ್ವಾನ್ ಗೌರವ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಪ್ರಶಸ್ತಿಯು ರೂ. 5 ಲಕ್ಷ ನಗದು ಹಾಗೂ ಸರಸ್ವತಿ ಪುತ್ಥಳಿ ಒಳಗೊಂಡಿದೆ.

**ದಸರಾ ಟೂರಿಸಂ ಸರ್ಕಿಟ್** : 'ದಸರಾ ಉತ್ಸವವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಏರಿಸಲು ಟೂರಿಸಂ ಸರ್ಕಿಟ್ ಮಾಡಲು ಪ್ರಯತ್ನಿಸಲಿದ್ದು, ಆ ಕ್ಷೇತ್ರದ ಪರಿಣಿತರ ಸಹಕಾರ ಪಡೆಯಲಾಗುವುದು' ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು. ದಸರಾ ಉದ್ಘಾಟನೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಎಸ್.ಎಂ.ಕೃಷ್ಣ ಆಡಳಿತಾವಧಿಯಲ್ಲಿ ಜಾರಿಗೆ ಬಂದಿದ್ದ ಯಶಸ್ವಿನಿ ಯೋಜನೆಯನ್ನು, ಸರ್ಕಾರದ ಹಣಕಾಸು ಸ್ಥಿತಿ ಸುಧಾರಣೆಯಾದರೆ ಮತ್ತೆ ಚಾಲನೆಗೊಳಿಸಲಾಗುವುದು' ಎಂದರು.

ಆಧಾರ: ಪ್ರಜಾವಾಣಿ, ದಿನಾಂಕ: 08.10.2021.

## 19. ಕರ್ನಾಟಕಕ್ಕೆ ಬರಲು ನನಗೆ ಇಷ್ಟ : ರಾಷ್ಟ್ರಪತಿ ಕೋವಿಂದ್

ನನಗೆ ಕರ್ನಾಟಕಕ್ಕೆ ಬರಲು ತುಂಬಾ ಇಷ್ಟ ನಿಮ್ಮ ಜೊತೆ ಇರಲು ತುಂಬಾ ಸಂತೋಷ, ಹೀಗೆಂದು ಕನ್ನಡದಲ್ಲೇ ಹೇಳಿದ್ದು ರಾಷ್ಟ್ರಪತಿ ರಾಮನಾಥ್ ಕೋವಿಂದ್.

ಚಾಮರಾಜನಗರದ ವೈದ್ಯಕೀಯ ಕಾಲೇಜಿನ (ಸಿಮ್ಸ್) 450 ಹಾಸಿಗೆಗಳ ಬೋಧನಾ ಆಸ್ಪತ್ರೆಯನ್ನು ಲೋಕಾರ್ಪಣೆ ಮಾಡಿದ ರಾಷ್ಟ್ರಪತಿ ಅವರು ಕನ್ನಡದಲ್ಲೇ ಮಾತನಾಡಿ ಗಮನ ಸೆಳೆದರು. ನವರಾತ್ರಿ ಆರಂಭದ ಶುಭ ಸಂದರ್ಭದಲ್ಲಿ ಆಸ್ಪತ್ರೆ ಉದ್ಘಾಟನೆಯಾಗಿದ್ದು ಎಲ್ಲರಿಗೂ ಈ ಕೇಂದ್ರ ಉತ್ತಮ ಸೇವೆ ನೀಡಲೆಂದು ಕೋವಿಂದ್ ಅವರು ಶುಭ ಹಾರೈಸಿದರು.

ಚಾಮರಾಜ ಒಡೆಯರ್ ಮತ್ತು ಚಾಮರಾಜೇಶ್ವರ ದೇವರನ್ನು ನೆನೆದ ಕೋವಿಂದ್, ಭವಿಷ್ಯವನ್ನು ಗಮನದಲ್ಲಿಟ್ಟುಕೊಂಡು ಆಡಳಿತ ಮಾಡಿದವರು ಮೈಸೂರು ಮಹಾರಾಜರು. ಚಾಮರಾಜೇಂದ್ರ ಒಡೆಯರ್ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಒತ್ತು ಕೊಟ್ಟು 1881 ರಲ್ಲಿ ಬಾಲಕಿಯರ ಶಾಲೆ ಆರಂಭಿಸಿದರು. ಸ್ವಾಮಿ ವಿವೇಕಾನಂದರು ಸರ್ವ ಧರ್ಮ ಸಮ್ಮೇಳನಕ್ಕೆ ತೆರಳಲು ನೆರವಾದರು. ಜಯಚಾಮರಾಜ ಒಡೆಯರ್ ಸ್ವಾತಂತ್ರ್ಯ ಭಾರತಕ್ಕೆ ಸಂಸ್ಥಾನ ಸೇರಿಸಿದ ಮೊದಲ ರಾಜರು. ವೈದ್ಯಕೀಯ ವಿದ್ಯಾರ್ಥಿಗಳು ಮೈಸೂರು ಮಹಾರಾಜರ ದೃಷ್ಟಿಕೋನದಂತೆ ಮಾನವೀಯ ಮೌಲ್ಯ, ಸೇವಾ ಬದ್ಧತೆ ಇಟ್ಟುಕೊಂಡು ಕರ್ತವ್ಯ ನಿರ್ವಹಿಸಬೇಕೆಂದರು. ಈ ವೇಳೆ ಸಿಮ್ಸ್ ಕಟ್ಟಡದ ಚಿತ್ರ ಇರುವ ಸ್ಮರಣಿಕೆ, ರೇಷ್ಮೆ ಶಾಲನ್ನು ರಾಷ್ಟ್ರಪತಿ ರಾಮನಾಥ್ ಕೋವಿಂದ್ ಹಾಗೂ ಅವರ ಪತ್ನಿ ಸವಿತಾ ಕೋವಿಂದ್ ಅವರಿಗೆ ನೀಡಿ ಗೌರವಿಸಲಾಯಿತು.

ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್, ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಸಚಿವ ಎಸ್.ಟಿ.ಸೋಮಶೇಖರ್ ಇದ್ದರು.

**ಮೋದಿ ದಿಟ್ಟ ನಾಯಕತ್ವದಿಂದಾಗಿ ಆರೋಗ್ಯ ಕ್ಷೇತ್ರದಲ್ಲಿ ಸುಧಾರಣೆ :** ಪ್ರಧಾನಿ ನರೇಂದ್ರ ಮೋದಿ ಅವರ ದಿಟ್ಟ ನಾಯಕತ್ವದಿಂದಾಗಿ ಆರೋಗ್ಯ ಕ್ಷೇತ್ರದಲ್ಲಿ ಭಾರತ ಗಣನೀಯ ಸಾಧನೆ ಮಾಡುತ್ತಿದ್ದು, 7 ವರ್ಷದಲ್ಲಿ ದೇಶಾದ್ಯಂತ 152 ಮೆಡಿಕಲ್ ಕಾಲೇಜು ತಲೆ ಎತ್ತಿವೆ. 30,000 ವಿದ್ಯಾರ್ಥಿಗಳು ವೈದ್ಯಕೀಯ ಶಿಕ್ಷಣ ಪಡೆದು ಹೊರಹೊಮ್ಮುತ್ತಿದ್ದು ಶೇ.50ರಷ್ಟು ವೈದ್ಯ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಹೆಚ್ಚಾಗಿದೆ ಎಂದು ಆರೋಗ್ಯ ಸಚಿವ ಡಾ.ಕೆ.ಸುಧಾಕರ್ ತಿಳಿಸಿದರು.

**ಚಾಮರಾಜನಗರಕ್ಕೆ ಬರಬೇಕಾದ್ದು ನನ್ನ ಕರ್ತವ್ಯ : ಮುಖ್ಯ ಮಂತ್ರಿ ಬಸವರಾಜ ಬೊಮ್ಮಾಯಿ**

ಚಾಮರಾಜನಗರಕ್ಕೆ ಬರಬೇಕಾದ್ದು ನನ್ನ ಕರ್ತವ್ಯ. ಆದರೆ, ನಾನು ಬರದಿದ್ದರೇ ಕರ್ತವ್ಯ ಲೋಪವಾಗುತ್ತಿತ್ತು. ಕರ್ತವ್ಯ ಲೋಪವಾಗಲು ನಾನೆಂದು ಒಪ್ಪಲ್ಲ. ಮುಂದಿನ ದಿನಗಳಲ್ಲಿ ಚಾಮರಾಜನಗರ ಜಿಲ್ಲಾಧಿಕಾರಿ ಕಛೇರಿಗೆ ಬಂದು ಪ್ರಗತಿ ಪರಿಶೀಲನಾ ಸಭೆ ನಡೆಸಿ ಜಿಲ್ಲೆಯ ಅಭಿವೃದ್ಧಿಗೆ ಕ್ರಮಕೈಗೊಳ್ಳುವುದಾಗಿ ಮುಖ್ಯಮಂತ್ರಿ ಬೊಮ್ಮಾಯಿ ಭರವಸೆ ನೀಡಿದರು. ಜಿಲ್ಲೆ ಬಗ್ಗೆ ಇರುವ ನಂಬಿಕೆಗಳು, ಅಭಿಪ್ರಾಯಗಳು ಅವರವರಿಗೆ ಬಿಟ್ಟಿದ್ದು, ದೇವರ ಸೃಷ್ಟಿಯಲ್ಲಿ ಪ್ರತಿಯೊಂದು ಘಳಿಗೆ, ಸ್ಥಳವೂ ಒಳ್ಳೆಯವೇ, ಸೃಷ್ಟಿಯಲ್ಲಿ ಕೆಟ್ಟದ್ದು ಎಂಬುದಿಲ್ಲ. ಕೆಟ್ಟದ್ದು ಎಂಬ ಸಂಕುಚಿತ ಮನೋಭಾವದಿಂದ ಹೊರಬಂದಾಗ ಮಾತ್ರ ಆರೋಗ್ಯ, ವೈಜ್ಞಾನಿಕ, ತರ್ಕಬದ್ಧವಾದ ಯುವ ಸಮಾಜ ಸ್ಥಾಪಿಸಲು ಸಾಧ್ಯ ಎಂದು ಹೇಳಿದರು.

ಆಧಾರ: ಕನ್ನಡ ಪ್ರಭ, ದಿನಾಂಕ: 08.10.2021

## 20. ರಾಜ್ಯಕ್ಕೆ 18 ಸಾವಿರ ಕೋಟಿ ಕೇಂದ್ರ ಅನುದಾನ

ರಾಜ್ಯ ಸರ್ಕಾರಕ್ಕೆ ಪ್ರಸಕ್ತ ಸಾಲಿನಲ್ಲಿ ಕೇಂದ್ರ ಸರ್ಕಾರದಿಂದ 18 ಸಾವಿರ ಕೋಟಿ ರೂಪಾಯಿ ಅನುದಾನ ಸಾಲದ ರೂಪದಲ್ಲಿ ದೊರೆಯಲಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದ್ದಾರೆ.

ನವದೆಹಲಿಯಲ್ಲಿ ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರ ಭೇಟಿಯ ಬಳಿಕ ಈ ವಿಷಯ ತಿಳಿಸಿದರು. ಕೋವಿಡ್ ವರ್ಷದ ಅನುದಾನ ಬಿಟ್ಟರೆ ಹಳೇ ವರ್ಷಗಳ ಅಷ್ಟೂ ಅನುದಾನ ಕರ್ನಾಟಕಕ್ಕೆ ಬಂದಿದೆ. ಉಳಿದಂತೆ ಈ ಸಾಲಿಗೆ 18 ಸಾವಿರ ಕೋಟಿ ರೂಪಾಯಿ ಸಾಲದ ಮೂಲಕ ಕೇಂದ್ರ ನೀಡಲಿದೆ ಎಂದರು.

ತೆರಿಗೆ (ಜಿಎಸ್‌ಟಿ) ಸುಧಾರಣೆ ಕುರಿತಂತೆ ಗ್ರೂಪ್ ಆಫ್ ಮಿನಿಸ್ಟರ್ ಸಮಿತಿ ಎರಡು ತಿಂಗಳ ವರದಿ ನೀಡಲಿದೆ ಎಂದು ಮುಖ್ಯಮಂತ್ರಿ ಬೊಮ್ಮಾಯಿ ತಿಳಿಸಿದರು. ಗ್ರೂಪ್ ಆಫ್ ಮಿನಿಸ್ಟರ್ ಸಮಿತಿಗೆ ಮುಖ್ಯಸ್ಥರಾಗಿ ನೇಮಕ ಮಾಡಿದ ಹಿನ್ನೆಲೆಯಲ್ಲಿ ಹಣಕಾಸು ಸಚಿವರನ್ನು ಭೇಟಿ ಮಾಡಿ, ಚರ್ಚಿಸಲಾಯಿತು. ಜಿಎಸ್‌ಟಿಯ ಒಟ್ಟು ಆದಾಯ ಹೆಚ್ಚಳ ಮಾಡುವುದು, ತೆರಿಗೆಯ ವಿಧಾನಗಳ ಪುನರ್ ರಚನೆ ಸೇರಿದಂತೆ ಹಲವು ವಿಚಾರಗಳು ಸಮಿತಿಯ ಮುಂದೆ ಬರಲಿವೆ. ಈ ಕುರಿತು ಶೀಘ್ರದಲ್ಲೇ ಸಮಿತಿಯ ಸಭೆ ಕರೆಯಲಾಗುತ್ತದೆ ಎಂದರು.

ರಾಜ್ಯದ ನಬಾರ್ಡ್ ಯೋಜನೆಗಳಿಗೆ ಹೆಚ್ಚು ಅನುದಾನ ನೀಡುವ ಬಗ್ಗೆಯೂ ಸಚಿವರ ಜೊತೆ ಚರ್ಚೆ ನಡೆಯಿತು. ನವೆಂಬರ್ ಮೊದಲ ವಾರದಲ್ಲಿ ಹಣಕಾಸು ಸಚಿವರು ಕರ್ನಾಟಕಕ್ಕೆ ಬರಲಿದ್ದು, ಆಗ ನಬಾರ್ಡ್ ಯೋಜನೆಗಳ ಬಗ್ಗೆ ವಿವರವಾಗಿ ಚರ್ಚಿಸಲಾಗುತ್ತದೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ: 09.10.2021

## 21. 32 ಸಾವಿರ ಟನ್ ಡಿಎಪಿ ಗೊಬ್ಬರಕ್ಕೆ ಮನವಿ

ಹಿಂಗಾರು ಹಂಗಾಮಿಗೆ 32,000 ಟನ್ ಡಿಎಪಿ ಗೊಬ್ಬರ ಪೂರೈಸುವಂತೆ ಕೇಂದ್ರಕ್ಕೆ ರಾಜ್ಯ ಸರ್ಕಾರ ಮನವಿ ಮಾಡಿದೆ.

ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ನವದೆಹಲಿಯಲ್ಲಿ ಕೇಂದ್ರದ ಆರೋಗ್ಯ, ರಾಸಾಯನಿಕ ಮತ್ತು ರಸಗೊಬ್ಬರ ಖಾತೆ ಸಚಿವ ಮನಸುಖ್ ಮಾಂಡವಿಯಾಸ್ ಅವರನ್ನು ಭೇಟಿ ಮಾಡಿ ಈ ಕುರಿತು ಮನವಿ ಸಲ್ಲಿಸಿದರು.

ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಬಸವರಾಜ ಬೊಮ್ಮಾಯಿ, ಡಿಎಪಿ ಮಾತ್ರವಲ್ಲದೆ, ರಾಜ್ಯಕ್ಕೆ 10,000 ಟನ್ ಪೊಟ್ಯಾಷ್ ಗೊಬ್ಬರದ ಬೇಡಿಕೆ ಇದೆ. ಅದರ ಪೂರೈಕೆಗೂ ಕ್ರಮಕೈಗೊಳ್ಳುವಂತೆ ಮನವಿ ಮಾಡಲಾಗಿದೆ. ಈ ಬೇಡಿಕೆಯನ್ನು ಈಡೇರಿಸುವುದಾಗಿ ಭರವಸೆ ದೊರೆತಿದೆ. ಸದ್ಯ ರಾಜ್ಯದಲ್ಲಿ ಯುರಿಯಾ ಗೊಬ್ಬರದ ಕೊರತೆ ಇಲ್ಲ. ಕೊರತೆ ಇರುವ ಗೊಬ್ಬರಕ್ಕೆ ಮನವಿ ಸಲ್ಲಿಸಲಾಗಿದೆ ಎಂದು ಅವರು ತಿಳಿಸಿದರು.

ಆಧಾರ: ಕನ್ನಡ ಪ್ರಭ, ದಿನಾಂಕ: 09.10.2021

## 22. ನಬಾರ್ಡ್ ಅನುದಾನ ಹೆಚ್ಚಳಕ್ಕೆ ಸಿಎಂ ಮನವಿ

ನಬಾರ್ಡ್ ಯೋಜನೆಗಳಿಗೆ ಹೆಚ್ಚಿನ ಅನುದಾನ ನೀಡುವಂತೆ ಮನವಿ ಮಾಡಲಾಗಿದೆ ಎಂದು ಸಿಎಂ ಬೊಮ್ಮಾಯಿ ತಿಳಿಸಿದರು.

ಜಿಎಸ್‌ಟಿಗೆ ಸಂಬಂಧಿಸಿದ ಸಚಿವರ ಸಮಿತಿಗೆ ತಮ್ಮನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಿದ ಹಿನ್ನೆಲೆಯಲ್ಲಿ ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರನ್ನು ದಿಲ್ಲಿಯಲ್ಲಿ ಭೇಟಿಯಾಗಿ ಕೃತಜ್ಞತೆ ಸಲ್ಲಿಸಿದ ಬಳಿಕ ಅವರು ಮಾತನಾಡಿದರು.

"ನಬಾರ್ಡ್ ಯೋಜನೆಗಳಲ್ಲಿ ರಾಜ್ಯಕ್ಕೆ ಹೆಚ್ಚು ಅನುದಾನ, ಮೂಲಭೂತ ಸೌಕರ್ಯ ಅಭಿವೃದ್ಧಿ, ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿಗೆ ಹೆಚ್ಚು ಅನುದಾನ ನೀಡಲು ಮನವಿ ಮಾಡಲಾಗಿದೆ. ನವೆಂಬರ್ ಮೊದಲ ವಾರಗಳಲ್ಲಿ ರಾಜ್ಯದ ಯೋಜನೆಗಳ ಕುರಿತು ನಡೆಯುವ ಸಭೆಯಲ್ಲಿ ಕೇಂದ್ರ ಸಚಿವರು ಸೂಕ್ತ ನಿರ್ದೇಶನ ನೀಡಲಿದ್ದಾರೆ. ಕೈಗಾರಿಕೆ ಹಾಗೂ ಮೈಕ್ರೋ ಫೈನಾನ್ಸ್ ಯೋಜನೆಗಳ ಅನುಷ್ಠಾನಕ್ಕೆ ಆದ್ಯತೆ ನೀಡಲಾಗುತ್ತಿದೆ" ಎಂದರು.

**18,000 ಕೋಟಿ ಜಿಎಸ್‌ಟಿ:** ಪ್ರಸಕ್ತ ಸಾಲಿನಲ್ಲಿ 18,000 ಕೋಟಿ ಜಿಎಸ್‌ಟಿಯನ್ನು ಕೇಂದ್ರ ಸರ್ಕಾರ ನೀಡುತ್ತಿದೆ. ಮಾರ್ಚ್ 2021 ರವರೆಗೆ 11,800 ಕೋಟಿ ನೀಡಿದೆ. ಈ ವರ್ಷ ಜಿಎಸ್‌ಟಿ ಸಂಗ್ರಹದಲ್ಲಿ ಸುಧಾರಣೆ ಆಗಿರುವುದರಿಂದ ಹೆಚ್ಚು ಪರಿಹಾರ ದೊರೆಯಲಿದೆ. ಜಿಎಸ್‌ಟಿ ಸಚಿವರ ಸಮಿತಿ ರಚನೆ, ಜವಾಬ್ದಾರಿ, ಕಾರ್ಯಚಟುವಟಿಕೆ ಬಗ್ಗೆ ಕೇಂದ್ರ ಸಚಿವರೊಂದಿಗೆ ಚರ್ಚಿಸಲಾಗಿದ್ದು, ಸಮಿತಿಯ ಮೊದಲ ಸಭೆಯನ್ನು ಸದ್ಯದಲ್ಲಿಯೇ ಕೈಗೊಳ್ಳಲಾಗುವುದು ಎಂದು ಸಿಎಂ ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 09.10.2021

## 23. ವಿದ್ಯುತ್ ಕಡಿತದ ಆತಂಕ

ಕಲ್ಲಿದ್ದಲ್ಲು ಕೊರತೆ ಮತ್ತು ವಿದ್ಯುತ್ ಸ್ಥಗಿತ ಭೀತಿ ಕುರಿತು ದಿಲ್ಲಿ ಸರ್ಕಾರ ಮತ್ತು ಕೇಂದ್ರ ಸರ್ಕಾರದ ಮಧ್ಯೆ ಭಾರಿ ಜಟಾಪಟಿ ನಡೆಯುತ್ತಿದೆ. ಈ ನಡುವೆ, ಕರ್ನಾಟಕವು ಕಲ್ಲಿದ್ದಲು ಕೊರತೆಯ ಆತಂಕ ಎದುರಿಸುತ್ತಿದೆ. 'ಸದ್ಯ ಬೇಕಾಗುವಷ್ಟು ಕಲ್ಲಿದ್ದಲು ಸಂಗ್ರಹವಿದೆ. ಶೀಘ್ರವೇ ಪೂರೈಕೆ ಹೆಚ್ಚಲಿದೆ. ವಿದ್ಯುತ್ ಕಡಿತ ಆತಂಕ ಅನಗತ್ಯ' ಎಂದು ಕೇಂದ್ರ ಸರ್ಕಾರ ಹೇಳಿದೆ.

ರಾಜ್ಯದ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳಲ್ಲಿ ಕಲ್ಲಿದ್ದಲು ತಳಕಚ್ಚಿದೆ. ಗಣಿಗಳಿಂದ ರೇಕ್‌ಗಳಲ್ಲಿ ಸಾಗಣೆಯಾಗುವ ಕಲ್ಲಿದ್ದಲ್ಲಿಗೆ ಕಾದು ಕುಳಿತು ನಂತರ ಬಳಕೆ ಮಾಡುವಂತಾಗಿದೆ. ಕೇಂದ್ರ ಸರ್ಕಾರವು ಕಲ್ಲಿದ್ದಲು ಉತ್ಪಾದನೆ ಕಳೆದ ತಿಂಗಳು ಮತ್ತು ವರ್ಷಕ್ಕೆ ಹೋಲಿಕೆ ಮಾಡಿದರೆ ಹೆಚ್ಚಿನ ಉತ್ಪಾದನೆ ಮಾಡಿದ್ದಾಗಿ ಹೇಳಿಕೊಂಡಿದ್ದರೂ, ಕೇಂದ್ರದ ಅಳತೆ ತಪ್ಪಿರುವುದು ಇಂದಿನ ಸಮಸ್ಯೆಗೆ ಕಾರಣ ಎಂದು ಹಿರಿಯ ಅಧಿಕಾರಿಗಳು ಹೇಳುತ್ತಾರೆ.

ರಾಜ್ಯದ ಮೂರು ಉಷ್ಣವಿದ್ಯುತ್ ಸ್ಥಾವರಗಳಲ್ಲಿ ಕಲ್ಲಿದ್ದಲು ಸಂಗ್ರಹ ಕೇವಲ ಒಂದು ದಿನಕ್ಕಾಗುವಷ್ಟಿದೆ. ಸಾಮಾನ್ಯವಾಗಿ ದಿನವೊಂದಕ್ಕೆ 12 ರಿಂದ 15 ರೇಕುಗಳಲ್ಲಿ ಕಲ್ಲಿದ್ದಲು ಪೂರೈಕೆಯಾಗುತ್ತಿತ್ತು. ಈಗ ಕೇವಲ 8 ರಿಂದ 9 ರೇಕುಗಳಲ್ಲಿ ಲಭ್ಯವಾಗುತ್ತಿದೆ. ಒಂದು ರೇಕಿನಲ್ಲಿ 700 ರಿಂದ 800 ಟನ್ ಕಲ್ಲಿದ್ದಲಿರುತ್ತದೆ.

ಬಳ್ಳಾರಿಯ ಕುಡಿತಿನಿ ಶಾಖೋತ್ಪನ್ನ ವಿದ್ಯುತ್ ಕೇಂದ್ರದಲ್ಲಿ ಮೂರು ಘಟಕಗಳಿಂದ ಒಟ್ಟು 1,700 ಮೆ.ವ್ಯಾ. ಉತ್ಪಾದನಾ ಸಾಮರ್ಥ್ಯವಿದ್ದರೂ ಕೇವಲ ಒಂದು ಘಟಕದಲ್ಲಿ 430 ಮೆ.ವ್ಯಾ. ಉತ್ಪಾದಿಸಲಾಗುತ್ತಿದೆ. ಬಿಟಿಪಿಎಸ್‌ನಲ್ಲಿ ದಿನವೊಂದಕ್ಕೆ 1.5 ಮೆ.ಟನ್ ಕಲ್ಲಿದ್ದಲು ಅವಶ್ಯಕತೆಯಿದೆ, ಸದ್ಯ 17.6 ಮೆ.ಟನ್ ಕಲ್ಲಿದ್ದಲಿದೆ.

ರಾಯಚೂರಿನ ಶಕ್ತಿನಗರ ಎಂದು ಘಟಕಗಳಿಂದ 1720 ಮೆ.ವ್ಯಾ. ಉತ್ಪಾದನೆಯ ಸಾಮರ್ಥ್ಯವಿದ್ದರು ಕೇವಲ ಮೂರು ಘಟಕಗಳಿಂದ 460 ಮೆ.ವ್ಯಾ. ಉತ್ಪಾದಿಸಲಾಗುತ್ತಿದೆ. ಎರಡು ದಿನಗಳ ಹಿಂದೆ ಇಲ್ಲಿ ನಾಲ್ಕು ಘಟಕಗಳಲ್ಲಿ ಉತ್ಪಾದಿಸಲಾಗುತ್ತಿದೆ. ಒಂದು ಘಟಕದಲ್ಲಿ ಉತ್ಪಾದನೆ ಸ್ಥಗಿತಗೊಳಿಸಿದ್ದು, ಈಗ ಮೂರು ಘಟಕಗಳಲ್ಲಿ ಮಾತ್ರ ಉತ್ಪಾದನೆಯಿದೆ. ಶಕ್ತಿನಗರದಲ್ಲಿ ನಿತ್ಯ 16.3 ಮೆ.ಟನ್ ಕಲ್ಲಿದ್ದಲು ಬೇಕಿದೆ. ಸದ್ಯ 18.9 ಟನ್ ಕಲ್ಲಿದ್ದಲು ಮಾತ್ರ ಲಭ್ಯವಿದೆ.

ಯರಮರಸ್ ಶಾಖೋತ್ಪನ್ನ ವಿದ್ಯುತ್ ಕೇಂದ್ರದಲ್ಲಿ 2 ಘಟಕಗಳಿಂದ 1600 ಮೆ.ವ್ಯಾ ಉತ್ಪಾದನಾ ಸಾಮರ್ಥ್ಯವಿದ್ದರೂ ಒಂದು ಘಟಕದಿಂದ 700 ಮೆ.ವ್ಯಾ ಉತ್ಪಾದಿಸಲಾಗುತ್ತಿದೆ. ನಿತ್ಯ ಇಲ್ಲಿ 13.7 ಮೆ.ಟನ್ ಕಲ್ಲಿದ್ದಲು ಬೇಕಿದೆ. ಆದರೆ ಸದ್ಯ 20 ಮೆ.ಟನ್ ಲಭ್ಯವಿದೆ.

ಕಲ್ಲಿದ್ದಲು ಗಣಿಗಳಲ್ಲಿ ಮತ್ತು ಸಾಗಣೆ ಮಾರ್ಗದಲ್ಲಿ ಮಳೆಯಾಗುತ್ತಿರುವುದರಿಂದ ತೊಯ್ದ ಕಲ್ಲಿದ್ದಲು ದೊರೆಯುವಂತಾಗಿದೆ. ಒಂದು ದಿನಕ್ಕಾಗುವಷ್ಟು ಕಲ್ಲಿದ್ದಲು ಲಭ್ಯವಿದ್ದರೂ ಅದರಲ್ಲಿ ಗುಣಮಟ್ಟದ ಕಲ್ಲಿದ್ದಲು ಶೇ.80 ರಷ್ಟು ಮಾತ್ರ ಇರುತ್ತದೆ.

ಕೂಡ್ಲಗಿ ಥರ್ಮಲ್ ಘಟಕದಲ್ಲಿ 3600 ಮೆಟ್ರಿಕ್ ಟನ್ ಕಲ್ಲಿದ್ದಲು ದಾಸ್ತಾನಿದೆ. ಇದು ಒಂದು ವಾರಕ್ಕೂ ಸಾಕಾಗುವುದಿಲ್ಲ. 3 ಘಟಕಗಳ ಪೈಕಿ 2 ಘಟಕಗಳು ವಿದ್ಯುತ್ ಉತ್ಪಾದಿಸುತ್ತಿವೆ. ಇಲ್ಲಿ ಉತ್ಪಾದಿತ ವಿದ್ಯುತ್ ಪೈಕಿ ಶೇ.50 ರಷ್ಟು ಕರ್ನಾಟಕಕ್ಕೆ ವಿದ್ಯುತ್ ಸರಬರಾಜಾಗುತ್ತದೆ.

**ಹೆಚ್ಚಿನ ಸಂಗ್ರಹಕ್ಕೆ ಕೇಂದ್ರಕ್ಕೆ ಮನವಿ:** "ದಿಲ್ಲಿ ಭೇಟಿ ವೇಳೆ ಕಲ್ಲಿದ್ದಲು ಸಮಸ್ಯೆ ಬಗ್ಗೆ ಕೇಂದ್ರ ಕಲ್ಲಿದ್ದಲು ಸಚಿವ ಪ್ರಲ್ಹಾದ ಜೋಶಿ ಜೊತೆ ಮಾತನಾಡಿದ್ದೇನೆ. ಹಾಲಿ ಸರಬರಾಜಿನ ಪ್ರಮಾಣದಲ್ಲಿ 4 ರೇಕು ಹೆಚ್ಚಿಸಲು ಮನವಿ ಮಾಡಿಕೊಳ್ಳಲಾಗಿದೆ," ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದ್ದಾರೆ.

"ಮಹಾರಾಷ್ಟ್ರ ಬಳಿ ಇರುವ ಚಂದ್ರಾಪುರ ಕಲ್ಲಿದ್ದಲು ಬ್ಲಾಕ್ ರಾಜ್ಯಕ್ಕೆ ಹಂಚಿಕೆಯಾಗಿದೆ. ಈ ಭಾಗದ ಕಲ್ಲಿದ್ದಲು ಸರಬರಾಜಿಗೆ ಸಂಬಂಧಿಸಿದಂತೆ ಮಹಾರಾಷ್ಟ್ರ ಪ್ರಧಾನ ಅರಣ್ಯ ಸಂರಕ್ಷಣಾಧಿಕಾರಿಯವರಿಂದ ವರದಿ ಪಡೆದು ವಾರದೊಳಗೆ ಅನುಮತಿ ಪ್ರಕ್ರಿಯೆ ಪೂರ್ಣಗೊಳಿಸಲಾಗುವುದು. ಒಡಿಶಾದ ಮಹಾನಂದಿ ಕಲ್ಲಿದ್ದಲು ಬ್ಲಾಕ್‌ಗೆ ಸಂಬಂಧಿಸಿಯೂ ಬೇಗ ಅನುಮತಿ ಕೊಡಿಸುವಂತೆ ಕೇಂದ್ರ ಸಚಿವರಿಗೆ ಮನವಿ ಮಾಡಿಕೊಳ್ಳಲಾಗಿದೆ," ಎಂದು ಬೊಮ್ಮಾಯಿ ಮಾಹಿತಿ ನೀಡಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 11.10.2021

## 24. ಯುವಪೀಳಿಗೆಗೆ ಕ್ರೀಡಾ ಪ್ರೋತ್ಸಾಹ ಅಗತ್ಯ

ಅಂಗವಿಕಲರು ಸೇರಿದಂತೆ ಯುವ ಪೀಳಿಗೆಗೆ ಕ್ರೀಡಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದಕ್ಕೆ ಪ್ರೋತ್ಸಾಹಿಸುವ ಅಗತ್ಯವಿದೆ ಎಂದು ರಾಜ್ಯಪಾಲ ಥಾವರ್ ಚಂದ್ ಗೆಹಲೋತ್ ಹೇಳಿದ್ದಾರೆ.

ರಾಜಭವನದಲ್ಲಿ ಯುವಜನ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಟೋಕಿಯೋ ಒಲಿಂಪಿಕ್ಸ್ ಮತ್ತು ಪ್ಯಾರಾಲಿಂಪಿಕ್ಸ್‌ನಲ್ಲಿ ಭಾಗವಹಿಸಿದ ಕ್ರೀಡಾಪಟುಗಳು ಹಾಗೂ ತರಬೇತಿದಾರರಿಗೆ ಸನ್ಮಾನ, ಕ್ರೀಡಾಪಟುಗಳಿಗೆ ನಗದು ಪುರಸ್ಕಾರ ಪ್ರದಾನ ಮಾಡಿ ಮಾತನಾಡಿದರು.

ದೇಶವನ್ನು ಪ್ರತಿನಿಧಿಸುವ ಪ್ರತಿಯೊಬ್ಬ ಕೀಡಾಪಟುವು ಚಾಂಪಿಯನ್. ಟೋಕಿಯೋ ಒಲಿಂಪಿಕ್ಸ್ ಮತ್ತು ಪ್ಯಾರಾಲಿಂಪಿಕ್ಸ್‌ನಲ್ಲಿ ಪದಕಗಳನ್ನು ಗೆಲ್ಲುವ ಮೂಲಕ ವಿಶ್ವದಲ್ಲೇ ದೇಶ ಮತ್ತು ರಾಜ್ಯವನ್ನು ಹೆಮ್ಮೆಪಡುವಂತೆ ಮಾಡಿದ್ದಾರೆ ಎಂದು ಪ್ರಶಂಸಿಸಿದರು.

ವಿವಿಧ ಹಂತಗಳಲ್ಲಿ ಸಾಧನೆ ಮಾಡಿದ ಆಟಗಾರರಿಗೆ ಬಹುಮಾನ, ಆಧುನಿಕ ಕ್ರೀಡಾ ಸವಲತ್ತು ಕಲ್ಪಿಸಿ ಕ್ರೀಡಾ ಚಟುವಟಿಕೆಗಳಿಗೆ ರಾಜ್ಯ ಸರ್ಕಾರ ಉತ್ತೇಜಿಸುತ್ತಿದೆ. ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ ಅತ್ಯಾಧುನಿಕ ವಿಜ್ಞಾನ ಕೇಂದ್ರ ಸ್ಥಾಪಿಸದೆ ಎಂದು ಥಾವರ್ ಚಂದ್ ಗೆಹಲೋತ್

ಮೆಚ್ಚುಗೆ ವ್ಯಕ್ತಪಡಿಸಿ, ಈ ಯೋಜನೆಗಳನ್ನು ಕ್ರೀಡಾರ್ಥಿಗಳು ಸದ್ಬಳಕೆ ಮಾಡಿಕೊಳ್ಳಬೇಕು ಎಂದು ಕಿವಿಮಾತು ಹೇಳಿದರು.

ಟೋಕಿಯೋ ಒಲಿಂಪಿಕ್ಸ್ ಮತ್ತು ಪ್ಯಾರಾಲಿಂಪಿಕ್ಸ್‌ನಲ್ಲಿ ರಾಜ್ಯವನ್ನು ಪ್ರತಿನಿಧಿಸಿದ ಅದಿತಿ ಅಶೋಕ್, ಸುಹಾಸ್, ಉತ್ತಪ್ಪ, ಕೆ.ಸಿ.ಗಣಪತಿ, ಸುಬೇದಾರ್ ಕುಟ್ಟಪ್ಪ ಅವರನ್ನು ಸನ್ಮಾನಿಸಿ ಪುರಸ್ಕಾರ ನೀಡಲಾಯಿತು.

ಆಧಾರ: ವಿಜಯವಾಣಿ, ದಿನಾಂಕ: 12.10.2021

## 25. ಶೀಘ್ರ ಉದ್ಯೋಗ ನೀತಿ

ಕೈಗಾರಿಕಾ ನೀತಿ, ಸ್ಟಾರ್ಟ್‌ಅಪ್ ನೀತಿ ಬಂದಾಯ್ತು. ಇನ್ನು 'ಉದ್ಯೋಗ ನೀತಿ' ಯೂ ಜಾರಿಗೆ ಬರಲಿದೆ. ದೇಶದಲ್ಲಿ ಇಂಥದ್ದೊಂದು ನೀತಿ ಜಾರಿಗೊಳಿಸುತ್ತಿರುವ ಮೊದಲ ರಾಜ್ಯ ಎಂಬ ಹೆಗ್ಗಳಿಕೆಗೂ ಕರ್ನಾಟಕ ಪಾತ್ರವಾಗಲಿದೆ.

ರಾಜ್ಯದಲ್ಲಿ ಈಗಾಗಲೇ ಸೆಮಿಕಂಡಕ್ಟರ್, ಸ್ಟಾರ್ಟ್‌ಅಪ್, ಕೈಗಾರಿಕೆಗೆ ಸಂಬಂಧಿಸಿದ ನೀತಿಗಳು ಜಾರಿಯಲ್ಲಿವೆ. ಈಗ ಸರ್ಕಾರ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಉದ್ಯೋಗ ನೀತಿ' ಜಾರಿಗೊಳಿಸುತ್ತಿದೆ. ಇದರಡಿ ಹೆಚ್ಚು ಉದ್ಯೋಗ ನೀಡಿದವರಿಗೆ ಸರ್ಕಾರ ಅಧಿಕ ಪ್ರೋತ್ಸಾಹಧನ ನೀಡಿ ಉತ್ತೇಜಿಸಲಿದೆ. ದೇಶದಲ್ಲಿ ಇದೇ ಮೊದಲ ಬಾರಿ ಉದ್ಯೋಗ ನೀತಿ ಜಾರಿಗೊಳ್ಳುತ್ತಿದೆ ಎಂದು ಸಿಎಂ ಬಸವರಾಜ ಬೊಮ್ಮಾಯಿ ತಿಳಿಸಿದ್ದಾರೆ.

ನಗರದ ಅರಮನೆ ಆವರಣದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಹಮ್ಮಿಕೊಂಡಿದ್ದ 'ಉದ್ಯಮಿಯಾಗು – ಉದ್ಯೋಗ ನೀಡು' ಕಾರ್ಯಾಗಾರದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

ಉದ್ಯೋಗ ನೀತಿಯ ಸಿದ್ಧತೆಗಳು ನಡೆದಿವೆ. ಶೀಘ್ರದಲ್ಲೇ ಇದು ಜಾರಿಗೆ ಬರಲಿದೆ. ಜೊತೆಗೆ ಸಂಶೋಧನೆ ಮತ್ತು ಅಭಿವೃದ್ಧಿ (ಆರ್‌ಆ್ಯಂಡ್‌ಡಿ) ಗೆ ಉತ್ತೇಜನ ನೀಡಲು ಕೂಡ ಒಂದು ಪ್ರತ್ಯೇಕ ನೀತಿ ರೂಪಿಸಲಾಗುತ್ತಿದೆ. ಕೈಗಾರಿಕೆ ಸೇರಿದಂತೆ ಪ್ರತಿ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗೆ ಒತ್ತು ನೀಡುವುದು ಇದರ ಮುಖ್ಯ ಉದ್ದೇಶ. ಇದರಿಂದ ಹೆಚ್ಚು ಉದ್ಯೋಗ ಸೃಷ್ಟಿಯಾಗುವ ವಿಶ್ವಾಸ ಇದೆ. ಇದು ಸಹ ದೇಶದಲ್ಲೇ ಮೊದಲು ಎಂದು ಅವರು ಹೇಳಿದರು.

ರಾಜ್ಯದಲ್ಲಿ ಕೈಗಾರಿಕೆ ಬೆಳವಣಿಗೆಗೆ ಮಾಜಿ ಸಿಎಂ ಬಿ.ಎಸ್.ಯಡಿಯೂರಪ್ಪ ಅವರು ಹತ್ತು ಹಲವು ನೀತಿಗಳನ್ನು ರೂಪಿಸಿದರು. ಅವರ ಹಾದಿಯಲ್ಲೇ ನಮ್ಮ ಸರ್ಕಾರ ಕೂಡ ಸಾಗುತ್ತಿದೆ. ಅದರ ಪರಿಣಾಮವೇ ಉದ್ಯೋಗ ನೀತಿ ಮತ್ತು ಆರ್‌ಆ್ಯಂಡ್‌ಡಿ ನೀತಿಗಳಾಗಿವೆ. ಜಾಗತಿಕ ಬಂಡವಾಳ ಹೂಡಿಕೆದಾರರ ಸಮಾವೇಶವನ್ನು ಕೂಡ ಯಡಿಯೂರಪ್ಪ ಅತ್ಯಂತ ಯಶಸ್ವಿಯಾಗಿ ಪೂರೈಸಿದರು. 2022ರ ನವೆಂಬರ್‌ನಲ್ಲಿ ನಡೆಯಲಿರುವ ಹೂಡಿಕೆದಾರರ ಸಮಾವೇಶವೂ ಯಶಸ್ವಿ ಆಗಲಿದೆ ಎಂದರು.

ಸ್ಟಾರ್ಟ್‌ಅಪ್ ಆರಂಭಿಸುವ ಯುವಕರಿಗೆ ರೂ.50 ಲಕ್ಷ ನೆರವು ನೀಡಲಾಗುತ್ತಿದೆ. ಸ್ವಾತಂತ್ರ್ಯದ ಅಮೃತ ಮಹೋತ್ಸವದ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ 75 ಸಾವಿರ ಮಕ್ಕಳಿಗೆ ಕೌಶಲ್ಯ ತರಬೇತಿ ನೀಡುವ ಗುರಿ ಇದೆ ಎಂದು ಮಾಹಿತಿ ನೀಡಿದರು.

**2022ರ ಸಮಾವೇಶ ಮತ್ತೊಂದು ಮೈಲುಗಲ್ಲು :** ಮಾಜಿ ಸಿಎಂ ಬಿಎಸ್‌ವೈ ಮಾತನಾಡಿ, 2010ರಲ್ಲಿ ನಡೆದ ವಿಶ್ವ ಜಾಗತಿಕ ಹೂಡಿಕೆದಾರರ ಸಮಾವೇಶದಲ್ಲಿ ರೂ.3.92 ಲಕ್ಷ ಕೋಟಿ ಹೂಡಿಕೆ ಆಗಿತ್ತು. 389 ಯೋಜನೆಗಳಿಗೆ ಅನುಮೋದನೆ ದೊರೆಯಿತು. 7.35 ಲಕ್ಷ ಜನರಿಗೆ ಉದ್ಯೋಗ ಸೃಷ್ಟಿಯಾಗಿತ್ತು. 2021

ರಲ್ಲಿ ನಡೆದ ಸಮಾವೇಶದಲ್ಲಿ 6.72 ಲಕ್ಷ ಕೋಟಿ ಹೂಡಿಕೆಯಾಗಿ, 15 ಲಕ್ಷ ಉದ್ಯೋಗ ಸೃಷ್ಟಿಯಾಗಿತ್ತು. 2022 ರಲ್ಲೂ ಮತ್ತೊಂದು ಮೈಲುಗಲ್ಲು ಸ್ಥಾಪಿಸಲಾಗಿದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು.

ಸಣ್ಣ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸಚಿವ ಎಂ.ಟಿ.ಬಿ. ನಾಗರಾಜ್, ಉನ್ನತ ಶಿಕ್ಷಣ ಸಚಿವ ಡಾ.ಸಿ.ಎನ್.ಅಶ್ವತ್ಥನಾರಾಯಣ ಮತ್ತಿತರರು ಇದ್ದರು.

ಆಧಾರ: ಉದಯವಾಣಿ, ದಿನಾಂಕ: 12.10.2021

## 26. ಅಕ್ಟೋಬರ್ 21 ರಿಂದ ಶಾಲೆಗಳಲ್ಲಿ ಮಧ್ಯಾಹ್ನ ಬಿಸಿಯೂಟ

ಕೊರೋನಾ ಹಿನ್ನೆಲೆಯಲ್ಲಿ ಶಾಲೆಗಳಲ್ಲಿ ಒಂದೂವರೆ ವರ್ಷದಿಂದ ಸ್ಥಗಿತವಾಗಿದ್ದ ಮಧ್ಯಾಹ್ನದ ಬಿಸಿಯೂಟ ಯೋಜನೆ ಅಕ್ಟೋಬರ್ 21 ರಿಂದ ಪುನಃ ಪ್ರಾರಂಭವಾಗಲಿದೆ. ಅಕ್ಟೋಬರ್ 20 ರವರೆಗೆ ದಸರಾ ರಜೆ ಇರುವುದರಿಂದ ರಜೆ ಮುಗಿದ ಬಳಿಕ ಬಿಸಿಯೂಟ ನೀಡಲು ಸರ್ಕಾರ ತೀರ್ಮಾನ ಕೈಗೊಂಡಿದೆ.

ಪತ್ರಿಕಾಗೋಷ್ಠಿಯಲ್ಲಿ ಈ ವಿಷಯ ತಿಳಿಸಿದ ಶಿಕ್ಷಣ ಸಚಿವ ಬಿ.ಸಿ.ನಾಗೇಶ್ ಅವರು, ಕೊರೋನಾದಿಂದಾಗಿ ಕಳೆದ ಮಾರ್ಚ್‌ನಿಂದ ಶಾಲೆಗಳಲ್ಲಿ ಬಿಸಿಯೂಟ ನೀಡುತ್ತಿರಲಿಲ್ಲ. ಇದೀಗ ಕೊರೋನಾ ತಹಬದಿಗೆ ಬಂದ ಹಿನ್ನೆಲೆಯಲ್ಲಿ ಅಗತ್ಯ ಸಿದ್ಧತೆ ಮಾಡಿಕೊಳ್ಳುವಂತೆ ಅಧಿಕಾರಿಗಳಿಗೆ, ಶಾಲೆಗಳಿಗೆ ಸೂಚನೆ ನೀಡಲಾಗಿದೆ. ಅಕ್ಟೋಬರ್ 21 ರಿಂದ ವಿದ್ಯಾರ್ಥಿಗಳಿಗೆ ಬಿಸಿಯೂಟ ನೀಡಲಾಗುವುದು ಎಂದು ಸ್ಪಷ್ಟಪಡಿಸಿದರು.

**ಅನುಮತಿ ನೀಡಿದರೆ ಪ್ರಾಥಮಿಕ ತರಗತಿ :** ಮುಖ್ಯಮಂತ್ರಿ ಬೊಮ್ಮಾಯಿ ಅವರ ಅಧ್ಯಕ್ಷತೆಯ ತಾಂತ್ರಿಕ ಸಲಹಾ ಸಮಿತಿ ಒಪ್ಪಿಗೆ ನೀಡಿದರೆ 1 ರಿಂದ 5ನೇ ತರಗತಿಗಳನ್ನು ಭೌತಿಕವಾಗಿ ಪ್ರಾರಂಭಿಸಲಾಗುವುದು. ದಸರಾ ಬಳಿಕೆ ಸಮಿತಿ ಸಭೆ ನಡೆಯಲಿದ್ದು, ಶಾಲೆಗಳ ಆರಂಭದ ಬಗ್ಗೆ ನಿರ್ಧಾರ ಕೈಗೊಳ್ಳಲಿದೆ. ಅನುಮತಿ ನೀಡಿದರೆ ಪ್ರಾಥಮಿಕ ಶಾಲೆ ಆರಂಭಿಸಲು ಸಿದ್ಧವಾಗುತ್ತೇವೆ ಎಂದು ತಿಳಿಸಿದರು.

12 ಸಾವಿರ ಖಾಸಗಿ ಅಭ್ಯರ್ಥಿಗಳಿಗೆ ದ್ವಿತೀಯ ಪಿಯುಸಿ ಪೂರಕ ಪರೀಕ್ಷೆ ನಡೆಸಬೇಕಿದೆ. ಪರೀಕ್ಷೆ ನಡೆಸಿದರೂ ಕಾಲೇಜಿಗೆ ಸೇರಲು ಅವಕಾಶವಿಲ್ಲ. ಆದ್ದರಿಂದ ಪರೀಕ್ಷೆ ನಡೆಸಬೇಕೋ, ಬೇಡವೋ ಎಂಬ ಬಗ್ಗೆ ಚರ್ಚೆ ನಡೆಸಲಾಗುತ್ತಿದೆ. ಶಿಕ್ಷಕರ ವರ್ಗಾವಣೆಗೆ ಶೀಘ್ರದಲ್ಲೇ ಅಧಿಸೂಚನೆ ಹೊರಡಿಸಲಾಗುವುದು ಎಂದು ಹೇಳಿದರು.

**ಶುಲ್ಕ ನಿಯಂತ್ರಣ ಸಮಿತಿ ಚಿಂತನೆ:** ಶುಲ್ಕ ನಿಯಂತ್ರಿಸಲು ಸಮಿತಿ ರಚಿಸುವಂತೆ ಪೋಷಕರು ಮನವಿ ಮಾಡಿದ್ದಾರೆ. ಆದ್ದರಿಂದ ಸಮಿತಿ ರಚಿಸುವ ಚಿಂತನೆ ಇದ್ದು, ಅಧಿಕಾರಿಗಳ ಜೊತೆ ಚರ್ಚಿಸಿ ನಿರ್ಧಾರಿಸಲಾಗುವುದು ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ: 12.10.2021

## 27. ಅರ್ಚಕರಿಗೆ 6ನೇ ವೇತನ ಆಯೋಗ ಜಾರಿ

ಮುಜರಾಯಿ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅರ್ಚಕರಿಗೆ ವಿಮಾ ಯೋಜನೆ ಹಾಗೂ ನೌಕರರಿಗೆ 6ನೇ ವೇತನ ಆಯೋಗದ ಶಿಫಾರಸ್ಸಿನಂತೆ ವೇತನ ಜಾರಿಗೆ ಆದೇಶ ಹೊರಡಿಸಲಾಗಿದೆ ಎಂದು ಮುಜರಾಯಿ ಹಜ್ ಮತ್ತು ವಕ್ಫ್ ಸಚಿವರಾದ ಶಶಿಕಲಾ ಜೊಲ್ಲೆ ತಿಳಿಸಿದ್ದಾರೆ.

ವಿಕಾಸಸೌಧದಲ್ಲಿ ಮುಜರಾಯಿ ಇಲಾಖೆಯಲ್ಲಿ ಜಾರಿಗೆ ತಂದ ಹೊಸ ಯೋಜನೆಗಳ ಕುರಿತು ಪತ್ರಿಕಾಗೋಷ್ಠಿಯಲ್ಲಿ ಮಾಹಿತಿ ನೀಡಿದ ಅವರು, ಮುಜರಾಯಿ ಇಲಾಖೆಯ ವ್ಯಾಪ್ತಿಗೆ ಒಳಪಡುವ

ದೇವಸ್ಥಾನಗಳಲ್ಲಿ ಪೂಜೆ ಸಲ್ಲಿಸುವ ಅರ್ಚಕರು ಹಾಗೂ ದೇವಾಲಯ ನೌಕರರು ಆರೋಗ್ಯ ಸಮಸ್ಯೆಗೆ ಒಳಗಾದರೆ ಅವರಿಗೆ ರಕ್ಷಣೆ ಒದಗಿಸಲು ವಿನೂತನ ವಿಮೆ ಯೋಜನೆ ಜಾರಿಗೆ ತರಲು ತೀರ್ಮಾನಿಸಿದ್ದೇನೆ. ಇದರಿಂದ ಮುಜರಾಯಿ ಇಲಾಖೆಯ ಸುಮಾರು 37,000 ಸಿಬ್ಬಂದಿಗೆ ಪ್ರಯೋಜನವಾಗಲಿದೆ ಎಂದು ಸಚಿವರು ಹೇಳಿದರು.

ಧಾರ್ಮಿಕ ದತ್ತಿ ಇಲಾಖೆ ವ್ಯಾಪ್ತಿಗೆ ಒಳಪಡುವ ಧಾರ್ಮಿಕ ಸಂಸ್ಥೆಗಳಲ್ಲಿ ಈಗಾಗಲೇ 5ನೇ ವೇತನ ಆಯೋಗದ ಶಿಫಾರಸಿನಂತೆ ವೇತನ ಪಡೆದು ಕರ್ತವ್ಯ ನಿರ್ವಹಿಸುತ್ತಿರುವ ನೌಕರರು ಹಾಗೂ ಅರ್ಚಕರಿಗೆ 6ನೇ ವೇತನ ಆಯೋಗದ ವೇತಗನ ದೊರಕಿಸಿಕೊಡುವಂತೆ ಅರ್ಚಕರಿಂದ ಬಹಳ ದಿನಗಳಿಂದ ಬೇಡಿಕೆ ಇತ್ತು. ಈ ಕುರಿತು ಮುಖ್ಯಮಂತ್ರಿಗಳ ಜೊತೆ ಚರ್ಚಿಸ ತ್ವರಿತಗತಿಯಲ್ಲಿ ಅರ್ಚಕರಿಗೆ 6ನೇ ವೇತನ ಆಯೋಗದ ವೇತನ ನೀಡಲು ತೀರ್ಮಾನಿಸಿದ್ದೇನೆ. ಕೆಲವು ಷರತ್ತುಗಳನ್ನು ವಿಧಿಸಿ, ದೇವಾಲಯದ ವಾರ್ಷಿಕ ಆದಾಯದಲ್ಲಿ ನೌಕರರ ವೇತನ ಶೇ.35ರಷ್ಟು ಮೀರದಂತೆ ನೌಕರರನ್ನು 6ನೇ ವೇತನ ಆಯೋಗದ ವ್ಯಾಪ್ತಿಗೆ ಒಳಪಡುವಂತೆ ಕ್ರಮ ಕೈಗೊಳ್ಳಲಾಗುತ್ತದೆ ಎಂದು ಸಚಿವರು ತಿಳಿಸಿದರು. ಇದರಿಂದ ಮುಜರಾಯಿ ಇಲಾಖೆಯ ಸುಮಾರು 1034 ಸಿಬ್ಬಂದಿಗೆ ಪ್ರಯೋಜನವಾಗಲಿದೆ. ಇದಕ್ಕೆ ರೂ.200 ಕೋಟಿ ವೆಚ್ಚವಾಗಲಿದ್ದು, ಆಯಾ ದೇವಸ್ಥಾನಗಳ ನಿಧಿಯಿಂದ ಒದಗಿಸಲಾಗುವುದು. ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆಯಾಗುವುದಿಲ್ಲ ಎಂದು ಸಚಿವರು ಹೇಳಿದರು.

ಸಿ ದರ್ಜೆಯ ದೇವಸ್ಥಾನಗಳ ಅರ್ಚಕರಿಗೆ 6 ವೇತನ ಆಯೋಗದ ಶಿಫಾರಸಿನ ಪ್ರಕಾರ ವೇತನ ನೀಡುವ ಕುರಿತು ಸದ್ಯ ಪ್ರಸ್ತಾಪವಿಲ್ಲ. ಸಿ ದರ್ಜೆಯ ಬಹುತೇಕ ದೇವಸ್ಥಾನಗಳಲ್ಲಿ ಕಾಯಂ ಅರ್ಚಕರು ಇರುವುದಿಲ್ಲ. ಈ ಬಗ್ಗೆ ಎಲ್ಲ ದೇವಸ್ಥಾನಗಳಿಂದ ಮಾಹಿತಿ ಪಡೆದು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ: 13.10.2021

## 28. ನಗರದಲ್ಲಿ ಶತಕ ಬಾರಿಸಿದ ಡೀಸೆಲ್

ರಾಜಧಾನಿಯಲ್ಲಿ ಸತತವಾಗಿ ತೈಲ ದರ ಏರಿಕೆಯಾಗುತ್ತಿದ್ದು, 37 ಪೈಸೆ ಏರಿಕೆಯೊಂದಿಗೆ ಲೀಟರ್ ಡೀಸೆಲ್ ದರ ದಾಖಲೆಯ ರೂ. 100 ತಲುಪಿದೆ.

ನಗರದಲ್ಲಿ ಅಕ್ಟೋಬರ್ 1 ರಂದು ಲೀಟರ್ ಡೀಸೆಲ್ ದರ ರೂ. 95.70 ಇತ್ತು. ಕಳೆದ 15 ದಿನಗಳಲ್ಲಿ ಬರೋಬ್ಬರಿ ರೂ. 4.30 ಏರಿಕೆಯೊಂದಿಗೆ ಶತಕ ತಲುಪಿದೆ. ಬೆಂಗಳೂರಿನ ಇತಿಹಾಸದಲ್ಲೇ ಮೊದಲ ಬಾರಿಗೆ ಡೀಸೆಲ್ ನೂರು ರೂ. ತಲುಪಿದೆ.

ಅಂತರರಾಷ್ಟ್ರೀಯ ತೈಲ ಮಾರುಕಟ್ಟೆಯಲ್ಲಿ ಕಚ್ಚಾ ತೈಲದ ದರ ಹೆಚ್ಚಳ ಆಗಿರುವುದರಿಂದ ದೇಶದಲ್ಲಿ ತೈಲ ದರ ಏರಿಕೆಯಾಗುತ್ತಿದೆ. ದೇಶದಲ್ಲಿ ಕಳೆದ ಕೆಲ ವರ್ಷಗಳಿಂದ ಅಂತರರಾಷ್ಟ್ರೀಯ ತೈಲ ಮಾರುಕಟ್ಟೆಯ ದರಕ್ಕೆ ಅನುಗುಣವಾಗಿ ನಿತ್ಯ ದರಪರಿಷ್ಕರಣೆ ಮಾಡಲಾಗುತ್ತಿದೆ. ಅಂತರರಾಷ್ಟ್ರೀಯ ತೈಲ ಮಾರುಕಟ್ಟೆಯಲ್ಲಿ ದರ ಏರಿಕೆ ಅಥವಾ ಇಳಿಕೆಗೆ ಅನುಗುಣವಾಗಿ ದೇಶದಲ್ಲಿ ತೈಲ ದರ ಪರಿಷ್ಕರಣೆಯಾಗುತ್ತದೆ. ಅದರಂತೆ ಈಗ ತೈಲ ದರ ಏರಕೆಯಾಗಿದ್ದು, ನಗರದಲ್ಲಿ ಡೀಸೆಲ್ ರೂ.100 ತಲುಪಿದೆ ಎಂದು ಬೆಂಗಳೂರು ಪೆಟ್ರೋಲಿಯಂ ಡೀಲರ್ಸ್ ಅಸೋಸಿಯೇಷನ್ ಸದಸ್ಯ ತಾರಾನಾಥ್ ಹೇಳಿದರು.

**ಜನಸಾಮಾನ್ಯರಿಗೆ ದರ ಏರಿಕೆ ಬಿಸಿ :** ತೈಲ ದರ ಏರಿಕೆಯಿಂದ ವಾಹನ ಸವಾರರು ಸೇರಿದಂತೆ ಜನಸಾಮಾನ್ಯರ ಜೇಬಿಗೆ ಹೊರೆಯಾಗಿದೆ. ರಾಜಧಾನಿಯಲ್ಲಿ ಪೆಟ್ರೋಲ್ ಈಗಾಗಲೇ ಶತಕದ ಗಡಿ ದಾಟಿದ್ದು, ಮುಂದಿನ ಎರಡು–ಮೂರು ದಿನಗಳಲ್ಲಿ ರೂ.110 ಗಡಿ ದಾಟುವ ಸಾಧ್ಯತೆಯಿದೆ. ತೈಲ ದರ

ಏರಿಕೆಯಿಂದ ಸರಕು ಸಾಗಣೆ ವಾಹನಗಳ ಬಾಡಿಗೆ, ಖಾಸಗಿ ವಾಹನಗಳ ಬಾಡಿಗೆ ದರ, ದಿನ ಬಳಕೆ ವಸ್ತುಗಳ ದರವು ಏರಿಕೆಯಾಗಲಿದೆ. ಇದರಿಂದ ಜನಸಾಮಾನ್ಯರ ಜೀವನ ನಿರ್ವಹಣೆಗೆ ತಗಲುವ ವೆಚ್ಚವು ಹೆಚ್ಚಳವಾಗಲಿದೆ. ಈಗಾಗಲೇ ಅಡುಗೆ ಅನಿಲ ದರ ಏರಿಕೆಯಿಂದ ಕಂಗೆಟ್ಟಿರುವ ಜನಸಾಮಾನ್ಯರು, ಇನ್ನು ಮುಂದೆ ತೈಲ ದರ ಏರಿಕೆಯ ಪರಿಣಾಮಗಳನ್ನು ಎದುರಿಸುವುದು ಅನಿವಾರ್ಯವಾಗಲಿದೆ. ತೈಲ ದರ ಏರಿಕೆ ವಿರುದ್ಧ ಸಾರ್ವಜನಿಕ ವಲಯದಲ್ಲಿ ಆಕ್ರೋಶ ವ್ಯಕ್ತವಾಗುತ್ತಿದೆ.

**ತೆರಿಗೆ ಕಡಿತ ಒಂದೇ ದಾರಿ :** ತೈಲ ದರ ಏರಿಕೆ ವಿರುದ್ಧ ಜನಸಾಮಾನ್ಯರಿಂದ ತೀವ್ರ ವಿರೋಧ ವ್ಯಕ್ತವಾಗುತ್ತಿದೆ. ಅಂತರರಾಷ್ಟ್ರೀಯ ತೈಲ ಮಾರುಕಟ್ಟೆಯಲ್ಲಿ ಸದ್ಯಕ್ಕೆ ತೈಲ ದರ ಇಳಿಕೆ ಲಕ್ಷಣಗಳು ಕಾಣಿಸುತ್ತಿಲ್ಲ. ಏಕೆಂದರೆ, ತೈಲ ಉತ್ಪಾದಿಸುವ ದೇಶಗಳ ನಡುವಿನ ಸಮಸ್ಯೆಗಳು ಅಂತರರಾಷ್ಟ್ರೀಯ ಮಾರುಕಟ್ಟೆಯ ಮೇಲೆ ಪರಿಣಾಮ ಬೀರುತ್ತಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪೆಟ್ರೋಲ್ – ಡೀಸೆಲ್ ಮೇಲೆ ವಿಧಿಸುವ ತೆರಿಗೆಯನ್ನು ಕೊಂಚ ಇಳಿಕೆ ಮಾಡಿದರೆ ಮಾತ್ರ ತೈಲ ದರ ಕಡಿಮೆಯಾಗಲಿದೆ. ಇಲ್ಲವಾದರೆ, ಜನಸಾಮಾನ್ಯರು ಈ ದರ ಏರಿಕೆ ಬಿಸಿ ಅನುಭವಿಸುವುದು ಅನಿವಾರ್ಯವಾಗಲಿದೆ.

ಆಧಾರ: ಕನ್ನಡಪ್ರಭ, ದಿನಾಂಕ: 17.10.2021

## 29. ಜನಸೇವಕ ಯೋಜನೆ ಜನವರಿ 26 ರಿಂದ ಜಾರಿ : ಸಿಎಂ

ಸರ್ಕಾರ ವಿಧಾನಸೌಧದಲ್ಲಿ ಇರುವುದಲ್ಲ. ಅದಕ್ಕಾಗಿ ಸರ್ಕಾರದ ಸೌಲಭ್ಯಗಳನ್ನು ಜನರ ಬಳಿಗೆ ಒಯ್ಯುವ ಕಾರ್ಯ ಮುಂದಿನ ಜನವರಿ 26 ರಿಂದ ಜಾರಿಗೆ ತರುತ್ತೇವೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ನ್ಯಾಮತಿ ತಾಲೂಕಿನ ಸುರಹೊನ್ನೆಯಲ್ಲಿ 'ಜಿಲ್ಲಾಧಿಕಾರಿ ನಡೆ ಹಳ್ಳಿ ಕಡೆ' ಗ್ರಾಮ ವಾಸ್ತವ್ಯ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ನಿಮ್ಮ ರೇಷನ್ ಅನ್ನು ನಿಮ್ಮ ಮನೆ ಬಾಗಿಲಿಗೆ ಕೊಡುವ ವ್ಯವಸ್ಥೆ ಮಾಡುತ್ತೇವೆ. ಅದಕ್ಕೆ ಎಲ್ಲ ರೀತಿಯ ಸಿದ್ಧತೆ ಮಾಡುತ್ತಿದ್ದೇವೆ. ಸಾಮಾಜಿಕ ಭದ್ರತೆ ನಿಮ್ಮ ಮನೆಗೆ ಬರಬೇಕು. ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಎಲ್ಲ ಸರ್ಟಿಫಿಕೇಟ್‌ಗಳು ಸಿಗಬೇಕು ಎಂಬುದು ನಮ್ಮ ಉದ್ದೇಶ. ಪ್ರಾಯೋಗಿಕವಾಗಿ ನವೆಂಬರ್ 1 ರಂದು ಜನಸೇವಕ ಕಾರ್ಯಕ್ರಮಗಳನ್ನು ಬೆಂಗಳೂರಿನ 28 ಕ್ಷೇತ್ರಗಳಲ್ಲಿ ಮಾಡಲಾಗುವುದು. ಬಳಿಕ ಜನವರಿ 26 ರಿಂದ ರಾಜ್ಯಾದ್ಯಂತ ವಿಸ್ತರಣೆಗೊಳಿಸಲಾಗುವುದು ಎಂದರು.

ಸ್ವಚ್ಛ, ದಕ್ಷ, ಜನಪರ ಆಡಳಿತ ಕೊಡುತ್ತೇವೆ. ಅದರ ಲಾಭವನ್ನು ನೀವು ಪಡೆದುಕೊಳ್ಳಬೇಕು. ದಿನಕ್ಕೆ 20 ತಾಸು ಕೆಲಸ ಮಡಲು ತಯಾರಿದ್ದೇನೆ. ಉತ್ತಮ ಸಚಿವ ಸಂಪುಟ ಇದೆ. ಬದಲಾವಣೆ ನಿಮ್ಮ ಊರಲ್ಲಿ, ನಿಮ್ಮ ಬದುಕಲ್ಲಿ ತರಬೇಕು ಎಂದರು. ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಗಳ ರಾಜಕೀಯ ಕಾರ್ಯದರ್ಶಿ ಎಂ.ಪಿ.ರೇಣುಕಾಚಾರ್ಯ ಅಧ್ಯಕ್ಷತೆ ವಹಿಸಿದ್ದರು.

ಕಂದಾಯ ಸಚಿವ ಆರ್.ಅಶೋಕ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಕೆ.ಎಸ್.ಈಶ್ವರಪ್ಪ, ಸಂಸದ ಜಿ.ಎಂ.ಸಿದ್ದೇಶ್ವರ, ಶಾಸಕರಾದ ಮಾಡಳ್ ವಿರೂಪಾಕ್ಷಪ್ಪ ಮತ್ತಿತರರು ಇದ್ದರು.

**ಒಂದೂವರೆ ವರ್ಷದೊಳಗೆ 4 ಲಕ್ಷ ಮನೆ ನಿರ್ಮಾಣ :** ಮುಂದಿನ ಒಂದೂವರೆ ವರ್ಷದೊಳಗೆ 4 ಲಕ್ಷ ಮನೆಗಳನ್ನು ನಿರ್ಮಿಸುವ ಸಂಕಲ್ಪ ಮಾಡಿದ್ದೇವೆ. ಇದು ಕೇವಲ ಘೋಷಣೆಯಲ್ಲ, ಇದಕ್ಕೆ ಬೇಕಿರುವ ಅನುದಾನವನ್ನೂ ಮೀಸಲಿಡುತ್ತೇವೆ. ಸ್ಲಂ ಪ್ರದೇಶಗಳಲ್ಲಿ ಈ ವರ್ಷ 1 ಲಕ್ಷ ಮನೆ ನಿರ್ಮಿಸಲು ಮಂಜೂರು ನೀಡಿ, ಹಣ ಬಿಡುಗಡೆ ಕೂಡ ಮಾಡುತ್ತೇವೆ. 750 ಗ್ರಾಗಳನ್ನು ಗುಡಿಸಲು ಮುಕ್ತವಾಗಿಸಲು ಕ್ರಮವಹಿಸಲಾಗಿದೆ ಎಂದು ಸಿಎಂ ಬಸವರಾಜ ಬೊಮ್ಮಾಯಿ ಹೇಳಿದರು.

ಆಧಾರ: ವಿಶ್ವವಾಣಿ, ದಿನಾಂಕ: 17.10.2021

## 30. ಇನ್ನೂ 300 ಶಿಥಿಲಾವಸ್ಥೆ ಕಟ್ಟಡಗಳ ಪತ್ತೆ

ಬಿಬಿಎಂಪಿ ನಗರದಲ್ಲಿ ಕಳೆದ 15 ದಿನಗಳಿಂದ ನಡೆಸಿದ ಸಮೀಕ್ಷೆಯಲ್ಲಿ ಹಿಂದಿನ 185 ಕಟ್ಟಡ ಹೊರತುಪಡಿಸಿ ಹೊಸದಾಗಿ ಒಟ್ಟು 300 ಕಟ್ಟಡಗಳು ಶಿಥಿಲಾವಸ್ಥೆಯಲ್ಲಿರುವುದು ಪತ್ತೆಯಾಗಿದೆ. ಈ ಮೂಲಕ ರಾಜಧಾನಿಯಲ್ಲಿ ಒಟ್ಟಾರೆ ಶಿಥಿಲಾವಸ್ಥೆಯ ಕಟ್ಟಡಗಳ ಸಂಖ್ಯೆ 568ಕ್ಕೆ ಹೆಚ್ಚಳವಾಗಿದೆ.

ಈ ಕುರಿತು ಮಾಹಿತಿ ನೀಡಿದ ಬಿಬಿಎಂಪಿ ಮುಖ್ಯ ಆಯುಕ್ತರು, ಬಿಬಿಎಂಪಿ ವ್ಯಾಪ್ತಿಯಲ್ಲಿ ಕಳೆದ ಎರಡು ವಾರದಿಂದ ಶಿಥಿಲಾವಸ್ಥೆಯಲ್ಲಿರುವ ಕಟ್ಟಡ ಸಮೀಕ್ಷೆ ನಡೆಸಲಾಗಿದೆ. ಹೊಸ ಸಮೀಕ್ಷೆಯಲ್ಲಿ 300 ಕಟ್ಟಡಗಳು ಪತ್ತೆಯಾಗಿವೆ. ನೋಟಿಸ್ ನೀಡಿದ ತಕ್ಷಣ ಮನೆ ಅಗತ್ಯವಿರುವ ದುರಸ್ತಿ ಕಾರ್ಯಗಳನ್ನು ಮಾಡಿಸಿಕೊಂಡು ಗುಣಮಟ್ಟದ ಬಗ್ಗೆ ತಾಂತ್ರಿಕ ವರದಿಯನ್ನು ಬಿಬಿಎಂಪಿಗೆ ನೀಡಬೇಕು. ಒಂದು ವೇಳೆ ನೋಟಿಸ್‌ಗೆ ಯಾವುದೇ ಪ್ರತಿಕ್ರಿಯೆ ಬಾರದ ಮತ್ತು ತುರ್ತು ತೆರವು ಮಾಡಬೇಕಾದ ಕಟ್ಟಡಗಳನ್ನು ಬಿಬಿಎಂಪಿಯಿಂದಲೇ ಶೀಘ್ರ ನೆಲಸಮ ಮಾಡಲಾಗುವುದು ಎಂದರು.

ಅನಧಿಕೃತ ಕಟ್ಟಡಗಳ ತೆರವುಗೊಳಿಸಲು ಕಾರ್ಯವನ್ನು ಪ್ರತಿ ವಲಯದಲ್ಲಿ ನಿಯೋಜನೆಗೊಂಡಿರುವ ಗುತ್ತಿಗೆದಾರರು ನಿರ್ವಹಿಸಲಿದ್ದಾರೆ. ಗುತ್ತಿಗೆದಾರ ನಿಯೋಜನೆ ಮಾಡದೇ ಇರುವ ವಲಯದಲ್ಲಿ ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರರು ಮುಂದಿನ 15 ದಿನಗಳಲ್ಲಿ ಅಲ್ಪಾವಧಿಯಲ್ಲಿ ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ ಗುತ್ತಿಗೆದಾರ ತೆರವು ಮಾಡಲು ಕ್ರಮಕೈಗೊಳ್ಳಲಾಗುವುದು ಎಂದರು.

**ಬಹುಮಹಡಿ ಕಟ್ಟಡಗಳ ಸಮೀಕ್ಷೆ :** ನಗರದಲ್ಲಿ ನಿರ್ಮಾಣವಾಗಿರುವ ಅನಧಿಕೃತ ಕಟ್ಟಡ ಮತ್ತು ಬಹುಮಹಡಿ ಕಟ್ಟಡಗಳ ನಿರ್ಮಾಣಕ್ಕೆ ಬಿಬಿಎಂಪಿ ಕಾಯ್ದೆಯಲ್ಲಿ ಅವಕಾಶ ಮಾಡಿಕೊಡಲಾಗಿದೆ. ಆದರೆ, ಕಳೆದ 10 ವರ್ಷದಲ್ಲಿ 1,178 ಕಟ್ಟಡಗಳು ಮಾತ್ರ ಅನುಮತಿ ಪಡೆದಿವೆ. ಉಳಿದ 5 ಸಾವಿರಕ್ಕೂ ಅಧಿಕ ಎತ್ತರದ ಕಟ್ಟಡಗಳು ಪಾಲಿಕೆಯಿಂದ ಅನುಮತಿಯನ್ನು ಪಡೆದುಕೊಂಡಿಲ್ಲ ಎಂಬ ಬಗ್ಗೆ ಮಾಹಿತಿಯಿದೆ. ಇದಕ್ಕೆ ಸಂಬಂಧಿಸಿದಂತೆ ಯಾವುದೇ ಸ್ಪಷ್ಟ ಆಧಾರ ಮತ್ತು ವರದಿಗಳು ಇಲ್ಲ. ಅಕ್ರಮ ಕಟ್ಟಡ ನಿರ್ಮಾಣ, ಬಿಬಿಎಂಪಿಯಿಂದ ಅನುಮತಿ ಪಡೆದಿರುವುದಕ್ಕಿಂತ ಹೆಚ್ಚಿನ ಮಹಡಿಯನ್ನು ನಿರ್ಮಿಸಿದ ಬಗ್ಗೆ ಸಮೀಕ್ಷೆ ನಡೆಸಿ ಕಾನೂನಾತ್ಮಕ ಕ್ರಮ ಕೈಗೊಳ್ಳಲಾಗುವುದು ಎಂದು ಎಚ್ಚರಿಸಿದ್ದಾರೆ.

**ಶಿಥಿಲಗೊಂಡ ಕಟ್ಟಡಗಳ ಅಂಕಿ ಅಂಶ**

| ವಲಯಗಳು | 2019 ಸಮೀಕ್ಷೆ ಶಿಥಿಲಗೊಂಡ ಕಟ್ಟಡ | 2021 ಸಮೀಕ್ಷೆ ಶಿಥಿಲಗೊಂಡ ಕಟ್ಟಡ | ಒಟ್ಟು |
|---|---|---|---|
| ದಕ್ಷಿಣ | 33 | 103 | 136 |
| ಪಶ್ಚಿಮ | 34 | 95 | 129 |
| ಪೂರ್ವ | 46 | 67 | 113 |
| ಮಹಾದೇವಪುರ | 03 | 24 | 27 |
| ಆರ್.ಆರ್.ನಗರ | 00 | 11 | 11 |
| ಯಲಹಂಕ | 60 | 84 | 144 |
| ಬೊಮ್ಮನಹಳ್ಳಿ | 00 | 09 | 09 |
| ದಾಸರಹಳ್ಳಿ | 07 | 03 | 11 |
| **ಒಟ್ಟು** | **185** | **404** | **568** |

**ದೀಪಾವಳಿಗೆ ಅನುಮತಿ ಸಾಧ್ಯತೆ :** ಕೊರೋನಾ ಹಿನ್ನೆಲೆ ಶಿಸ್ತು ಬದ್ಧವಾಗಿ ದೀಪಾವಳಿ ಆಚರಿಸಬೇಕು. ಆ ಕುರಿತು ಕೈಗೊಳ್ಳಬೇಕಾದ ಮುಂಜಾಗ್ರತಾ ಕ್ರಮಗಳ ಬಗ್ಗೆ ರಾಜ್ಯ ಸರ್ಕಾರದ ತೀರ್ಮಾನದ ಬಳಿಕ ಬಿಬಿಎಂಪಿ ನಿರ್ಧರಿಸಲಿದೆ. ರಾಷ್ಟ್ರೀಯ ಹಸಿರು ನ್ಯಾಯಾಧೀಕರಣ (ಎನ್‌ಜಿಟಿ) ಸೂಚನೆಯಂತೆ ರಾಜ್ಯದಲ್ಲಿ ಕಳೆದ ವರ್ಷದಂತೆ ಈ ವರ್ಷವು ಹಸಿರು ಪಟಾಕಿ ಒಡೆಯಲು ಅನುಮತಿ ನೀಡುವ ಕುರಿತು ಚಿಂತನೆ ಮಾಡಲಾಗಿದೆ. ಹಬ್ಬದ ಸಂಭ್ರಮಕ್ಕೆ ಅಡ್ಡಿಪಡಿಸುವುದಿಲ್ಲ. ಕಡ್ಡಾಯವಾಗಿ ಕೊರೋನಾ ಹರಡದಂತೆ ಕುಟುಂಬಗಳು ಹಾಗೂ ಅಂಗಡಿ ಮುಂಗಟ್ಟುಗಳ ಮಾಲೀಕರು ಕ್ರಮವಹಿಸಬೇಕು ಎಂದು ಬಿಬಿಎಂಪಿ ಮುಖ್ಯ ಆಯುಕ್ತರು ತಿಳಿಸಿದರು.

**ಕಮಲಾನಗರ ಕಟ್ಟಡ ಕುಸಿತ ಸಂತ್ರಸ್ತರಿಗೆ ನೆರವು:** ಇತ್ತೀಚೆಗೆ ನಗರದ ಕಮಲಾನಗರ ಎನ್‌ಜಿಓಎಸ್ ಕಾಲೋನಿಯಲ್ಲಿ ಕಟ್ಟಡ ಕುಸಿತ ಪ್ರಕರಣದಲ್ಲಿ ಸಂತ್ರಸ್ತರಾಗಿರುವ 11 ಕುಟುಂಬಗಳಿಗೆ ಕಾಂಗ್ರೆಸ್‌ನಿಂದ ಆರ್ಥಿಕ ನೆರವು ಮತ್ತು ಪರಿಹಾರ ಸಾಮಗ್ರಿ ವಿತರಿಸಲಾಯಿತು.

ಮಹಾಲಕ್ಷ್ಮೀ ಲೇಔಟ್ ಕ್ಷೇತ್ರ ಕಾಂಗ್ರೆಸ್ ಸಮಿತಿಯಿಂದ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಕೆಪಿಸಿಸಿ ಕಾರ್ಯಧ್ಯಕ್ಷ ರಾಮಲಿಂಗಾರೆಡ್ಡಿ, ಮಾಜಿ ಸಚಿವ ಎಚ್.ಎಂ.ರೇವಣ್ಣ, ಪಾಲಿಕೆಯ ಮಾಜಿ ಆಡಳಿತ ಪಕ್ಷದ ನಾಯಕ ಶಿವರಾಜು ನೆರವು ನೀಡಿದರು. ರಾಮಲಿಂಗಾರೆಡ್ಡಿ ಮಾತನಾಡಿ, ಕಷ್ಟದಲ್ಲಿರುವವರಿಗೆ ನೆರವಾಗುವುದು ಪುಣ್ಯದ ಕೆಲಸ. ಕೊರೋನಾದಿಂದ ಸಂಕಷ್ಟಕ್ಕೊಳಗಾಗಿದ್ದ ಲಕ್ಷಾಂತರ ಬಡವರಿಗೆ ಕಾಂಗ್ರೆಸ್ ನೆರವು ನೀಡಿತ್ತು. ಅದೇ ರೀತಿ ಕಟ್ಟಡ ಕುಸಿತದಿಂದ ತೊಂದರೆಗೆ ಸಿಲುಕಿರುವವರಿಗೆ ಸಹಾಯ ಹಸ್ತ ಚಾಚಲಾಗಿದೆ ಎಂದು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ: 19.10.2021

## 31. ಅನುಕಂಪದ ನೌಕರಿ ನೀಡಲು ನಿರ್ಧಾರ

ಕೊರೋನಾ ಸೋಂಕಿನಿಂದ ಮೃತಪಟ್ಟಿರುವ ಸರ್ಕಾರಿ ನೌಕರರ ಕುಟುಂಬ ಸದಸ್ಯರಿಗೆ ಅನುಕಂಪದ ಆಧಾರದಲ್ಲಿ ಉದ್ಯೋಗ ನೀಡಲು ಆಂಧ್ರಪ್ರದೇಶ ಸರ್ಕಾರ ತೀರ್ಮಾನಿಸಿದೆ.

ಕೊರೋನಾ ಕುರಿತ ಪರಿಶೀಲನಾ ಸಭೆಯಲ್ಲಿ ಈ ವಿಷಯ ಪ್ರಕಟಿಸಿದ ಮುಖ್ಯಮಂತ್ರಿ ವೈ.ಎಸ್.ಜಗನ್‌ಮೋಹನ ರೆಡ್ಡಿ ಅವರು, "ಅಕ್ಟೋಬರ್ 20 ಈ ಕುರಿತು ಅಧಿಸೂಚನೆ ಹೊರಡಿಸಲಾಗುವುದು. ನವೆಂಬರ್ 30ರ ಒಳಗೆ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳಿಸಬೇಕು" ಎಂದು ನಿರ್ದೇಶನ ನೀಡಿದ್ದಾರೆ.

**ಎರಡನೇ ಡೋಸ್‌ಗೆ ಆದ್ಯತೆ:** ವಿಶ್ವದಲ್ಲೇ ಅತಿ ದೊಡ್ಡ ಲಸಿಕಾ ಅಭಿಯಾನ ಎನಿಸಿರುವ ಭಾರತದ ಕೊರೋನಾ ನಿರೋಧಕ ಲಸಿಕೆ ಅಭಿಯಾನದ ಅಡಿಯಲ್ಲಿ ದೇಶಾದ್ಯಂತ 100 ಕೋಟಿ ಡೋಸ್ ನೀಡಿಕೆ ಸಾಧನೆಯ ಅಂಚಿನಲ್ಲಿರುವ ಸಂದರ್ಭದಲ್ಲಿ ಕೇಂದ್ರ ಸರ್ಕಾರವು ಎರಡನೇ ಡೋಸ್‌ಗಳ ಬಗ್ಗೆ ಹೆಚ್ಚು ಗಮನಹರಿಸುವಂತೆ ರಾಜ್ಯ ಸರ್ಕಾರಗಳಿಗೆ ಸೂಚಿಸಿದೆ. "ಈಗಾಗಲೇ ಸಾಕಷ್ಟು ಪ್ರಮಾಣದಲ್ಲಿ ಕೊರೋನಾ ಲಸಿಕೆಗಳು ರಾಜ್ಯಗಳ ಬಳಿ ಲಭ್ಯವಿದೆ. ಎರಡನೇ ಡೋಸ್ ನಿರೀಕ್ಷೆಯಲ್ಲಿರುವವರಿಗೆ ಶೀಘ್ರವಾಗಿ ಲಸಿಕೆ ನೀಡಬೇಕು," ಕೇಂದ್ರ ಆರೋಗ್ಯ ಸಚಿವಾಲಯ ಕಾರ್ಯದರ್ಶಿ ರಾಜೇಶ್ ಭೂಷಣ್ ಅವರು ಸೂಚಿಸಿದ್ದಾರೆ. ದಿನಾಂಕ 19ರವರೆಗೆ 99,05,77,106 ಡೋಸ್ ನೀಡಲಾಗಿದೆ.

**3ನೇ ಅಲೆಯ ಭೀತಿ ಕ್ಷೀಣ:** ಅಕ್ಟೋಬರ್–ನವೆಂಬರ್‌ನಲ್ಲಿ ಕೊರೋನಾ ಮೂರನೇ ಅಲೆಯು ಅಪ್ಪಳಿಸಿ ದೇಶಾದ್ಯಂತ ಸೋಂಕಿನ ಆರ್ಭಟ ಹೆಚ್ಚುವ ಎಚ್ಚರಿಕೆ ನೀಡಿದ್ದ ತಜ್ಞ ವೈದ್ಯರುಗಳೇ ಸದ್ಯದ ಮಟ್ಟಿಗೆ ಕೊರೋನಾ ಮೂರನೇ ಅಲೆಯ ಸಾಧ್ಯತೆ ಕಡಿಮೆ ಇದೆ ಎಂದಿದ್ದಾರೆ. "ಹೊಸ ರೂಪಾಂತರಿಗಳು ವಾತಾವರಣದಲ್ಲಿ ಕಂಡುಬಂದಿಲ್ಲ. ಸಾಕಷ್ಟು ಜನರು ಕೊರೋನಾ ನಿರೋಧಕ ಲಸಿಕೆ ಪಡೆದು,

ಪ್ರತಿಕಾಯಗಳಿಂದ ಪ್ರಬಲ ರೋಗನಿರೋಧಕತೆ ಹೊಂದಿದ್ದಾರೆ. ಒಂದು ವೇಳೆ ಹೊಸ ತಳಿ ಅಥವಾ ರೂಪಾಂತರಿ ಸೃಷ್ಟಿಯಾದರೂ, ಅದು ಎರಡನೇ ಅಲೆಯಷ್ಟು ಅನಾರೋಗ್ಯ ಸೃಷ್ಟಿಸಲು ಸಾಧ್ಯವಾಗುವುದಿಲ್ಲ" ಎಂದು ವೈರಾಣು ತಜ್ಞ ಡಾ.ವಿ.ರವಿ ಅವರು ಅಭಿಪ್ರಾಯಪಟ್ಟಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 20.10.2021

## 32. ಪರಿಶಿಷ್ಟರಿಗೆ ಭೂ ಒಡೆತನ ನೀಡುವ ಸಂಕಲ್ಪ

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಭೂ ಒಡೆತನ ನೀಡುವುದೇ ಸರ್ಕಾರದ ಸಂಕಲ್ಪವಾಗಿದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ವಿಧಾನಸೌಧದಲ್ಲಿ ಮಹರ್ಷಿ ವಾಲ್ಮೀಕಿ ಜಯಂತಿ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು "ರಾಜ್ಯದ 1300 ಎಸ್‌ಸಿ, ಎಸ್‌ಟಿ ಫಲಾನುಭವಿಗಳಿಗೆ ಈಗಾಗಲೇ ಭೂಒಡೆತನ ನೀಡಲಾಗಿದೆ. ಇನ್ನೂ ಹೆಚ್ಚಿನ ಜನರಿಗೆ ಈ ಯೋಜನೆ ವಿಸ್ತರಿಸಲಾಗುವುದು. ಈ ಸಂಬಂಧ ಜಿಲ್ಲಾಧಿಕಾರಿಗೆ ಸೂಚನೆ ನೀಡಲಾಗಿದ್ದು, ಲಭ್ಯವಿದ್ದರೆ ಸರ್ಕಾರಿ ಭೂಮಿ ಅಥವಾ ಭೂಮಿ ಖರೀದಿಸಿ ನೀಡುವ ಉದ್ದೇಶ ಹೊಂದಲಾಗಿದೆ" ಎಂದರು.

"ಈ ಸಮುದಾಯದ ಹೆಣ್ಣು ಮಕ್ಕಳ ಸ್ವಯಂ ಉದ್ಯೋಗಕ್ಕೆ ಸಹಾಯಧನ ನೀಡಲು ಸರ್ಕಾರ ಬದ್ಧವಾಗಿದೆ. ಹಣಕಾಸಿನ ಸಹಾಯಕ್ಕೆ ನಬಾರ್ಡ್ ಜೊತೆ ಈಗಾಗಲೇ ಒಂದು ಸುತ್ತಿನ ಮಾತುಕತೆ ನಡೆಸಿದ್ದೇನೆ. ಮೊದಲ ಸಂಪುಟ ಸಭೆಯಲ್ಲಿ ಪ್ರತ್ಯೇಕ ಸಚಿವಾಲಯ ಸ್ಥಾಪಿಸುವ ನಿರ್ಧಾರ ಕೈಗೊಳ್ಳಲಾಗಿದ್ದು, ಸಮುದಾಯದ ಅಭಿವೃದ್ಧಿಗೆ ಸರ್ಕಾರ ಪಾರದರ್ಶಕ ಆಡಳಿತ ನಡೆಸುತ್ತಿದೆ" ಎಂದು ಮುಖ್ಯಮಂತ್ರಿ ನುಡಿದರು.

**ಮೂಲಭೂತ ಬದಲಾವಣೆಯ ಹರಿಕಾರ :** "ಮಹರ್ಷಿ ವಾಲ್ಮೀಕಿ ಮೂಲಭೂತ ಬದಲಾವಣೆಯ ಹರಿಕಾರ," ಎಂದು ಬಣ್ಣಿಸಿದ ಅವರು "ಸಮಾಜದಲ್ಲಿ ಮೂಲಭೂತ ಬದಲಾವಣೆಗಳು ವ್ಯವಸ್ಥೆಯಿಂದ ಅಥವಾ ಸಂಸ್ಥೆಗಳಿಂದಾಗದೇ ಕೇವಲ ವ್ಯಕ್ತಿಯಿಂದ ಮಾತ್ರ ಸಾಧ್ಯ. ಶಂಕರಾಚಾರ್ಯರೂ ಒಳಗೊಂಡಂತೆ ನಾನಾ ಇತಿಹಾಸ ಪುರುಷರು, ಬುದ್ಧ, ಬಸವ, ಅಂಬೇಡ್ಕರ್ ಅವರಂತಹ ವ್ಯಕ್ತಿಗಳು ವಿಜ್ಞಾನ ಮತ್ತು ಆಧ್ಯಾತ್ಮದಲ್ಲಿ ಮೂಲ ಬದಲಾವಣೆ ತಂದಿದ್ದಾರೆ" ಎಂದರು.

"ವಾಲ್ಮೀಕಿ ಅಂದರೆ ಜಾಗೃತಿ. ಜಾಗೃತಿಯಿಂದ ಅರಿವು ಮೂಡಿ ಬದಲಾವಣೆಗೆ ನಾಂದಿಯಾಗುತ್ತದೆ. ಕಾಲಾತೀತರಾಗಿರುವ ವಾಲ್ಮೀಕಿ ಜ್ಞಾನ ಮತ್ತು ಧ್ಯಾನದಿಂದ ಈ ನಾಡಿಗೆ ಸಂಸ್ಕೃತಿ ಕೊಟ್ಟವರು. ರಾಮಾಯಾಣ ಗ್ರಂಥ ಜಗತ್ತಿನ ಶ್ರೇಷ್ಠ 10 ಗ್ರಂಥಗಳಲ್ಲಿ ಒಂದಾಗಿದೆ. ಸಮಾಜಕ್ಕೆ ಅದರ್ಶವಾಗಿದೆ. ಗ್ರಂಥದಿಂದ ನಮ್ಮನ್ನು ನಾವೇ ಮೌಲ್ಯಮಾಪನಗೊಳಿಸಿ ಜೀವನದ ಪಾಠ ಕಲಿಯುವಂತಾಗಿದೆ. ಗ್ರಂಥದಿಂದ ಮನುಷ್ಯನಲ್ಲಿ ಪರಿವರ್ತನೆಯಾದರೆ ದೈವತ್ವದ ಹಂತಕ್ಕೂ ತಲುಪಬಹುದು" ಎಂದು ಪ್ರತಿಪಾದಿಸಿದರು.

ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಸಚಿವ ಶ್ರೀರಾಮುಲು ಮಾತನಾಡಿ "ಪರಿಶಿಷ್ಟರ ಅಭಿವೃದ್ಧಿಗೆ ಸರ್ಕಾರ ರೂ. 7600 ಕೋಟಿ ಮೀಸಲಿಟ್ಟಿದೆ. ವಸತಿ ನಿಲಯ ಹಾಗೂ ವಿದ್ಯಾರ್ಥಿಗಳ ಕೌಶಲಾಭಿವೃದ್ಧಿಗೆ ಸರ್ಕಾರದ ಆದ್ಯತೆ ನೀಡಿದೆ. ಶಾಲೆಗಳಲ್ಲಿ ಕ್ರೀಡಾ ಚಟುವಟಿಕೆಗೆ ರೂ.5 ಕೋಟಿ ಅನುದಾನ ಮೀಸಲಿಡಲಾಗಿದೆ" ಎಂದರು.

ಇದೇ ವೇಳೆ ಬೆಂಗಳೂರಿನ ಬನಶಂಕರಿಯಲ್ಲಿ ನಿರ್ಮಾಣಗೊಂಡ ವಾಲ್ಮೀಕಿ ಭವನ, ಬುಡಕಟ್ಟು ಜನಾಂಗದ ಕಾಫಿ, ಮೆಣಸು ಉತ್ಪನ್ನಗಳ ಬಿಡುಗಡೆ, ನಾಲ್ಕು ಬುಡಕಟ್ಟು ಉತ್ಪಾದನಾ ಸಂಸ್ಥೆಗಳು ಮತ್ತು

ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಸಾಮಾಜಿಕ ಜಾಲತಾಣಗಳನ್ನು ಮುಖ್ಯಮಂತ್ರಿ ಬೊಮ್ಮಾಯಿ ವರ್ಚುವಲ್ ಮೂಲಕ ಉದ್ಘಾಟಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 21.10.2021

## 33. ನೇಮಕಕ್ಕೆ ಹೊಸ ವಿಧಾನ

ಆಡಳಿತಶಾಹಿಯ ಬೆನ್ನೆಲುಬೆಂದು ಕರೆಯಲಾಗುವ ಗ್ರೂಪ್ 'ಸಿ' ಹುದ್ದೆಗಳ ನೇಮಕದ ಬೇಡಿಕೆ ಪೂರೈಸುವುದಕ್ಕಾಗಿ ಕರ್ನಾಟಕ ಲೋಕಸೇವಾ ಆಯೋಗ ಹೊಸ ವಿಧಾನ ಅಳವಡಿಸಿಕೊಳ್ಳಲು ಮುಂದಾಗಿದೆ. 'ಸಿ' ಗ್ರೂಪ್ ನೇಮಕ ಪ್ರಕ್ರಿಯೆಯಲ್ಲಿ ಸಮಗ್ರ ಸುಧಾರಣೆ ತರುವ ಕುರಿತು ಆಯೋಗ ಈಗಾಗಲೇ ಪ್ರಸ್ತಾವನೆ ಸಿದ್ಧಪಡಿಸಿ ಅನುಮೋದನೆಗಾಗಿ ಸರ್ಕಾರಕ್ಕೆ ಕಳುಹಿಸಿದೆ. ಸರ್ಕಾರದ ಮಟ್ಟದಲ್ಲಿ ಅದಕ್ಕೆ ಸಂಬಂಧಿಸಿದಂತೆ ಕರಡು ನಿಯಮಗಳನ್ನು ರೂಪಿಸಲಾಗುತ್ತಿದೆ.

ಜಿಮ್ಯಾಟ್ ಮತ್ತು ಜೆಇಇ ಮಾದರಿಯಲ್ಲಿ ವರ್ಷಕ್ಕೆರಡು ಬಾರಿ ಅರ್ಹತಾ ಪರೀಕ್ಷೆ ನಡೆಸಿ, ಅಭ್ಯರ್ಥಿಗಳಿಗೆ ಜ್ಯೇಷ್ಠತೆ ಆಧರಿಸಿ ರ್‍ಯಾಂಕಿಂಗ್ ನೀಡಲಾಗುವುದು. ಅದನ್ನು ಆಧರಿಸಿ ಸರ್ಕಾರದ ನಾನಾ ಇಲಾಖೆಗಳು ನೇರವಾಗಿ ತಮಗೆ ಅಗತ್ಯವಿರುವಷ್ಟು ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಬಹುದು. ಅಭ್ಯರ್ಥಿಗಳಿಗೆ ನೀಡುವ ರ್‍ಯಾಂಕಿಂಗ್ ಎರಡು ವರ್ಷಗಳವರೆಗೆ ಮಾನ್ಯತೆ ಹೊಂದಿರುತ್ತದೆ. ಅಭ್ಯರ್ಥಿಗಳು ತಮ್ಮ ರ್‍ಯಾಂಕಿಂಗ್ ಉತ್ತಮಪಡಿಸಿಕೊಳ್ಳಲು ಅವಕಾಶವಿರಲಿದೆ. ಮುಂದಿನ ಪರೀಕ್ಷೆ ತೆಗೆದುಕೊಂಡು ಆ ರ್‍ಯಾಂಕಿಂಗ್ ಉತ್ತಮಪಡಿಸಿಕೊಳ್ಳಬಹುದು.

**ಅತಿ ಹೆಚ್ಚು ಬೇಡಿಕೆ:** ರಾಜ್ಯದ ನಾನಾ ಇಲಾಖೆ/ಸರ್ಕಾರಿ ಸಂಸ್ಥೆಗಳಲ್ಲಿ ಸುಮಾರು 2.5 ಲಕ್ಷ ಹುದ್ದೆಗಳು ಖಾಲಿ ಇವೆ. ಅವುಗಳಲ್ಲಿ ಶೇ.60ಕ್ಕೂ ಅಧಿಕ ಹುದ್ದೆಗಳು 'ಸಿ' ವೃಂದದ ಹುದ್ದೆಗಳಾಗಿವೆ. ಸದ್ಯ ಬಹುತೇಕ ಹುದ್ದೆಗಳು ಖಾಲಿ ಇವೆ, ಆ ಹುದ್ದೆಗಳ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲಾಗುತ್ತಿದೆ. ಎಲ್ಲ ಇಲಾಖೆಗಳು ಪ್ರತಿ ವರ್ಷ 'ಸಿ' ವೃಂದದ ನೇಮಕಕ್ಕೆ ಅಗಾಗ ಆರ್ಥಿಕ ಇಲಾಖೆ ಮತ್ತು ಸಿಬ್ಬಂದಿ ಸುಧಾರಣೆ ಇಲಾಖೆಗೆ ಮನವಿ ಸಲ್ಲಿಸುತ್ತಲೇ ಇರುತ್ತವೆ. ಡಿಪಿಎಆರ್, ಕೆಪಿಎಸ್‌ಸಿಗೆ ಆ ಹುದ್ದೆಗಳನ್ನು ಭರ್ತಿ ಮಾಡಲು ಆಗಾಗ ಮನವಿ ಸಲ್ಲಿಸಿದರು ನಾನಾ ಕಾರಣಗಳಿಂದಾಗಿ ಆಯೋಗ ನೇಮಕ ಪ್ರಕ್ರಿಯೆಗಳನ್ನು ಸಕಾಲದಲ್ಲಿ ನಡೆಸಲಾಗುತ್ತಿಲ್ಲ. ಸರ್ಕಾರಿ ಇಲಾಖೆಗಳು ಸಿಬ್ಬಂದಿ ಕೊರತೆಯಿಂದ ಬಳಲುತ್ತಿವೆ.

**ನೇರ ನೇಮಕ ಸರಾಗ :** ಕರ್ನಾಟಕ ಲೋಕಸೇವಾ ಆಯೋಗದ ಈ ಹೊಸ ಕ್ರಮದಿಂದ ಸರ್ಕಾರದ ನಾನಾ ಇಲಾಖೆಗಳು ತನ್ನ ಅಗತ್ಯತೆ ತಕ್ಕಂತೆ 'ಸಿ' ಗ್ರೂಪ್ ಹುದ್ದೆಗಳಿಗೆ ಸರಾಗವಾಗಿ ನೇರ ನೇಮಕ ಮಾಡಿಕೊಳ್ಳಲು ಸಾಧ್ಯವಾಗಲಿದೆ. ಸಹಾಯಕಿ, ಸಿಬ್ಬಂದಿ ಕೊರತೆ ಸಮಸ್ಯೆಯಿಂದ ಹೊರಬರಲಿವೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ 'ಸಿ' ಗ್ರೂಪ್ ನೌಕರರು ಬೇಕೆಂದರೆ ಅವರು ನೇರವಾಗಿ ಅಧಿಸೂಚನೆ ಹೊರಡಿಸಿ, ರ್‍ಯಾಂಕಿಂಗ್ ಪಡೆದಿರುವವರನ್ನು ನೇಮಕ ಮಾಡಿಕೊಳ್ಳಬಹುದು. ಇತರೆ ಇಲಾಖೆಗಳೂ ಅದನ್ನೇ ಅನುಸರಿಸಬಹುದು.

**2 ವರ್ಷ ಅತಿ ಕಡಿಮೆ:** ಹೊಸ ಪದ್ಧತಿಯಲ್ಲಿ ಕೆಪಿಎಸ್‌ಸಿ ನೀಡಲಿರುವ ರ್‍ಯಾಂಕಿಂಗ್ ಎರಡು ವರ್ಷಗಳವರೆಗೆ ಮಾನ್ಯತೆ ಹೊಂದಿರುತ್ತದೆ. ಆದರೆ ಕೆಪಿಎಸ್‌ಸಿಯ ನೇಮಕ ಪ್ರಕ್ರಿಯೆಗಳು ಎರಡೇ ವರ್ಷಕ್ಕೆ ಪೂರ್ಣಗೊಳ್ಳುವುದಿಲ್ಲ. ಬಹುತೇಕ ನೇಮಕ ಪ್ರಕ್ರಿಯೆಗಳು ನಾನಾ ಕಾರಣಗಳಿಂದಾಗಿ ವಿಳಂಬವಾಗುವುದರಿಂದ ಶ್ರೇಯಾಂಕದ ಮಾನ್ಯತಾ ಅವಧಿ ಕನಿಷ್ಠ ಐದು ವರ್ಷವಿರುವುದು ಸೂಕ್ತ ಎಂಬ ಅಭಿಪ್ರಾಯ ಕೇಳಿ ಬಂದಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 21.10.2021

# 34. ರಾಷ್ಟ್ರದ ಆಂತರಿಕ ಭದ್ರತೆ, ಪ್ರಗತಿಗೆ ಪೊಲೀಸ್ ಅಗತ್ಯ

ರಾಷ್ಟ್ರದ ಆಂತರಿಕ ಭದ್ರತೆ ಹಾಗೂ ಶಾಂತಿಪಾಲನೆಗೆ ತಮ್ಮ ಪ್ರಾಣ ತ್ಯಾಗ ಮಾಡಿದ ಪೊಲೀಸ್ ಹುತಾತ್ಮರನ್ನು ಸ್ಮರಿಸುವ ದಿನ ಇದಾಗಿದೆ. ದೇಶದ ಪ್ರಗತಿಗೆ ಶಾಂತಿ ಅವಶ್ಯಕ. ಶಾಂತಿ ಇಲ್ಲದಿದ್ದರೆ ದೇಶದ ಪ್ರಗತಿ ಇಲ್ಲ. ರಾಷ್ಟ್ರದ ಆಂತರಿಕ ಭದ್ರತೆ ಹಾಗೂ ಪ್ರಗತಿಗೆ ಪೊಲೀಸ್ ಸೇವೆ ಅಗತ್ಯ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದರು.

ಹುಬ್ಬಳ್ಳಿಯ ಹಳೆಯ ಸಿ.ಎ.ಆರ್. ಮೈದಾನದಲ್ಲಿ ಆಯೋಜಿಸಲಾದ ಪೊಲೀಸ್ ಸಂಸ್ಮರಣಾ ದಿನಾಚರಣೆಯಲ್ಲಿ ಪಾಲ್ಗೊಂಡು ಪೊಲೀಸ್ ಹುತ್ಮಾತರ ಸ್ಮಾರಕಕ್ಕೆ ಹೂಗುಚ್ಛ ಸಮರ್ಪಿಸಿ ಮಾತನಾಡಿದರು.

ವಿಶ್ವದ ಹಲವು ರಾಷ್ಟ್ರಗಳು ಆಂತರಿಕ ಕ್ಷೋಭೆ, ಭಯೋತ್ಪಾದಕರ ಕೈಗೆ ಸಿಲುಕಿದೆ. ಅಲ್ಲಿನ ನಾಗರಿಕ ಬದುಕು ಶಾಂತಿಯುತವಾಗಿಲ್ಲ. ದೇಶದ ಎಲ್ಲ ಹಂತಹ ಪೊಲೀಸರು ಜನರ ಭಯರಹಿತ ಜೀವನಕ್ಕಾಗಿ ಶ್ರಮಪಡುತ್ತಿದ್ದಾರೆ. ಸಾಮಾಜಿಕ ಸ್ವಾಸ್ಥ್ಯ ಕೆಡಿಸುವ, ವಿದೇಶದಿಂದ ಎದುರಾಗುವ ಆಂತರಿಕ ಭದ್ರತಾ ಸವಾಲುಗಳನ್ನು ಎದುರಿಸುತ್ತಿದ್ದಾರೆ. ನಾಗರಿಕರು ಕಾನೂನು ಕಾಪಾಡುವಲ್ಲಿ ಪೊಲೀಸರಿಗೆ ಸಹಕರಿಸಬೇಕು.

**ಸವಲತ್ತು ನೀಡಲು ಸಿದ್ಧ:** ಪೊಲೀಸರು ಕುಟುಂಬವನ್ನು ಮರೆತು ಹಗಲಿರುಳು ದುಡಿಯುತ್ತಾರೆ. ಪೊಲೀಸರಿಗೆ ದೊರಕಬೇಕಾದ ಸವಲತ್ತುಗಳನ್ನು ನೀಡಲು ರಾಜ್ಯ ಸರ್ಕಾರ ಸಿದ್ಧವಿದೆ. ಇಲಾಖೆಯಲ್ಲಿ ನೆನೆಗುದಿಗೆ ಬಿದ್ದ ಹಲವು ಯೋಜನೆಗಳಿಗೆ ಚಾಲನೆ ನೀಡಲಾಗಿದೆ. ಪೊಲೀಸರ ಸೇವೆ ಉತ್ತಮಗೊಳಿಸಲು ಪ್ರಯತ್ನ ಮಾಡಲಾಗಿದೆ. ಹಿರಿಯ ಅಧಿಕಾರಿಗಳ ಹಂತದಲ್ಲಿ ಮಾತ್ರ ಪದೋನ್ನತಿ ಎಂಬ ಭಾವನೆ ಕೆಳ ಹಂತಹ ಅಧಿಕಾರಿಗಳು ಹಾಗೂ ಸಿಬ್ಬಂದಿಗೆ ಇತ್ತು. ಆದರೆ ಕೆಳ ಹಂತಹ ಸಿಬ್ಬಂದಿಗೆ ಪದೋನ್ನತಿ ನೀಡಲಾಗಿದೆ.

16 ಸಾವಿರ ಪೊಲೀಸರ ನೇಮಕ ಮಾಡಿಕೊಳ್ಳಲಾಗುತ್ತಿದೆ. ಆರೋಗ್ಯ ಭಾಗ್ಯ ಯೋಜನೆಯಡಿ ಪೊಲೀಸರು ಚಿಕಿತ್ಸೆ ಪಡೆಯಲು ಅನುದಾನ ಒದಗಿಸಲಾಗಿದೆ. ವೇತನ ಪರಿಷ್ಕರಣೆ ಸೇರಿದಂತೆ ಹಲವು ಸುಧಾರಣೆಗಳನ್ನು ತರಲಾಗಿದೆ. ಕಾನೂನಿನ ಬಲವನ್ನು ಪೊಲೀಸರಿಗೆ ನೀಡಲಾಗುತ್ತಿದೆ. ಯುವಕರು ಆನ್‌ಲೈನ್ ಗೇಮ್‌ನಲ್ಲಿ ಹಣ ಕಳೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುವುದನ್ನು ತಡೆಯಲು ಕಾಯ್ದೆಯನ್ನು ತರಲಾಗಿದೆ. ಗ್ಯಾಂಬ್ಲಿಂಗ್ ಕ್ಲಬ್‌ಗಳ ವಿರುದ್ಧ ಸಶಕ್ತ ಕಾನೂನು ತರಲಾಗಿದೆ. ಎಫ್.ಎಸ್.ಎಲ್. ಲ್ಯಾಬ್‌ಗಳನ್ನು ಪ್ರಾದೇಶಿಕ ಹಂತದಲ್ಲಿ ನಿರ್ಮಾಣ ಮಾಡಲಾಗುತ್ತಿದೆ. ಆಫೀಸರ್ ಆನ್ ಕ್ರೈಮ್ ಹುದ್ದೆಗಳನ್ನು ಸೃಜಿಸಿ ನೇಮಕಾತಿ ಮಾಡಿಕೊಳ್ಳಲಾಗುತ್ತಿದೆ. ಈಗಾಗಲೇ 10 ಸಾವಿರ ಪೊಲೀಸ್ ವಸತಿ ಗೃಹಗಳನ್ನು ನಿರ್ಮಿಸಲಾಗಿದೆ. ಮುಂದಿನ ವರ್ಷಗಳಲ್ಲಿ 11 ಸಾವಿರ ಮನೆ ನಿರ್ಮಾಣಕ್ಕೆ ಯೋಜಿಸಲಾಗಿದೆ. ಠಾಣೆಗಳು ಜನಸ್ನೇಹಿಯಾಗಬೇಕು. ಪ್ರತಿಯೊಂದು ಕಾಲೇಜಿನಲ್ಲಿ ಹೆಣ್ಣುಮಕ್ಕಳಿಗೆ ಸ್ವರಕ್ಷಣೆಗೆ ತರಬೇತಿ ನೀಡಲಾಗುವುದು ಎಂದರು. ವಿಧಾನ್ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಕೈಮಗ್ಗ, ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವ ಶಂಕರಪಾಟೀಲ ಮುನೇನಕೊಪ್ಪ, ಕರ್ನಾಟಕ ಬಾಲ ವಿಕಾಸ ಅಕಾಡೆಮಿ ಅಧ್ಯಕ್ಷ ಈರಣ್ಣ ಜಡಿ, ಹುಬ್ಬಳ್ಳಿ ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ನಾಗೇಶ್ ಕಲಬುರ್ಗಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕ ಪ್ರತಾಪ್ ರೆಡ್ಡಿ, ಶಾಸಕ ಪ್ರಸಾದ್ ಅಬ್ಬಯ್ಯ, ಜಿಲ್ಲಾಧಿಕಾರಿ ನಿತೇಶ್ ಪಾಟೀಲ್, ನೈರುತ್ಯ ರೈಲ್ವೆ ಪ್ರಧಾನ ವ್ಯವಸ್ಥಾಪಕ ಸಂಜೀವ್ ಕುಮಾರ್, ಉಪ ಪೊಲೀಸ್ ಆಯುಕ್ತ ರಾಮರಾಜನ್, ಮಹಾನಗರಪಾಲಿಕೆ ಆಯುಕ್ತ ಡಾ.ಸುರೇಶ್ ಇಟ್ನಾಳ್, ಸಂಚಾರ ಸಹಾಯಕ ಪೊಲೀಸ್ ಆಯುಕ್ತ ಎಮ್.ಎಸ್.ಹೊಸಮನಿ, ಪೊಲೀಸ್ ಇನ್ಸ್‌ಪೆಕ್ಟರ್ ಶ್ಯಾಮರಾವ್, ಸಬ್ ಇನ್ಸ್‌ಪೆಕ್ಟರ್ ಸಜ್ಜನ್, ಸಹಾಯಕ ಸಬ್ ಇನ್ಸ್‌ಪೆಕ್ಟರ್ ಮಹಾದೇವ್ ಅಥಣಿ,

ಪೊಲೀಸ್ ಕಾನ್ಸ್‌ಟೇಬಲ್‌ಗಳಾದ ಆನಂದ ಕೆ. ದೇಶಪಾಂಡೆ, ಪದ್ಮಾವತಿ ನವಲಗುಂದ, ಪ್ರಭುಲಿಂಗ್ ಗುಬ್ಬೆ, ನಿವೃತ್ತ ಡಿ.ಐ.ಜಿ. ರವಿ ನಾಯಕ್, ಮಾಜಿ ಲೋಕಸಭಾ ಸದಸ್ಯ ಐ.ಜಿ.ಸನದಿ, ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಗಣಪತಿ ಗಂಗೊಳ್ಳಿ ಸೇರಿದಂತೆ ಇತರೆ ಗಣ್ಯರು ಪೊಲೀಸ್ ಹುತಾತ್ಮರ ಸ್ಮಾರಕಕ್ಕೆ ಹೂಗುಚ್ಛ ಸಮರ್ಪಿಸಿದರು.

ಪೊಲೀಸ್ ಆಯುಕ್ತ ಲಾಭೂರಾಮ್ ಪೊಲೀಸ್ ಹುತಾತ್ಮರ ಸ್ಮಾರಕಕ್ಕೆ ಹೂಗುಚ್ಛ ಸಮರ್ಪಿಸಿ ದೇಶದಾದ್ಯಂತ ಹುತಾತ್ಮರಾದ ಪೊಲೀಸರ ಹೆಸರುಗಳನ್ನು ವಾಚಿಸಿ, ಗೌರವಿಸಿದರು. 2020ರ ಅಕ್ಟೋಬರ್ 1 ರಿಂದ 2021ರ ಆಗಸ್ಟ್ 31 ರವರೆಗೆ ದೇಶದಲ್ಲಿ 377 ಪೊಲೀಸರು ಕರ್ತವ್ಯ ಸಮಯದಲ್ಲಿ ಹುತಾತ್ಮರಾಗಿದ್ದಾರೆ. ಕರ್ನಾಟಕದಲ್ಲಿ 16 ಪೊಲೀಸರು ವೀರ ಮರಣ ಹೊಂದಿದ್ದಾರೆ. ಸಹಾಯಕ ಪೊಲೀಸ್ ಆಯುಕ್ತೆ ಅನುಷಾ .ಜಿ ಪೊಲೀಸ್ ಪಥಸಂಚಲನ ತುಕಡಿಯ ಪರೇಡ್ ನೇತೃತ್ವ ವಹಿಸಿದ್ದರು. ಹುತಾತ್ಮರ ನೆನಪಿನಲ್ಲಿ ಮೂರು ಬಾರಿ ವಾಲಿ ಫೈರಿಂಗ್ ಸಿಡಿಸಿ, ವಾದ್ಯಗಳಲ್ಲಿ ರಾಷ್ಟ್ರಗೀತೆ ನುಡಿಸಲಾಯಿತು.

ಆಧಾರ: ವಿಶ್ವವಾಣಿ, ದಿನಾಂಕ: 22.10.2021

## 35. ಅಂಗನವಾಡಿಗೆ ಎನ್‌ಇಪಿ ಆತಂಕ

ರಾಜ್ಯಾದ್ಯಂತ ಶಾಲೆಗಳಲ್ಲೂ ರಾಷ್ಟ್ರೀಯ ಶಿಕ್ಷಣ ನೀತಿ (ಎನ್‌ಇಪಿ) ಜಾರಿಗೆ ಸರ್ಕಾರ ಸಿದ್ಧತೆ ಮಾಡಿಕೊಳ್ಳುತ್ತಿರುವ ಹಿನ್ನೆಲೆಯಲ್ಲಿ ಅಂಗನವಾಡಿಗಳ 1.26 ಲಕ್ಷ ಸಿಬ್ಬಂದಿಗೆ ಗೊಂದಲ ಎದುರಾಗಿದೆ.

ರಾಷ್ಟ್ರೀಯ ಶಿಕ್ಷಣ ನೀತಿ ಜಾರಿಗೊಳಿಸುವ ಮೂಲಕ 3 ರಿಂದ 6 ವರ್ಷದೊಳಗಿನ ಮಕ್ಕಳಿಗೂ ಔಪಚಾರಿಕ ಕಲಿಕೆಗೆ ಅವಕಾಶ ಸಿಗಲಿದ್ದು, ಅಂಗನವಾಡಿಗಳಲ್ಲಿನ ಅನೌಪಚಾರಿಕ ಕಲಿಕಾ ವಿಧಾನಕ್ಕೆ ತಡೆ ಬೀಳಲಿದೆ. ಜೊತೆಗೆ, ಹಾಲಿ ಉದ್ಯೋಗದಲ್ಲಿರುವ ಸಿಬ್ಬಂದಿಯನ್ನು ಶಿಕ್ಷಣ ನೀತಿಯಡಿ ಪರಿಗಣಿಸಲಾಗುವುದೇ ಎನ್ನುವ ಗೊಂದಲದಲ್ಲಿ ಅಂಗನವಾಡಿ ವಲಯ ದಿನದೂಡುತ್ತಿದೆ.

ರಾಜ್ಯದಲ್ಲಿನ 62,580 ಅಂಗನವಾಡಿ, 3,331 ಮಿನಿ ಅಂಗನವಾಡಿಗಳಲ್ಲಿ 1.26 ಲಕ್ಷ ಮಹಿಳಾ ಸಿಬ್ಬಂದಿ ಶಿಕ್ಷಕರಾಗಿ, ಸಹಾಯಕಿಯರಾಗಿ ದುಡಿಯುತ್ತಿದ್ದಾರೆ. ಈ ವರ್ಗಕ್ಕೆ ಹೊಸ ಶಿಕ್ಷಣ ನೀತಿಗೆ ಅಗತ್ಯ ತರಬೇತಿ ನೀಡಲಾಗಿಲ್ಲ. ಜೊತೆಗೆ ಬದಲಾಗಲಿರುವ ಶಿಕ್ಷಣ ವ್ಯವಸ್ಥೆಯಲ್ಲಿ ಇವರ ಪಾತ್ರ ಯಾವ ರೀತಿಯಲ್ಲಿರಲಿದೆ ಎನ್ನುವ ಸ್ಪಷ್ಟತೆಯನ್ನು ಶಿಕ್ಷಣ ಇಲಾಖೆ ಇಂದಿಗೂ ನೀಡಿಲ್ಲ. ಈ ವರ್ಗ ಎನ್‌ಇಪಿ ಜಾರಿಗೆ ವಿರೋಧ ವ್ಯಕ್ತಪಡಿಸುತ್ತಿದೆ.

**ನೀತಿಗೆ ವಿರೋಧ :** 3 ರಿಂದ 6 ವರ್ಷದೊಳಗಿನ ಮಕ್ಕಳಿಗೆ ಲಾಲನೆ–ಪಾಲನೆಯೊಂದಿಗೆ ಕಲಿಕೆ ನೀಡುವುದು ಸಮಗ್ರ ಶಿಶು ಅಭಿವೃದ್ಧಿ ಯೋಜನೆ (ಐಸಿಡಿಎಸ್)ಯ ಮುಖ್ಯ ಉದ್ದೇಶವಾಗಿದೆ.

ಈ ವಯಸ್ಸಿನ ಮಕ್ಕಳಿಗೆ ಸಾಂಪ್ರದಾಯಿಕ ಪಾಠ ಪ್ರವಚನ ನೀಡುವುದು ಸರಿಯಲ್ಲ. ಜೊತೆಗೆ ಈ ವಯೋಮಾನದ ಮಕ್ಕಳ ದೈಹಿಕ, ಮಾನಸಿಕ ವೃದ್ಧಿಗೆ ಐಸಿಡಿಎಸ್ ಪೂರಕ ವ್ಯವಸ್ಥೆಯಾಗಿದ್ದು, 1975 ರಿಂದಲೂ ಮಾನವ ಸಂಪನ್ಮೂಲ ವೃದ್ಧಿಗೆ ಶ್ರಮಿಸಿದೆ.

1974ರ ಮಕ್ಕಳ ರಾಷ್ಟ್ರೀಯ ನೀತಿ, 1975ರ ಐಸಿಡಿಎಸ್ ಯೋಜನೆ, 2002ರ ವಿಶ್ವಸಂಸ್ಥೆಯ ಘೋಷಣೆ ಸೇರಿದಂತೆ ನಾನಾ ನೀತಿಗಳಿಗೆ ಎನ್‌ಇಪಿ ವಿರುದ್ಧವಾಗಿದ್ದು ರಾಜ್ಯ ಸರ್ಕಾರ ಜಾರಿಗೊಳಿಸಬಾರದು ಎಂದು ಅಂಗನವಾಡಿ ನೌಕರರ ಸಂಘ ಒತ್ತಾಯಿಸುತ್ತಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 22.10.2021

## 36. ಕಂದಾಯ ಗ್ರಾಮ ಯೋಜನೆಗೆ ಎಲ್ಲ ಜನವಸತಿ ಪ್ರದೇಶ ಸೇರ್ಪಡೆ

ರಾಜ್ಯದಲ್ಲಿರುವ ಹಟ್ಟಿ ತಾಂಡಾ, ದೊಡ್ಡಿ ಸೇರಿದಂತೆ ಎಲ್ಲ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳನ್ನಾಗಿ ಮಾಡುವ ಪ್ರಕ್ರಿಯೆ ತೀವ್ರಗೊಳಿಸಲಾಗಿದೆ ಎಂದು ಕಂದಾಯ ಸಚಿವ ಆರ್.ಅಶೋಕ್ ಹೇಳಿದ್ದಾರೆ.

'ಉದಯವಾಣಿ' ಸಂವಾದದಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ರಾಜ್ಯದಲ್ಲಿ ಸುಮಾರು 25 ಸಾವಿರಕ್ಕೂ ಹೆಚ್ಚು ಜನ ವಸತಿ ಪ್ರದೇಶಗಳು ಕಂದಾಯ ವ್ಯಾಪ್ತಿಯಿಂದ ಹೊರಗುಳಿದಿದ್ದು ಅಲ್ಲಿ ವಾಸ ಮಾಡುವ ಜನರಿಗೆ ಸರ್ಕಾರದ ಯಾವುದೇ ಸವಲತ್ತುಗಳು ದೊರೆಯದಂತಾಗಿದೆ. ಲಂಬಾಣಿ ತಾಂಡಾ, ಗೊಲ್ಲರ ಹಟ್ಟಿ, ಗೌಳಿ ದಡ್ಡಿಗಳು ಸೇರಿದಂತೆ ಕಂದಾಯ ಗ್ರಾಮದಿಂದ 1 ಕಿ.ಮೀ. ದೂರದಲ್ಲಿ ಕನಿಷ್ಠ 50 ಮನೆ ಹಾಗು 150 ಜನರು ವಾಸಿಸುವ ಪ್ರದೇಶಗಳನ್ನು ಕಂದಾಯ ಗ್ರಾಮಗಳನ್ನಾಗಿ ಘೋಷಣೆ ಮಾಡಲಾಗುತ್ತಿದೆ ಎಂದು ತಿಳಿಸಿದ್ದಾರೆ.

ಅರಣ್ಯ ಇಲಾಖೆ ವ್ಯಾಪ್ತಿಯಲ್ಲಿ ಅನೇಕ ಜನರು ವಾಸವಾಗಿದ್ದು, ಅವರಿಗೂ ಯಾವುದೇ ಹಕ್ಕು ಪತ್ರ ನೀಡಲು ಸಾಧ್ಯವಾಗುತ್ತಿಲ್ಲ. ಅರಣ್ಯ ಇಲಾಖೆಯ ಜೊತೆ ಸಭೆ ನಡೆಯಲಾಗಿದ್ದು, ಅರಣ್ಯ ಮತ್ತು ಕಂದಾಯ ಇಲಾಖೆಯ ನಡುವೆ ಸುಮಾರು 9 ಲಕ್ಷ ಹೆಕ್ಟೇರ್ ಪ್ರದೇಶ ಗೊಂದಲದಲ್ಲಿದೆ. ಅದರಲ್ಲಿ 6 ಲಕ್ಷ ಹೆಕ್ಟೇರ್ ಪ್ರದೇಶವನ್ನು ಅರಣ್ಯ ಇಲಾಖೆಯಿಂದ ಕಂದಾಯ ಇಲಾಖೆಗೆ ಬಿಟ್ಟು ಕೊಡುವ ಬಗ್ಗೆ ಮಾತುಕತೆ ನಡೆಸಲಾಗಿದೆ. ಈ ಬಳಿಕ ಅಲ್ಲಿ ಅನಧಿಕೃತವಾಗಿ ವಾಸವಾಗಿರುವ ಹಾಗೂ ಉಳುಮೆ ಮಾಡುತ್ತಿರುವ ರೈತರಿಗೆ ಸರ್ಕಾರದ ಮಾರ್ಗಸೂಚಿ ದರದಂತೆ ಜಮೀನು ನೀಡಲಾಗುವುದು. ಅವರು ವಾಸಿಸುವ ಮನೆಗಳನ್ನು ಅವರ ಹೆಸರಿಗೆ ಮಾಡಿಕೊಡಲಾಗುವುದು ಎಂದು ಹೇಳಿದರು.

ಕೃಷಿ ಭೂಮಿಯನ್ನು ಕೃಷಿಕರಲ್ಲದವರು ಖರೀದಿಸಲು ಅಡ್ಡಿಯಾಗಿದ್ದ ಭೂ ಕಂದಾಯ ಕಾಯ್ದೆಯಲ್ಲಿನ ಕಲಂ 79ಎ ಮತ್ತು ಬಿ ಸೆಕ್ಷನ್ ರದ್ದುಗೊಳಿಸುವ ನಿರ್ಧಾರ ಕ್ರಾಂತಿಕಾರಕವಾಗಿದೆ. ಇದರಿಂದ ರಾಜ್ಯಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಬಂಡವಾಳ ಹರಿದು ಬರುತ್ತಿದ್ದು, ಕೃಷಿ ಭೂಮಿಯ ಬೆಲೆ ಹೆಚ್ಚಳವಾಗಿದ್ದಲ್ಲದೇ ಕೃಷಿ ಆದಾಯವು ಹೆಚ್ಚಾಗಿದೆ ಎಂದು ಹೇಳಿದರು.

ರಾಜ್ಯದಲ್ಲಿ ಸುಮಾರು 3 ಲಕ್ಷ ಹೆಕ್ಟೇರ್ ಭೂಮಿ ಪಾಳು ಬಿದ್ದಿದೆ. ಈಗ ಕೃಷಿಕರಲ್ಲದವರೂ ಕೃಷಿ ಭೂಮಿ ಖರೀದಿಸಲು ಅವಕಾಶ ಕಲ್ಪಿಸಿದ್ದರಿಂದ ಐಟಿ, ಬಿಟಿ ಕ್ಷೇತ್ರದಲ್ಲಿರುವವರು ಹಳ್ಳಿಗಳಿಗೆ ತೆರಳಿ ಕೃಷಿ ಮಾಡುತ್ತಿದ್ದು, ವೈಜ್ಞಾನಿಕ ರೀತಿಯಲ್ಲಿ ಕೃಷಿ ಮಾಡಿ ಹೆಚ್ಚಿನ ಉತ್ಪಾದನೆ ಮಾಡುತ್ತಿದ್ದಾರೆ. ಸಾಂಪ್ರದಾಯಿಕ ಪದ್ಧತಿಯಲ್ಲಿಯೇ ಕೃಷಿ ಮಾಡುವ ರೈತರು ಹೊಸ ಕೃಷಿ ವ್ಯವಸ್ಥೆ ಅಳವಡಿಸಿಕೊಳ್ಳಲು ಮುಂದಾಗುತ್ತಿದ್ದಾರೆ ಎಂದು ಸಚಿವರು ಹೇಳಿದರು.

ರೈತರನ್ನು ಕಪಿಮುಷ್ಠಿಯಲ್ಲಿಟ್ಟುಕೊಂಡವರು ಭೂ ಕಂದಾಯ ಕಾಯ್ದೆಯ 79ಎ ಮತ್ತು ಬಿ ಸೆಕ್ಷನ್ ತಿದ್ದುಪಡಿ ಮಾಡಲು ವಿರೋಧ ವ್ಯಕ್ತಪಡಿಸಿದ್ದರು. ಈ ಕಾಯ್ದೆ ತಿದ್ದುಪಡಿಯಿಂದ ರೈತರಿಗೆ ಅನುಕೂಲವಾಗಿದೆ. ಈ ಕಾಯ್ದೆಯ ಹೆಸರಿನಲ್ಲಿ ಪ್ರತಿ ವರ್ಷ ರೂ. 300 ರಿಂದ 400 ಕೋಟಿ ಲೂಟಿ ಮಾಡಲಾಗುತ್ತಿತ್ತು ಎಂದು ಸಚಿವರು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ: 23.10.2021

## 37. ಶಿಕ್ಷಕರ ಕೊರತೆ ಸವಾಲ್

ರಾಜ್ಯಾದ್ಯಂತ ಈಗಾಗಲೇ 30 ಸಾವಿರ ಶಿಕ್ಷಕರ ಕೊರತೆ ಇದೆ. ರಾಷ್ಟ್ರೀಯ ಶಿಕ್ಷಣ ನೀತಿ (ಎನ್‌ಇಪಿ) ಜಾರಿಗೊಳಿಸಿದರೆ ಈ ಕೊರತೆ ಸುಮಾರು 70 ಸಾವಿರಕ್ಕೆ ಏರಲಿದೆ. ಪ್ರಸ್ತುತ 70 ಮಕ್ಕಳಿಗೊಬ್ಬ ಶಿಕ್ಷಕರು ಎಂಬ ನಿಯಮ ಪಾಲಿಸಲಾಗುತ್ತಿದೆ. ಎನ್‌ಇಪಿ ಯಿಂದ ಈ ಅನುಪಾತ 30:1ಕ್ಕೆ ಇಳಿಯಲಿರುವುದರಿಂದ ಶಿಕ್ಷಕರ ಅಭಾವ ತೀವ್ರವಾಗಲಿದೆ.

ಕಲ್ಯಾಣ ಕರ್ನಾಟಕ ಭಾಗದಲ್ಲಿ ಪ್ರಾಥಮಿಕ ಶಾಲಾವಾರು 34,768 ಶಿಕ್ಷಕರಿದ್ದು, ಒಟ್ಟು 8,848 ಶಿಕ್ಷಕ ಹುದ್ದೆಗಳು ಖಾಲಿ ಉಳಿದಿವೆ. 6 ಸಾವಿರ ಮಂದಿ ವರ್ಗಾವಣೆಗೆ ಕಾಯುತ್ತಿದ್ದಾರೆ. ಸರ್ಕಾರ ಸಾಕಷ್ಟು ಪ್ರಮಾಣದಲ್ಲಿ ಶಿಕ್ಷಕರನ್ನು ನೇಮಿಸುವತ್ತ ಗಮನಹರಿಸಬೇಕಿದೆ.

ಎನ್‌ಇಪಿ ಅಡಿ 10 ರಿಂದ 12 ಭಾಷೆಗಳ ಪೈಕಿ ವಿದ್ಯಾರ್ಥಿಗಳು ತಮ್ಮಗಿಷ್ಟವಿರುವ 2 ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬಹುದಾಗಿದೆ. ವಿಷಯವಾರು ಅವಕಾಶ ಸಿಗುವ ಹಿನ್ನೆಲೆಯಲ್ಲಿ ವಿಭಾಗಗಳ ಸಂಖ್ಯೆ ನಿರೀಕ್ಷೆ ಮೀರಿ ಬೆಳೆಯಲಿದೆ. ಜೊತೆಗೆ 9ರ ನಂತರ ವೃತ್ತಿ ಆಧಾರಿತ ಶಿಕ್ಷಣ ನೀಡಬೇಕಿರುವುದರಿಂದ ಹಾಲಿ ಶಿಕ್ಷಕರಿಗೆ ಅಗತ್ಯ ಕೌಶಲ ಮತ್ತು ಹೊಸ ಶಿಕ್ಷಕರ ನೇಮಕ ಪ್ರಮುಖವಾಗಿದೆ. ಎನ್‌ಇಪಿ ಪ್ರಕಾರ 6 ರಿಂದ 8ಕ್ಕೆ ಪದವೀಧರ ಶಿಕ್ಷಕರು, 9 ರಿಂದ 12ಕ್ಕೆ ಸ್ನಾತಕೋತ್ತರ ಮುಗಿಸಿದ ಶಿಕ್ಷಕರ ನಿಯೋಜನೆಯಾಗಬೇಕಾಗಿದ್ದು, ಪ್ರಸ್ತುತ ಪ್ರೌಢ ಶಾಲಾ ಶಿಕ್ಷಕರಲ್ಲಿ ಅನೇಕರ ಸ್ಥಿತಿ ಏನಾಗಲಿದೆ ಎನ್ನುವ ಸ್ಪಷ್ಟತೆಯಿಲ್ಲ.

ರಾಜ್ಯದಲ್ಲಿ 43,712 ಸರ್ಕಾರಿ, 3,027 ಅನುದಾನಿತ ಪ್ರಾಥಮಿಕ ಶಾಲೆಗಳಿವೆ. ಶಿಕ್ಷಣ ಇಲಾಖೆ ಪ್ರಕಾರ ಪ್ರೌಢ ಶಾಲೆಗಳನ್ನೊಳಗೊಂಡಂತೆ ಪ್ರಸ್ತುತ ದಾಖಲಾತಿ 1.03 ಕೋಟಿ ಮುಟ್ಟಿದ್ದು, ವಿಶೇಷವಾಗಿ ಆಂಗ್ಲ ಮಾಧ್ಯಮದ ಶಾಲೆಗಳಲ್ಲಿ ಶಿಕ್ಷಕರಿಲ್ಲದೆ ವಿದ್ಯಾರ್ಥಿಗಳು ಕನ್ನಡದಲ್ಲೇ ಪಠ್ಯಗಳನ್ನು ಕೇಳಬೇಕಾದ ಸ್ಥಿತಿ ನಿರ್ಮಾಣವಾಗಿದೆ. ಪ್ರಸ್ತುತ ಮೊರಾರ್ಜಿ ವಸತಿ ಶಾಲೆ 40:1, ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ 50:1, ಕೆಪಿಎಸ್ 50:1, ನವೋದಯ 40:1 ಅನುಪಾತದಲ್ಲಿ ಶಿಕ್ಷಕರ ನಿಯೋಜನೆಯಿದ್ದು, ರಾಜ್ಯದ ಸಾಮಾನ್ಯ ಶಾಲೆಗಳಲ್ಲಿ 70:1 ರಂತೆ ಶಿಕ್ಷಕರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಎನ್‌ಇಪಿಯಿಂದ ಎಲ್ಲ ವರ್ಗಗಳಲ್ಲಿ ಅನುಪಾತ ಹೆಚ್ಚಲಿದೆ.

### ವಿಜ್ಞಾನ, ಗಣಿತಕ್ಕೆ ಹೆಚ್ಚು ಕೊರತೆ

ಪ್ರೌಢ ಶಾಲೆಗಳಿಗೆ ಸಂಬಂಧಿಸಿದಂತೆ ಗಣಿತ, ವಿಜ್ಞಾನ ಪಠ್ಯಗಳಲ್ಲಾಗಿರುವ ಬದಲಾವಣೆಗಳಿಗೆ ಪೂರಕ ಶಿಕ್ಷಕರ ನಿಯೋಜನೆಯಾಗಿಲ್ಲ. ಬಹುತೇಕ ಸರ್ಕಾರಿ ಶಾಲೆಗಳಲ್ಲಿ ಗಣಿತ, ವಿಜ್ಞಾನಕ್ಕೆ ಶಿಕ್ಷಕರ ಕೊರತೆ ಹೆಚ್ಚಾಗಿ ಕಾಡುತ್ತಿದೆ. ಎನ್‌ಇಪಿ ಜಾರಿಯಾದರೆ ಈ ವಿಷಯಗಳೇ ಪ್ರಧಾನವಾಗಲಿವೆ. ಆದರೆ ಈ ವಿಷಯಗಳಲ್ಲಿ ಪರಿಣಿತರ ಸಂಖ್ಯೆ ತೀರಾ ವಿರಳವಿದೆ. ವಿಶೇಷವಾಗಿ ವಿಜ್ಞಾನದ ಜೀವಶಾಸ್ತ್ರಕ್ಕೆ ಸಂಬಂಧಿಸಿದಂತೆ ಕೇಂದ್ರ ಪಠ್ಯಕ್ರಮದ ಅಂಗಳು ಹೆಚ್ಚಿವೆ. ಗಣಿತದಲ್ಲೂ ಅನೇಕ ಬದಲಾವಣೆಗಳಾಗಿವೆ. ಇರುವ ಶಿಕ್ಷಕರಿಗೆ ತರಬೇತಿ ಅಗತ್ಯವಿದೆ. ಎನ್‌ಇಪಿ ಜಾರಿಯಿಂದ ಈ ಕೊರತೆ ಮತ್ತಷ್ಟು ಹೆಚ್ಚಲಿದೆ.

**ಕಲ್ಯಾಣ ಕರ್ನಾಟಕದಲ್ಲಿ ತೀವ್ರ ಸಮಸ್ಯೆ**

| ಜಿಲ್ಲೆ | ಮಂಜೂರಾದ ಹುದ್ದೆ | ಖಾಲಿ ಹುದ್ದೆ |
|---|---|---|
| ಕಲಬುರ್ಗಿ | 9651 | 1805 |
| ಯಾದಗಿರಿ | 5667 | 1920 |
| ಬಳ್ಳಾರಿ | 8305 | 1581 |
| ರಾಯಚೂರು | 8073 | 1785 |
| ಕೊಪ್ಪಳ | 5917 | 1312 |
| ಬೀದರ್ | 6003 | 445 |
| **ಒಟ್ಟು** | **43,616** | **8848** |

ಆಧಾರ: ವಿಜಯ ಕರ್ನಾಟಕ, ದಿನಾಂಕ: 23.10.2021

## 38. ಧಾರ್ಮಿಕ ಕಟ್ಟಡ ರಕ್ಷಣೆ ಕಾಯಿದೆಗೆ ಅಂಕಿತ

ರಾಜ್ಯದಲ್ಲಿ ಸಾರ್ವಜನಿಕ ಸ್ಥಳಗಳಲ್ಲಿರುವ ಎಲ್ಲ 'ಅನಧಿಕೃತ ಧಾರ್ಮಿಕ ಕಟ್ಟಡ'ಗಳನ್ನು ರಕ್ಷಿಸುವ ಸಲುವಾಗಿ ಸರ್ಕಾರ ಮಂಡಿಸಿದ್ದ 'ಕರ್ನಾಟಕ ಧಾರ್ಮಿಕ ಕಟ್ಟಡಗಳ (ಸಂರಕ್ಷಣೆ) ವಿಧೇಯಕ'ಕ್ಕೆ ರಾಜ್ಯಪಾಲರು ಅಂಕಿತ ಹಾಕಿದ್ದು, ಅಂತಿಮ ಅಧಿಸೂಚನೆ ಹೊರಬಿದ್ದಿದೆ.

ನಂಜನಗೂಡಿನಲ್ಲಿ ದೇವಸ್ಥಾನವೊಂದರ ತೆರವು ಘಟನೆಗೆ ವ್ಯಾಪಕ ವಿರೋಧ ವ್ಯಕ್ತವಾದ ಬೆನ್ನಲ್ಲೇ ರಾಜ್ಯದಲ್ಲಿ ಈವರೆಗೆ ಸಾರ್ವಜನಿಕ ಸಂಸ್ಥೆಗಳಲ್ಲಿರುವ ಅನಧಿಕೃತ ಧಾರ್ಮಿಕ ಕಟ್ಟಡಗಳನ್ನು ಸಂರಕ್ಷಣೆಗೆ ಸರ್ಕಾರ ಮುಂದಾಗಿತ್ತು. ಸೆಪ್ಟೆಂಬರ್‌ನಲ್ಲಿ ನಡೆದ ವಿಧಾನಮಂಡಲ ಅಧಿವೇಶನದಲ್ಲಿ ಮಂಡನೆಯಾದ ವಿಧೇಯಕ ಉಭಯ ಸದನಗಳಲ್ಲಿ ಅಂಗೀಕಾರವಾಗಿತ್ತು.

ಪರಿಷತ್‌ನಲ್ಲಿ ವಿಧೇಯಕ ಅಂಗೀಕೃತವಾಗಿದ್ದರೂ ಸಭಾಪತಿ ಬಸವರಾಜ ಹೊರಟ್ಟಿ ಅವರು ಆ ಸಂದರ್ಭದಲ್ಲಿ ಪ್ರವಾಸದಲ್ಲಿದ್ದ ಕಾರಣಕ್ಕೆ ಸಹಿಯಾಗಿರಲಿಲ್ಲ. ನಂತರ ಅವರ ಸಹಿ ಪಡೆದು ರಾಜ್ಯಪಾಲರ ಅಂಕಿತಕ್ಕಾಗಿ ಕಳುಹಿಸಲಾಗಿತ್ತು. ಅದರಂತೆ ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್ ಅವರು ಅಂಕಿತ ಹಾಕಿದ್ದು, ರಾಜ್ಯಪತ್ರ ಪ್ರಕಟಿಸಲಾಗಿದೆ. ಆ ಮೂಲಕ ಕಾಯಿದೆ ಜಾರಿಯಾಗಿದ್ದು, ಸರ್ಕಾರ ಸೂಕ್ತ ನಿಯಮಾವಳಿ ರೂಪಿಸಬೇಕಿದೆ.

ರಾಜ್ಯದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನು, ನ್ಯಾಯಾಲಯ, ನ್ಯಾಯಾಧೀಕರಣ / ಪ್ರಾಧಿಕಾರದ ಯಾವುದೇ ತೀರ್ಪು, ಪ್ರತಿಬಂಧಕ (ಡಿಕ್ರಿ) ಅಥವಾ ಆದೇಶವಿದ್ದರೂ ಕಾಯಿದೆ ಜಾರಿಯಾದ ದಿನದವರೆಗೆ ಅಸ್ತಿತ್ವದಲ್ಲಿರುವ ಧಾರ್ಮಿಕ ಕಟ್ಟಡಗಳನ್ನು (ದೇವಸ್ಥಾನ, ಚರ್ಚ್, ಮಸೀದಿ, ಗುರುದ್ವಾರ, ಬೌದ್ಧ ವಿಹಾರ, ಮಜರ್ ಇತರೆ) ಸಂರಕ್ಷಿಸಲು ಅವಕಾಶ ಕಲ್ಪಿಸಲಾಗಿದೆ. ಆದರೆ ತೆರವಿಗೆ ಸಂಬಂಧಪಟ್ಟಂತೆ ಯಾವುದೇ ಪ್ರಕರಣವು ಯಾವುದೇ ನ್ಯಾಯಾಲಯದಲ್ಲಿ ಇತ್ಯರ್ಥದ ಹಂತದಲ್ಲಿದ್ದರೆ ಸಂರಕ್ಷಿಸುವಂತಿಲ್ಲ ಎಂದು ಸ್ಪಷ್ಟವಾಗಿ ತಿಳಿಸಲಾಗಿದೆ.

ಸರ್ಕಾರ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರವು ಭವಿಷ್ಯದಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ಯಾವುದೇ ಧಾರ್ಮಿಕ ಕಟ್ಟಡ ನಿರ್ಮಾಣಕ್ಕೆ ಸೂಕ್ತ ಪರವಾನಿಗಿ ಇಲ್ಲದೆ (ಅನಧಿಕೃತವಾಗಿ ನಿರ್ಮಾಣಕ್ಕೆ)

ಅವಕಾಶ ನೀಡುವಂತಿಲ್ಲ. ರೂಢಿ, ರಿವಾಜು, ಕಾನೂನು ಹಾಗೂ ಸರ್ಕಾರ ಆಗಾಗ ವಿಧಿಸುವ ಷರತ್ತುಗಳಿಗೆ ಒಳಪಟ್ಟಂತೆ ಸಂರಕ್ಷಿತ ಕಟ್ಟಡಗಳಲ್ಲಿ ಧಾರ್ಮಿಕ ಚಟುವಟಿಕೆ ನಡೆಸಲು ಜಿಲ್ಲಾಡಳಿತ ಅವಕಾಶ ಕಲ್ಪಿಸಲು ಕಾಯಿದೆ ಆಸ್ಪದ ನೀಡಿದೆ.

ಸರ್ಕಾರ ಅಥವಾ ಸರ್ಕಾರಿ ಅಧಿಕಾರಿ, ನೌಕರರು ಈ ಕಾಯಿದೆಯಡಿ ರಚಿಸಿದ ನಿಯಮಗಳಡಿ ಯಾವುದೇ ಕ್ರಮ ಕೈಗೊಂಡಿದ್ದರೆ ಅಥವಾ ಕ್ರಮಕೈಗೊಳ್ಳಲು ಉದ್ದೇಶಿಸಿದ್ದರೂ ಅವರ ವಿರುದ್ಧ ಯಾವುದೇ ಕಾನೂನು ಕ್ರಮ ಜರುಗಿಸುವಂತಿಲ್ಲ. ಕಾಯಿದೆ ಜಾರಿಯಾಗಿ ಎರಡು ವರ್ಷ ಮುಗಿದ ಬಳಿಕ ಇಂತಹ ಯಾವುದೇ ಆದೇಶ ಹೊರಡಿಸಲು ಅವಕಾಶವಿಲ್ಲ ಎಂದು ಕಾಯಿದೆಯಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 24.10.2021

## 39. ಕಿತ್ತೂರು ಕರ್ನಾಟಕ

ಮುಂದಿನ ಸಚಿವ ಸಂಪುಟ ಸಭೆಯಲ್ಲೇ ಮುಂಬೈ–ಕರ್ನಾಟಕ ಪ್ರಾಂತ್ಯಕ್ಕೆ 'ಕಿತ್ತೂರು ಕರ್ನಾಟಕ' ಎಂದು ನಾಮಕರಣ ಮಾಡಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಪ್ರಕಟಿಸಿದರು.

ಚನ್ನಮ್ಮನ ಕಿತ್ತೂರಿನಲ್ಲಿ ಎರಡು ದಿನಗಳ 'ಕಿತ್ತೂರು ಉತ್ಸವ – 2021'ಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ರಾಜ್ಯಗಳ ಪುನರ್‌ವಿಂಗಡಣೆ ಬಳಿಕವು ಈ ಪ್ರಾಂತ್ಯಕ್ಕೆ ಮುಂಬೈ–ಕರ್ನಾಟಕ ಎಂದೇ ಕರೆಯಲಾಗುತ್ತಿದೆ. ಇದು ದಾಸ್ಯದ ಸಂಕೇತವು ಹೌದು. ಈ ಹಿನ್ನೆಲೆಯಲ್ಲಿ ಈ ಭಾಗದ ಜನರ ಬಹುಕಾಲದ ಬೇಡಿಕೆಯನ್ನು ಈಡೇರಿಸುವ ನಿಟ್ಟಿನಲ್ಲಿ ಮುಂದಿನ ಸಚಿವ ಸಂಪುಟ ಸಭೆಯಲ್ಲಿ ಈ ಬಗ್ಗೆ ನಿರ್ಧಾರ ತೆಗೆದುಕೊಳ್ಳಲಾಗುವುದು ಎಂದರು.

'ಕಿತ್ತೂರು ಉತ್ಸವ'ವನ್ನು ರಾಜ್ಯಮಟ್ಟದ ಉತ್ಸವವಾಗಿ ಘೋಷಿಸುವ ನಿಟ್ಟಿನಲ್ಲಿ ಸರ್ಕಾರ ಕೂಡಲೇ ಅಗತ್ಯ ಕ್ರಮವನ್ನು ಕೈಗೊಳ್ಳಲಿದೆ. ಈ ಹಿಂದೆ ತಾವು ಬೆಳಗಾವಿ ಜಿಲ್ಲಾ ಉಸ್ತುವಾರಿ ಸಚಿವರಾಗಿದ್ದಾಗ ರಾಜ್ಯವ್ಯಾಪ್ತಿ ಸಂಚರಿಸುತ್ತಿದ್ದ ಕಿತ್ತೂರು ಜ್ಯೋತಿ ಯಾತ್ರೆ ಈಗ ಬೆಳಗಾವಿ ಜಿಲ್ಲೆಗೆ ಮಾತ್ರ ಸೀಮಿತವಾಗಿದೆ. ಮುಂದಿನ ವರ್ಷದಿಂದ ಮತ್ತೆ ರಾಜ್ಯಾದ್ಯಂತ ಸಂಚರಿಸುವಂತೆ ಆದೇಶಿಸಿದರು. ಕಿತ್ತೂರಿನಲ್ಲಿ ಈಗ ಗಮನಾರ್ಹ ಪ್ರಗತಿ ಆಗಿದೆ. ಅಭಿವೃದ್ಧಿ ಪ್ರಾಧಿಕಾರದ ಮಾಸ್ಟರ್ ಪ್ಲಾನ್‌ಗೆ ಒಟ್ಟಾರೆ 200 ಕೋಟಿ ರೂಪಾಯಿ ಅನುದಾನ ನೀಡಬೇಕು ಎಂಬ ಬೇಡಿಕೆ ಇದೆ. ಮುಂದಿನ ಆಯವ್ಯಯದಲ್ಲಿ ಪ್ರಾಧಿಕಾರಕ್ಕೆ ಇನ್ನೂ ಹೆಚ್ಚಿನ ಅನುದಾನ ನೀಡಲಾಗುವುದು ಎಂದು ಭರವಸೆ ನೀಡಿದರು.

ಕಿತ್ತೂರು ಚನ್ನಮ್ಮ ಝಾನ್ಸಿ ರಾಣಿಗಿಂತ 40 ವರ್ಷಗಳ ಮುಂಚೆಯೇ ಸ್ವಾತಂತ್ರ್ಯಕ್ಕಾಗಿ ಕತ್ತಿ ಝಳಪಿಸಿದಳು. ಈ ಐತಿಹಾಸಿಕ ಸಾಧನೆಯನ್ನು ಜಗತ್ತಿಗೆ ಸಾರುವ ಮೂಲಕ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಪ್ರಪಥಮ ಮಹಿಳೆ ಎಂಬುದನ್ನು ಸಾಬೀತುಪಡಿಸಬೇಕಿದೆ. ಬ್ರಿಟೀಷರ ವಿರುದ್ಧ ಹೋರಾಡಿದ ಕಿತ್ತೂರು ಚನ್ನಮ್ಮ ಇಂದಿನ ಯುವ ಸಮುದಾಯ ಹಾಗೂ ಮಹಿಳೆಯರಿಗೆ ಪ್ರೇರಣೆಯಾಗಿದ್ದಾರೆ ಎಂದರು.

**ಕಿತ್ತೂರು ಕರ್ನಾಟಕವೇ ಏಕೆ?** ಉತ್ತರ ಕರ್ನಾಟಕ ಭಾಗದಲ್ಲಿ ಬೆಳಗಾವಿ ಗಡಿ ವಿವಾದ ಮೇಲಿಂದ ಮೇಲೆ ಸದ್ದು ಮಾಡುತ್ತಲೇ ಇರುತ್ತದೆ. ಆದರೆ, ಕನ್ನಡಿಗರು ಮತ್ತು ಕನ್ನಡತನದ ದಾಸ್ಯದ ಸಂಕೇತ ಎನ್ನುವಂತೆ ಈ ಭಾಗದಲ್ಲಿನ ಅನೇಕ ಸರ್ಕಾರಿ ಕಾಗದ ಪತ್ರಗಳು, ಖಾಸಗಿ ಸಂಸ್ಥೆಗಳಲ್ಲಿನ ವ್ಯವಹಾರಗಳು, ದಾಖಲೆಗಳು ಈಗಲೂ ಕೂಡ ಮುಂಬೈ ಕರ್ನಾಟಕ ಎನ್ನುವ ಹೆಸರಿನಲ್ಲಿಯೇ ಪ್ರಚಲಿತದಲ್ಲಿವೆ. ಹೈದ್ರಾಬಾದ್ ಸಂಸ್ಥಾನಕ್ಕೆ ಸೇರಿದ್ದ ಮತ್ತು ಸ್ವಾತಂತ್ರ್ಯದ ನಂತರ ಮಹಾರಾಷ್ಟ್ರ ರಾಜ್ಯಕ್ಕೆ ಸೇರ್ಪಡೆಗೊಂಡ ಪ್ರದೇಶಕ್ಕೆ ಅಂದಿನ ಮುಂಬೈ ಪ್ರಾಂತ್ಯ ಸರ್ಕಾರ ಈ ಭಾಗಕ್ಕೆ ಮರಾಠವಾಡಾ ಎಂದು ಹೆಸರಿಟ್ಟಿತು.

ಈ ಪ್ರಾಂತ್ಯದಲ್ಲಿ ಔರಂಗಬಾದ, ಬೀಡ, ಹಿಂಗೋಲಿ, ಜಲನಾ, ನಾಂದೇಡ, ಲಾತೂರ್, ಓಸ್ಮನಾಬಾದ ಮತ್ತು ಪ್ರಭಾವಿ ಎಂದು ಎಂಟು ಜಿಲ್ಲೆಗಳಿದ್ದು ಔರಾಂಗಾಬಾದ ವಿಭಾಗಕ್ಕೆ ಸೇರಿವೆ. 1950ರ ದಶಕದಿಂದಲೂ ತಮ್ಮ ಭಾಷಾ ಅಸ್ಮಿತೆ ಸಲುವಾಗಿ ಅಲ್ಲಿನ ಸರ್ಕಾರ ಈ ಭಾಗದಲ್ಲಿ ಸ್ಥಾಪಿಸಿದ ಅನೇಕ ವಿಶ್ವವಿದ್ಯಾಲಯಗಳು, ಸಂಶೋಧನಾ ಸಂಸ್ಥೆಗಳು, ಅಭಿವೃದ್ಧಿ ಯೋಜನೆಗಳಿಗೆ ಮರಾಠವಾಡ ಯೋಜನೆ ಎಂದೇ ಹೆಸರಿಸುತ್ತ ಬಂದಿವೆ.

**ಗಂಡು ಮೆಟ್ಟಿದ ನಾಡು :** ಕಿತ್ತೂರಿನ ಸ್ವಾತಂತ್ರ್ಯ ಸಂಗ್ರಾಮ ಮತ್ತು ನಂತರ ನಡೆದ ಸ್ವಾತಂತ್ರ ಚಳುವಳಿಗಳು ಈ ಪ್ರದೇಶವನ್ನು ಗಂಡು ಮೆಟ್ಟಿದ ನಾಡು ಎಂದು ಕರೆಯುವಂತೆ ಮಾಡಿವೆ. ಸ್ವಾತಂತ್ರ್ಯ ಚಳುವಳಿಗೆ ಇಡೀ ಕರ್ನಾಟಕದಲ್ಲಿಯೇ ಮೊದಲು ಸ್ಪಂದಿಸಿದ್ದು ಇದೇ ಭಾಗ, ಕರ್ನಾಟಕ ಏಕೀಕರಣ ಚಳವಳಿ, ರೈತ ಚಳವಳಿ, ಬಂಡಾಯ, ದಲಿತ ಚಳವಳಿ, ಗೋಕಾಕ ಚಳವಳಿ, ಕಳಸಾ ಬಂಡೂರಿ ಹೋರಾಟ. ಎಲ್ಲಾ ಚಳವಳಿಗಳಿಗೂ ಇಲ್ಲಿ ಸ್ಪೂರ್ತಿಯಾಗಿ ನಿಂತಿರುವಂಥದ್ದು ಕಿತ್ತೂರಿನ ಕ್ರಾಂತಿ. ಈ ಪ್ರದೇಶಕ್ಕೆ ಕಿತ್ತೂರು ಕರ್ನಾಟಕವೇ ಸೂಕ್ತ ಎಂದು ಇತಿಹಾಸಕಾರರು ಮತ್ತು ಸಂಶೋಧಕರು ಹೇಳಿದ್ದರು.

ಆಧಾರ: ವಿಜಯವಾಣಿ, ದಿನಾಂಕ: 24.10.2021

## 40. ವಸತಿ ಕಾಲೇಜುಗಳಲ್ಲಿ ಹೆಣ್ಮಕ್ಕಳಿಗೆ ಕರಾಟೆ ಕ್ಲಾಸ್

ರಾಜ್ಯದಲ್ಲಿ ಮಹಿಳೆಯಿರಿಗೆ ಆತ್ಮಸ್ಥೆರ್ಯ, ಆತ್ಮರಕ್ಷಣೆ ಕೌಶಲ್ಯ ವೃದ್ಧಿಸುವಂತೆ ಮಾಡಲು ಸಮಾಜ ಕಲ್ಯಾಣ ಇಲಾಖೆ ಅಡಿ ಬರುವ ವಸತಿ ಕಾಲೇಜುಗಳಲ್ಲಿ ವಿದ್ಯಾರ್ಥಿನಿಯರಿಗೆ ಕರಾಟೆ ತರಬೇತಿ ನೀಡಲಾಗುವುದು ಎಂದು ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಸಚಿವ ಕೋಟ ಶ್ರೀನಿವಾಸ ಪೂಜಾರಿ ತಿಳಿಸಿದರು.

'ಏಷ್ಯಾನೆಟ್ ಸುವರ್ಣ ನ್ಯೂಸ್' ಮತ್ತು 'ಕನ್ನಡಪ್ರಭ' ಏರ್ಪಡಿಸಿದ್ದ 'ಹಲೋ ಮಿನಿಸ್ಟರ್' ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಸಮಾಜದಲ್ಲಿ ಯುವತಿಯರು ಹಾಗೂ ಮಹಿಳೆಯರಿಗೆ ಅಭದ್ರತೆ ಕಾಡಬಾರದು. ಎಸ್ಸೆಸ್ಸೆಲ್ಸಿ ಬಳಿಕ ವಿದ್ಯಾರ್ಥಿನಿಯರಿಗೆ ಕಾಲೇಜು ಹಂತದಲ್ಲೇ 2–3 ವರ್ಷ ಕರಾಟೆ ತರಬೇತಿ ನೀಡಲಿದ್ದು, ಬ್ಲಾಕ್‌ಬೆಲ್ಟ್ ಪೂರೈಸಿದ ಬಳಿಕ ಆತ್ಮವಿಶ್ವಾಸದಿಂದ ಸಮಾಜದಲ್ಲಿ ತೊಡಗಿಸಿಕೊಳ್ಳಬಹುದು ಎಂದರು.

ರಾಜ್ಯದಲ್ಲಿ ಮೊರಾರ್ಜಿ ದೇಸಾಯಿ ಪದವಿಪೂರ್ವ ವಿಜ್ಞಾನ ವಸತಿ ಕಾಲೇಜು, ಅಟಲ್ ಬಿಹಾರಿ ವಾಜಪೇಯಿ ಪದವಿಪೂರ್ವ ವಿಜ್ಞಾನ ವಸತಿ ಕಾಲೇಜು, ಪರಿಶಿಷ್ಟ ವರ್ಗದ ಏಕಲವ್ಯ ಮಾದರಿ ವಸತಿ ಕಾಲೇಜು, ಕಿತ್ತೂರು ರಾಣಿ ಚೆನ್ನಮ್ಮ ಪದವಿಪೂರ್ವ ವಸತಿ ಕಾಲೇಜು ಸೇರಿದಂತೆ 74 ವಸತಿ ಕಾಲೇಜುಗಳಿದ್ದು, ಇವುಗಳಲ್ಲಿನ ಸಾವಿರಾರು ವಿದ್ಯಾರ್ಥಿನಿಯರಿಗೆ ಸರ್ಕಾರ ಸದ್ಯದಲ್ಲೇ ಕರಾಟೆ ತರಬೇತಿ ನೀಡಲಿದೆ.

**ಅಸ್ಪೃಶ್ಯತೆ ನಿವಾರಣೆಗೆ ಅಭಿಯಾನ:** ಅಸ್ಪೃಶ್ಯತೆ ಆಚರಣೆ, ಸಾಮಾಜಿಕ ಬಹಿಷ್ಕಾರದಂಥ ಹೃದಯ ವಿದ್ರಾವಕ ಸುದ್ದಿಗಳನ್ನು ಕಾರ್ಯಕ್ರಮದಲ್ಲಿ ನೋಡಿ ವಿಚಲಿತರಾದ ಸಚಿವರು ಸ್ಥಳದಲ್ಲೇ ಪರಿಹಾರದ ಭರವಸೆ ನೀಡಿದರು. ಜೊತೆಗೆ, ಇದೊಂದು ಕಳಂಕದ ವಿಚಾರ. ಇತ್ತೀಚೆಗೆ ಕೊಪ್ಪಳ ಜಿಲ್ಲೆಯಲ್ಲಿ 'ವಿನಯ' ಎಂಬ ಹೆಸರಿನ 2 ವರ್ಷದ ಮಗು ಪೋಷಕರ ಕೈ ತಪ್ಪಿಸಿ ದೇವಸ್ಥಾನಕ್ಕೆ ಹೋದಾಗ ಊರಿನವರು ರೂ. 25 ಸಾವಿರ ದಂಡ ವಿಧಿಸಿದ್ದರು. ಇಂಥ ಹಲವು ಘಟನೆ ಗಮನಕ್ಕೆ ಬಂದಿದ್ದು, ಈ ಬಗ್ಗೆ ಜಾಗೃತಿ ಅಭಿಯಾನ ಹಮ್ಮಿಕೊಳ್ಳಲಾಗುತ್ತದೆ ಎಂದು ಘೋಷಿಸಿದರು.

**ಕಳಪೆ ಆಹಾರ ನೀಡಿದರೆ ಕ್ರಮ:** ಹಾಸ್ಟೆಲ್‌ಗಳ ಆಹಾರ ಪೂರೈಕೆಯಲ್ಲಿ ಅಕ್ರಮಗಳು ಪತ್ತೆಯಾಗಿವೆ. ಈ ಬಗ್ಗೆ ನಿಗಾ ಇಡಲು ಜಿಲ್ಲಾ ಮಟ್ಟದಲ್ಲಿ ಸಮಿತಿ ರಚಿಸಲಾಗುವುದು. ಕಳಪೆ ಆಹಾರ ಪೂರೈಸುವವರ

ವಿರುದ್ಧ ಕ್ರಿಮಿನಲ್ ಪ್ರಕರಣ ದಾಖಲಿಸಲಾಗುವುದು. ಇನ್ನು ಗುತ್ತಿಗೆ ಅಧಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಡುಗೆ ಸಹಾಯಕರಿಗೆ ಕೊರೋನಾ ಸಮಯದಲ್ಲಿನ ವೇತನದ ಅರ್ಧದಷ್ಟಾದರೂ ಪಾವತಿಸಲು ಹಣಕಾಸು ಇಲಾಖೆ ಜೊತೆ ಚರ್ಚಿಸಲಾಗಿದೆ. ವಿದ್ಯಾರ್ಥಿಗಳಿಗೆ ಬಾಕಿ ಇರುವ ವಿದ್ಯಾರ್ಥಿ ವೇತನಕ್ಕಾಗಿ 10.50 ಕೋಟಿ ಬಿಡುಗಡೆಗೆ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಸಮ್ಮತಿಸಿದ್ದು, ವಾರದೊಳಗೆ ಬಿಡುಗಡೆ ಮಾಡಲಾಗುವುದು ಎಂದು ಭರವಸೆ ನೀಡಿದರು.

**ಜಿಲ್ಲೆಗೊಂದು ನೀಟ್ ತರಬೇತಿ ಶಾಲೆ:** ಜಿಲ್ಲೆಗೊಂದು ನೀಟ್ ತರಬೇತಿ ಶಾಲೆ ಪ್ರಾರಂಭಿಸುವ ಬಗ್ಗೆ ಪರಿಶೀಲನೆ ನಡೆಸಲಾಗುವುದು. ಅನುಮೋದನೆ ಪಡೆಯದೆ 13 ಸಾವಿರ ವಿದ್ಯಾರ್ಥಿಗಳು ಮ್ಯಾನೇಜ್‌ಮೆಂಟ್ ಕೋಟಾದಡಿ ಸೇರ್ಪಡೆಯಾಗಿದ್ದು, ಅವರಿಗೆ ವಿದ್ಯಾರ್ಥಿವೇತನ ನೀಡಲು ಬರುವುದಿಲ್ಲ. ಆದರೂ ಮಾನವೀಯತೆ ದೃಷ್ಟಿಯಿಂದ ವಾರದೊಳಗೆ 9.5 ಕೋಟಿ ಬಿಡುಗಡೆ ಮಾಡುತ್ತೇವೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ: 24.10.2021

## 41. ರೂ. 9 ಸಾವಿರ ಕೋಟಿ ಕೃಷಿ ಸಾಲ ನೀಡಿಕೆ

ರಾಜ್ಯದ ರೈತರಿಗೆ ಕೃಷಿ ಸಾಲ ನೀಡುವಲ್ಲಿ ಕಳೆದ ವರ್ಷ ಗುರಿ ಸಾಧನೆ ಮಾಡಿದ್ದ ಸಹಕಾರ ಬ್ಯಾಂಕುಗಳು, ಈ ಸಾಲಿನಲ್ಲಿಯೂ ಶೇ.125 ಸಾಧನೆ ಮಾಡುವ ವಿಶ್ವಾಸ ಹೊಂದಿವೆ. ಎಲ್ಲ ರೈತರಿಗೂ ಸಾಲ ಸೌಲಭ್ಯ ಸಿಗಬೇಕೆಂಬ ನಿಟ್ಟಿನಲ್ಲಿ ಪ್ರಸಕ್ತ ಸಾಲಿನಲ್ಲಿ 30,85,644 ಜನರಿಗೆ ರೂ.20,810 ಕೋಟಿ ಕೃಷಿ ಸಾಲ ನೀಡುವ ಗುರಿ ಹಾಕಿಕೊಳ್ಳಲಾಗಿದೆ. ಈಗಾಗಲೆ 12,35,033 ರೈತರಿಗೆ ರೂ.9,136.89 ಕೋಟಿ ಸಾಲ ನೀಡಲಾಗಿದೆ ಎಂದು ಸಹಕಾರ ಸಚಿವ ಎಸ್.ಟಿ.ಸೋಮಶೇಖರ್ ತಿಳಿಸಿದ್ದಾರೆ.

**ಅಕ್ಟೋಬರ್‌ನಲ್ಲೇ ಶೇ.72.76 ಸಾಧನೆ:** ಪ್ರಸಕ್ತ ಸಾಲಿನ ಅಕ್ಟೋಬರ್ ತಿಂಗಳಿನಲ್ಲಿಯೇ ಅಲ್ಪಾವಧಿ, ಮಧ್ಯಮಾವಧಿ / ದೀರ್ಘಾವಧಿ ಸಾಲ ವಿತರಣೆಯಲ್ಲಿ ಗಮನಾರ್ಹ ಸಾಧನೆ ಮಾಡಲಾಗಿದೆ. ಅಲ್ಪಾವಧಿ ಸಾಲ ನೀಡಿಕೆ ವಿಭಾಗದಲ್ಲಿ 30,25,788 ರೈತರಿಗೆ ರೂ.19,370 ಕೋಟಿ. ಸಾಲ ನೀಡಿಕೆ ಗುರಿ ಹೊಂದಿದ್ದು, ಈಗಾಗಲೆ 12,25,027 ರೈತರಿಗೆ ರೂ.8,742.10 ಕೋಟಿ ಸಾಲ ವಿತರಿಸಿ ಶೇ. 45.55 ಸಾಧನೆ ತೋರಲಾಗಿದೆ. ಮಧ್ಯಮಾವಧಿ / ದೀರ್ಘಾವಧಿ ವಿಭಾಗದಲ್ಲಿ 59,856 ರೈತರಿಗೆ ರೂ.1,440 ಕೋಟಿ ಸಾಲ ನೀಡಿಕೆ ಗುರಿ ಹಾಕಿಕೊಳ್ಳಲಾಗಿದೆ. ಇದರಲ್ಲಿ 10,009 ರೈತರಿಗೆ ರೂ. 394.79 ಕೋಟಿ ಸಾಲವಾಗಿ ವಿತರಿಸಲಾಗಿದೆ ಎಂದಿದ್ದಾರೆ.

ಕಳೆದ ಸಾಲಿನಲ್ಲಿ 25.12 ಲಕ್ಷ ರೈತರಿಗೆ ರೂ.15,802 ಕೋಟಿ ಸಾಲ ನೀಡುವ ಗುರಿ ಹಾಕಿಕೊಳ್ಳಲಾಗಿತ್ತು. ನಾನು ಇಲಾಖೆಯಲ್ಲಿ ಕಾಲ ಕಾಲಕ್ಕೆ ಪ್ರಗತಿ ಪರಿಶೀಲನೆ ನಡೆಸಿದ್ದಲ್ಲದೆ, ಡಿಸಿಸಿ ಬ್ಯಾಂಕ್‌ಗಳಿಗೆ ಖುದ್ದು ಭೇಟಿ ನೀಡುವ ಮೂಲಕ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಸಾಕಷ್ಟು ಶ್ರಮವಹಿಸಿದ್ದೆ. ಬ್ಯಾಂಕ್‌ಗಳ ಕುಂದುಕೊರತೆಗಳನ್ನೂ ನಿವಾರಿಸಿದ್ದೆ. ಈ ನಿಟ್ಟಿನಲ್ಲಿ 21 ಡಿಸಿಸಿ ಬ್ಯಾಂಕ್‌ಗಳು ಅತ್ಯುತ್ತಮವಾಗಿ ಕಾರ್ಯನಿರ್ವಹಿಸಿದ್ದವು. ಇದರ ಪರಿಣಾಮವಾಗಿ 26,19,015 ರೈತರಿಗೆ ರೂ.17,901.21 ಕೋಟಿ. ಸಾಲ ವಿತರಿಸಿ ಒಟ್ಟು ಶೇಕಡ 115 ಸಾಧನೆ ತೋರಿದ್ದೇವೆ. ಈ ಬಾರಿ ನೂರಕ್ಕೆ ನೂರು ಗುರಿ ಮುಟ್ಟುವುದಲ್ಲದೆ, ಕಳೆದ ಬಾರಿಯ ಸಾಧನೆಗಿಂತಲೂ ಹೆಚ್ಚಿನ ಸಾಧನೆ ಮಾಡುವಲ್ಲಿ ನಮ್ಮೆಲ್ಲರ ಪ್ರಯತ್ನಗಳು ಸಾಗಿವೆ. ಪ್ರಸಕ್ತ ಬಾರಿ ಶೇ. 125 ಸಾಲ ನೀಡಿಕೆಯತ್ತ ಚಿತ್ತ ಹರಿಸಿದ್ದೇವೆ ಎಂದು ಹೇಳಿದ್ದಾರೆ.

**ಶೀಘ್ರ ಡಿಸಿಸಿ ಬ್ಯಾಂಕ್‌ಗಳ ಸಭೆ :** ಡಿಸಿಸಿ ಬ್ಯಾಂಕ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಭೆಯನ್ನು ಶೀಘ್ರದಲ್ಲೇ ಕರೆದು ಸಹಕಾರ ಇಲಾಖೆಯ ಹಿರಿಯ ಅಧಿಕಾರಿಗಳ ಜೊತೆ ಪ್ರಗತಿ ಪರಿಶೀಲನಾ ಸಭೆ ನಡೆಸಲಿದ್ದೇನೆ. ಈ ಮೂಲಕ ಬ್ಯಾಂಕ್‌ಗಳು ತೋರಿರುವ ಸಾಧನೆ, ಎದುರಿಸುತ್ತಿರುವ ಸಣ್ಣಪುಟ್ಟ

ತೊಡಕುಗಳು, ಸಮಸ್ಯೆಗಳ ಬಗ್ಗೆಯೂ ಚರ್ಚಿಸಿ, ಪರಿಹಾರಗಳನ್ನು ಸೂಚಿಸಲಾಗುವುದು ಎಂದು ಎಸ್.ಟಿ.ಸೋಮಶೇಖರ್ ತಿಳಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ: 25.10.2021

## 42. ಅಂಗೈನಲ್ಲೇ ಭೂಮಿ ಸರ್ವೆ

ರಾಜ್ಯದ ಜನತೆ ಇನ್ನೂ ಜಮೀನುಗಳ ಸರ್ವೆ ಮಾಡಲು ಸರ್ವೇಯರ್‌ಗಳಿಗೆ ತಿಂಗಳುಗಟ್ಟಲೆ ಕಾಯುವ ಅಗತ್ಯವಿಲ್ಲ. ಮೊಬೈಲ್ ಆ್ಯಪ್ ಮೂಲಕ ಭೂಮಿಯನ್ನು ಸ್ವಯಂ ಸರ್ವೆ ಮಾಡಬಹುದಾದ ಜನೋಪಯೋಗಿ ವ್ಯವಸ್ಥೆ ಶೀಘ್ರ ಸಾಕಾರವಾಗಲಿದೆ. ಭ್ರಷ್ಟಾಚಾರಕ್ಕೆ ಕಡಿವಾಣ ಹಾಕುವ ನಿಟ್ಟಿನಲ್ಲಿ ತಂತ್ರಜ್ಞಾನ ಬಳಸಿ ಭೂಮಿ ಸರ್ವೆ ಮಾಡುವ ಹೊಸ ವ್ಯವಸ್ಥೆಯನ್ನು ಜಾರಿಗೆ ತರಲು ಸರ್ಕಾರ ಸಜ್ಜಾಗಿದೆ. ಭೂ ಸರ್ವೆ ಇಲಾಖೆ ಮೊಬೈಲ್ ಆ್ಯಪ್ ಸಿದ್ಧಪಡಿಸುತ್ತಿದ್ದು, ಹೊಸ ವರ್ಷದ ಆರಂಭದಲ್ಲಿ ದೇಶದಲ್ಲೇ ಮೊದಲ ಬಾರಿಗೆ ರಾಜ್ಯದಲ್ಲಿ 'ಮೊಬೈಲ್ ಭೂ ಸರ್ವೆ' ಪದ್ಧತಿ ಅನುಷ್ಠಾನಗೊಳ್ಳುವ ಸಾಧ್ಯತೆ ಇದೆ. ಪೋಡಿ ಮಾಡುವುದು, ಗಡಿ ಗುರುತಿಸುವುದು ಸೇರಿದಂತೆ ಬಹುದೊಡ್ಡ ರಗಳೆಗಳು ಸರ್ವೆಯಲ್ಲಿ ಇರುತ್ತವೆ. ಸರ್ವೇಯರ್‌ಗಳ ಕೊರತೆ ಕೂಡ ಸಾಕಷ್ಟು ಪ್ರಮಾಣದಲ್ಲಿದೆ. ಪ್ರತಿ ವರ್ಷ ಸರ್ವೆಗಾಗಿಯೇ ರಾಜ್ಯದಲ್ಲಿ 7 ರಿಂದ 10 ಲಕ್ಷ ಅರ್ಜಿಗಳು ಸಲ್ಲಿಕೆಯಾಗುತ್ತವೆ. ಬಹುತೇಕ ಸರ್ವೆ ಕಾರ್ಯಗಳು ಮುಗಿಯುವುದಿಲ್ಲ. ಇಂಥ ಸಮಸ್ಯೆಗಳೆಲ್ಲವೂ ಮುಂದಿನ ದಿನದಲ್ಲಿ ಕಡಿಮೆಯಾಗಲಿವೆ. ಅದಕ್ಕಾಗಿ ಕಂದಾಯ ಇಲಾಖೆಯಲ್ಲಿ ಸಾಕಷ್ಟು ಸಭೆಗಳು ನಡೆದು ಮೊಬೈಲ್ ಆ್ಯಪ್ ಮೂಲಕ ಸರ್ವೆ ಮಾಡುವ ವ್ಯವಸ್ಥೆ ಜಾರಿಗೆ ತರಲಾಗುತ್ತಿದೆ. ಜಮೀನು ಮಾರಾಟವಾದ ಸಂದರ್ಭದಲ್ಲಿ ಅಥವಾ ವಿಭಜನೆ ಸಂದರ್ಭದಲ್ಲಿ ಸರ್ವೆ ಮಾಡಿಸಿ ಭಾಗ ಮಾಡಿಕೊಳ್ಳುವುದು ಬಹುದೊಡ್ಡ ಸಮಸ್ಯೆ. ಮೊಬೈಲ್ ಆ್ಯಪ್ ಸರ್ವೆ ಮೂಲಕ ಆ ಸಮಸ್ಯೆಗೂ ಮುಕ್ತಿ ಸಿಗಲಿದೆ.

**ಹಳೇ ವ್ಯವಸ್ಥೆ ಅಬಾಧಿತ :** ಯಾವುದಾದರೂ ವಿರೋಧ ವ್ಯಕ್ತವಾದರಷ್ಟೇ ಸರ್ವೇಯರ್‌ಗಳ ಮೂಲಕ ಸರ್ವೆ ಮಾಡಿಸಿಕೊಳ್ಳಬಹುದು. ಆ ವ್ಯವಸ್ಥೆ ಮುಂದುವರಿಯುತ್ತದೆ. ಶುಲ್ಕ ಕಟ್ಟಿ ಸರ್ವೇಯರ್‌ಗಳು ಬಂದಾಗ ಸರ್ವೆ ಆಗುತ್ತದೆ.

**ಗುರುತಿನ ಚೀಟಿ ಕಡ್ಡಾಯ :** ಮೊಬೈಲ್ ಆ್ಯಪ್‌ನಲ್ಲಿ ಸರ್ವೆ ಮಾಡಿಕೊಳ್ಳಲು ಆಧಾರ್ ಸಂಖ್ಯೆ ಕಡ್ಡಾಯವಾಗಿ ನಮೂದಿಸಬೇಕು. ಸರ್ವೆ ಮಾಡಿಕೊಳ್ಳುವ ಇಬ್ಬರು ಮಾಲೀಕರ ಆಧಾರ ನಂಬರ್ ಬೇಕಾಗುತ್ತದೆ. ಇಲ್ಲದಿದ್ದರೆ ಭೂಮಿಯ ಸ್ಕೆಚ್ ಮೊಬೈಲ್‌ನಲ್ಲಿ ಬರುವುದಿಲ್ಲ ಹಾಗೂ ಸಮೀಕ್ಷೆ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ.

**ಹೇಗಿರಲಿದೆ ವ್ಯವಸ್ಥೆ?** ಈಗ ಮೊಬೈಲ್‌ನಲ್ಲಿ ಬೆಳೆ ಸಮೀಕ್ಷೆ ಮಾಡಲಾಗುತ್ತಿದೆ. ಅದೇ ರೀತಿಯಲ್ಲಿ ಭೂ ಸರ್ವೆ ಇಲಾಖೆ ಸಿದ್ಧಪಡಿಸುವ ಆ್ಯಪ್ ಡೌನ್‌ಲೋಡ್ ಮಾಡಿಕೊಂಡು ಸರ್ವೆ ಮಾಡಿಕೊಳ್ಳಬಹುದು. ಮೊಬೈಲ್ ಅಪ್ಲಿಕೇಷನ್‌ನಲ್ಲಿ ಭೂಮಿಯ ಸರ್ವೆ ನಂಬರ್ ಹಾಕುತ್ತಿದ್ದಂತೆ ಸೆಟಲೈಟ್ ಮೂಲಕ ಚಿತ್ರಿಸಿರುವ ಭೂಮಿಯ ಸ್ಕೆಚ್ ಬರುತ್ತದೆ. ವೈಯಕ್ತಿಕವಾದ ಕೆಲವು ವಿವರಗಳನ್ನು ಭರ್ತಿ ಮಾಡಬೇಕಾಗುತ್ತದೆ. ಅದನ್ನು ಗಮನದಲ್ಲಿಟ್ಟುಕೊಂಡು ಯಾರಿಗೆ ಎಷ್ಟು ಎಕರೆ ಎಂಬುದರ ಗಡಿಯನ್ನು ಗುರುತಿಸಬಹುದು. ಭೂಮಿ ಖರೀದಿ ಮಾಡಿದವರು, ಮಾರಾಟಗಾರ ಅಥವಾ ಭೂಮಿ ಹಂಚಿಕೊಳ್ಳುವ ಅಣ್ಣ–ತಮ್ಮಂದಿರು ಕುಳಿತು ಮೊಬೈಲ್ ಆ್ಯಪ್ ಮೂಲಕ ಗಡಿ ಗುರುತಿಸಿಕೊಳ್ಳಬಹುದು. ಆನಂತರ ಪೋಡಿ ಮಾಡಿಕೊಂಡು ಬಂದು ನಿರ್ಮಾಣ ಮಾಡಿಕೊಳ್ಳಬಹುದು. ಇಬ್ಬರು ಮಾಲೀಕರ ನಡುವೆ ಯಾವುದೇ ವಿರೋಧ ಇಲ್ಲವೆಂದಾದರೆ ಮೊಬೈಲ್‌ನಲ್ಲಿ ಮಾಡುವ ಸರ್ವೆಗೆ ಯಾವುದೇ ಸಮಸ್ಯೆ ಎದುರಾಗುವುದಿಲ್ಲ.

**ಮೊಬೈಲ್‌ನಲ್ಲೇ ಮನವಿ :** ಸರ್ವೇಯರ್‌ಗಳಿಂದ ಸರ್ವೆ ಮಾಡಿಸುವುದಕ್ಕೂ ಮೊಬೈಲ್ ಮೂಲಕವೇ ಅರ್ಜಿ ಹಾಕುವ ವ್ಯವಸ್ಥೆಯನ್ನು ಸಹ ಜಾರಿಗೆ ತರಲಾಗುತ್ತದೆ. ಈ ವ್ಯವಸ್ಥೆಯನ್ನು ಇಡೀ ರಾಜ್ಯದಲ್ಲಿ ಏಕ ಕಾಲಕ್ಕೆ ಜಾರಿಗೆ ತರಲಾಗುತ್ತದೆ. ಪ್ರಾಯೋಗಿಕ ವ್ಯವಸ್ಥೆ ಇರುವುದಿಲ್ಲ. ಯಾವುದೇ ಸಮಸ್ಯೆ ಎದುರಾಗದಂತೆ ಎಲ್ಲ ಕ್ರಮಗಳನ್ನು ಕೈಗೊಳ್ಳಲಾಗಿದೆ. ಆದರೂ ಸಮಸ್ಯೆಗಳು ಬಂದಲ್ಲಿ ತಕ್ಷಣ ಸರಿಪಡಿಸಲಾಗುತ್ತದೆ. ನಿಧಾನವಾಗಿ ಸಾಂಪ್ರದಾಯಿಕ ವ್ಯವಸ್ಥೆಯನ್ನು ಸಂಪೂರ್ಣ ತೆಗೆದುಹಾಕಿ ಡಿಜಿಟಲ್ ವ್ಯವಸ್ಥೆ ತರುವುದು ಸರ್ಕಾರದ ಉದ್ದೇಶವಾಗಿದೆ. ಭೂ ಸರ್ವೆ ಸಹ ಪೇಪರ್‌ಲೆಸ್ ಆಗಬೇಕು ಎಂಬುದು ಸರ್ಕಾರದ ಆಶಯವಾಗಿದೆ.

**ಶುಲ್ಕವೂ ಇದೆ :** ಸರ್ವೇಯರ್ ಸರ್ವೆ ಮಾಡಿಕೊಡುವುದಕ್ಕೆ ಹೇಗೆ ಶುಲ್ಕ ಪಾವತಿಸಬೇಕೋ ಅದೇ ರೀತಿ ಮೊಬೈಲ್ ಆ್ಯಪ್ ಮೂಲಕ ಸರ್ವೇಗೂ ಶುಲ್ಕ ಕಟ್ಟಬೇಕಾಗುತ್ತದೆ. ಆದರೆ ಶುಲ್ಕ ಎಷ್ಟು ಎಂಬುದು ಇನ್ನೂ ನಿಗದಿಯಾಗಿಲ್ಲ. ಜನವರಿ ವೇಳೆಗೆ ಜಾರಿಗೊಳಿಸುವ ಸಂದರ್ಭದಲ್ಲಿ ಶುಲ್ಕ ನಿಗದಿಯಾಗುತ್ತದೆ.

ಆಧಾರ: ವಿಜಯವಾಣಿ, ದಿನಾಂಕ: 25.10.2021

## 43. ಜನಗಣತಿ ಇನ್ನೂ ಅತಂತ್ರ

ಹತ್ತು ವರ್ಷಕ್ಕೊಮ್ಮೆ ನಡೆಯಬೇಕಾಗಿರುವ ಜನಗಣತಿ ಪ್ರಸಕ್ತ ಸಾಲಿನಲ್ಲಿ ಜರುಗದ ಕಾರಣ ಜನಸಂಖ್ಯಾ ಆಧಾರಿತ ಯೋಜನೆಗಳನ್ನು ರೂಪಿಸಲು ತೊಡಗಾಗಿದೆ. 2011ರ ಜನಸಂಖ್ಯೆ ಆಧಾರದಲ್ಲೇ ರೂಪಗೊಳ್ಳುತ್ತಿರುವ ಆರ್ಥಿಕ ನೀತಿಗಳು ಭವಿಷ್ಯದಲ್ಲಿ ಕಾರ್ಯಸಾಧಿಸುವ ಎಂಬ ಪ್ರಶ್ನೆ ಎದ್ದಿದೆ. 2021ರ ಜನಗಣತಿ ಕಾರ್ಯ 2 ವರ್ಷ ಮೊದಲೇ ಆರಂಭಗೊಳ್ಳಬೇಕಿತ್ತು. ಯೋಜನಾ ಇಲಾಖೆಯ ಮಾಹಿತಿ ಪ್ರಕಾರ, ಮುಂದಿನ ವರ್ಷಕ್ಕೂ ಸಿದ್ಧತೆ ನಡೆದಿಲ್ಲ.

ಕೋವಿಡ್ ಹಿನ್ನೆಲೆಯಲ್ಲಿ ಜನಗಣತಿ ನಡೆಯುವ ಲಕ್ಷಣಗಳೇ ಗೋಚರಿಸುತ್ತಿಲ್ಲ. 2011ರ ಜನಸಂಖ್ಯೆ ಆಧಾರದಲ್ಲೇ ಅನುದಾನ ಹಂಚಿಕೆ ಮತ್ತು ಯೋಜನೆ ಜಾರಿಗೊಳ್ಳುತ್ತಿದ್ದು, ಭವಿಷ್ಯದಲ್ಲಿ ಈ ಯೋಜನೆಗಳು ಸಮರ್ಪಕವೇ ಎಂಬ ಪ್ರಶ್ನೆ ಕಾಡತೊಡಗಿದೆ. ಅಷ್ಟೇ ಅಲ್ಲ, ಬಿಬಿಎಂಪಿ ವಾರ್ಡ್‌ಗಳ ಪುನರ್‌ರಚನೆ ಹಾಗೂ ಜಿ.ಪಂ., ತಾ.ಪಂ. ಕ್ಷೇತ್ರ ಮರು ವಿಂಗಡಣೆಯ ಮೇಲೂ ಪರಿಣಾಮ ಬೀರಿದೆ. ನ್ಯೂನತೆಗಳೊಂದಿಗೆ ನೀತಿಗಳನ್ನು ಜಾರಿಗೊಳಿಸುವ ಸಂದಿಗ್ಧತೆ ಸೃಷ್ಟಿಯಾಗಿದೆ.

ಕೃಷಿ, ಉತ್ಪಾದನೆ, ಮಾನವಶಕ್ತಿ, ಆರೋಗ್ಯ, ವಸತಿ, ಸಾರಿಗೆ, ಬದುಕುವ ಪದ್ಧತಿ, ಆರ್ಥಿಕ ಸಬಲತೆ, ಕ್ಷೇತ್ರ ಪುನರ್ವಿಂಗಡಣೆ, ಅನುದಾನ ಹಂಚಿಕೆ, ವಿಶೇಷ ಅನುದಾನ, ಸಮುದಾಯ ಕೇಂದ್ರಗಳು, ಭೌಗೋಳಿಕ ಬದಲಾವಣೆ, ಅಗತ್ಯಗಳು, ಸಾಕ್ಷರತೆ, ವಲಸೆ, ಸಮಾಜದಲ್ಲಿ ವಲಸೆಯಿಂದಾಗುವ ಪರಿಣಾಮ, ಶಿಕ್ಷಣ–ಸೌಲಭ್ಯ, ಹುದ್ದೆಗಳ ಸೃಷ್ಟಿ, ಮಾನವ ಸಂಪನ್ಮೂಲ, ಸಹಭಾಗಿತ್ವ, ತಂತ್ರಜ್ಞಾನ, ಗ್ರಾಮೀಣ, ನಗರಾಭಿವೃದ್ಧಿ, ಮೂಲಭೂತ ಸೌಕರ್ಯ ಸೇರಿದಂತೆ ನಾನಾ ವಲಯದಲ್ಲಿ ಜನರ ಅಗತ್ಯಗಳ ಸ್ವರೂಪ ಬದಲಾಗಿದೆ. ಬದಲಾದ ಸ್ವರೂಪ ಆಧಾರದಲ್ಲೇ ಜನಸಂಖ್ಯೆ ಆಧಾರಿತ ಸಾಮಾಜಿಕ, ಆರ್ಥಿಕ ನೀತಿಗಳು ಜಾರಿಗೊಳ್ಳಬೇಕು. ಇದಕ್ಕೆ ಪೂರಕವಾಗಿ ಜನಗಣತಿ ಅತ್ಯವಶ್ಯ.

**ವಿಪತ್ತು ನಿರ್ಧರಿಸಬಹುದು :** ವಿಪತ್ತುಗಳನ್ನು ನಿರ್ಧರಿಸಿ ಪೂರ್ವ ನಿಯೋಜಿತ ಉಪಕ್ರಮಗಳನ್ನು ಜಾರಿಗೆ ತರಲು 'ಜನಸಾಂದ್ರತೆ' ಮಾಹಿತಿ ದೊರಕಿಸುತ್ತದೆ. ಪ್ರವಾಹ, ಚಂಡಮಾರುತ, ಸುಂಟರಗಾಳಿ, ನೈಸರ್ಗಿಕ ವಿಕೋಪ, ಭೂಕಂಪನಗಳಿಂದ ಜನರ ಸ್ಥಳಾಂತರಕ್ಕೆ ಮತ್ತು ಸ್ಥಳಗಳ ಚೇತರಿಕೆ ಕಾರ್ಯಕ್ರಮಗಳ ಜಾರಿಯನ್ನು ಗಣತಿ ಆಧಾರದಲ್ಲಿ ಕೈಗೊಳ್ಳಬಹುದು. ಜನಸಂಪರ್ಕವೇ ಇಲ್ಲದ ಕುಗ್ರಾಮಗಳಿಗೆ ಮೂಲಭೂತ ಸೌಕರ್ಯ ಒದಗಿಸಬಹುದು. ನಿಖರ ಪ್ರದೇಶದ ಜನಗಣತಿ ಮಾಹಿತಿಯು ಉದ್ಯಮ ಸ್ಥಾಪನೆಗೆ ಪೂರಕ. ಆಯಾ ಪ್ರದೇಶದ ಜನ ಆರ್ಥಿಕ ಸ್ಥಿತಿ, ಕೊಳ್ಳುವ ಸಾಮರ್ಥ್ಯಗಳು ಸ್ಥಳೀಯ

ಉದ್ಯಮದ ಉಗಮಕ್ಕೆ ಕಾರಣವಾಗುತ್ತದೆ. ವ್ಯವಹಾರ–ಉತ್ಪನ್ನಗಳ ಅಭಿವೃದ್ಧಿ, ಮಾರುಕಟ್ಟೆ, ರಿಯಲ್ ಎಸ್ಟೇಟ್ ಉದ್ಯಮ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು ಜನಗಣತಿಯ ದತ್ತಾಂಶಗಳನ್ನು ಬಯಸುತ್ತವೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 25.10.2021

## 44. ಕನ್ನಡ ಉಳಿಸೋಣ, ಬಳಸೋಣ, ಬೆಳೆಸೋಣ

ರಾಜ್ಯೋತ್ಸವ ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಮ್ಮಿಕೊಂಡಿರುವ 'ಕನ್ನಡಕ್ಕಾಗಿ ನಾವು' ಅಭಿಯಾನವನ್ನು ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್ ಖುದ್ದು ಕನ್ನಡ ಮಾತನಾಡುವ ಮೂಲಕ ಉದ್ಘಾಟಿಸಿದರು.

ಕನ್ನಡ ಹಾಡು, ಕನ್ನಡ ಧ್ವಜ, ಕನ್ನಡ ಅಕ್ಷರ ಹೀಗೆ ಕನ್ನಡಮಯವಾಗಿದ್ದ ವೇದಿಕೆಯಲ್ಲಿ ಉಪಸ್ಥಿತರಿದ್ದ ಗೆಹ್ಲೋಟ್ ಕನ್ನಡ ರಾಜ್ಯೋತ್ಸವದ ಲಾಂಛನ ಬಿಡುಗಡೆ ಮಾಡಿ, ಕನ್ನಡದ ಪದಗಳನ್ನಾಡಿದ್ದು ಪ್ರೇರಣಾದಾಯಕ ನಡೆಯಾಗಿ ಕಾಣಿಸಿತು.

'ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕರ್ನಾಟಕ ರಾಜ್ಯೋತ್ಸವ ಅಂಗವಾಗಿ 'ಕನ್ನಡಕ್ಕಾಗಿ ನಾವು' ಅಭಿಯಾನ ಆಯೋಜಿಸಿದೆ. ಇದರಲ್ಲಿ ಎಲ್ಲರೂ ಭಾಗವಹಿಸೋಣ.. ಕನ್ನಡ ಬಳಸೋಣ, ಬೆಳೆಸೋಣ, ಉಳಿಸೋಣ ಹಾಗೂ ಗೌರವಿಸೋಣ... ಮಾತಾಡ್ ಮಾತಾಡ್ ಕನ್ನಡ' ಎಂದು ಅವರು ಮನವಿ ಮಾಡಿದರು. ಮಧ್ಯಪ್ರದೇಶ ಗೆಹ್ಲೋಟ್ ಇತ್ತೀಚೆಗೆ ಕನ್ನಡ ಕಲಿಯಲು ಪ್ರಯತ್ನಿಸುತ್ತಿರುವುದು ಮತ್ತು ಈ ಕಾರ್ಯಕ್ರಮದಲ್ಲಿ ಕನ್ನಡ ಪದ ಬಳಸಿದ್ದು ಗಮನ ಸೆಳೆಯಿತು.

ಸಮಾರಂಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವ ಸುನಿಲ್ ಕುಮಾರ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕಾರ್ಯದರ್ಶಿ ಎನ್.ಮಂಜುಳಾ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ರಂಗಪ್ಪ ಮತ್ತಿತರರಿದ್ದರು.

**ಮೆಟ್ರೋಗೆ ಸಚಿವರ ಎಚ್ಚರಿಕೆ :** ಮೆಟ್ರೋದಲ್ಲಿ ಕನ್ನಡ ಬಳಕೆ ಮಾಡಬೇಕು. ಈಗಾಗಲೇ ಹಲವು ತಪ್ಪುಗಳನ್ನು ಮಾಡಿದ್ದು, ಮುಂದೆ ಇದು ಮರುಕಳಿಸದಂತೆ ಎಚ್ಚರವಹಿಸಲು ಸೂಚಿಸಲಾಗಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಸಚಿವ ಸುನೀಲ್ ಕುಮಾರ್ ಹೇಳಿದ್ದಾರೆ.

ಲಾಲ್‌ಬಾಗ್ ಮೆಟ್ರೋ ನಿಲ್ದಾಣದಲ್ಲಿ ಕನ್ನಡ ಅಭಿಯಾನದ ಸ್ವಯಂ ಭಾವಚಿತ್ರ ಕೇಂದ್ರದಲ್ಲಿ ಇಲಾಖಾ ಅಧಿಕಾರಿಗಳ ಜೊತೆಗೆ ಸೆಲ್ಫಿ ತೆಗೆದುಕೊಳ್ಳುವ ಮೂಲಕ ಉದ್ಘಾಟನೆ ಮಾಡಿದರು. ಕೇಂದ್ರ ಸರ್ಕಾರದ ಕಾರ್ಯಕ್ರಮ ಹಾಗೂ ಮೆಟ್ರೋದಲ್ಲೂ ಕೂಡ ಕನ್ನಡ ಭಾಷೆ ನಿರ್ಲಕ್ಷಿಸಲಾಗುತ್ತಿದೆ ಇದಕ್ಕೆ ಇಲಾಖೆ ಏನು ಕ್ರಮ ಜರುಗಿಸಿದೆ ಎಂಬ ಮಾಧ್ಯಮದವರ ಪ್ರಶ್ನೆಗೆ ಉತ್ತರಿಸಿದ ಸಚಿವರು, ಈಗಾಗಲೇ ಕೆಲವು ಕಾರ್ಯಕ್ರಮಗಳಲ್ಲಿ ವ್ಯತ್ಯಾಸಗಳಾಗಿವೆ. ಮತ್ತೆ ಇಂತಹ ತಪ್ಪುಗಳು ಆಗದಂತೆ ಎಚ್ಚರಿಕೆ ವಹಿಸಲು ಮನವಿ ಮಾಡಲಾಗಿದೆ. ಮೆಟ್ರೋದಲ್ಲಿ ಕನ್ನಡ ನಿರ್ಲಕ್ಷ್ಯಕ್ಕೆ ಸಂಬಂಧಿಸಿದಂತೆ ನೋಟಿಸ್ ಕೂಡ ಇಲಾಖೆ ವತಿಯಿಂದ ನೀಡಲಾಗಿದೆ ಎಂದು ತಿಳಿಸಿದರು.

**ಕಿರುನಾಟಕ ಉದ್ಘಾಟನೆ:** ಲಾಲ್‌ಬಾಗ್‌ನಲ್ಲಿ ಕಿರುನಾಟಕ ಉದ್ಘಾಟಿಸುವ ಮೂಲಕ ಚಾಲನೆ ನೀಡಿದ ಸಚಿವರು, ಆನಂತರ ಕುವೆಂಪು ಭಾಷಾಭಾರತಿ ಹೊರತಂದಿರುವ ಕನ್ನಡೇತರರಿಗೆ ಕನ್ನಡ ಕಲಿಸುವ ಕಿರುಹೊತ್ತಿಗೆಯನ್ನು ಸಾರ್ವಜನಿಕರಿಗೆ ವಿತರಣೆ ಮಾಡಿದರು.

**ಕನ್ನಡ ಕಟ್ಟುವ ಕಾರ್ಯ ಅಗತ್ಯ :** 'ಕನ್ನಡಕ್ಕಾಗಿ ನಾವು' ಅಭಿಯಾನದ ಮೂಲಕ ಹೊಸ ರೀತಿಯ ಕಾರ್ಯಕ್ರಮ ರೂಪಿಸಿದ್ದೇವೆ. ಈ ಕಾರ್ಯದ ಹಿಂದಿನ ಪ್ರೇರಣೆ ಏನು ಎಂಬಿತ್ಯಾದಿ ಚರ್ಚೆಗಳು ಈಗ

ಬೇಡ. ಕನ್ನಡ ಕಟ್ಟುವ ಕಾರ್ಯ ಹೇಗೆ ಆಗಬೇಕು ಎಂಬ ಚರ್ಚೆ ನಡೆಯಬೇಕಾಗಿದೆ ಎಂದು ಸುನೀಲ್ ಕುಮಾರ್ ತಿಳಿಸಿದರು.

ಮಕ್ಕಳ ಮೇಲೆ ಇವತ್ತು ಬೇರೆ ಬೇರೆ ಭಾಷೆಗಳು ಪ್ರಭಾವ ಹೆಚ್ಚಾಗಿದ್ದು, ನಮ್ಮ ಮನೆ ಮನಗಳಲ್ಲಿ ಕನ್ನಡ ಭಾಷೆ ಪಸರಿಸಬೇಕಾಗಿದೆ. ಕನ್ನಡ ಭಾಷೆ ಪರಂಪರೆಯನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಕನ್ನಡದಲ್ಲೇ ಸಹಿ ಮಾಡೋ ಅಭ್ಯಾಸ ಬೆಳೆಸಿಕೊಳ್ಳಬೇಕಿದೆ ಎಂದರು.

ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷ ಅಜಕ್ಕಳ ಗಿರೀಶ್ ಭಟ್, ಮೈಸೂರು ರಂಗಾಯಣದ ನಿರ್ದೇಶಕ ಅಡ್ಡಂಡ ಕಾರ್ಯಪ್ಪ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ಎಸ್.ರಂಗಪ್ಪ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಟಿ.ಎಸ್.ನಾಗಾಭರಣ ಮತ್ತಿತರರು ಉಪಸ್ಥಿತರಿದ್ದರು.

ಆಧಾರ: ವಿಜಯವಾಣಿ, ದಿನಾಂಕ: 25.10.2021

## 45. ಇಂದಿನಿಂದ ಮಕ್ಕಳ ಕಲರವ

ರಾಜ್ಯಾದ್ಯಂತ ಇಂದಿನಿಂದ 1 ರಿಂದ 5ನೇ ತರಗತಿಗಳು ಆರಂಭವಾಗಲಿದ್ದು, ಮಕ್ಕಳ ಸ್ವಾಗತಕ್ಕೆ ಶಾಲೆಗಳು ಸಜ್ಜುಗೊಂಡಿವೆ. ಈ ಮೂಲಕ, ಕೊರೋನಾ ಆಘಾತಕ್ಕೆ ಸಿಲುಕಿದ್ದ ಶೈಕ್ಷಣಿಕ ಚಟುವಟಿಕೆಗಳು ಸಂಪೂರ್ಣವಾಗಿ ಆರಂಭಗೊಂಡಂತಾಗುತ್ತದೆ.

"ಒಂದೂವರೆ ವರ್ಷಗಳ ನಂತರ ಶಾಲೆಗಳು ಆರಂಭಾವಗುತ್ತಿವೆ. ಚಿಣ್ಣರು ತಮ್ಮ ನೆಚ್ಚಿನ ಶಾಲಾ ಅಂಗಳಕ್ಕೆ ಬರಲಿದ್ದಾರೆ. ಚಿಣ್ಣರನ್ನು ಶಾಲೆಗಳಿಗೆ ಪ್ರೀತಿಯಿಂದ ಬರ ಮಾಡಿಕೊಳ್ಳಬೇಕು. ಶಾಲಾ ಹಂತದಲ್ಲಿ ಎಲ್ಲಾ ಶಿಕ್ಷಕರು, ಎಸ್‌ಡಿಎಂಸಿ ಸದಸ್ಯರು ಹಾಗೂ ಹಿರಿಯ ವಿದ್ಯಾರ್ಥಿಗಳು ಪ್ರೀತಿ ಪೂರ್ವಕವಾಗಿ ಅದ್ಧೂರಿಯಾಗಿ ಸ್ವಾಗತಿಸಬೇಕು. ಸ್ಥಳೀಯವಾಗಿ ಲಭ್ಯವಾಗುವ ವಾದ್ಯಗೋಷ್ಠಿಗಳೊಂದಿಗೆ ಹಾಗೂ ಸಿಹಿ ಹಂಚಿ, ಗುಲಾಬಿ ಹೂ ನೀಡಿ ಮಕ್ಕಳನ್ನು ಬರಮಾಡಿಕೊಳ್ಳಬೇಕು," ಎಂದು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು ಕ್ಷೇತ್ರ ಶಿಕ್ಷಣಾಧಿಕಾರಿ ಮತ್ತು ಬಿಆರ್‌ಸಿಗಳಿಗೆ ಸೂಚಿಸಿದ್ದಾರೆ.

**ವಿದ್ಯಾರ್ಥಿಗಳಿಗೆ ಹಾಜರಾತಿ ಕಡ್ಡಾಯವಲ್ಲ**. ಆನ್‌ಲೈನ್ ತರಗತಿಯೂ ನಡೆಯಲಿದೆ. ಅಕ್ಟೋಬರ್ 29ರ ಶುಕ್ರವಾರದವರೆಗೆ ಬೆಳಗ್ಗೆ 10 ರಿಂದ ಮಧ್ಯಾಹ್ನ 1.30 ರವರೆಗೆ ಅರ್ಧ ದಿವಸ ಮಾತ್ರ ತರಗತಿ ನಡೆಯಲಿದೆ. ಶನಿವಾರ ಬೆಳಗ್ಗೆ 8 ರಿಂದ ಮಧ್ಯಾಹ್ನ 11.40 ರವರೆಗೆ ತರಗತಿಗಳು ನಡೆಯಲಿವೆ. ನವೆಂಬರ್ 2 ರಿಂದ ಪೂರ್ಣ ಪ್ರಮಾಣದಲ್ಲಿ ತರಗತಿ ನಡೆಯಲಿದೆ.

1 ರಿಂದ 5ನೇ ತರಗತಿವರೆಗಿನ ವಿದ್ಯಾರ್ಥಿಗಳಿಗೆ ಅರ್ಧ ದಿವಸ ಮಾತರ ಶಾಲೆಗಳು ನಡೆಯುವುದರಿಂದ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ಮಧ್ಯಾಹ್ನದ ಉಪಹಾರ ಯೋಜನೆಯಡಿ ಊಟ ಇರುವುದಿಲ್ಲ. ಈ ವಿದ್ಯಾರ್ಥಿಗಳಿಗೆ ನವೆಂಬರ್ 2 ರಿಂದ ಬಿಸಿಯೂಟ ಯೋಜನೆ ಜಾರಿ ಆಗಲಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 25.10.2021

## 46. ನಿಗದಿಗಿಂತ ಅಧಿಕ ಶುಲ್ಕ ಒಪ್ಪಿಕೊಂಡ ಸರ್ಕಾರ

ಕೋವಿಡ್ ರೋಗಿಗಳಿಂದ ನಿಗದಿಗಿಂತ ಅಧಿಕ ಶುಲ್ಕ ವಸೂಲು ಮಾಡಿರುವ ಬಗ್ಗೆ ಖಾಸಗಿ ಆಸ್ಪತ್ರೆಗಳ ವಿರುದ್ಧ ಕ್ರಮ ಕೈಗೊಂಡು ಆ ಕುರಿತ ವರದಿ ಸಲ್ಲಿಸುವಂತೆ ಹೈಕೋರ್ಟ್ ಸರ್ಕಾರಕ್ಕೆ ಆದೇಶ ನೀಡಿತು.

ಕೋವಿಡ್ ಸಂಬಂಧಿ ಪಿಐಎಲ್‌ಗಳ ವಿಚಾರಣೆ ನಡೆಸುತ್ತಿರುವ ಸಿಜೆ ರಿತುರಾಜ್‌ಅವಸ್ಥಿ ಅವರಿದ್ದ ವಿಭಾಗೀಯ ಪೀಠ ಈ ನಿರ್ದೇಶನ ನೀಡಿ ವಿಚಾರಣೆಯನ್ನು ಮುಂದೂಡಿತು. ಕೆಲ ಕಾಲ ವಿಚಾರಣೆ ಆಲಿಸಿದ ಬಳಿಕ, ಕೆಲವು ಆಸ್ಪತ್ರೆಗಳು ಕೋವಿಡ್ ರೋಗಿಗಳಿಂದ ನಿಗದಿಗಿಂತ ಹೆಚ್ಚಿನ ಶುಲ್ಕವನ್ನು ವಸೂಲು ಮಾಡಿವೆ ಎಂಬುದನ್ನು ಸರ್ಕಾರ ಒಪ್ಪಿಕೊಂಡಿದೆ. ಹಾಗಾಗಿ ಸರ್ಕಾರ ಮತ್ತು ಬಿಬಿಎಂಪಿ ಅಂತಹ ಖಾಸಗಿ ಆಸ್ಪತ್ರೆಗಳ ವಿರುದ್ಧ ಕ್ರಮ ಕೈಗೊಂಡು, ಯಾವ ಆಸ್ಪತ್ರೆಗಳು ಹೆಚ್ಚು ವಸೂಲು ಮಾಡಿದ್ದವು, ಯಾವ ಆಸ್ಪತ್ರೆಗಳು ಹಣ ಹಿಂತಿರುಗಿಸಿವೆ. ಅವುಗಳ ವಿರುದ್ಧ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ ಎಂಬ ಬಗ್ಗೆ ವಿವರವಾದ ವರದಿ ಸಲ್ಲಿಸುವಂತೆ ನ್ಯಾಯಾಲಯ ಆದೇಶ ನೀಡಿತು.

**ಒಪ್ಪಿಕೊಂಡ ಸರ್ಕಾರ:** ಈ ವಿಚಾರವನ್ನು ಪೀಠದ ಗಮನಕ್ಕೆ ತಂದ ವಕೀಲ ಶ್ರೀಧರ್ ಪ್ರಭು, ಸರ್ಕಾರ ಸಲ್ಲಿಸಿರುವ ಪ್ರಮಾಣಪತ್ರದಲ್ಲಿ ಎಷ್ಟು ಆಸ್ಪತ್ರೆಗಳು ನಿಗದಿಗಿಂತ ಹೆಚ್ಚಿನ ಹಣ ಸಂಗ್ರಹಿಸಿವೆ. ಎಷ್ಟು ಪ್ರಕರಣಗಳಲ್ಲಿ ಹಣ ವಾಪಸ್ ಕೊಡಿಸಲಾಗಿದೆ ಎಂಬ ವಿವರಗಳನ್ನು ನೀಡಿದೆ. ಈ ಆಸ್ಪತ್ರೆಗಳ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಸಿದೆ. ಹಾಗಾಗಿ ಈ ಆಸ್ಪತ್ರೆಗಳ ಲೈಸನ್ಸ್ ರದ್ದುಗೊಳಿಸಲು ಆದೇಶಿಸಬೇಕು ಎಂದರು.

**57 ಆಸ್ಪತ್ರೆಗಳು ಹಣ ವಸೂಲಿ:** ರಾಜ್ಯ ಸರ್ಕಾರವೇ ಸಲ್ಲಿಸಿರುವ ಪ್ರಮಾಣಪತ್ರದ ಪ್ರಕಾರ ಸರ್ಕಾರಿ ಕೋಟಾದಲ್ಲಿ ಖಾಸಗಿ ಆಸ್ಪತ್ರೆಗಳಲ್ಲಿ ದಾಖಲಾಗಿದ್ದ ರೋಗಿಗಳಿಂದ 57 ಖಾಸಗಿ ಆಸ್ಪತ್ರೆಗಳು ಹಣ ವಸೂಲು ಮಾಡಿವೆ. ಅವುಗಳ ವಿರುದ್ಧ ದೂರು ದಾಖಲಿಸಿಕೊಂಡು ರಾಜ್ಯಮಟ್ಟದ ದೂರು ಪರಿಹಾರ ಸಮಿತಿ ವಿಚಾರಣೆ ನಡೆಸುತ್ತಿದೆ. ಅಧಿಕ ಶುಲ್ಕ ಸಂಗ್ರಹದ ಬಗ್ಗೆ ಖಾಸಗಿ ಆಸ್ಪತ್ರೆಗಳ ವಿರುದ್ಧ 1325 ದೂರುಗಳು ಬಂದಿವೆ. ಅಲ್ಲದೆ, ಖಾಸಗಿ ರೋಗಿಗಳಾಗಿ ದಾಖಲಾಗಿದ್ದ ರೋಗಿಗಳಿಂದ ಅಧಿಕ ಶುಲ್ಕ ಸಂಗ್ರಹಿಸಿರುವ ಬಗ್ಗೆ 48 ದೂರುಗಳು ಬಂದಿದ್ದು, ಆ ಬಗ್ಗೆ ಪರಿಶೀಲನೆ ನಡೆಸಲಾಗುತ್ತಿದೆ ಎಂದು ತಿಳಿಸಲಾಗಿದೆ. ಆಸ್ಪತ್ರೆಗಳಲ್ಲಿ ಬಹುತೇಕ ಎಲ್ಲ ಪ್ರತಿಷ್ಠಿತ ಆಸ್ಪತ್ರೆಗಳ ಹೆಸರಿರುವುದು ಇಲ್ಲಿ ಉಲ್ಲೇಖಾರ್ಹ.

**ವೆಬ್‌ಸೈಟ್‌ನಲ್ಲಿ ಪ್ರಕಟಿಸಿ:** ಇದೇ ವೇಳೆ, ಅಧಿಕ ಶುಲ್ಕ ಸಂಗ್ರಹದ ಬಗ್ಗೆ ದೂರು ಪರಿಹಾರ ವ್ಯವಸ್ಥೆ ಸ್ಥಾಪಿಸಿರುವ ಮಾಹಿತಿಯನ್ನು ಪಾಲಿಕೆಯ ವೆಬ್‌ಸೈಟ್‌ನಲ್ಲಿ ಆ ಕುರಿತು ಮಾಹಿತಿಯನ್ನು ಪ್ರಕಟಿಸಿ ಎಂದು ನಿರ್ದೇಶನ ನೀಡಿತು. ಏತನ್ಮಧ್ಯೆ, ಕರ್ನಾಟಕ ಸಾಂಕ್ರಾಮಿಕ ಕಾಯಿದೆಗೆ ತಿದ್ದುಪಡಿ ತಂದು, ಉಲ್ಲಂಘಿಸಿದವರಿಗೆ ದಂಡ ವಿಧಿಸುವ ನಿಯಮ ರಚಿಸುವ ಬಗ್ಗೆ ಮುಂದಿನ ವಿಚಾರಣೆ ವೇಳೆ ಮಾಹಿತಿ ನೀಡುವಂತೆಯೂ ತಿಳಿಸಿತು.

**ಅಮಿಕಸ್ ಕ್ಯೂರಿಗೆ ಸೂಚನೆ:** ಎಲ್ಲ ಅರ್ಜಿಗಳನ್ನು ಪರಿಶೀಲಿಸಿ, ಸದ್ಯದ ಪರಿಸ್ಥಿತಿಯಲ್ಲಿ ತೀರಾ ಅಗತ್ಯವಿರುವ ಪ್ರಕರಣಗಳು ಹಾಗೂ ವಿಚಾರಗಳ ಪಟ್ಟಿಯನ್ನು ಸಿದ್ಧಪಡಿಸಿ ನ್ಯಾಯಾಲಯಕ್ಕೆ ಒದಗಿಸುವಂತೆ ನ್ಯಾಯಪೀಠ ಅಮಿಕಸ್ ಕ್ಯೂರಿ ವಿಕ್ರಂ ಹುಯಿಲಗೋಳ ಅವರಿಗೆ ಸೂಚನೆ ನೀಡಿತು.

ಆಧಾರ:ವಿಜಯ ಕರ್ನಾಟಕ, ದಿನಾಂಕ:26.10.2021

## 47. 5 ಲಕ್ಷ ಜನರಿಂದ ಕನ್ನಡ ಗೀತ ಗಾಯನ

ಕನ್ನಡಕ್ಕಾಗಿ ನಾವು ಅಭಿಯಾನದ ಅಂಗವಾಗಿ ಇದೇ 28 ರಂದು ನಡೆಯಲಿರುವ ಸಾಮೂಹಿಕ ಕನ್ನಡ ಗೀತೆಗಳ ಗಾಯನದಲ್ಲಿ 5 ಲಕ್ಷ ಜನ ಭಾಗವಹಿಸಲಿದ್ದಾರೆ.

ರಾಜ್ಯದ ಎಲ್ಲ 31 ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯತ್ ಸಿಇಒಗಳ ಜೊತೆ ಚರ್ಚಿಸಿ ಇದಕ್ಕಾಗಿ ಅಗತ್ಯ ಸಿದ್ಧತೆ ಮಾಡಿಕೊಳ್ಳಲಾಗಿದೆ. ಸುಮಾರು 1,000 ಕ್ಕೂ ಹೆಚ್ಚು ಸ್ಥಳಗಳಲ್ಲಿ ಗೀತ ಗಾಯನ ಕಾರ್ಯಕ್ರಮ ನಡೆಯಲಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಸಚಿವರು ತಿಳಿಸಿದ್ದಾರೆ.

ಅಂದು ಬೆಳಿಗ್ಗೆ 11.00ಕ್ಕೆ ನಡೆಯಲಿರುವ ಈ ಕಾರ್ಯಕ್ರಮದಲ್ಲಿ ಸರ್ಕಾರಿ ಇಲಾಖೆಗಳ ಅಧಿಕಾರಿಗಳು ಮತ್ತು ಸಿಬ್ಬಂದಿ ಮಾತ್ರವಲ್ಲದೇ, ಕನ್ನಡ ನಾಡಿನ ಎಲ್ಲ ವರ್ಗದ ಜನರು ಭಾಗವಹಿಸುತ್ತಾರೆ. ದೇಶದ ಇತರ ರಾಜ್ಯಗಳು ಮತ್ತು ವಿದೇಶಗಳಲ್ಲಿ ನೆಲಿಸಿರುವ ಕನ್ನಡಿಗರು, ಕನ್ನಡ ಕೂಟಗಳು ಸಹ ಕನ್ನಡ ಗೀತೆಗಳನ್ನು ಹಾಡಲಿದ್ದಾರೆ. ಇವರಿಗಾಗಿ ಒದಗಿಸಿರುವ ನಿರ್ದಿಷ್ಟ ಜಾಲತಾಣ ಸಂಪರ್ಕದ ಮೂಲಕ ಒಟ್ಟಿಗೆ ಹಾಡುವ ತಾಂತ್ರಿಕ ಸಂಯೋಜನೆ ರೂಪಿಸಲಾಗಿದೆ ಎಂದು ಅವರು ಹೇಳಿದರು.

ನಾಡಿನ ಎಲ್ಲ ಸರ್ಕಾರಿ ಕಛೇರಿಗಳು, ಶಾಲಾ–ಕಾಲೇಜಗಳ ಆವರಣ, ವಿಶ್ವವಿದ್ಯಾಲಯಗಳ ಆವರಣ, ತಾಂತ್ರಿಕ ಮತ್ತು ವೈದ್ಯಕೀಯ ವಿಶ್ವವಿದ್ಯಾಲಯಗಳ ಆವರಣ, ಮೈಸೂರು ಅರಮನೆ ಮುಂಭಾಗ, ಹಂಪಿಯ ಕಲ್ಲಿನ ರಥ, ಮಹಾನವಮಿ ದಿಬ್ಬ ಸೇರಿ ವಿವಿಧ ಜಿಲ್ಲೆಗಳ ಪ್ರಸಿದ್ಧ ಸ್ಮಾರಕಗಳ ಮುಂದೆ ಒಟ್ಟಿಗೆ ನಿಂತು ಗಾಯನ ಮಾಡಲಾಗುತ್ತದೆ ಎಂದರು.

ರಾಜ್ಯದ ಎಲ್ಲ ದೊಡ್ಡ ಮಾರುಕಟ್ಟೆಗಳು, ಆಟೋರಿಕ್ಷಾ ನಿಲ್ದಾಣಗಳು, ಕೈಗಾರಿಕಾ ಪ್ರದೇಶಗಳು ಮತ್ತು ಜನಬಿಡ ಸ್ಥಳಗಳಲ್ಲಿ ಗೀತಗಾಯನ ನಡೆಯಲಿದೆ. ದೊಡ್ಡ ಸಂಖ್ಯೆಯ ಜನ ಸೇರುವ ಸ್ಥಳಗಳಲ್ಲಿ ಗೀತೆಗಳ ಧಾಟಿಯನ್ನು ಕಲಿಸಲು ಪರಿಣಿತ ಸಂಗೀತ ಗಾಯಕರನ್ನು ನಿಯೋಜಿಸಲಾಗಿದೆ ಎಂದು ಸುನಿಲ್ ಕುಮಾರ್ ಹೇಳಿದರು.

**ಇನ್ನು ಎಲ್ಲೆಲ್ಲಿ ಗಾಯನ:**

- ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ಮಂಗಳೂರು ಮತ್ತು ಹುಬ್ಬಳ್ಳಿ ವಿಮಾನ ನಿಲ್ದಾಣಗಳು.
- ಬೆಂಗಳೂರು ಮೆಟ್ರೊದ ಎಲ್ಲ ರೈಲುಗಳಲ್ಲಿ ಬೆಳಿಗ್ಗೆ 11 ಗಂಟೆಗೆ ಸುಗಮ ಸಂಗೀತ ಗಾಯನ ತಂಡಗಳು ಮೂರು ಗೀತೆಗಳನ್ನು ಹಾಡುತ್ತವೆ. ಮೆಟ್ರೊದ ಎಲ್ಲ 51 ನಿಲ್ದಾಣಗಳಲ್ಲಿ ಕನ್ನಡ ಗೀತೆಗಳ ಗಾಯನ ಧ್ವನಿ ವರ್ಧಕಗಳ ಮೂಲಕ ಪ್ರಸಾರವಾಗಲಿದೆ. ಅತ್ಯಂತ ಜನನಿಬಿಡ 5 ಮೆಟ್ರೊ ನಿಲ್ದಾಣಗಳಲ್ಲಿ ಸಾಮೂಹಿಕ ಗೀತೆಗಾಯನ ನಡೆಯಲಿದೆ.
- ವಿಧಾನಸೌಧದ ಮೆಟ್ಟಿಲುಗಳ ಮೇಲೆ ಮುಖ್ಯಮಂತ್ರಿ, ಸರ್ಕಾರದ ಮುಖ್ಯಕಾರ್ಯದರ್ಶಿ ಮತ್ತು ಕನ್ನಡ ಮತ್ತು ಸಂಸ್ಕೃತಿ ಸಚಿವರು, ಅಧಿಕಾರಿಗಳು, ಸಿಬ್ಬಂದಿ ಸೇರಿ 3 ಸಾವಿರ ಮಂದಿ ಭಾಗವಹಿಸುವರು.
- ಜೋಗ ಜಲಪಾತದ ಮುಂದೆ, ಕುಪ್ಪಳಿಯ ಕವಿಶೈಲ, ಚಿತ್ರದುರ್ಗದ ಕೋಟೆ, ಮಂಗಳೂರಿನ ಕಡಲ ಕಿನಾರೆ, ಉಡುಪಿಯ ಶ್ರೀಕೃಷ್ಣ ದೇಗುಲ, ಮೂಡಬಿದಿರೆಯ ಸಾವಿರ ಕಂಬದ ಬಸದಿ, ಮಂಗಳೂರು ಬಂದರಿನ ಮೀನುಗಾರರ ಮಧ್ಯೆ.
- ಸಿದ್ದಗಂಗಾ ಮಠದ ಆವರಣ, ಶ್ರೀರಂಗಪಟ್ಟಣದ ಶ್ರೀರಂಗನಾಥಸ್ವಾಮಿ ದೇಗುಲ, ಭಾಗಮಂಡಲ, ಬೀದರ್‌ನ ಗೋಳ ಗುಮ್ಮಟ, ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ಕನ್ನಡದ ಮೊದಲ ಶಾಸನ ದೊರೆತ ಹಲ್ಮಿಡಿ ಗ್ರಾಮ.

ಆಧಾರ:ವಿಜಯ ಕರ್ನಾಟಕ, ದಿನಾಂಕ:26.10.2021

## 48. ಅಭಿವೃದ್ಧಿಗೆ ಭ್ರಷ್ಟಾಚಾರ ಅಡಚಣೆ

ಭ್ರಷ್ಟಾಚಾರದ ವಿರುದ್ದ ಅರಿವು ಮೂಡಿಸುವ ನಿಟ್ಟಿನಲ್ಲಿ ಜಾಗೃತಿ ಅರಿವು ಸಪ್ತಾಹಕ್ಕೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರು ಚಾಲನೆ ನೀಡಿದರು.

ವಿಧಾನಸೌಧ ಸಮ್ಮೇಳನ ಸಭಾಂಗಣದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರತಿಜ್ಞಾ ವಿಧಿ ಬೋಧಿಸಿದ ಅವರು, ನಮ್ಮ ದೇಶದ ಆರ್ಥಿಕ ರಾಜಕೀಯ ಮತು ಸಾಮಾಜಿಕ ಅಭಿವೃದ್ಧಿಗೆ ಭ್ರಷ್ಟಾಚಾರ ನಿರ್ಮೂಲನೆ ಮಾಡಲು ಸರ್ಕಾರ, ನಾಗರಿಕರು ಮತ್ತು ಖಾಸಗಿ ವಲಯದ ಎಲ್ಲರೂ ಒಟ್ಟಾಗಿ ಕೆಲಸ ಮಾಡಬೇಕಾಗುತ್ತದೆ ಎಂದರು.

ಜೀವನದ ಎಲ್ಲ ಕ್ಷೇತ್ರಗಳಲ್ಲಿ ಪ್ರಾಮಾಣಿಕತೆ ಕಾನೂನಿನ ನಿಯಮ ಅನುಸರಿಸುತ್ತೇನೆ. ಲಂಚವನ್ನು ಪಡೆಯುವುದಿಲ್ಲ ಹಾಗೂ ನೀಡುವುದೂ ಇಲ್ಲ. ಎಲ್ಲ ಕಾರ್ಯಗಳನ್ನು ಪ್ರಾಮಾಣಿಕ ಮತ್ತು ಪಾರದರ್ಶಕ ರೀತಿಯಲ್ಲಿ ನಿರ್ವಹಿಸುತ್ತೇನೆ. ಯಾವುದೇ ಭ್ರಷ್ಟಾಚಾರದ ಘಟನೆಯನ್ನು ಸೂಕ್ತ ಸಂಸ್ಥೆಗೆ ವರದಿ ಮಾಡುತ್ತೇನೆ ಎಂದು ಪ್ರತಿಜ್ಞಾ ವಿಧಿ ಬೋಧಿಸಿದರು.

ಸಚಿವಾಲಯದ ಹಿರಿಯ ಅಧಿಕಾರಿಗಳು, ಸಿಬ್ಬಂದಿ ಪ್ರತಿಜ್ಞಾ ವಿಧಿ ಸ್ವೀಕರಿಸಿದರು. ವಿಧಾನಸಭೆ ಸಚಿವಾಲದ ಸಿಬ್ಬಂದಿಗೆ ವಿಧಾನಸಭೆ ಮೊಗಸಾಲೆಯಲ್ಲಿ ಕಾರ್ಯದರ್ಶಿಯವರು ಪ್ರತಿಜ್ಞಾ ವಿಧಿ ಬೋಧಿಸಿದರು.

ಆಧಾರ:ಉದಯವಾಣಿ, ದಿನಾಂಕ:27.10.2021

## 49. Parliamentary panel to Visit Bangalore tomorrow

The Joint Parliamentary Committee, deliberating on the Personal Data Protection (PDP) Bill, is slated to visit Bengaluru, specifically the Unique Identification Authority of India (UIDA) office here on October 28.

According to sources, the JPC is expected to review UIDAI's security and privacy practices. The JPC is headed by Lok Sabha member and former Union minister PP Choudhary. The 30 member committee also has Bangalore South MP Tejasvi Surya.

Sources, familiar with the JPC's Bangalore visit, said the UIDAI might be asked questions on its authentication modes, especially the one involving facial recognition.

In the UIDAI stated in a circular that it would roll out face authentication in a phased manner owing to the non-readiness of some device providers. Also the UIDAI had stated that face authentication will be introduced as secondary authencation factor to reduce the rate of authentication failures, especially for senior citizens and that face authentication will be used only in conjunction with another authentication factor such as finger/iris/OTP.

According to sources, facial recognition apparently uses an algorithm to measure the livens of the face of a user, and if likeness is confirmed the photo is sent to UIDAI backend for authentication.

Courtesy: Deccan Herald, Dated:27.10.2021

## 50. ನವೆಂಬರ್ ತಿಂಗಳಿನಲ್ಲೇ ಮನೆ–ಮನೆಗೆ ಪಡಿತರ ಶುರು

ರಾಜ್ಯದಲ್ಲಿ ಮನೆ–ಮನೆಗೆ ಪಡಿತರ ತಲುಪಿಸುವ ವ್ಯವಸ್ಥೆ ಜಾರಿಗೆ ತರಲು ಸರ್ಕಾರ ಗಂಭೀರ ಚಿಂತನೆ ನಡೆಸಿದ್ದು ಮೊದಲ ಹಂತದಲ್ಲಿ ಬೆಂಗಳೂರಿನಲ್ಲಿ ಪ್ರಾಯೋಗಿಕವಾಗಿ ನವೆಂಬರ್ ತಿಂಗಳಿಂದಲೇ

ಜಾರಿಯಾಗುವ ಸಾಧ್ಯತೆಯಿದೆ. ಮೂಲಗಳ ಪ್ರಕಾರ ಸಿಎಂ ನೇತೃತ್ವದಲ್ಲಿ ಅಂತಿಮ ತೀರ್ಮಾನ ಕೈಗೊಳ್ಳುವ ಸಾಧ್ಯತೆಯಿದೆ.

**ಪಡಿತರ ಹಂಚಿಕೆ ಹೇಗೆ:** ಪಡಿತರ ಹಂಚಿಕೆಗೆ ಸರಕು ಸಾಗಣೆ ಆಟೋ ಬಳಸಲು ಚಿಂತಿಸಲಾಗಿದೆ. ಬೆಂಗಳೂರು ವ್ಯಾಪ್ತಿಗೆ 700 ಹಾಗೂ ಇಡೀ ರಾಜ್ಯಾದ್ಯಂತ ಪಡಿತರ ವಿತರಣೆಗೆ 10 ಸಾವಿರ ಸರಕು ಸಾಗಣೆ ವಾಹನಗಳ ಅಗತ್ಯವಿರುವ ಬಗ್ಗೆಯೂ ಚರ್ಚಿಸಲಾಗಿದೆ.

ಇಲಾಖೆಯೇ ವಾಹನ ಖರೀದಿಸುವ ಬದಲಿಗೆ ಪ್ರೋತ್ಸಾಹಧನ ಸಾಲ ವ್ಯವಸ್ಥೆ ಒದಗಿಸಿ ನಿರುದ್ಯೋಗಿಗಳು ಸ್ವಾವಲಂಬಿಗಳಾಗಿ ಕಾರ್ಯನಿರ್ವಹಿಸಲು ಅವಕಾಶ ಕಲ್ಪಿಸುವ ಬಗ್ಗೆ ಸಮಾಲೋಚನೆ ಆಗಿದೆ. ಸಾಗಣೆ ಆಟೋ ವೆಚ್ಚದಲ್ಲಿ ಶೇ.30 ಸಬ್ಸಿಡಿ, ಜಿಎಸ್‌ಟಿ ರೂಪದಲ್ಲಿ ಸರ್ಕಾರ ಭರಿಸಲಿದೆ. ಶೇ.10 ಆಸಕ್ತ ಫಲಾನುಭವಿ ಭರಿಸಬೇಕು. ಉಳಿಕೆ ಶೇ.60 ಮೊತ್ತ ಶೇ.4 ಬಡ್ಡಿಗೆ ಸಾಲ ಪಡೆಯಲು ಇಲಾಖೆ ನೆರವು ನೀಡಲಿದೆ. 6 ವರ್ಷಗಳಲ್ಲಿ ಸಾಲ ಮರುಪಾವತಿಸಿದರೆ ವಾಹನ ಫಲಾನುಭವಿಯ ಸ್ವಂತವಾಗಲಿದೆ.

**ಹಲವು ಸಮಸ್ಯೆಗಳು ಇವೆ:** ಇದೇ ವೇಳೆ ಒಂದು ವಾಹನ ಎಷ್ಟು ಪಡಿತರದಾರರಿಗೆ ಪಡಿತರ ವಿತರಿಸಬೇಕು. ಪಡಿತರ ವಿತರಣೆ ವೇಳೆ ಮನೆಗಳಲ್ಲಿ ಇಲ್ಲದವರಿಗೆ ಪಡಿತರ ಹೇಗೆ ವಿತರಣೆ ಮಾಡಬೇಕು. ವಿತರಣೆ ಲೋಪಗಳಿಗೆ ಪಡಿತರ ನ್ಯಾಯಬೆಲೆ ಅಂಗಡಿಗಳು ಹೊಣೆಯಾಗಬೇಕೆ ಅಥವಾ ವಾಹನದಲ್ಲಿ ಪೂರೈಕೆ ಮಾಡುವಾತ ಹೊಣೆಯಾಗಬೇಕೆ ಎಂಬ ಬಗ್ಗೆ ಪರಿಹಾರ ಕಂಡುಕೊಂಡ ಬಳಿಕ ಪ್ರಾಯೋಗಿಕ ಯೋಜನೆಗೆ ಚಾಲನೆ ನೀಡಲಾಗುವುದು.

ಆಧಾರ:ಕನ್ನಡ ಪ್ರಭ, ದಿನಾಂಕ:28.10.2021

## 51. ಭೂಸ್ವಾಧೀನ ಪರಿಹಾರಕ್ಕೆ ಹೊಸ ರೂಲ್ಸ್

ಸರ್ಕಾರದ ಇಲಾಖೆ ಅಥವಾ ಸಂಸ್ಥೆಗಳು ವಿವಿಧ ಉದ್ದೇಶಗಳಿಗೆ ನಡೆಸುವ ಭೂಸ್ವಾಧೀನ ಪರಿಹಾರ ಮೊತ್ತವನ್ನು ಪ್ರಕ್ರಿಯೆ ಆರಂಭಕ್ಕೂ ಮುನ್ನ ಠೇವಣಿ ಇಡಬೇಕು ಎಂಬುದು ಸೇರಿದಂತೆ ಭೂಸ್ವಾಧೀನಕ್ಕೆ ಸಂಬಂಧಿಸಿದ ನಿಯಮಗಳಿಗೆ ಹಲವು ತಿದ್ದುಪಡಿ ತರಲು ರಾಜ್ಯ ಸರ್ಕಾರ ಮುಂದಾಗಿದೆ. ಈ ಸಂಬಂಧ ಕರಡು ನಿಯಮವನ್ನು ಕಂದಾಯ ಇಲಾಖೆ ಪ್ರಕಟಿಸಿದೆ.

ಇದಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಸೂಕ್ತ ಪರಿಹಾರದ ಹಕ್ಕು ಪುನರ್ವಸತಿ ಮತ್ತು ಪುನರ್ ನಿರ್ಮಾಣ (ಕರ್ನಾಟಕ) ನಿಯಮಗಳು–2015ಕ್ಕೆ ತಿದ್ದುಪಡಿ ತರಲು ಉದ್ದೇಶಿಸಿದ್ದು, ಈ ಸಂಬಂಧ ಕರಡು ನಿಯಮವನ್ನು ಅಕ್ಟೋಬರ್ 22ರಂದು ರಾಜ್ಯಪತ್ರದಲ್ಲಿ ಪ್ರಕಟಿಸಿದ್ದು, 15 ದಿನದೊಳಗೆ ಆಕ್ಷೇಪಣೆ, ಸಲಹೆ ಸಲ್ಲಿಸಲು ಅವಕಾಶ ನೀಡಲಾಗಿದೆ.

**ಯಾವ ಇಲಾಖೆಗೆ ಅನ್ವಯ:** ಎತ್ತಿನಹೊಳೆ ಕೃಷ್ಣಾ ಮೇಲ್ದಂಡೆ, ಭದ್ರಾ ಮೇಲ್ದಂಡೆ ಮುಂತಾದ ಯೋಜನೆ ಕೈಗೆತ್ತಿಕೊಂಡಿರುವ ಜಲಸಂಪನ್ಮೂಲ ಸೇರಿದಂತೆ ಕೃಷಿ, ನಗರಾಭಿವೃದ್ಧಿ ಇಲಾಖೆಗಳು, ಪಂಚಾಯಿತಿಗಳು ಹಾಗೂ ರೈಲ್ವೆ ಇಲಾಖೆ ಕೈಗೆತ್ತಿಕೊಳ್ಳಲಿರುವ ಯೋಜನೆಗಳಿಗೆ ಈ ನಿಯಮ ಅನ್ವಯವಾಗಲಿದೆ.

**ಕರಡು ನಿಯಮಗಳು:** ನಿರ್ದಿಷ್ಟಪಡಿಸಿದ ಯೋಜನೆಗಳಿಗೆ ಅಗತ್ಯವಿರುವ ಒಟ್ಟು ವಿಸ್ತೀರ್ಣದ ಮಾಹಿತಿಯೊಂದಿಗೆ ಭೂಮಿ ಕೋರುವ ಇಲಾಖೆ ಅಥವಾ ಸಂಸ್ಥೆಗಳ ಮುಖ್ಯಸ್ಥರು ನೇರವಾಗಿ ಅಥವಾ ಜಿಲ್ಲಾಧಿಕಾರಿಗಳ ಮೂಲಕ ಸರ್ಕಾರಕ್ಕೆ ಲಿಖಿತ ರೂಪದಲ್ಲಿ ಕೋರಿಕೆ ಸಲ್ಲಿಸಿದ ನಂತರವೇ ಸರ್ಕಾರ ಭೂಸ್ವಾಧೀನಕ್ಕೆ ಅಧಿಸೂಚನೆ ಹೊರಡಿಸಬೇಕು. ಪ್ರಾಥಮಿಕ ಅಧಿಸೂಚನೆ ರಾಜ್ಯಪತ್ರದಲ್ಲಿ ಪ್ರಕಟಗೊಂಡ ನಂತರ ನೋಂದಣಿ ಕಾರ್ಯವನ್ನು 120 ದಿನಗಳಲ್ಲಿ ಮುಕ್ತಾಯಗೊಳಿಸಬೇಕು.

**ತೇವಣಿ ನಂತರವೇ ರಾಜ್ಯಪತ್ರದಲ್ಲಿ ಪ್ರಕಟ**: ಭೂಸ್ವಾಧೀನಕ್ಕೆ ಸಂಬಂಧಪಟ್ಟಂತೆ ಆಕ್ಷೇಪಣೆ ಪರಿಗಣಿಸಿದ ನಂತರ ಭೂಮಿ ಪಡೆಯಲಿರುವ ಇಲಾಖೆ ಅಥವಾ ಸಂಸ್ಥೆ ಶೇ.100 ರಷ್ಟು ಭೂಸ್ವಾಧೀನದ ಅಂದಾಜು ವೆಚ್ಚವನ್ನು ತೇವಣಿ ಮಾಡಿರುವುದನ್ನು ಖಚಿತಪಡಿಸಿಕೊಂಡು ಸರ್ಕಾರ ರಾಜ್ಯಪತ್ರದಲ್ಲಿ ಪ್ರಕಟಿಸಬೇಕಾಗುತ್ತದೆ.

ಭೂಸ್ವಾಧೀನದಿಂದ ಬಾಧಿತ ಕುಟುಂಬಕ್ಕೆ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಅವಕಾಶಗಳ ಬದಲಾಗಿ ನೀಡಲಾಗುವ ಒಂದು ಇಡಿಗಂಟು ಮೊತ್ತ ಕನಿಷ್ಠ ರೂ. 50 ಸಾವಿರ ಅಥವಾ ಒಟ್ಟು ಜಮೀನಿನ ಮಾರುಕಟ್ಟೆ ಮೌಲ್ಯವನ್ನು ಪರಿಗಣಿಸಿ, ಭೂಸ್ವಾಧೀನವಾಗಲಿರುವ ಜಮೀನಿನ ವಿಸ್ತೀರ್ಣವನ್ನು ಲೆಕ್ಕಹಾಕಿ ಗರಿಷ್ಠ ರೂ.5 ಲಕ್ಷ ಮೀರದಂತೆ ಇಡಿಗಂಟು ನೀಡಲಾಗುವುದು.

**ವಿನಾಯಿತಿ**: ಭೂಸ್ವಾಧೀನದಲ್ಲಿ ಆಗುವ ವಿಳಂಬ ತಪ್ಪಿಸಲು ಸಾಮಾಜಿಕ ಪರಿಣಾಮ ನಿರ್ಧರಣಾ ಅಧ್ಯಯನದಿಂದ ವಿನಾಯಿತಿ ನೀಡಲು ಉದ್ದೇಶಿಸಲಾಗಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:28.10.2021

## 52. ಕನ್ನಡಕ್ಕಾಗಿ ನಾವು ಸಂಕಲ್ಪ ಸ್ವೀಕರಿಸೋಣ

ಕನ್ನಡಕ್ಕಾಗಿ ನಾವು ಅಭಿಯಾನದ ಅಂಗವಾಗಿ ರಾಜ್ಯ, ದೇಶ ಮತ್ತು ವಿದೇಶದ ಸಾವಿರಾರು ಕಡೆಗಳಲ್ಲಿ ಆಯೋಜಿಸಿರುವ ಬೃಹತ್ ಕಾರ್ಯಕ್ರಮದಲ್ಲಿ ಏಕಕಾಲದಲ್ಲಿ ಲಕ್ಷ ಕಂಠಗಳ ಗೀತಗಾಯನ ನಡೆಯಲಿದೆ. ಇದೇ ಕಾರ್ಯಕ್ರಮದಲ್ಲಿ ಕನ್ನಡ ಭಾಷೆ, ನಾಡು ನುಡಿಯ ರಕ್ಷಣೆ ಸಂಕಲ್ಪ ಸ್ವೀಕರಿಸಲಾಗುತ್ತದೆ.

ಕಾರ್ಯಕ್ರಮದಲ್ಲಿ ಸ್ವೀಕರಿಸಬೇಕಾಗಿರುವ ಸಂಕಲ್ಪ ಮತ್ತು ಸ್ವರೂಪ ಕುರಿತು ಇಂಧನ, ಕನ್ನಡ ಮತ್ತು ಸಂಸ್ಕೃತಿ ಸಚಿವರು ಮಾಹಿತಿ ನೀಡಿದ್ದು, ಎಲ್ಲ ಕನ್ನಡಿಗರು ಜೊತೆಗೂಡಿ ಕಾರ್ಯಕ್ರಮ ಯಶಸ್ವಿಗೊಳಿಸಬೇಕು ಎಂದು ಮನವಿ ಮಾಡಿದ್ದಾರೆ.

ಗೀತ ಗಾಯನದಲ್ಲಿ ಭಾಗವಹಿಸುವವರೆಲ್ಲರೂ ಬೆಳಿಗ್ಗೆ 10.45ಕ್ಕೆ ತಮಗೆ ನಿಗದಿಪಡಿಸಿದ ಸ್ಥಳಗಳಲ್ಲಿ ಹಾಜರಿರಬೇಕು. ಬೆಳಿಗ್ಗೆ 11 ಗಂಟೆಗೆ ಸ್ವಾಗತ ನುಡಿಗಳೊಂದಿಗೆ ಕಾರ್ಯಕ್ರಮ ಆರಂಭವಾಗುತ್ತದೆ. ಮೊದಲಿಗೆ ನಾಡಗೀತೆ ಹಾಡಲಾಗುವುದು. ಆನಂತರ ಈಗಾಗಲೇ ಸೂಚಿಸಿರುವ ಮೂರು ಕನ್ನಡ ಗೀತೆಗಳನ್ನು ಹಾಡಲಾಗುವುದು. ಗೀತಗಾಯನದ ನಂತರ ಸಂಕಲ್ಪ ಸ್ವೀಕಾರ ನಡೆಯಲಿದೆ.

**ಸರ್ವ ಸಿದ್ದತೆ**: ಗೀತಗಾಯನಕ್ಕಾಗಿ ರಾಜ್ಯದ ಎಲ್ಲಾ 31 ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಜಿಲ್ಲಾಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳ ನೇತೃತ್ವದಲ್ಲಿ ಸರ್ವ ಸಿದ್ದತೆಗಳು ನಡೆದಿವೆ. ರಾಷ್ಟ್ರಕವಿ ಕುವೆಂಪು ಅವರ **ಬಾರಿಸು ಕನ್ನಡ ಡಿಂಡಿಂಮವ,** ನಿಸಾರ್ ಅಹಮ್ಮದ್ ಅವರ **ಜೋಗದ ಸಿರಿ ಬೆಳಕಿನಲ್ಲಿ** ಮತ್ತು ಡಾ:ಹಂಸಲೇಖ ಅವರ **ಹುಟ್ಟಿದರೇ ಕನ್ನಡ ನಾಡಲ್ಲಿ ಹುಟ್ಟಬೇಕು** ಈ ಮೂರು ಗೀತೆಗಳು ಬೆಳಿಗ್ಗೆ 11 ಗಂಟೆಗೆ ಏಕಕಾಲದಲ್ಲಿ ರಾಜ್ಯಾದ್ಯಂತ ಮೊಳಗಲಿವೆ.

**ಸಾಮಾಜಿಕ ಜಾಲತಾಣಗಳಲ್ಲಿ ಲೈವ್ ಗಾಯನ**: ಕನ್ನಡಕ್ಕಾಗಿ ನಾವು ಅಭಿಯಾನದ ಅಂಗವಾಗಿ ಬೆಂಗಳೂರು ನಗರ ಹಾಗೂ ರಾಜ್ಯದ ನಾನಾ ಭಾಗಗಳಲ್ಲಿನ ಹಲವು ಸುಗಮ ಸಂಗೀತ ಸಂಸ್ಥೆಗಳು ಫೇಸ್‌ಬುಕ್ ಮೂಲಕ ಸಹಸ್ರ ಸಂಖ್ಯೆಯಲ್ಲಿ ಏಕಕಾಲಕ್ಕೆ ಲೈವ್ ಗಾಯನ ನಡೆಸಿಕೊಡಲಿವೆ. ಇದಕ್ಕಾಗಿ ಕ್ಯಾಮರಾಗಳನ್ನು ಸೆಟ್ ಮಾಡಿಕೊಂಡು ಎಲ್ಲರನ್ನು ಒಂದೆಡೆ ಸಂಯೋಜಿಸುವ ಕಾರ್ಯಕ್ರಮವನ್ನೂ ಪೂರ್ಣಗೊಳಿಸಿದ್ದಾರೆ. ಉಪಾಸನಾ ಮೋಹನ್ ಮತ್ತಿತರರು ಕಾರ್ಯಕ್ರಮ ಆಯೋಜಿಸಲಿದ್ದಾರೆ. ತಮ್ಮ ಸಂಸ್ಥೆಗಳ ವಿದ್ಯಾರ್ಥಿಗಳನ್ನು ಕೂಡ ಗಾಯನದಲ್ಲಿ ತೊಡಗಿಸಿಕೊಳ್ಳಲಿದ್ದಾರೆ.

**ಸ್ಥಳ ಬದಲಾವಣೆ:** ಬೆಂಗಳೂರಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಗಾಂಧಿ ಪ್ರತಿಮೆ ಮುಂಭಾಗದಲ್ಲಿ ಬೆಳಿಗ್ಗೆ 11 ಗಂಟೆಗೆ ಆಯೋಜಿಸಿದ್ದ ಕಾರ್ಯಕ್ರಮ ವಿಧಾನಸೌಧದ ಮುಂಭಾಗಕ್ಕೆ ವರ್ಗವಾಗಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:28.10.2021

## 53. ಕನ್ನಡದಲ್ಲಿ ಎಂಜಿನಿಯರಿಂಗ್ ಶಿಕ್ಷಣಕ್ಕೆ ಸರ್ಕಾರ ಶೀಘ್ರ ಕ್ರಮ

ಎಂಜಿನಿಯರಿಂಗ್ ಶಿಕ್ಷಣವನ್ನು ಕನ್ನಡದಲ್ಲಿಯೇ ನೀಡಲು ಶೀಘ್ರ ಕ್ರಮ ಕೈಗೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಅವರು ಹೇಳಿದರು.

ಅಶೋಕನಗರದ ಕನ್ನಡ ಭವನದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಆಯೋಜಿಸಿದ್ದ ಕನ್ನಡಕ್ಕಾಗಿ ನಾವು ಅಭಿಯಾನದಡಿ ಸಾಮೂಹಿಕ ಕನ್ನಡ ಗೀತೆಗಳ ಗಾಯನ ಕಾರ್ಯಕ್ರಮದಲ್ಲಿ ಮಾತನಾಡಿದರು.

ಈಗಾಗಲೇ ರಾಜ್ಯದ 15 ಎಂಜಿನಿಯರಿಂಗ್ ಕಾಲೇಜುಗಳು ಕನ್ನಡದಲ್ಲಿ ಎಂಜಿನಿಯರಿಂಗ್ ಶಿಕ್ಷಣ ನೀಡಲು ಮುಂದೆ ಬಂದಿವೆ ಎಂದು ತಿಳಿಸಿದರು.

ಆಧುನಿಕ ತಂತ್ರಜ್ಞಾನ ಕನ್ನಡಕ್ಕೆ ಸವಾಲಾಗಿದೆ. ತಂತ್ರಜ್ಞಾನದಿಂದಾಗಿ ನಮ್ಮ ಭಾಷೆ ತಂತ್ರಾಂಶ ಭಾಷೆಯಾಗಿದೆ. ನಮ್ಮ ಮಕ್ಕಳು ಎಲ್ಲ ಕ್ಷೇತ್ರಗಳಲ್ಲಿ ಸಾಧನೆ ಮಾಡಲು ಕನ್ನಡ ಭಾಷೆಯನ್ನು ತಂತ್ರಾಂಶ ಭಾಷೆಯನ್ನಾಗಿ ಇನ್ನಷ್ಟು ಬೆಳೆಸುವ ಅವಶ್ಯಕತೆಯಿದೆ. ಇದರಿಂದ ಮಕ್ಕಳು ಕನ್ನಡದಲ್ಲಿಯೇ ಸುಲಭವಾಗಿ ಕಲಿತು ಜ್ಞಾನ ವೃದ್ಧಿಸಿಕೊಳ್ಳಬಹುದು ಎಂದರು.

ನಮ್ಮ ಸರ್ಕಾರ ಜಾರಿಗೊಳಿಸಿದ ನೂತನ ಶಿಕ್ಷಣ ನೀತಿಯಲ್ಲಿ ಮಾತೃಭಾಷೆಗೆ ಆದ್ಯತೆ ನೀಡಲಾಗಿದೆ. ಕೇವಲ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವೇ ಅಲ್ಲ, ಪದವಿಯಲ್ಲಿ ಕೂಡ ಕನ್ನಡವನ್ನು ಕಡ್ಡಾಯವಾಗಿ ಕಲಿಸಲು ಸೂಚಿಸಿದೆ. ಈ ವಿಷಯ ನ್ಯಾಯಾಲಯದ ಮೆಟ್ಟಿಲೇರಿದ್ದು, ಸರ್ಕಾರವು ಕಾನೂನಾತ್ಮಕ ಹೋರಾಟ ಮುಂದುವರೆಸುತ್ತಿದೆ. ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣವನ್ನು ಕನ್ನಡದಲ್ಲಿಯೂ ನೀಡಲು ಕ್ರಮ ಕೈಗೊಳ್ಳಲಾಗಿದೆ ಎಂದರು.

ಕನ್ನಡ ಭಾಷೆ ಎಷ್ಟು ಸಮೃದ್ಧವಾಗಿದೆ ಎಂದರೆ ಕನ್ನಡದ ಕೆಲ ಪದ ವಿಶೇಷಗಳು ವಿಶ್ವದ ಹಲವು ಭಾಷೆಗಳಿಗೆ ಭಾಷಾಂತರಗೊಂಡಿವೆ. ಕನ್ನಡ ಬಳಕೆ ಹೆಚ್ಚಾಗಬೇಕು. ಕನ್ನಡದಲ್ಲಿಯೇ ಬರೆಯಬೇಕು. ಕನ್ನಡವನ್ನು ಓದಬೇಕು, ಆಗ ಮಾತ್ರ ಕನ್ನಡ ಉಳಿದು ಬೆಳೆಯಲು ಸಾಧ್ಯವಾಗುತ್ತದೆ ಎಂದರು. ಕನ್ನಡ ಭಾಷೆ ಸೂರ್ಯ ಚಂದ್ರ ಇರುವವರೆಗೂ ಅಜರಾಮವಾಗಿರಲಿದೆ. ಕನ್ನಡಕ್ಕೆ ಇತಿಹಾಸವಿದೆ, ಕನ್ನಡಕ್ಕೆ ಭವಿಷ್ಯವು ಇದೆ, ನಮ್ಮ ಭಾಷೆ ಬೆಳೆಯಲು ಅದರ ಬಳಕೆ ಅಗತ್ಯ, ನಮ್ಮ ಭಾಷೆ ಉತ್ತುಂಗಕ್ಕೆ ಬರುವಂತೆ ಮಾಡುವ ಕೆಲಸವನ್ನು ನಾವೆಲ್ಲರೂ ಮಾಡಬೇಕು. ಕನ್ನಡ ತಾಯಿಯ ಋಣವನ್ನು ತೀರಿಸಬೇಕು ಎಂದರು.

ನಾವು ಕನ್ನಡವನ್ನೇ ಮಾತನಾಡಿದರೆ ರಾಜ್ಯದಲ್ಲಿ ನೆಲೆರುವ ಅನ್ಯ ಭಾಷಿಕರು ಖಂಡಿತವಾಗಿಯೂ ಕನ್ನಡ ಕಲಿಯುತ್ತಾರೆ. ಕನ್ನಡೇತರ ಬಂಧುಗಳಿಗೆ ಪ್ರೀತಿಯಿಂದ ಕನ್ನಡವನ್ನು ಕಲಿಸಬೇಕು. ಕನ್ನಡವನ್ನು ಉಳಿಸಿ ಬೆಳೆಸುವ ದಿಸೆಯಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರ ನೀಡುವ ಶಿಫಾರಸ್ಸುಗಳಿಗೆ ಸರ್ಕಾರ ಬೆಂಬಲ ನೀಡಲಿದೆ ಎಂದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:29.10.2021

## 54. ಬಿಟ್ ಕಾಯಿನ್ ಸಂಚಲನ

ಉಪ ಚುನಾವಣೆ ಪ್ರಚಾರದ ಅಬ್ಬರಕ್ಕೆ ತೆರೆ ಬೀಳುತ್ತಿದ್ದಂತೆ ಬಿಟ್ ಕಾಯಿನ್ ವ್ಯವಹಾರದಲ್ಲಿ ನಡೆದಿದೆ ಎನ್ನಲಾದ ಅಕ್ರಮ ಪ್ರಕರಣ ರಾಜ್ಯ ರಾಜಕಾರಣದಲ್ಲಿ ತಲ್ಲಣ ಸೃಷ್ಟಿಸಿದೆ. ಇದರ ಬೆನ್ನಿಗೇ ಪ್ರತಿಕ್ರಿಯಿಸಿರುವ ಮುಖ್ಯಮಂತ್ರಿ ಅವರು ಪ್ರಕರಣದ ಸಂಬಂಧ ಕೇಂದ್ರೀಯ ತನಿಖಾ ಸಂಸ್ಥೆಗಳಿಂದ ಈಗಾಗಲೇ ತನಿಖೆ ನಡೆಯುತ್ತಿದೆ ಎಂದಿದ್ದಾರೆ.

ಬಿಟ್ ಕಾಯಿನ್ ಅವ್ಯವಹಾರದಲ್ಲಿ ಪ್ರಭಾವಿ ರಾಜಕಾರಣಿಗಳು ಶಾಮೀಲಾಗಿದ್ದಾರೆ ಎಂಬ ಮಾತು ಕೇಳಿ ಬಂದಿದೆ. ಉಪ ಚುನಾವಣೆ ಪ್ರಚಾರದ ಕಡೆಯ ದಿನ ಬಿಟ್ ಕಾಯಿನ್ ದಂಧೆ ಬಗ್ಗೆ ಪ್ರತಿಪಕ್ಷದ ನಾಯಕರು ಪ್ರಸ್ತಾಪಿಸಿದ್ದರು. ಬಳಿಕ ಇದೇ ವಿಚಾರವಾಗಿ ಟ್ವೀಟ್ ಮಾಡಿದ್ದ ಅವರು, ಈ ಪ್ರಕರಣವನ್ನೇ ಮುಚ್ಚಿ ಹಾಕುವ ಯತ್ನ ನಡೆದಿದೆ ಎಂದು ಆರೋಪಿಸಿದ್ದರು. ಅದರೊಂದಿಗೆ ರಾಜ್ಯ ರಾಜಕಾರಣದಲ್ಲಿ ಮಹತ್ವದ ಸುದ್ದಿಯೊಂದು ಮುನ್ನೆಲೆಗೆ ಬರುವಂತಾಗಿತ್ತು.

**ಇಡಿ, ಸಿಬಿಐ ಸುಪರ್ದಿಗೆ:** ಹುಬ್ಬಳ್ಳಿಯಲ್ಲಿ ಪ್ರತಿಕ್ರಿಯಿಸಿರುವ ಸಿಎಂ ಈ ಬಗ್ಗೆ ರಾಜ್ಯಮಟ್ಟದಲ್ಲಿ ತನಿಖೆ ಪೂರ್ಣಗೊಂಡಿದೆ. ಬಳಿಕ ಈ ಪ್ರಕರಣವನ್ನು ಇಡಿ ಮತ್ತು ಸಿಬಿಐಗೆ ನಾವೇ ಶಿಫಾರಸ್ಸು ಮಾಡಿದ್ದೇವೆ. ತನಿಖೆ ಮುಂದುವರಿಯುತ್ತದೆ. ಇದರಲ್ಲಿ ಯಾರು ಹಸ್ತಕ್ಷೇಪ ಮಾಡಲು ಪ್ರಭಾವ ಬೀರಲು ಅವಕಾಶವಿಲ್ಲ. ಪ್ರಕರಣದಲ್ಲಿ ಯಾರದ್ದಾದರೂ ಪಾತ್ರವಿದ್ದರೆ ತಿಳಿಸಲಿ ಅದರ ಬಗ್ಗೆಯೂ ತನಿಖೆ ಮಾಡಲಾಗುವುದು ಎಂದು ಹೇಳಿದ್ದಾರೆ. ಈ ಮಧ್ಯೆ ಗೃಹ ಸಚಿವರು ಪ್ರಕರಣ ಸಂಬಂಧ ಸಿಐಡಿ ವಿಶೇಷ ತಂಡ ತನಿಖೆ ನಡೆಸುತ್ತಿದೆ ಎಂದಿದ್ದಾರೆ.

ಮುಖ್ಯಮಂತ್ರಿಯವರ ಪೂರ್ವ ನಿಯೋಜಿತ ಕಾರ್ಯಕಲಾಪದಂತೆ ಮಧ್ಯಾಹ್ನವೇ ಅವರು ಬೆಂಗಳೂರಿಗೆ ಆಗಮಿಸಿ ಮಹತ್ವದ ಸಭೆಗಳಲ್ಲಿ ಭಾಗವಹಿಸಬೇಕಿತ್ತು. ಬೆಂಗಳೂರಿನ ಸಭೆಗಳನ್ನು ರದ್ದುಪಡಿಸಿದ ಅವರು ಹುಬ್ಬಳ್ಳಿಯಲ್ಲಿ ಉಳಿದುಕೊಂಡದ್ದು ಗಮನ ಸೆಳೆಯಿತು. ಹುಬ್ಬಳ್ಳಿಯಲ್ಲೇ ಅವರು ಕನ್ನಡಕ್ಕಾಗಿ ನಾವು ಇನ್ನಿತರ ಕಾರ್ಯಕ್ರಮಗಳಲ್ಲಿ ಭಾಗಿಯಾದರು.

**ಸಿದ್ದರಾಮಯ್ಯ ತಿರುಗೇಟು:** ಇನ್ನು ಸಿಎಂ ಹೇಳಿಕೆ ಹುಬ್ಬಳ್ಳಿಯಲ್ಲೇ ಇದ್ದ ಪ್ರತಿಪಕ್ಷದ ನಾಯಕರು ತಿರುಗೇಟು ನೀಡಿದ್ದಾರೆ. ರಾಮಲಿಂಗಾರೆಡ್ಡಿ ಅವರು ಈ ಪ್ರಕರಣದಲ್ಲಿ ರೂ.10 ಸಾವಿರ ಕೋಟಿ ವಹಿವಾಟಿನ ಗುಮಾನಿಯಿದೆ. ಇದರ ಸತ್ಯಾಂಶ ಹೊರಬಂದರೆ ಹಲವು ನಾಯಕರ ಖುರ್ಚಿ ಅಲುಗಾಡಲಿದೆ. ಪ್ರಕರಣ ಸಂಬಂಧ ನ್ಯಾಯಾಂಗ ತನಿಖೆಯೇ ಸೂಕ್ತ. ಇತರ ತನಿಖಾ ಸಂಸ್ಥೆಗಳ ಮೇಲೆ ನಂಬಿಕೆ ಹೊರಟು ಹೋಗಿದೆ ಎಂದಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:29.10.2021

## 55. ಕೃಷಿ ವಿವಿಗಳ ಸಮಸ್ಯೆ ಇತ್ಯರ್ಥಕ್ಕೆ ಸೂಚನೆ

ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಸಿಬ್ಬಂದಿ ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಧರಣಿ ಮಾಡುವ ಬದಲು ಪರಸ್ಪರ ಮಾತುಕತೆ ಮೂಲಕ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕು ಎಂದು ರಾಜ್ಯಪಾಲರು ಸಲಹೆ ನೀಡಿದ್ದಾರೆ.

ರಾಜಭವನದ ಸ್ವಾಮಿ ವಿವೇಕಾನಂದ ಭವನದಲ್ಲಿ ಕೃಷಿ ಸಚಿವರು ಮತ್ತು ಕೃಷಿ ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿ, ಶಿಕ್ಷಕರ ಕಲ್ಯಾಣ ಸಂಘದ ಪ್ರತಿನಿಧಿಗಳು, ರಾಜ್ಯ ಸರ್ಕಾರ ಹಾಗೂ ಯುಜಿಸಿಯ ಅಧಿಕಾರಿಗಳ ಜಂಟಿ ಸಭೆಯಲ್ಲಿ ಮಾತನಾಡಿದರು.

ಕೃಷಿ ವಿಶ್ವವಿದ್ಯಾಲಯದ ಶಿಕ್ಷಕರ ಕಲ್ಯಾಣ ಸಂಘದ ಬೇಡಿಕೆಗಳನ್ನು ಪರಿಗಣಿಸಿ, ಕಾನೂನು ಚೌಕಟ್ಟಿನಲ್ಲಿ ಅವುಗಳ ಪರಿಹಾರಕ್ಕೆ ಕ್ರಮ ಕೈಗೊಳ್ಳಲಾಗುವುದು. ಶಿಕ್ಷಕರು ಮುಷ್ಕರ ಕೈಗೊಳ್ಳುವ ಬದಲಾಗಿ, ಸರ್ಕಾರ ಮತ್ತು ಆಡಳಿತ ಮಂಡಳಿ ಗಮನಕ್ಕೆ ತಂದು ಹಾಗೂ ಮಾತುಕತೆ ಮೂಲಕ ಸಮಸ್ಯೆ ಬಗೆಹರಿಸುಕೊಳ್ಳಬೇಕು ಎಂದರು.

ಸಭೆಯಲ್ಲಿ ಬಡ್ತಿ, ಜೇಷ್ಠತಾ ಪಟ್ಟಿ, ಪಿಂಚಣಿ ಇತರೆ ವಿಶ್ವವಿದ್ಯಾಲಯಗಳಲ್ಲಿ ಸಲ್ಲಿಸಿದ ಸೇವೆ ಪರಿಗಣನೆ, ನಿವೃತ್ತಿ ವಯೋಮಿತಿ ಏರಿಕೆ ಸೇರಿ ಹಲವು ಬೇಡಿಕೆಗಳ ಕುರಿತು ಶಿಕ್ಷಕರ ಕಲ್ಯಾಣ ಸಂಘದ ಡಾ:ಮಹಾಂತೇಶ ನಾಯಕ ಪ್ರಸ್ತಾಪಿಸಿದರು. ರಾಜ್ಯಪಾಲರು ಕೆಲವು ಬೇಡಿಕೆಗಳಿಗೆ ಸ್ಥಳದಲ್ಲೇ ಪರಿಹಾರದ ಮಾರ್ಗಗಳನ್ನು ತಿಳಿಸಿದರು. ಕಾನೂನಿನ ಚೌಕಟ್ಟಿನಲ್ಲಿ ಹಾಗೂ ಶಿಕ್ಷಕರ ಅನುಕೂಲವಾಗುವ ನಿಟ್ಟಿನಲ್ಲಿ ಬೇಡಿಕೆಗಳ ಈಡೇರಿಕೆಗೆ ಕ್ರಮ ಕೈಗೊಳ್ಳಲು ಸಂಬಂಧಿತ ಅಧಿಕಾರಿಗಳಿಗೆ ಸೂಚಿಸಿದರು.

ಕೃಷಿ ಸಚಿವರು ಮಾತನಾಡಿ ರಾಜ್ಯಪಾಲರು ಶಿಕ್ಷಕರ ಮನವಿಯನ್ನು ಪರಿಗಣಿಸಿ ಉನ್ನತ ಮಟ್ಟದ ಸಭೆ ನಡೆಸಿದ್ದಾರೆ. ಕಾನೂನಿನ ಪ್ರಕಾರ ಹಾಗೂ ರಾಜ್ಯಪಾಲರ ಮಾರ್ಗದರ್ಶನದಲ್ಲಿ ಸಮಸ್ಯೆ ಬಗೆಹರಿಸಲು ಪ್ರಯತ್ನಿಸಲಾಗುವುದು ಎಂದು ಹೇಳಿದರು.

ತೋಟಗಾರಿಕೆ ಇಲಾಖೆ ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆ, ಹಣಕಾಸು ಇಲಾಖೆಯ ವಿಶೇಷ ಕಾರ್ಯದರ್ಶಿ, ಧಾರವಾಡ ಕೃಷಿ ವಿವಿ ಶಿಕ್ಷಕರ ಸಂಘದ ಪ್ರತಿನಿಧಿಗಳು ಸೇರಿದಂತೆ ಸರ್ಕಾರದ ಉನ್ನತ ಮಟ್ಟದ ಅಧಿಕಾರಿಗಳು ಸಭೆಯಲ್ಲಿ ಉಪಸ್ಥಿತರಿದ್ದರು.

**ಪರಿಹಾರ ಭರವಸೆ:** ಧಾರವಾಡದ ಕೃಷಿ ವಿಶ್ವವಿದ್ಯಾಲಯದ ಆವರಣದಲ್ಲಿ ಶಿಕ್ಷಕರ ಸಂಘ ಮುಷ್ಕರ ಕೈಗೊಂಡಿತ್ತು. ಧಾರವಾಡ ಪ್ರವಾಸದಲ್ಲಿದ್ದ ರಾಜ್ಯಪಾಲರು ಮುಷ್ಕರ ಸ್ಥಳಕ್ಕೆ ಭೇಟಿ ನೀಡಿ ಕೃಷಿ ವಿಶ್ವವಿದ್ಯಾಲಯದ ಶಿಕ್ಷಕರ ಕಲ್ಯಾಣ ಸಂಘದ ಬೇಡಿಕೆಗಳನ್ನು ಪರಿಗಣಿಸಿ, ಕಾನೂನು ಚೌಕಟ್ಟಿನಲ್ಲಿ ಅವುಗಳ ಪರಿಹಾರಕ್ಕೆ ಕ್ರಮ ವಹಿಸಲಾಗುವುದು. 10 ರಿಂದ 12 ದಿನಗಳ ಅವಧಿಯಲ್ಲಿ ಉನ್ನತ ಮಟ್ಟದ ಸಭೆ ನಡೆಸಿ ಈ ಕುರಿತು ಪರಿಹಾರಕ್ಕೆ ಸೂತ್ರ ಒದಗಿಸಲಾಗುವುದು ಎಂದು ಭರವಸೆ ನೀಡಿದ್ದರು.

ಆಧಾರ:ವಿಜಯವಾಣಿ, ದಿನಾಂಕ:30.10.2021

## 56. ಸರ್ಕಾರಿ ಜಾಲತಾಣದಿಂದ ರೂ.46 ಕೋಟಿ ದೋಚಿದ್ದ

ಬಿಟ್ ಕಾಯಿನ್ ಹಗರಣದ ಮೂಲ ಸೂತ್ರದಾರ ಎನ್ನಲಾದ ಶ್ರೀಕೃಷ್ಣ ಅಲಿಯಾಸ್ ಶ್ರೀಕಿ (26) ರಾಜ್ಯ ಸರ್ಕಾರದ ಜಾಲತಾಣವನ್ನೇ ಹ್ಯಾಕ್ ಮಾಡಿ ರೂ.46 ಕೋಟಿ ದೋಚಿದ್ದನೆಂಬ ಸಂಗತಿ ಸಿಸಿಬಿ ಪೊಲೀಸರ ತನಿಖೆಯಿಂದ ಪತ್ತೆಯಾಗಿದೆ.

ಕೆಂಪೇಗೌಡನಗರ ಠಾಣೆಯಲ್ಲಿ ದಾಖಲಾಗಿದ್ದ ಡ್ರಗ್ಸ್ ಪ್ರಕರಣದಲ್ಲಿ ಶ್ರೀಕೃಷ್ಣನನ್ನು ಬಂಧಿಸಿದ್ದ ಸಿಸಿಬಿ ಪೊಲೀಸರು, ಆತನ ಹಿನ್ನೆಲೆ ಕೇಳಿ ದಂಗಾಗಿದ್ದರು. ಅಂತರರಾಷ್ಟ್ರೀಯ ಹ್ಯಾಕರ್ ಎಂಬ ಮಾಹಿತಿ ಗೊತ್ತಾಗುತ್ತಿದ್ದಂತೆ, ಹೊಸ ಆಯಾಮದಲ್ಲೇ ತನಿಖೆ ಮುಂದುವರಿಸಿದ್ದರು.

ಬಿಟ್ ಕಾಯಿನ್ ಅಕ್ರಮದಲ್ಲಿ ಶ್ರೀಕಿ ಭಾಗಿಯಾಗಿರುವ ಮಾಹಿತಿ ಲಭ್ಯವಾಗುತ್ತಿದ್ದಂತೆ ಮಾಹಿತಿ ತಂತ್ರಜ್ಞಾನ ಕಾಯ್ದೆಯಡಿ ಕಾಟನ್‌ಪೇಟೆ ಠಾಣೆಯಲ್ಲಿ ಎರಡನೇ ಎಫ್ಐಆರ್ ದಾಖಲಾಗಿತ್ತು. ಇದರ ತನಿಖೆ ಕೈಗೊಂಡಿದ್ದ ಸಿಸಿಬಿ ಪೊಲೀಸರು, ಹಲವು ಹ್ಯಾಕಿಂಗ್ ಪ್ರಕರಣಗಳನ್ನು ಪತ್ತೆ ಮಾಡಿ ನ್ಯಾಯಾಲಯಕ್ಕೆ ದೋಷಾರೋಪ ಪಟ್ಟಿ ಸಲ್ಲಿಸಿದ್ದಾರೆ.

ರಾಜ್ಯ ಸರ್ಕಾರದ ಇ–ಸಂಗ್ರಹಣಾ ಪೋರ್ಟಲ್ ಜಾಲತಾಣವನ್ನು ಮೂರು ಬಾರಿ (2019ರ ಮೇ ಹಾಗೂ ಜೂನ್) ಶ್ರೀಕೃಷ್ಣ ಹ್ಯಾಕ್ ಮಾಡಿದ್ದ ಒಂದು ಪ್ರಯತ್ನ ವಿಫಲವಾಗಿತ್ತು. ಎರಡು ಪ್ರಯತ್ನದಲ್ಲಿ ಯಶಸ್ಸು ಸಾಧಿಸಿದ್ದ ಎಂಬ ಮಾಹಿತಿ ಪಟ್ಟಿಯಲ್ಲಿದೆ.

ಉತ್ತರಾಖಂಡದ ಹಿಮಾಲಯಸ್ ಆನಂದ ಸ್ಪಾ ಆ್ಯಂಡ್ ರೆಸಾರ್ಟ್‌ನಲ್ಲಿ ಇದ್ದುಕೊಂಡು ಆರೋಪಿ ಈ ಕೃತ್ಯ ಎಸಗಿದ್ದ. ಟೆಂಡರ್‌ಗೆ ಬಿಡ್ ಮಾಡಿದ್ದ ಗುತ್ತಿಗೆದಾರರ ವೈಯಕ್ತಿಕ ಮಾಹಿತಿ ಹಾಗೂ ಅವರು ಬ್ಯಾಂಕ್‌ಗೆ ಪಾವತಿಸಿದ್ದ ಹಣದ ಮಾಹಿತಿಯನ್ನು ಶ್ರೀಕೃಷ್ಣ ಕದ್ದಿದ್ದ. ಇದಕ್ಕಾಗಿ ಆರೋಪಿ ಎಸ್‌ಕ್ಯೂಎಲ್ ಮ್ಯಾಪ್ ತಂತ್ರಜ್ಞಾನ ಬಳಸಿದ್ದ.

ಜಾಲತಾಣದ ದತ್ತಾಂಶ ಬಳಸಿಕೊಂಡು ಆರೋಪಿ ಹೇಮಂತ್ ಮುದ್ದಪ್ಪ ನೀಡಿದ್ದ ಎರಡು ಖಾತೆಗಳಿಗೆ ಪ್ರತ್ಯೇಕವಾಗಿ ರೂ. 18 ಕೋಟಿ ಹಾಗೂ ರೂ. 28 ಕೋಟಿಯನ್ನು ಆರೋಪಿ ವರ್ಗಾಣೆ ಮಾಡಿದ್ದ. ಅದರಲ್ಲಿ ರೂ. 2 ಕೋಟಿಯನ್ನು ಆಯೂಬ್ ಎಂಬಾತ ಪಡೆದಿದ್ದ. ಆದರೆ, ಆತ ಯಾರು ಎಂಬುದನ್ನು ಶ್ರೀಕೃಷ್ಣ ಬಾಯ್ಬಿಟ್ಟಿಲ್ಲ ಎಂಬ ಸಂಗತಿಯೂ ಆರೋಪ ಪಟ್ಟಿಯಲ್ಲಿದೆ.

ಜಾಲತಾಣ ಹ್ಯಾಕ್ ಆಗಿರುವ ಮಾಹಿತಿ ತಿಳಿಯುತ್ತಿದ್ದಂತೆ ಇ–ಸಂಗ್ರಹಣಾ ಪೋರ್ಟ್‌ಲ್ ಘಟಕದ ಆರ್ಥಿಕ ಸಲಹೆಗಾರ್ತಿ ಎಸ್.ಕೆ.ಶೈಲಜಾ, ಸಿಐಡಿಯ ಸೈಬರ್ ವಿಭಾಗಕ್ಕೆ ದೂರು ನೀಡಿದ್ದರು. ಅಕ್ರಮ ವರ್ಗಾವಣೆಯಿಂದ ಸರ್ಕಾರಕ್ಕೆ ರೂ.1.05 ಕೋಟಿ ನಷ್ಟವಾಗಿರುವುದಾಗಿ ತಿಳಿಸಿದ್ದರು. ತನಿಖೆ ಕೈಗೊಂಡಾಗಲೇ, ರೂ. 4 ಕೋಟಿ ಅಕ್ರಮ ವರ್ಗಾವಣೆ ಆಗಿರುವುದಾಗಿ ಗೊತ್ತಾಗಿದೆ. ಇದೇ ಹಣ, ಬಿಟ್ ಕಾಯಿನ್ ಆಗಿ ಪರಿವರ್ತನೆ ಆಗಿರುವ ಅನುಮಾನ ಇದೆ. ಆರೋಪಿ ಸಹ ತನ್ನ ಹೇಳಿಕೆಯಲ್ಲಿ ಇದನ್ನು ಒಪ್ಪಿಕೊಂಡಿದ್ದಾನೆ ಎಂಬ ಮಾಹಿತಿಯೂ ದೋಷಾರೋಪ ಪಟ್ಟಿಯಲ್ಲಿದೆ.

ಇ–ಸಂಗ್ರಹಣಾ ಪೋರ್ಟಲ್ ಜಾಲತಾಣ ಹ್ಯಾಕ್ ಪ್ರಕರಣದ ತನಿಖೆಯನ್ನು ಸದ್ಯ ಸಿಐಡಿ ಸೈಬರ್ ಕ್ರೈಂ ವಿಭಾಗದ ಅಧಿಕಾರಿಗಳು ನಡೆಸುತ್ತಿದ್ದಾರೆ. ಈ ಪ್ರಕರಣದಲ್ಲಿ ಶ್ರೀಕೃಷ್ಣನನ್ನು ವಿಚಾರಣೆ ಸಹ ನಡೆಸಿದ್ದಾರೆ ಎಂಬ ಮಾಹಿತಿಯನ್ನು ಸಿಸಿಬಿ ಪೊಲೀಸರು ನ್ಯಾಯಾಲಯದ ಗಮನಕ್ಕೆ ತಂದಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:30.10.2021

## 57. ಬಿಬಿಎಂಪಿ ಸ್ಟಾರ್ ಮುನ್ಸಿಪಲ್ ಪ್ರಶಸ್ತಿ

ನಗರದಲ್ಲಿ 18 ಕೆರೆಗಳನ್ನು ಪುನಶ್ಚೇತನ ಕಾರ್ಯಕ್ಕಾಗಿ 2020ನೇ ಸಾಲಿನ ಅರ್ಥ್ ಡೇ ನೆಟ್‌ವರ್ಕ್ ಸ್ಟಾರ್ ಮುನ್ಸಿಪಲ್ ಪ್ರಶಸ್ತಿಗೆ ಬಿಬಿಎಂಪಿ ಭಾಜನವಾಗಿದೆ. ಕೋಲ್ಕತ ಮೂಲಕ ಅರ್ಥ್ ಡೇ ಸಂಸ್ಥೆಯ ಹಿರಿಯ ವ್ಯವಸ್ಥಾಪಕಿ ನೀಲಾ ಮುಜುಂದಾರ್ ಮತ್ತು ಆಯುಕ್ತ ಗೌರವ್ ಗುಪ್ತ ಅರಿಗೆ ಪ್ರಶಸ್ತಿ ಪ್ರದಾನ ಮಾಡಿದರು.

ಅರ್ಥ್ ಡೇ ಸಂಸ್ಥೆ ಆರಂಭವಾಗಿ 2020ನೇ ಸಾಲಿಗೆ 50 ವರ್ಷ ಪೂರ್ಣಗೊಂಡಿದ್ದು, ನಗರಪಾಲಿಕೆಗಳ ಉತ್ತಮ ಕಾರ್ಯ ಗುರುತಿಸಿ ಪ್ರಶಸ್ತಿ ವಿತರಣೆ ಮಾಡುವ ಯೋಜನೆ ರೂಪಿಸಲಾಯಿತು. ಸ್ಥಳೀಯ ನಿವಾಸಿಗಳು ತಮ್ಮ ಪಾಲಿಕೆ ಕಾರ್ಯಗಳನ್ನು ಗುರುತಿಸಿ ಪ್ರಶಸ್ತಿಗೆ ಹೆಸರು ಸೂಚಿಸಬೇಕಿತ್ತು. ನಗರದ ಉಷಾ ರಾಜಗೋಪಾಲನ್ ಅವರು ಬಿಬಿಎಂಪಿ ಕೆರೆ ಪುನಶ್ಚೇತನ ಯೋಜನೆಯನ್ನು ಪ್ರಶಸ್ತಿಗೆ ನಾಮ ನಿರ್ದೇಶನ ಮಾಡಿದ್ದರು ಎಂದು ನೀಲಾ ಮಜುಂದಾರ್ ಮಾಹಿತಿ ನೀಡಿದರು.

ದೇಶದ 23 ಮಹಾನಗರಗಳಿಂದ ಅರ್ಜಿಗಳು ಬಂದಿದ್ದವು. ಈ ಪೈಕಿ ಬೆಂಗಳೂರಿಗೆ ಕೆರೆ ಪುನಶ್ಚೇತನ, ದೆಹಲಿಗೆ ಉದ್ಯಾನದ ಕಸ ಮರುಬಳಕೆ ಕೋಲ್ಕತದಲ್ಲಿ ಹಸಿರು ಸ್ನೇಹಿ ವಾಹನಗಳ ಬಳಕೆಗೆ

ಹಾಗೂ ಭುವನೇಶ್ವರದಲ್ಲಿ ಪ್ಲಾಸ್ಟಿಕ್ ಕೊಟ್ಟರೆ ಹಣ ಕೊಡುವ ಪದ್ಧತಿಗೆ ಪ್ರಶಸ್ತಿ ನೀಡಲಾಗಿದೆ ಎಂದು ವಿವರಿಸಿದರು.

ಪಾಲಿಕೆಯಿಂದ ಪ್ರತಿ ವರ್ಷ ಕೆರೆಗಳ ಪುನಶ್ಚೇತನ ಕಾರ್ಯ ಮಾಡುತ್ತಾ ಬರಲಾಗಿದೆ. ಈ ವರ್ಷ 25 ಕೆರೆಗಳ ಅಭಿವೃದ್ಧಿ ಕಾರ್ಯ ಕೈಗೆತ್ತಿಕೊಂಡಿದ್ದು, 18 ಕೆರೆಗಳ ಪುನಶ್ಚೇತನ ಪೂರ್ಣಗೊಂಡಿದೆ. ಅದನ್ನು ಗುರುತಿಸಿದ ಸಂಸ್ಥೆ ಹಾಗೂ ನಾಮಿನೇಟ್ ಮಾಡಿದ ಉಷಾ ರಾಜಗೋಪಾಲನ್‌ಗೆ ಗೌರವ್ ಗುಪ್ತಾ ಧನ್ಯವಾದ ಅರ್ಪಿಸಿದರು.

ಆಧಾರ:ವಿಜಯವಾಣಿ, ದಿನಾಂಕ:30.10.2021

## 58. ದಕ್ಷತೆಯಿಂದ ಕರ್ತವ್ಯ ನಿರ್ವಹಿಸಲು ಸೂಚನೆ

ದಕ್ಷತೆ ಹಾಗೂ ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಿಸುವಂತೆ ಸರ್ಕಾರಿ ನೌಕರರಿಗೆ ಮುಖ್ಯಮಂತ್ರಿಯವರು ಸೂಚಿಸಿದ್ದಾರೆ.

ರಾಷ್ಟ್ರೀಯ ಐಕ್ಯತಾ ದಿನದ ಪ್ರಯುಕ್ತ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರ ಭಾವಚಿತ್ರಕ್ಕೆ ನಮನ ಸಲ್ಲಿಸಿ ಪ್ರತಿಜ್ಞಾ ವಿಧಿ ಬೋಧಿಸಿದ ಅವರು, ವಿಧಾನಸೌಧ ಒಂದು ಶಕ್ತಿ ಕೇಂದ್ರ ನಾವೆಲ್ಲರೂ ಸರ್ಕಾರದ ಭಾಗವಾಗಿದ್ದೇವೆ. ಜನತಂತ್ರದ ಮೂಲಕ ಜನರ ಶ್ರೇಯೋಭಿವೃದ್ಧಿಗೆ ನಾವೆಲ್ಲರೂ ದುಡಿಯಬೇಕಿದೆ. ನಮ್ಮೆಲ್ಲರ ಮೇಲೆ ಹೆಚ್ಚಿನ ಜವಾಬ್ದಾರಿ ಇದೆ. ಜನರ ಏಳಿಗಾಗಿ ದುಡಿದಾಗ ಮಾತ್ರ ಸರ್ಕಾರದ ಕೆಲಸ ದೇವರ ಕೆಲಸ ಎಂಬುದು ಸಾರ್ಥಕವಾಗುತ್ತದೆ ಎಂದು ಕಿವಿ ಮಾತು ಹೇಳಿದರು.

ನಾನಾ ಭಾಷೆ, ಪ್ರಾಂತ್ಯಗಳಲ್ಲಿ ಹಂಚಿ ಹೋಗಿದ್ದ ಈ ದೇಶವನ್ನು ಒಗ್ಗೂಡಿಸಿ ಗಣರಾಜ್ಯವನ್ನಾಗಿಸಿ ಜನತಾಂತ್ರಿಕ ವ್ಯವಸ್ಥೆ ತರುವಲ್ಲಿ ಪಟೇಲರ ಪಾತ್ರ ಹಿರಿದಾಗಿದೆ. ಇಡೀ ದೇಶದ ರೈತ ಭಾಂದವರು ಮತ್ತು ಕಾರ್ಮಿಕ ವರ್ಗದವರಲ್ಲಿ ಜಾಗೃತಗೊಂಡು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸುವಲ್ಲಿ ಪಟೇಲರು ಪ್ರಮುಖ ಪಾತ್ರ ವಹಿಸಿದ್ದಾರೆ. ಈ ದೇಶದ ಗಡಿಗಳಲ್ಲಿನ ಸವಾಲು ಎದುರಿಸಬೇಕಾದರೆ ಆಂತರಿಕವಾಗಿ ಏಕತೆ, ಅಖಂಡತೆ ಮತ್ತು ಭದ್ರತೆ ಬಹಳ ಅವಶ್ಯಕ. ಆ ನಿಟ್ಟಿನಲ್ಲಿ ಪಟೇಲರ ಕಾರ್ಯವನ್ನು ಸ್ಮರಿಸುತ್ತೇವೆ ಎಂದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:01.11.2021

## 59. ಜನಸೇವಕ ಯೋಜನೆಗೆ ಮುಖ್ಯಮಂತ್ರಿ ಚಾಲನೆ

ಆಧಾರ್ ಕಾರ್ಡ್, ವಿಧವಾ ಪಿಂಚಣಿ, ವೃದ್ಧಾಪ್ಯವೇತನ ಸೇರಿದಂತೆ ಸರ್ಕಾರದ ವಿವಿಧ ಇಲಾಖೆಗಳ 68 ಸೇವೆಗಳನ್ನು ಜನರ ಮನೆ ಬಾಗಿಲಿಗೆ ತಲುಪಿಸುವ ಜನ ಸೇವಕ ಕಾರ್ಯಕ್ರಮಕ್ಕೆ ಮುಖ್ಯಮಂತ್ರಿಯವರು ಮಲ್ಲೇಶ್ವರದಲ್ಲಿ ಚಾಲನೆ ನೀಡಿದರು.

ನಗರದ ಪ್ಯಾಲೇಸ್ ಗುಟ್ಟಹಳ್ಳಿಯ 4 ಮತ್ತು 5ನೇ ಅಡ್ಡರಸ್ತೆಗಳಲ್ಲಿರುವ ಆಯ್ದ 10 ಮನೆಗಳಿಗೆ ಸ್ಥಳೀಯ ಶಾಸಕರು ಆದ ಡಾ:ಸಿ.ಎನ್.ಅಶ್ವತ್ಥನಾರಾಯಣ ಜೊತೆ ತೆರಳಿದ ಮುಖ್ಯಮಂತ್ರಿಯವರು ವಿವಿಧ ಸೇವೆಗಳನ್ನು ಸಂಬಂಧಪಟ್ಟವರ ಮನೆಗಳಿಗೆ ಹೋಗಿ ತಲುಪಿಸಿದರು.

ಇದರಿಂದ ಸ್ಥಳೀಯ ಜನರು ಹರ್ಷಚಿತ್ತರಾದರು. ಮುಖ್ಯಮಂತ್ರಿ ಹಾಗೂ ಸಚಿವರಿಗೆ ಪುಷ್ಪವೃಷ್ಟಿ ಮಾಡಿ ಸಂಭ್ರಮಿಸಿದರು. ಪ್ರತಿ ಮನೆಯ ಒಳಗೆ ಹೋಗಿ ಅವರಿಗೆ ಆಧಾರ್ , ಆರೋಗ್ಯ ಮತ್ತು ಎಪಿಎಲ್ ಕಾರ್ಡ್‌ಗಳನ್ನು ನೀಡಿದರು. ನಿರ್ಮಾಣ ಹಂತದ ಕಟ್ಟಡದೊಳಗೆ ಹೋಗಿ ಅಲ್ಲಿದ್ದ ಕಾರ್ಮಿಕರಿಗೆ ಕಾರ್ಮಿಕರ ಕಾರ್ಡ್ ನೀಡಿದರು. ತಳ್ಳುವ ಗಾಡಿಯಲ್ಲಿ ಹೂವು ಮಾರಾಟ ಮಾಡುತ್ತಿದ್ದ ಮಹಿಳೆಗೆ

ಆರೋಗ್ಯ ಕಾರ್ಡ್ ನೀಡಿದರು. ಮುಖ್ಯಮಂತ್ರಿಯೇ ಬಂದು ಈ ರೀತಿ ಸೇವೆ ಒದಗಿಸಿದ್ದು ನಿಜಕ್ಕೂ ಸಂತಸ ತಂದಿದೆ ಎಂದು ಎಲ್ಲರೂ ಧನ್ಯತೆ ಮೆರೆದರು.

ಯೋಜನೆಯನ್ನು ಇಡೀ ಬೆಂಗಳೂರಿನಲ್ಲಿ ಜಾರಿ ಮಾಡುತ್ತಿದ್ದು, ಅದರ ಸಾಂಕೇತಿಕ ಉದ್ಘಾಟನೆ ಮಲ್ಲೇಶ್ವರದಲ್ಲಿ ಆಗಿದೆ. ಜನವರಿ 26 ರಿಂದ ರಾಜ್ಯದ ಗ್ರಾಮೀಣ ಭಾಗಕ್ಕೂ ಈ ಯೋಜನೆಯನ್ನು ವಿಸ್ತರಿಸಲಾಗುವುದು ಎಂದು ಮುಖ್ಯಮಂತ್ರಿಗಳು ಘೋಷಿಸಿದರು.

ಜನರ ಮನೆ ಬಾಗಿಲಿಗೆ ಸರ್ಕಾರಿ ಸೇವೆ ಒದಗಿಸುವುದರ ಜೊತೆಗೆ ವಿವಿಧ ಇಲಾಖೆಗಳಿಗೆ ಸಂಬಂಧಿಸಿದ ದೂರುಗಳನ್ನು ಆಲಿಸಲು ಕಾಲ್ ಸೆಂಟರ್ ಕೂಡ ಆರಂಭಿಸಲಾಗುವುದು. ಮುಂದಿನ ದಿನಗಳಲ್ಲಿ ಪಡಿತರ ಕೂಡ ನೇರವಾಗಿ ಮನೆ ಬಾಗಿಲಿಗೆ ತಲುಪಿಸುವ ವ್ಯವಸ್ಥೆ ಜಾರಿ ಮಾಡಲಾಗುವುದು. ಜನಪ್ರತಿನಿಧಿಗಳು, ತಮ್ಮನ್ನು ಆರಿಸಿದ ಜನರ ಬಳಿಗೆ ತಾವೇ ಹೋಗಬೇಕೆನ್ನುವುದು ಸರ್ಕಾರದ ಆಶಯವಾಗಿವೆ. ಈ ಆಶಯಕ್ಕೆ ಅನುಗುಣವಾಗಿ ಜನಸೇವಕ ಕಾರ್ಯಕ್ರಮವನ್ನು ರೂಪಿಸಲಾಗಿದೆ ಎಂದು ಅವರು ಹೇಳಿದರು.

ಬಿಬಿಎಂಪಿ ಆಡಳಿತಾಧಿಕಾರಿ ರಾಕೇಶ್ ಸಿಂಗ್, ಬಿಬಿಎಂಪಿ ಮತ್ತು ಆಯುಕ್ತ ಗೌರವಗುಪ್ತ, ಬಿಬಿಎಂಪಿ ಪಶ್ಚಿಮ ವಲಯದ ಆಯುಕ್ತ ಬಸವರಾಜು, ಇಡಿಸಿಎಸ್ ನಿರ್ದೇಶಕಿ ದೀಪ್ತಿ ಕಾನಡೆ, ಜನಸೇವಕ ಯೋಜನೆಯ ನಿರ್ದೇಶಕ ವರಪ್ರಸಾದ್ ರೆಡ್ಡಿ ಸೇರಿದಂತೆ ಇತರ ಹಿರಿಯ ಅಧಿಕಾರಿಗಳು ಈ ಸಂದರ್ಭದಲ್ಲಿ ಹಾಜರಿದ್ದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:02.11.2021

## 60. ಶೇ.75ರಷ್ಟು ಉದ್ಯೋಗ ಕನ್ನಡಿಗರಿಗೆ ಮೀಸಲು

ಮುಂದಿನ ಸಚಿವ ಸಂಪುಟದಲ್ಲಿ ಮುಂಬೈ ಕರ್ನಾಟಕವನ್ನು ಕಿತ್ತೂರು ಕರ್ನಾಟಕ ಎಂದು ನಾಮಕರಣ ಮಾಡಿ ಅಧಿಕೃತವಾಗಿ ಘೋಷಣೆ ಮಾಡಲಾಗುವುದು ಎಂದು ಮುಖ್ಯಮಂತ್ರಿಗಳು ಹೇಳಿದ್ದಾರೆ.

ಶ್ರೀ ಕಂಠೀರವ ಕ್ರೀಡಾಂಗಣದಲ್ಲಿ 66ನೇ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ಧ್ವಜರೋಹಣ ನೆರವೇರಿಸಿ ಮಾತನಾಡಿದ ಅವರು ನಾಮಕರಣ ಮಾತ್ರ ಮಾಡಿ ಸುಮ್ಮನಿರುವುದಲ್ಲ. ಕಿತ್ತೂರು ಕರ್ನಾಟಕದ ಸಮಗ್ರ ಅಭಿವೃದ್ಧಿಗೆ ಯೋಜನೆ ರೂಪಿಸಲಾಗುವುದು ಮತ್ತು ಮುಂದಿನ ಬಜೆಟ್‌ನಲ್ಲಿ ಕಲ್ಯಾಣ ಕರ್ನಾಟಕಕ್ಕೆ ರೂ.3 ಸಾವಿರ ಕೋಟಿ ವಿಶೇಷ ಅನುದಾನ ನೀಡಲಾಗುವುದು ಎಂದು ಪ್ರಕಟಿಸಿದರು.

1956ರಲ್ಲೇ ರಾಜ್ಯಗಳ ಪುನರ್ ವಿಂಗಡಣೆ ಆಗಿ, ಕರ್ನಾಟಕ ಏಕೀಕರಣವಾಗಿದೆ. ರಾಜ್ಯದ ಗಡಿ ವ್ಯಾಜ್ಯಗಳ ಇತ್ಯರ್ಥವಾಗಿದೆ. ಆದರೂ ನಾವೇ ಮುಂಬೈ ಕರ್ನಾಟಕ ಅಂತ ಕರೆಯುವುದು ಸರಿಯಲ್ಲ. ಈ ಕಾರಣಕ್ಕೆ ಮುಂಬೈ ಕರ್ನಾಟಕ ಕಿತ್ತೂರು ಕರ್ನಾಟಕ ಆಗುತ್ತದೆ. ರಾಜ್ಯದ ಎಲ್ಲಾ ಪ್ರದೇಶಗಳ ಅಭಿವೃದ್ಧಿಗೂ ಕರ್ನಾಟಕ ಆದ್ಯತೆ ನೀಡುತ್ತದೆ. ಯಾವುದೇ ಪ್ರದೇಶ ಹಿಂದುಳಿಯಲು ಸರ್ಕಾರ ಬಿಡುವ ಪ್ರಶ್ನೆಯೇ ಇಲ್ಲ. ಮೈಸೂರು ಭಾಗದ ಕಾವೇರಿ, ಉತ್ತರ ಕರ್ನಾಟಕದ ಕೃಷ್ಣೇ ಜಲಾನಯನ ಪ್ರದೇಶಗಳ ಅಭಿವೃದ್ಧಿ ಮಾಡಲು ಕಟಿಬದ್ಧ ಎಂದು ಹೇಳಿದರು.

ಔದ್ಯೋಗಿಕ ನೀತಿಯ ಪರಿಣಾಮಕಾರಿ ಅನುಷ್ಠನಗೊಳಿಸಿ, ಕೌಶಲ್ಯ, ಅರೆ ಕೌಶಲ್ಯ ವಲಯದಲ್ಲಿ ಶೇ.75ರಷ್ಟು ಉದ್ಯೋಗಗಳನ್ನು ಖಾಸಗಿ, ಸರ್ಕಾರಿ ಹಾಗೂ ಅರೆ ಸರ್ಕಾರಿ ವಲಯದಲ್ಲಿ ಕನ್ನಡಿಗರಿಗೆ ಉದ್ಯೋಗ ದೊರಕಿಸಿ ಕೊಡಲು ಆದ್ಯತೆ ನೀಡಲಾಗುವುದು.

ಆಡಳಿತದಲ್ಲಿ ಕನ್ನಡದ ಪರಿಣಾಮಕಾರಿ ಬಳಕೆಗೆ ಈಗಾಗಲೇ ಹೊರಡಿಸಿರುವ ಆದೇಶಗಳ ಅನುಷ್ಠಾನಕ್ಕೆ ಕ್ರಮ ವಹಿಸಲಾಗುವುದು. ಕನ್ನಡಿಗರಿಗೆ ಉತ್ತಮ ಆಡಳಿತ ಸುಧಾರಣಾ ಆಯೋಗ ನೀಡಿರುವ ಪ್ರಥಮ ವರದಿಯ ಪ್ರಮುಖ ಭಾಗಗಳ ಅನುಷ್ಠಾನ ಮಾಡುತ್ತಿದ್ದು, ಅದರ ಮೂಲ ಭಾಗವಾಗಿ ಜನಸೇವಕ ಕಾರ್ಯಕ್ರಮದ ಮೂಲಕ ಸರ್ಕಾರದ 30 ಸೇವೆಗಳನ್ನು ಮನೆಮನೆಗೆ ತಲುಪಿಸುವ ಕಾರ್ಯಕ್ರಮವನ್ನು ಜನವರಿ 26 ರಿಂದ ರಾಜ್ಯಾದ್ಯಂತ ಅನುಷ್ಠಾನ ಮಾಡಲಾಗುವುದು ಎಂದು ತಿಳಿಸಿದರು.

ಯಡಿಯೂರಪ್ಪ ಅವರು ರಾಜ್ಯದ 180 ಸರ್ಕಾರಿ ಐಟಿಐಗಳ ಉನ್ನತೀಕರಣಕ್ಕೆ ಚಾಲನೆ ನೀಡಿದ್ದು ಇದೇ ತಿಂಗಳು ಉನ್ನತೀಕರಣದ ಕಾರ್ಯಪೂರ್ಣವಾಗಲಿದ್ದು, ಪ್ರಾಥಮಿಕ ಮಟ್ಟದಿಂದ ಹಿಡಿದು ಉನ್ನತ ಶಿಕ್ಷಣದವರೆಗೆ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡಲಾಗುವುದು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:02.11.2021

## 61. ರೈತರ ಮಕ್ಕಳಿಗೆ ಉನ್ನತ ಸ್ಕಾಲರ್ ಶಿಪ್

ಮುಖ್ಯಮಂತ್ರಿಗಳ ಮಹತ್ವಾಕಾಂಕ್ಷೆಯ ಯೋಜನೆ ರೈತ ವಿದ್ಯಾನಿಧಿ ಇದೀಗ ಉನ್ನತ ಶಿಕ್ಷಣಕ್ಕೂ ಅನ್ವಯವಾಗಿದೆ.

ಇದೊಂದು ಹೊಸ ಶಿಷ್ಯವೇತನ (ಸ್ಕಾಲರ್ ಶಿಪ್) ಈ ಸಾಲಿನಿಂದಲೇ ಜಾರಿಗೊಳಿಸಲು ಉನ್ನತ ಶಿಕ್ಷಣ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಯವರು ಸುತ್ತೋಲೆ ಹೊರಡಿಸಿದ್ದಾರೆ. ಇದರ ಪ್ರಕಾರ ಎಂಬಿಬಿಎಸ್, ಬಿಇ, ಬಿಟೆಕ್ ಹಾಗೂ ಪಿಜಿ ವಿದ್ಯಾರ್ಥಿಗಳಿಗೆ ರೂ.10 ಸಾವಿರ ವಿದ್ಯಾರ್ಥಿನಿಯರಿಗೆ ರೂ.11 ಸಾವಿರ, ಎಲ್ಎಲ್‌ಬಿ, ಪ್ಯಾರಾ ಮೆಡಿಕಲ್, ಭಿಫಾರ್ಮ್, ನರ್ಸಿಂಗ್ ವಿದ್ಯಾರ್ಥಿಗಳಿಗೆ ರೂ.7500 ಮತ್ತು ವಿದ್ಯಾರ್ಥಿನಿಯರಿಗೆ ರೂ.8000 ಸಂದಾಯವಾಗಲಿದೆ. ಸಾಮಾನ್ಯ ಪದವಿ ತರಗತಿಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ ತಲಾ ರೂ.5000 ಹಾಗೂ ರೂ.5500 ಸಂದಾಯವಾಗಲಿದೆ.

ಬಸವರಾಜ ಬೊಮ್ಮಾಯಿ ಅವರು ಪ್ರಮಾಣ ವಚನ ಸ್ವೀಕರಿಸಿದ ದಿನವೇ ಈ ವಿನೂತನ ಯೋಜನೆಯನ್ನು ಘೋಷಿಸಿದ್ದರು. ಈಗಾಗಲೇ ಪದವಿ ಪೂರ್ವ ಶಿಕ್ಷಣ ಪಡೆಯುವ ರೈತರ ಮಕ್ಕಳಿಗೆ ಈ ಯೋಜನೆ ಜಾರಿಗೊಳಿಸಿದ್ದು, ಸಾಂಕೇತಿಕವಾಗಿ ಮುಖ್ಯಮಂತ್ರಿಯವರೇ 100 ವಿದ್ಯಾರ್ಥಿಗಳಿಗೆ ಹಾಗೂ 52 ವಿದ್ಯಾರ್ಥಿನಿಯರಿಗೆ ನೇರ ನಗದು ಮೂಲಕ ಸಂದಾಯ ಮಾಡಿದ್ದರು. ಈ ಯೋಜನೆಯನ್ನು ಉನ್ನತ ಶಿಕ್ಷಣಕ್ಕೂ ಅನ್ವಯಿಸಲಾಗಿದೆ.

**ಯಾರು ಅರ್ಹ**: ಇದರ ಅನ್ವಯ ರಾಜ್ಯದ ಯಾವುದೇ ಭಾಗದಲ್ಲಿ ಉಳುಮೆ ಮಾಡುವ ಭೂಮಿ ಹೊಂದಿರುವ ರೈತರ ಮಕ್ಕಳು ಉನ್ನತ ಶಿಕ್ಷಣದಲ್ಲಿ ಯೋಜನೆಯ ಫಲ ಪಡೆಯಬಹುದಾಗಿದೆ. ಮೆರಿಟ್, ಅರ್ಹತಾ ಪರೀಕ್ಷೆ, ಶೈಕ್ಷಣಿಕ ಪರೀಕ್ಷೆಗಳಲ್ಲಿ ರ್‍ಯಾಂಕ್ ಹಾಗೂ ಇನ್ನಿತರ ಆಧಾರಗಳ ಮೇಲೆ ಶಿಷ್ಯವೇತನ ಪಡೆದವರೂ ಈ ನಿಧಿ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಶೈಕ್ಷಣಿಕ ವರ್ಷದಲ್ಲಿ ಅನುತ್ತೀರ್ಣರಾಗಿ ಮತ್ತೆ ಅದೇ ಕೋರ್ಸ್‌ಗಳ ಪುನರಾವರ್ತನೆಗೆ ಶಿಷ್ಯವೇತನ ದೊರೆಯುವುದಿಲ್ಲ. ಯಾವುದಾದರೊಂದು ಸ್ನಾತಕೋತ್ತರ ಶಿಕ್ಷಣ ಪಡೆಯಲು ಮಾತ್ರ ಶಿಷ್ಯವೇತನ ಅನ್ವಯವಾಗಲಿದೆ.

ಸರ್ಕಾರ ಸಾವಿರ ಕೋಟಿ ಅನುದಾನ ಮೀಸಲಿಟ್ಟಿದೆ. 10ನೇ ತರಗತಿ ಪೂರ್ಣಗೊಳಿಸಿದ ನಂತರ ರಾಜ್ಯದ ಯಾವುದೇ ಭಾಗದಲ್ಲಿರುವ ಅಧಿಕೃತವಾಗಿ ನೋಂದಣಿಯಾಗಿರುವ ಶಿಕ್ಷಣ ಸಂಸ್ಥೆಗಳು, ವಿಶ್ವವಿದ್ಯಾಲಯಗಳು, ಸ್ವಾಯತ್ತ ಕಾಲೇಜುಗಳು, ಪದವಿ ಮತ್ತು ಸ್ನಾತಕೋತ್ತರ ಕೋರ್ಸ್‌ಗಳಿಗೆ ಪ್ರವೇಶ ಪಡೆದಿರುವ ರೈತರ ಮಕ್ಕಳು ಈ ಸಾಲಿನಿಂದಲೇ ಶಿಷ್ಯವೇತನ ಪಡೆಯಬಹುದು.

ಈ ಕುರಿತು ಆನ್‌ಲೈನ್‌ನಲ್ಲಿ ಅರ್ಜಿ ಆಹ್ವಾನಿಸಲಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವಿದ್ಯಾರ್ಥಿಗಳು ಕಾರಣಾಂತರದಿಂದ ಶಿಷ್ಯವೇತನ ಪಡೆಯಲು ಅವಕಾಶವಾಗದಿದ್ದಲ್ಲಿ, ಈ ಯೋಜನೆಯ ಅಡಿಯಲ್ಲಿ ಪ್ರಯೋಜನ ಪಡೆಯಲು ಅವಕಾಶ ಕಲ್ಪಿಸಲಾಗಿದೆ.

ನೋಂದಣಿಯಾದ ರೈತರ ಮಕ್ಕಳಿಗೆ ಬ್ಯಾಂಕ್ ಖಾತೆಗಳ ಮೂಲಕ ನೇರವಾಗಿ (ಡಿಬಿಟಿ) ಶಿಷ್ಯವೇತನ ಸಂದಾಯವಾಗಲಿದೆ. ಈ ಕುರಿತು ವಿಶ್ವವಿದ್ಯಾಲಯ ಹಾಗೂ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಮಾಹಿತಿ ನೀಡುವಂತೆ ಕುಲಪತಿಗಳು ಹಾಗೂ ಪ್ರಾಂಶುಪಾಲರಿಗೆ ತಿಳಿಸಲಾಗಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:05.11.2021

## 62. 8 ರಿಂದ ಎಲ್‌ಕೆಜಿ, ಯುಕೆಜಿ ಆರಂಭ

ರಾಜ್ಯದಲ್ಲಿ ಕೊರೋನಾ ಕಡಿಮೆಯಾಗುತ್ತಿರುವ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ಪೂರ್ವ ಪ್ರಾಥಮಿಕ ಭೌತಿಕ ತರಗತಿಗಳನ್ನು ಆರಂಭಿಸುವಂತೆ ಸಾರ್ವಜನಿಕ ಶಿಕ್ಷಣ ಇಲಾಖೆಯು ಆದೇಶ ಹೊರಡಿಸಿದೆ. ಶೇ.2ಕ್ಕಿಂತ ಕಡಿಮೆ ಸೋಂಕು ಇರುವ ತಾಲ್ಲೂಕುಗಳಲ್ಲಿ ಭೌತಿಕ ತರಗತಿಗಳನ್ನು ಆರಂಭಿಸಲು ಆದೇಶ ನೀಡಲಾಗಿದೆ. ಈಗಾಗಲೇ ರಾಜ್ಯದ ಎಲ್ಲಾ ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ ಶಾಲೆಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ಪೂರ್ಣ ಪ್ರಮಾಣದಲ್ಲಿ ತರಗತಿಗಳು ಆರಂಭವಾಗಿದೆ. ಇದರ ಜೊತೆಗೆ ನವೆಂಬರ್ 8 ರಿಂದ ಅಂಗನವಾಡಿಗಳನ್ನು ಆರಂಭಿಸಲು ಸಹ ಅನುಮತಿ ನೀಡಲಾಗಿದೆ. ಕಳೆದ ಒಂದೂವರೆ ವರ್ಷಗಳಿಂದ ಮನೆಯಲ್ಲಿದ್ದ ಚಿಣ್ಣರು ಎಲ್‌ಕೆಜಿ, ಯುಕೆಜಿಗೆ ತೆರಳುವಂತಾಗಲಿದೆ.

ಸೋಮವಾರದಿಂದ ಶುಕ್ರವಾರವರೆಗೆ 5 ದಿನಗಳ ಕಾಲ ಬೆಳಿಗ್ಗೆ 9.30 ರಿಂದ ಮಧ್ಯಾಹ್ನ 3.30ರವರೆಗೆ ತರಗತಿಗಳನ್ನು ನಡೆಸುವಂತೆ ಸೂಚನೆ ನೀಡಲಾಗಿದೆ. ಶಾಲೆಗಳಿಗೆ ಅನುಕೂಲವಾಗುವ ರೀತಿಯಲ್ಲಿ ವೇಳಾಪಟ್ಟಿ ತಿದ್ದುಪಡಿ ಮಾಡಿಕೊಳ್ಳಲು ಆಯ್ಕೆ ನೀಡಿದೆ. ಮಕ್ಕಳನ್ನು ಶಾಲೆಗೆ ಕಳುಹಿಸಲು ಪೋಷಕರಿಂದ ಕಡ್ಡಾಯವಾಗಿ ಅನುಮತಿ ಪತ್ರ ಪಡೆಯುವಂತೆಯೂ ಸೂಚನೆ ನೀಡಿದೆ.

**ಮಾರ್ಗಸೂಚಿಗಳು:** ಶೇ.2ಕ್ಕಿಂತ ಕಡಿಮೆ ಸೋಂಕು ಇರುವ ತಾಲ್ಲೂಕಿನಲ್ಲಿ ಭೌತಿಕ ತರಗತಿಗಳನ್ನು ಆರಂಭಿಸಲಾಗುತ್ತಿದೆ. ಶಾಲೆಗಳನ್ನು ಆರಂಭಿಸುವ ಮುನ್ನ ಸೋಂಕು ನಿವಾರಕರಗಳಿಂದ ಕಡ್ಡಾಯವಾಗಿ ಕೊಠಡಿಗಳನ್ನು ಶುದ್ಧೀಕರಿಸಬೇಕು. ಮಕ್ಕಳು ಮನೆಯಿಂದಲೇ ಉಪಾಹಾರ ಮತ್ತು ಕುಡಿಯುವ ನೀರು ತರಬೇಕು. ಅವಶ್ಯಕತೆ ಇದ್ದಲ್ಲಿ ಶಾಲೆಗಳಲ್ಲಿ ಮಕ್ಕಳೂ ಕುಡಿಯಲು ಬಿಸಿನೀರಿನ ವ್ಯವಸ್ಥೆ ಮಾಡಬೇಕು.

ಕೊಠಡಿಗಳಲ್ಲಿ ಸಾಮಾಜಿಕ ಅಂತರ ಕಾಯ್ದುಕೊಂಡು ಮಕ್ಕಳು ಕುಳಿತುಕೊಳ್ಳಲು ವ್ಯವಸ್ಥೆ ಮಾಡಬೇಕು. ಶಾಲೆಯ ಪ್ರವೇಶ ದ್ವಾರದಲ್ಲಿ ಕೋವಿಡ್ ಲಕ್ಷಣಗಳ ತಪಾಸಣೆ ಮಾಡಬೇಕು. ಮಕ್ಕಳಿಗೆ ಕೆಮ್ಮು, ಜ್ವರ, ನೆಗಡಿ, ಮೂಗು ಸೋರುವುದು, ಮೈಕೈ ನೋವು, ಉಸಿರಾಟದ ಸಮಸ್ಯೆ ರುಚಿ ಮತ್ತು ವಾಸನೆಯನ್ನು ಕಳೆದುಕೊಳ್ಳುವ ಲಕ್ಷಣಗಳಿದ್ದರೆ ಮಕ್ಕಳನ್ನು ಪ್ರತ್ಯೇಕ ಕೊಠಡಿಯಲ್ಲಿರಿಸಿ ಪೋಷಕರ ಗಮನಕ್ಕೆ ತರಬೇಕು. ಒಂದು ವೇಳೆ ಶಾಲೆಯ ಯಾವುದೇ ಮಗುವಿಗೆ ಕೊರೋನಾ ಸೋಂಕು ದೃಢಪಟ್ಟಿದ್ದರೆ, ಉಳಿದ ಮಕ್ಕಳನ್ನು ಕೊರೋನಾ ಪರೀಕ್ಷೆಗೆ ಒಳಪಡಿಸಬೇಕು ಎಂದು ಮಾರ್ಗಸೂಚಿಯನ್ನು ಪ್ರಕಟಿಸಿದೆ. ನಿಯಮಾನುಸಾರ ಶಾಲೆಗಳನ್ನು ಆರಂಭಿಸಲು ಸಂಬಂಧಪಟ್ಟ ಅಧಿಕಾರಿಗಳು ಸ್ಥಳೀಯವಾಗಿ ಪರಿಶೀಲನೆ ನಡೆಸಬೇಕು ಎಂದು ಬಿಇಓ ಹಾಗೂ ಡಿಡಿಪಿಐಗಳಿಗೆ ಸಾರ್ವಜನಿಕ ಶಿಕ್ಷಣ ಆಯುಕ್ತರು ಸೂಚನೆ ನೀಡಿದ್ದಾರೆ.

ಆಧಾರ:ಉದಯವಾಣಿ, ದಿನಾಂಕ:05.11.2021

## 63. ಮತದಾರರ ಪಟ್ಟಿ ಪರಿಷ್ಕರಣೆಗೆ ತಿಂಗಳ ಕಾಲಾವಕಾಶ

ಬಿಬಿಎಂಪಿ ವ್ಯಾಪ್ತಿಯ ಮತದಾರರ ಪಟ್ಟಿಯ ಕರಡು ಪ್ರತಿಯನ್ನು ಬಿಡುಗಡೆ ಮಾಡಲಾಗುತ್ತಿದ್ದು, ಪರಿಷ್ಕರಣೆ ಮತ್ತು ಹೊಸ ಸೇರ್ಪಡೆಗೆ ಒಂದು ತಿಂಗಳ ನಾಲ್ಕು ಭಾನುವಾರಗಳಂದು ವಿಶೇಷ ನೋಂದಣಿ ಅಭಿಯಾನ ಹಮ್ಮಿಕೊಂಡಿದ್ದು, ಮೊಬೈಲ್ ಆ್ಯಪ್ ಮೂಲಕ ತ್ವರಿತ, ಸುಲಭ ನೋಂದಣಿಗೆ ಅವಕಾಶ ಕಲ್ಪಿಸಿಕೊಡಲಾಗಿದೆ.

ಈ ಕುರಿತು ಬಿಬಿಎಂಪಿ ಕೇಂದ್ರ ಕಚೇರಿಯಲ್ಲಿ ನಡೆದ ಸುದ್ದಿಗೋಷ್ಠಿಯಲ್ಲಿ ಬಿಬಿಎಂಪಿ ವಿಶೇಷ ಆಯುಕ್ತ ದಯಾನಂದ್ ಮಾತನಾಡಿ, 2021–22 ಸಾಲಿನ ಮತದಾರ ಪಟ್ಟಿ ಪರಿಷ್ಕರಣೆ ನಡೆಯುತ್ತಿದೆ. ಈಗಾಗಲೇ ಸೆಪ್ಟೆಂಬರ್ 3ರಿಂದ ಮತದಾರರ ಪಟ್ಟಿ ವಿಶೇಷ ಪರಿಷ್ಕರಣೆ ಪ್ರಾರಂಭವಾಗಿದ್ದು, ಕರಡು ಪಟ್ಟಿಯನ್ನು ಬಿಡುಗಡೆ ಮಾಡಲಾಗುತ್ತದೆ. ಡಿಸೆಂಬರ್ 8 ರವರಗೆ ಹೆಸರು ತಿದ್ದುಪಡಿ, ವಿಲಾಸ ಬದಲಾವಣೆ, ಮತದಾರ ಕ್ಷೇತ್ರ ವರ್ಗಾವಣೆ ಮತ್ತು ಹೊಸ ನೋಂದಣಿಗೆ ಅವಕಾಶವಿದೆ. ಹೀಗಾಗಿ ಕರಡು ಪಟ್ಟಿಯಲ್ಲಿ ಹೆಸರಿಲ್ಲದ 18 ವರ್ಷ ಮೇಲ್ಪಟ್ಟವರು ಹೊಸದಾಗಿ ಹೆಸರು ಸೇರ್ಪಡೆ ಮಾಡಬಹುದು ಎಂದರು.

ಮತದಾರರ ಕರಡು ಪಟ್ಟಿಯನ್ನು ಎಲ್ಲ ರಾಜಕೀಯ ಪಕ್ಷಗಳಿಗೂ ನೀಡಲಾಗುವುದು. ಅವರು ಹೆಸರು ಸೇರ್ಪಡೆ, ತಿದ್ದುಪಡಿ ಅಥವಾ ಬದಲಾವಣೆಗಳಿದ್ದರೆ ಆಕ್ಷೇಪಣೆ ಸಲ್ಲಿಸಬಹುದು. ಇದಕ್ಕಾಗಿ ಎಲ್ಲ ಪಕ್ಷಗಳಿಂದ ಬೂತ್ ಮಟ್ಟಕ್ಕೆ ತಲಾ ಒಬ್ಬ ಏಜೆಂಟ್ ನಿಯೋಜಿಸುವಂತೆ ರಾಜಕೀಯ ಪಕ್ಷಗಳಿಗೆ ಸೂಚನೆ ನೀಡಲಾಗಿದೆ. ಸ್ಥಳಾಂತರ ಮತ್ತು ಹೆಸರು ತೆಗೆದು ಹಾಕಲು 30 ದಿನಗಳ ಕಾಲಾವಕಾಶ ನೀಡಲಾಗಿದೆ. ಡಿಸೆಂಬರ್ 8ರವರೆಗೆ ಅರ್ಜಿ ಮತ್ತು ಆಕ್ಷೇಪಣೆಗೆ ವಿಲೇವಾರಿ ಮಾಡಲಾಗುತ್ತದೆ. ನಂತರ 2022ರ ಜನವರಿ 13 ರಂದು ಅಂತಿಮ ಮತದಾರರ ಪಟ್ಟಿ ಪ್ರಕಟಿಸಲಾಗುವುದು ಎಂದರು.

**ಮೊಬೈಲ್ ಆ್ಯಪ್:** ದೇಶದಲ್ಲಿ ಮೊದಲ ಬಾರಿಗೆ ಮತದಾರ ಸಹಾಯವಾಣಿ ಮೊಬೈಲ್ ಆ್ಯಪ್ ಅಭಿವೃದ್ಧಿಪಡಿಸಲಾಗಿದೆ. ಆ್ಯಪ್ ಮೂಲಕವೇ ಹೆಸರು ಸೇರ್ಪಡೆ, ತಿದ್ದುಪಡಿ, ಸ್ಥಳಾಂತರ ಇತರೆ ಕಾರ್ಯಗಳನ್ನು ಮಾಡಬಹುದು. ಜೊತೆಗೆ, ಎನ್‌ವಿಎಸ್‌ಪಿ ಪೋರ್ಟಲ್ (www.nvsp.in), 1950 ಮತದಾರರ ಸಹಾಯವಾಣಿ ಅಥವಾ ವೋಟರ್ ಪೋರ್ಟಲ್ (www.voterportal.eci.gov.in) ಮೂಲಕವು ಅವಕಾಶವಿದೆ. ಆ್ಯಪ್ ಅಥವಾ ಪೋರ್ಟಲ್ ಬಳಕೆ ತಿಳಿಯದವರು ಪಾಲಿಕೆ ವಾರ್ಡ್ ಕಚೇರಿ ಅಥವಾ ಬೂತ್ ಮಟ್ಟದ ಕಚೇರಿಗಳಿಗೆ ಹೋಗಿ ಆಫ್ಲೈನ್ ಮೂಲಕ ಅರ್ಜಿ ಸಲ್ಲಿಕೆ ಮಾಡಬಹುದು.

**ನಾಲ್ಕು ಭಾನುವಾರವೂ ವಿಶೇಷ ಅಭಿಯಾನ:** ಕಚೇರಿ ದಿನಗಳಲ್ಲಿ ಅರ್ಜಿಸಲ್ಲಿಕೆಗೆ ತೊಂದರೆ ಆಗುವುದನ್ನು ಗಮನಿಸಿ ನಾಲ್ಕು ಭಾನುವಾರ (ನ.14, ನ.21. ನ.28 ಮತ್ತು ಡಿ.5) ವಾರ್ಡ್ ಕಚೇರಿ ಮತ್ತು ಬೂತ್ ಮಟ್ಟದ ಕಚೇರಿಗಳಲ್ಲಿ ವಿಶೇಷ ಅಭಿಯಾನ ಹಮ್ಮಿಕೊಳ್ಳಲಾಗಿದೆ. ಅಲ್ಲಿಗೆ ಜನರು ನೇರವಾಗಿ ಬಂದು ಅರ್ಜಿ ಸಲ್ಲಿಕೆಗೂ ಅವಕಾಶ ನೀಡಲಾಗಿದೆ ಎಂದು ಪಾಲಿಕೆ ವಿಶೇಷ ಆಯುಕ್ತ ದಯಾನಂದ್ ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ:05.11.2021.

## 64. ಉಪ ಗಣಿಗಾರಿಕೆ ನಡೆಸಲು ಅವಕಾಶ

ಗಣಿಗಾರಿಕೆ ಚಟುವಟಿಕೆಗಳಿಗೆ ಸಂಬಂಧಿಸಿ ಪರಿಶೀಲನೆ ನಡೆಸಲಾಗಿದ್ದು ಪ್ರಮುಖ ಗಣಿಗಾರಿಕೆ ಉದ್ಯಮಿಗಳು ಉಪ ಗಣಿಗಾರಿಕೆ ನಡೆಸಲು ಅವಕಾಶ ನೀಡಲಾಗಿದೆ ಹಾಗೂ ಅವರ ಲೀಸ್ ಅವಧಿಯಲ್ಲಿ ತಿದ್ದುಪಡಿ ಮಾಡಲು ಸಚಿವ ಸಂಪುಟ ನಿರ್ಧರಿಸಿದೆ.

ಉಪಖನಿಜಗಳ ಗುತ್ತಿಗೆ ಅವಧಿ ಕುರಿತಂತೆ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳಿಗೆ ಅನುಮೋದನೆ ನೀಡಲಾಗಿದ್ದು ಪ್ರಮುಖ ಗಣಿಗಾರಿಕೆ ನಡೆಸುವವರು ಉಪ ಗಣಿಗಾರಿಕೆ ನಡೆಸುವ ಲೀಸ್ ಅವಧಿಯನ್ನು 50 ವರ್ಷಗಳಿಗೆ ವಿಸ್ತರಿಸಲಾಗಿದೆ. ಈ ಹಿಂದೆ ಪ್ರಮುಖ ಗಣಿಗಾರಿಕೆ ನಡೆಸುವವರು ಮಾತ್ರ 50 ವರ್ಷ ಲೀಸ್ ಅವಧಿ ಹೊಂದಿದ್ದು, ಉಪಗಣಿಗಾರಿಕೆ ನಡೆಸುವವರು 30 ವರ್ಷಗಳ ಲೀಸ್ ಅವಧಿ ಹೊಂದಿದ್ದರು ಎಂದು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಹೇಳಿದ್ದಾರೆ.

**ನಿವೃತ್ತ ನ್ಯಾಯಮೂರ್ತಿ ಸಮಿತಿ:** ವಿವಿಧ ಕಾಮಗಾರಿಗಳ ಟೆಂಡರ್‌ಗಳ ಪಾರದರ್ಶಕ ವ್ಯವಸ್ಥೆಯನ್ನು ಮತ್ತಷ್ಟು ಬಲಪಡಿಸಲು ಸರ್ಕಾರ ನಿರ್ಧರಿಸಿದೆ. ರೂ.50 ಕೋಟಿಗಳಿಗೂ ಹೆಚ್ಚುವರಿ ವೆಚ್ಚದ ಟೆಂಡರ್ ಪ್ರಕ್ರಿಯೆಗೆ ನಿವೃತ್ತ ಹೈಕೋರ್ಟ್ ನ್ಯಾಯಾಧೀಶರ ನೇತೃತ್ವದ ಸಮಿತಿ ರಚಿಸಲಾಗುವುದು. ಏಕಗವಾಕ್ಷಿ ಮಾದರಿಯಲ್ಲಿ ಈ ಸಮಿತಿ ಎಲ್ಲ ಪ್ರಕ್ರಿಯೆಗಳನ್ನು ನೋಡಿಕೊಳ್ಳಲಿದೆ. ಬಿಡ್‌ದಾರರ ಪೂರ್ವಪರ ಪರಿಶೀಲಿಸಿ ಈ ಸಮಿತಿ ಕ್ರಮಕೈಗೊಳ್ಳಲಿದೆ. ಈ ಸಮಿತಿಯಡಿ ತಜ್ಞರೂ ಇರುತ್ತಾರೆ. ಅಗತ್ಯವಿದ್ದರೆ ಅಂತಹ ಎರಡು ಸಮಿತಿಗಳನ್ನು ರಚಿಸಲು ಅವಕಾಶವಿದೆ ಎಂದು ಸಂಪುಟ ಸಭೆಯಲ್ಲಿ ನಿರ್ಧರಿಸಲಾಗಿದೆ.

ಆಧಾರ:ಉದಯವಾಣಿ, ದಿನಾಂಕ:09.11.2021

## 65. 7 ಜಿಲ್ಲೆಗಳು ಇನ್ನು ಕಿತ್ತೂರು ಕರ್ನಾಟಕ

ಕರ್ನಾಟಕ ಭಾಗವನ್ನು ಕಲ್ಯಾಣ ಕರ್ನಾಟಕ ಎಂದು ಮರುನಾಮಕರಣ ಮಾಡಿದ ಮಾದರಿಯಲ್ಲಿಯೇ ಮುಂಬೈ–ಕರ್ನಾಟಕ ಭಾಗವನ್ನು ಕಿತ್ತೂರು ಕರ್ನಾಟಕ ಎಂದು ಮರುನಾಮಕರಣ ಮಾಡಲು ರಾಜ್ಯ ಸಚಿವ ಸಂಪುಟ ಸಭೆ ಮಹತ್ವದ ನಿರ್ಧಾರ ಕೈಗೊಂಡಿದೆ.

ಈ ಮೂಲಕ ಮುಂಬೈ ಕರ್ನಾಟಕ ಭಾಗದ ಜನರ ಬಹುದಿನಗಳ ಬೇಡಿಕೆ ಈಡೇರಿಕೆಯಾದಂತಾಗಿದೆ.

ಸಂಪುಟ ಸಭೆಯ ಬಳಿಕ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು 7 ಜಿಲ್ಲೆಯ ಪ್ರದೇಶಗಳನ್ನು ಮುಂಬೈ ಕರ್ನಾಟಕ ಎಂದು ಕರೆಯಲಾಗುತ್ತಿತ್ತು ಎಂದು ತಿಳಿಸಿದರು.

ಬೆಳಗಾವಿ, ಧಾರವಾಡ, ವಿಜಯಪುರ, ಬಾಗಲಕೋಟೆ, ಗದಗ, ಉತ್ತರ ಕನ್ನಡ ಮತ್ತು ಹಾವೇರಿ ಜಿಲ್ಲೆಗಳ ಪ್ರದೇಶಗಳನ್ನು ಇನ್ನು ಮುಂದೆ ಕಿತ್ತೂರು ಕರ್ನಾಟಕ ಪ್ರದೇಶ ಎಂದು ನಾಮಕರಣ ಮಾಡಲು ಸಚಿವ ಸಂಪುಟ ಸಭೆ ಒಪ್ಪಿಗೆ ನೀಡಿದೆ ಎಂದು ಹೇಳಿದರು. ಹೈದ್ರಾಬಾದ್–ಕರ್ನಾಟಕ ಪ್ರಾಂತ್ಯವನ್ನು ಕಲ್ಯಾಣ ಕರ್ನಾಟಕ ಎಂದು ನಾಮಕರಣ ಮಾಡಿದ ಬಳಿಕ ಮುಂಬೈ–ಕರ್ನಾಟಕ ಭಾಗವನ್ನು ಕಿತ್ತೂರು ಕರ್ನಾಟಕ ಎಂದು ನಾಮಕರಣ ಮಾಡಬೇಕು ಎಂದು ಆ ಭಾಗದ ಜನರು ಒತ್ತಾಯಿಸಿದ್ದರು. ಆಗಿನ ಮುಖ್ಯಮಂತ್ರಿ ಶ್ರೀ ಬಿ.ಎಸ್.ಯಡಿಯೂರಪ್ಪ ಅವರು ಕಿತ್ತೂರು ಕರ್ನಾಟಕ ಎಂದು ನಾಮಕರಣ ಮಾಡುವ ಬಗ್ಗೆ ಆಶ್ವಾಸನೆ ನೀಡಿದ್ದರು. ಇತ್ತೀಚೆಗೆ ಕಿತ್ತೂರು ಉತ್ಸವದಲ್ಲಿ ಹಾಗೂ ಉಪಚುನಾವಣೆ ಪ್ರಚಾರದ ವೇಳೆ ಬಸವರಾಜ ಬೊಮ್ಮಾಯಿ ಸಹ ಮುಂಬೈ ಕರ್ನಾಟಕ ಪ್ರಾಂತ್ಯವನ್ನು ಕಿತ್ತೂರು ಕರ್ನಾಟಕ ಎಂದು ನಾಮಕರಣ ಮಾಡುವುದಾಗಿ ಭರವಸೆ ನೀಡಿದ್ದರು. ಅಂತೆಯೇ ಸಚಿವ ಸಂಪುಟದಲ್ಲಿ ಕಿತ್ತೂರು ಕರ್ನಾಟಕ ಎಂದು ನಾಮಕರಣ ಮಾಡಲು ಒಪ್ಪಿಗೆ ನೀಡಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:09.11.2021

## 66. ಕೇಂದ್ರ, ರಾಜ್ಯದ ಯೋಜನೆ ಜೋಡಿಸಿ ಜಾರಿಗೊಳಿಸಿ

ಗ್ರಾಮ ಪಂಚಾಯತಿಗಳ ಸಮಗ್ರ ಅಭಿವೃದ್ಧಿಗೆ ಅನುಕೂಲವಾಗುವಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಯೋಜನೆಗಳನ್ನು ಜೋಡಿಸಿ ಅನುಷ್ಠಾನಗೊಳಿಸಬೇಕು ಮತ್ತು ಇದಕ್ಕಾಗಿ ಪ್ರತಿ ಪಂಚಾಯಿತಿಗೊಬ್ಬ ಹಿರಿಯ ಅಧಿಕಾರಿಯನ್ನು ಉಸ್ತುವಾರಿಯಾಗಿ ನೇಮಿಸಬೇಕು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರಿಗೆ ಪ್ರಧಾನಿ ನರೇಂದ್ರ ಮೋದಿ ಸಲಹೆ ನೀಡಿದ್ದಾರೆ.

ಇದು ಈಗಾಗಲೇ ಗೋವಾ ಸರ್ಕಾರ ಜಾರಿಗೊಳಿಸಿರುವ ಆತ್ಮನಿರ್ಭರ ಭಾರತ ಸ್ವಯಂ ಪೂರ್ಣ ಗೋವಾ ಯೋಜನೆಯ ಪಡಿಯಚ್ಚಾಗಿದೆ. ಇತ್ತೀಚೆಗೆ ಪ್ರಧಾನಿ ನರೇಂದ್ರ ಮೋದಿ ಸ್ವಯಂಪೂರ್ಣ ಗೋವಾ ಯೋಜನೆಗೆ ಸಂಬಂಧಿಸಿದಂತೆ ಫಲಾನುಭವಿಗಳು, ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳೊಂದಿಗೆ ಸಂವಾದ ನಡೆಸಿದ್ದರು. ಇದೀಗ ಅಂತಹ ಕಾರ್ಯಕ್ರಮ ರೂಪಿಸುವಂತೆ ಮುಖ್ಯಮಂತ್ರಿಗಳಿಗೆ ಸೂಚಿಸಿದ್ದಾರೆ.

ದೆಹಲಿಯಲ್ಲಿ ಸುದ್ದಿಗೋಷ್ಠಿಯಲ್ಲಿ ಈ ವಿಷಯ ತಿಳಿಸಿದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಗ್ರಾಮ ಪಂಚಾಯಿತಿಗಳು ಪರಿಪೂರ್ಣವಾಗಿ ಅಭಿವೃದ್ಧಿ ಹೊಂದಬೇಕು ಎಂದರೆ ಸರ್ಕಾರದ ಯೋಜನೆಗಳು ಸಮರ್ಪಕವಾಗಿ ಅನುಷ್ಠಾನವಾಗಬೇಕು. ಅದಕ್ಕಾಗಿ ಎರಡೂ ಸರ್ಕಾರ ಯೋಜನೆಗಳನ್ನು ಒಟ್ಟು ಸೇರಿಸಿ ಅನುಷ್ಠಾನಗೊಳಿಸಬೇಕು. ಪ್ರತಿ ಪಂಚಾಯಿತಿಗೆ ಒಬ್ಬ ಹಿರಿಯ ಅಧಿಕಾರಿಯನ್ನು ನೇಮಿಸಿ ಅವರಿಗೆ ಜವಾಬ್ದಾರಿ ವಹಿಸಬೇಕು ಎಂದು ಪ್ರಧಾನಿ ಹೇಳಿದ್ದಾರೆ ಎಂದರು.

ಸ್ವಾತಂತ್ರ್ಯ ಅಮೃತ ಮಹೋತ್ಸವದ ಅಂಗವಾಗಿ 750 ಗ್ರಾಮ ಪಂಚಾಯತಿಗಳಲ್ಲಿ ವಸತಿ ಸೌಲಭ್ಯ ಕಲ್ಪಿಸಲು ಜಾರಿಗೊಳಿಸಿರುವ ಅಮೃತ ಯೋಜನೆಯನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಜಾರಿಗೊಳಿಸಬೇಕು. ವಸತಿ ಮತ್ತು ನಿವೇಶನ ರಹಿತರಿಗೆ ಮನೆ ಮತ್ತು ನಿವೇಶನ ನೀಡಲು ಹಂತ ಹಂತವಾಗಿ ಎಲ್ಲಾ ಪಂಚಾಯಿತಿಗಳಿಗೆ ಇದನ್ನು ವಿಸ್ತರಿಸಬೇಕು. ಅದಕ್ಕಾಗಿ ಪ್ರಧಾನಮಂತ್ರಿ ಆವಾಸ್ ಯೋಜನೆಯನ್ನು ಜೋಡಿಸಿಕೊಳ್ಳುವಂತೆ ಸೂಚಿಸಿದ್ದಾರೆ ಎಂದು ತಿಳಿಸಿದರು.

ರಾಜ್ಯ ಸರ್ಕಾರ ಹೊಸದಾಗಿ ರೂಪಿಸಲಿರುವ ಸಂಶೋಧನೆ ಮತ್ತು ಅಭಿವೃದ್ಧಿ ನೀತಿ, ಉದ್ಯೋಗ ನೀತಿ, ನವೀಕರಿಸಬಹುದಾದ ಇಂಧನ ನೀತಿ, ಏರೋಸ್ಪೇಸ್ ನೀತಿ, ಎಲೆಕ್ಟ್ರಿಕ್ ವಾಹನ ನೀತಿಗಳ ಕುರಿತು ಪ್ರಧಾನಿ ಜೊತೆ ಚರ್ಚಿಸಲಾಗಿದ್ದು, ಯುವಕರನ್ನು ಕೇಂದ್ರೀಕರಿಸಿ ನೀತಿ ಜಾರಿಗೊಳಿಸಲು ಸಲಹೆ ಮಾಡಿದ್ದಾರೆ ಎಂದು ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ: 12.11.2021

## 67. ರಾಜ್ಯ ಸರ್ಕಾರಿ ನೌಕರರಿಗೆ ಕ್ಯಾಷ್‌ಲೆಸ್ ಆರೋಗ್ಯ ಸೇವೆ

ಕೊರೋನಾ ಸಂಕಷ್ಟ ಕಾಲದಲ್ಲಿ ರಾಜ್ಯ ಸರ್ಕಾರಿ ನೌಕರರಿಗೊಂದು ಶುಭ ಸುದ್ದಿ ಇದೆ. ಸರ್ಕಾರಿ ನೌಕರರು ಮತ್ತು ಅವರ ಅವಲಂಬಿತರಿಗೆ ನಗದು ರಹಿತ ಆರೋಗ್ಯ ಸೇವೆ ನೀಡುವ ಯೋಜನೆ ಈ ತಿಂಗಳ ಕೊನೆಯಲ್ಲಿ ಜಾರಿಗೆ ಬರಲಿದೆ. ಆ ಮೂಲಕ ಮೂರು ದಶಕಗಳ ನೌಕರರ ಹೋರಾಟಕ್ಕೆ ಫಲ ಸಿಗುತ್ತಿದೆ. ರಾಜ್ಯ ಸರ್ಕಾರಿ ನೌಕರರ ಆರೋಗ್ಯ ಯೋಜನೆ ಹೆಸರಿನಲ್ಲಿ ನಗದು ರಹಿತ ಸೇವೆ ನೀಡಲಾಗುತ್ತದೆ. ಸರ್ಕಾರಿ ನೌಕರರು ಮತ್ತು ಅವರ ಅವಲಂಬಿತರು ಆಸ್ಪತ್ರೆಗಳಲ್ಲಿ ಒಳ ಅಥವಾ ಹೊರ ರೋಗಿಗಳಾಗಿ ಚಿಕಿತ್ಸೆ ಪಡೆದರೆ ಯಾವುದೇ ಹಣ ಪಾವತಿ ಮಾಡುವಂತಿಲ್ಲ. ಈವರೆಗೆ ಹಣ ಪಾವತಿಸಿ ಆರೋಗ್ಯ ಸೇವೆ ಪಡೆದ ಬಳಿಕ ಮರುಪಾವತಿ ಪಡೆಯಬೇಕಾಗಿತ್ತು. ಬಿಬಿಎಂಪಿ ಮತ್ತು ಪೊಲೀಸ್ ಇಲಾಖೆಯಲ್ಲಿ ಮಾತ್ರ ನಗದು ರಹಿತ ಆರೋಗ್ಯ ಸೇವೆ ವ್ಯವಸ್ಥೆ ಇದೆ. ಅದಕ್ಕಿಂತ ಸುಧಾರಿತ ವ್ಯವಸ್ಥೆ

ಜಾರಿ ಮಾಡಲಾಗುತ್ತಿದೆ. ಆರ್ಥಿಕ ಇಲಾಖೆ ಅಧಿಕಾರಿಗಳೇ ವಿಶೇಷ ಗಮನ ನೀಡಿರುವುದರಿಂದ ಯಾವುದೇ ಅಡೆತಡೆ ಇಲ್ಲದೆ ಯೋಜನೆ ಜಾರಿಗೆ ಬರುತ್ತಿದೆ.

**ಎರಡು ದಿನದಲ್ಲಿ ವರದಿ :** ನೌಕರರ ಹೋರಾಟ, ಸರ್ಕಾರಿ ನೌಕರರ ಸಂಘ ಸಾಕಷ್ಟು ಒತ್ತಡ ತಂದ ಪರಿಣಾಮ ಸರ್ಕಾರ ಒಪ್ಪಿಗೆ ನೀಡಿದೆ. ಸುವರ್ಣ ಆರೋಗ್ಯ ಟ್ರಸ್ಟ್ ಮೂಲಕ ಈ ನೂತನ ವ್ಯವಸ್ಥೆ ಜಾರಿಗೆ ಬರಲಿದೆ. ಟ್ರಸ್ಟ್ ಅಂತಿಮ ವರದಿಯನ್ನು ಆರ್ಥಿಕ ಇಲಾಖೆಗೆ ಎರಡು ದಿನದಲ್ಲಿ ಸಲ್ಲಿಸಲಿದೆ. ನಂತರ ಮುಖ್ಯಮಂತ್ರಿ ಈ ತಿಂಗಳ ಕೊನೆಗೆ ಯೋಜನೆ ಉದ್ಘಾಟಿಸಲಿದ್ದಾರೆ.

**ಹೇಗಿರಲಿದೆ ವ್ಯವಸ್ಥೆ:** ರಾಜ್ಯ ಸರ್ಕಾರಿ ನೌಕರರು ಮತ್ತು ಅವರ ಅವಲಂಬಿತರು ಸೇರಿ ಒಟ್ಟಾರೆ 25 ಲಕ್ಷ ಜನ ಯೋಜನೆ ಫಲಾನುಭವಿಗಳಾಗಲಿದ್ದಾರೆ. ನೌಕರನ ಪತಿ ಅಥವಾ ಪತ್ನಿ, ಮಕ್ಕಳು ಹಾಗೂ ತಂದೆ–ತಾಯಿಗೆ ಈ ವ್ಯವಸ್ಥೆ ಲಾಭ ಸಿಗಲಿದೆ. ಈಗಾಗಲೆ ಇಷ್ಟು ಜನರ ಡೇಟಾ ಸಂಗ್ರಹ ಕಾರ್ಯ ಮುಕ್ತಾಯವಾಗಿದೆ. ನೌಕರರಿಗೆ ಸರ್ಕಾರದ ವತಿಯಿಂದ ಸ್ಮಾರ್ಟ್ ಕಾರ್ಡ್ ನೀಡಲಾಗುತ್ತದೆ. ಅದನ್ನು ಆಸ್ಪತ್ರೆಯಲ್ಲಿ ನೀಡಿದರೆ ಸಾಕು ಚಿಕಿತ್ಸೆ ಸಿಗಲಿದೆ.

**ವೆಚ್ಚ ಎಷ್ಟಾಗುತ್ತದೆ?** ನಗದುರಹಿತ ಆರೋಗ್ಯಸೇವೆ ನೀಡಲು ವಾರ್ಷಿಕ ರೂ.1200 ಕೋಟಿ ಬೇಕಾಗುವ ಅಂದಾಜಿದೆ. ಈವರೆಗೆ ನೌಕರರು ರೂ. 100 ವೆಚ್ಚ ಮಾಡಿದರೆ ರೂ. 20 ಮಾತ್ರ ಮರುಪಾವತಿಯಾಗುತ್ತಿತ್ತು. ರಾಜ್ಯ ಸರ್ಕಾರ ವಾರ್ಷಿಕ ರೂ.200 ಕೋಟಿಗಿಂತ ಹೆಚ್ಚು ವೆಚ್ಚ ಮಾಡುತ್ತಿರಲಿಲ್ಲ. ನಗದು ರಹಿತ ವ್ಯವಸ್ಥೆ ಜಾರಿಗೆ ಬಂದರೆ ರೂ.1,200 ಕೋಟಿಗಳಷ್ಟು ಬೃಹತ್ ಮೊತ್ತ ವೆಚ್ಚವಾಗುತ್ತದೆ.

**ನೌಕರರ ವಂತಿಗೆ ಎಷ್ಟು?** ನೌಕರರು ತಮ್ಮ ಮೂಲ ವೇತನದ ಕನಿಷ್ಠ ಮೊತ್ತದ ಶೇ.1 ಮಾತ್ರ ವಂತಿಗೆಯಾಗಿ ಪಾವತಿಸಬೇಕಾಗುತ್ತದೆ. ಕನಿಷ್ಠ ಮೊತ್ತ ನಿಗದಿ ಮಾಡಿರುವುದರಿಂದ ನೌಕರರ ಹಣ ಉಳಿತಾಯವಾಗುತ್ತದೆ. ನೌಕರರು ನೀಡುವ ಮೊತ್ತ ರೂ.200 ಕೋಟಿಗಳಾಗಬಹುದು. ಸರ್ಕಾರ ರೂ. 1000 ಕೋಟಿ ಪಾವತಿಸಲಿದೆ.

**ಎಷ್ಟು ಆಸ್ಪತ್ರೆಗಳು?** ರಾಜ್ಯದಲ್ಲಿ ಸುಮಾರು 800 ಆಸ್ಪತ್ರೆಗಳನ್ನು ಈ ಯೋಜನೆಯ ಸೌಲಭ್ಯ ನೀಡಲು ಗುರುತಿಸಲಾಗಿದೆ. ಸುವರ್ಣ ಆರೋಗ್ಯ ಟ್ರಸ್ಟ್ ಇದರ ಸಂಪೂರ್ಣ ನಿರ್ವಹಣೆ ಮಾಡುತ್ತದೆ. ನೌಕರರ ಮಾಹಿತಿ ಇರುವ ಎಚ್‌ಆರ್‌ಎಂಎಸ್ ಅನ್ನು ಸುವರ್ಣ ಆರೋಗ್ಯ ಟ್ರಸ್ಟ್ ಜೊತೆಗೆ ಲಿಂಕ್ ಮಾಡಲಾಗುತ್ತದೆ. ಅದೇ ಮಾಹಿತಿ ಆಧಾರದಲ್ಲಿ ಸ್ಮಾರ್ಟ್ ಕಾರ್ಡ್‌ಗಳು ಸಿದ್ಧವಾಗುತ್ತಿವೆ. ಜಿಲ್ಲಾ ಮಟ್ಟದಲ್ಲಿಯೇ ಅವುಗಳ ವಿತರಣೆ ಕಾರ್ಯ ಶೀಘ್ರ ಆರಂಭವಾಗಲಿದೆ.

ಆಧಾರ: ವಿಜಯವಾಣಿ, ದಿನಾಂಕ: 13.11.2021

## 68. Not a promising start for a 3-yr-old assurance to North Karnataka region

The winter session of the legislature will be held in the Suvarna Vidhana Soudha after a gap of three years, which will see the entire government machinery work out of Belgavi for a full 10 days.

It’s also been three years since the government promised the shifting of nine departments to different districts in North Karnataka. However, the promise has not been kept in ful.

While on one hand only a few of these offices have sifhted on the other, even those that have moved continue to operate significantly from Bengaluru raising concerns on whether they will turn into administrative white elephants.

In 2018, following protests for a separate statehood for the region the then H.D.Kumaraswamy government said nine departments would move to North Karnataka, symbolising inclusive governnance. Krishna Bhagya Jala Nigam Limited (KBJNL, Bengaluru); Karnataka Neeravari Nigam Limited (KNNL, Bangaluru); Karnataka State Textile Infrastructure Development Corporation Limited (Bengaluru); Directorate of Sugar and Commissionerate for Cane Development (Bengaluru) and the Department of Archaeology, Museums and Heritage (Mysore).

That apart the government had proposed to bifurcate the Karnataka Urban Water Supply and Drainage Board, with one division for North Karnataka.

One member of the Karnataka State Human Rights Commission, one Upa Lokayukta and four Information Commissioners (two each in Kalaburagi, Belgavi) were expected to be appointed for the region.

Chief Secretary says that KBJNL and the sugar directorate had shifted. One information commissioner had been appointed to Belgavi, while the rest will be shifted soon, It’s only a matter of identification of office spaces. It will be done soon.

The sugar directorate in Belgavi had brought respite, Belgavi Rural MLA Lakshmi Hebbalkar says. Earlier we had to come to Bengaluru for all work related to sugar factories. Ever since the sugar directorate was shifted to Belgavi two months ago. I got many pending files cleared here itself.

None the less, administrative challenges remain. The directorate is functioning both from Bengaluru and Belgavi.

One official said, The government’s decision to shift the office entirely to Belgavi is not feasible. Officers will have to travel frequently to Bengaluru to meet ministers and senior officials.

The Textile Development Corporation is another case in point. While its office was shifted in 2019, they are dependent on Bengaluru for all administrative work, including grant of functions. This is an administrative setback officials says.

Even in Belgavi the office is temporary and needs repair. We have required for office space in Suvarna Soudha another official adds.

Sources in KBJNL had a similarly A majority of the operations have shifted to Alamatti with only liasion office Bengaluru. Recently the government proposed to shift this too.

Our officers recently visited Almatti to do a feasibility study. The government has not set up any facilities. The moreover, several technical committee related to the corporation are in Bengaluru. How can we shift there, officials wonder.

No state-level office other than the Karnataka State Information Commission has shifted to the Suvarna Vidhana Soudha, which was expected to serve as the state's second secretariat.

Some 24 district-level officers functioning from the building which a replica of the grand Vidhana Soudha in Bengaluru. The government approximately spends Rs.2 crore for its uphold annually.

With the inordinate delay in shift of officers to North Karnataka as perised the Raitha Sene Karnataka is a massive protest in December according to Veeresh Sobaradamath, leads the organisation.

Courtesy: Deccan Herald, Dated: 14.11.2021

## 69. ನೆರೆ ರಾಜ್ಯಗಳಿಗೆ ಖಡಕ್ ಸಂದೇಶ

ನೀರಾವರಿ ಯೋಜನೆಗಳ ವಿಚಾರದಲ್ಲಿ ನೆರೆಹೊರೆ ರಾಜ್ಯಗಳು ಪದೇಪದೇ ತೆಗೆಯುವ ತಗಾದೆಗೆ ದಕ್ಷಿಣ ವಲಯ ಪರಿಷತ್ತಿನ ಸಭೆಯಲ್ಲಿ ಕರ್ನಾಟಕ ತನ್ನ ತೀವ್ರ ಆಕ್ಷೇಪವನ್ನು ದಾಖಲಿಸಿದೆ. ಆಂಧ್ರ ಪ್ರದೇಶದ ತಿರುಪತಿಯಲ್ಲಿ ನಡೆದ ಸಭೆಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ರಾಜ್ಯದ ಹಿತಾಸಕ್ತಿಗೆ ಯಾವುದೇ ರೀತಿ ಧಕ್ಕೆಯಾಗದಂತೆ ನೀರಾವರಿ ಯೋಜನೆಗಳ ಕುರಿತು ವಾದವನ್ನು ಮಂಡಿಸಿದರು. ಜೊತೆಗೆ ನೆರೆಹೊರೆ ರಾಜ್ಯಗಳಿಗೆ ಎಲ್ಲ ರೀತಿಯ ಸಹಕಾರ ನೀಡುತ್ತೇವೆ. ನಮಗೆ ಅಡ್ಡಿಪಡಿಸಿದರೆ ನಮ್ಮದೂ ಆಕ್ಷೇಪ ಎದುರಿಸಬೇಕಾಗುತ್ತದೆ ಎಂಬ ಪರೋಕ್ಷ ಸಂದೇಶ ರವಾನಿಸಿದರು. ಜಲನ್ಯಾಯ ಮಂಡಳಿ ತೀರ್ಪು ಉಲ್ಲಂಘಿಸಿ ಬೃಹತ್‌ಮಟ್ಟದ ಶಾಶ್ವತ ಯೋಜನೆಗಳಿಗೆ ಶಾಸನಬದ್ಧ ಅನುಮೋದನೆ ನೀಡಬಾರದು ಎಂದು ಗಡಸು ಧ್ವನಿಯಲ್ಲಿ ಅಭಿಪ್ರಾಯ ನೀಡಿದ ಅವರು ಕಾವೇರಿ, ಕೃಷ್ಣಾ ಮತ್ತು ಪೆನ್ನಾರ್ ಜಲಾನಯನ ಪ್ರದೇಶದಲ್ಲಿ ರಾಜ್ಯಕ್ಕೆ ತನ್ನ ಪಾಲಿನ ನೀರು ಹಂಚಿಕೆಯಾಗಬೇಕೆಂಬ ವಾದವನ್ನು ಕೇಂದ್ರದ ಮುಂದಿಟ್ಟಿದರು. ತುಂಗಭದ್ರಾ ನದಿಗೆ ಅಡ್ಡಲಾಗಿ ಆಂಧ್ರಪ್ರದೇಶ ನಿರ್ಮಿಸುತ್ತಿರುವ ಗುಂಡ್ರವೇಲು ಯೋಜನೆ ವಿಷಯ ಪ್ರಸ್ತಾಪಿಸಿದ ಅವರು ಕರ್ನಾಟಕದಲ್ಲಿ ಮುಳುಗಡೆಯಾಗಲಿರುವ ಗ್ರಾಮಗಳು ಮತ್ತು ಭೂಪ್ರದೇಶದ ಕುರಿತು ಜಂಟಿ ಸಮೀಕ್ಷೆಯಾಗಬೇಕು. ನ್ಯಾಯಮಂಡಳಿಗೆ ಸಲ್ಲಿಸಿರುವಂತೆ ನೀರು ಹಂಚಿಕೆಯ ವಿವರಗಳನ್ನು ಹಾಗೂ ಕೇಂದ್ರ ಸರ್ಕಾರದಿಂದ ಪಡೆದಿರುವ ಅನುಮೋದನೆಗಳ ವಿವರಗಳನ್ನು ಸಲ್ಲಿಸುವಂತೆ ಕೋರಿದರು. ಹಂಚಿಕೆಯ ಹೊರತಾಗಿ ಕೃಷ್ಣಾ ನೀರಿಗೆ ಸಂಬಂಧಿಸಿದಂತೆ ಆಂಧ್ರ ಪ್ರದೇಶ ಹಾಗೂ ತೆಲಂಗಾಣ ರಾಜ್ಯಗಳ ಯಾವುದೇ ಯೋಜನೆಗಳಿಗೆ ಅನುಮತಿಯಿಲ್ಲ ಎಂದರು. ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ, ಅಭಿವೃದ್ಧಿ ಆಯುಕ್ತೆ ವಂದಿತಾ ಶರ್ಮ, ಜಲ ಸಂಪನ್ಮೂಲ ಇಲಾಖೆ ಎಸಿಎಸ್ ರಾಕೇಶ್ ಸಿಂಗ್, ಮುಖ್ಯಮಂತ್ರಿಗಳ ಪ್ರಧಾನಕಾರ್ಯದರ್ಶಿ ಮಂಜುನಾಥ ಪ್ರಸಾದ್, ಇಂಟೆಲಿಜೆನ್ಸ್ ವಿಭಾಗದ ಎಡಿಜಿಪಿ ದಯಾನಂದ ಉಪಸ್ಥಿತರಿದ್ದರು.

ಆಧಾರ: ವಿಜಯವಾಣಿ, ದಿನಾಂಕ: 15.11.2021

## 70. ಆರ್ಥಿಕತೆಗೆ ಮುಖ್ಯಮಂತ್ರಿ ದಶಸೂತ್ರ

ದೇಶದ ಆರ್ಥಿಕತೆ ವೃದ್ಧಿಯಲ್ಲಿ ಕರ್ನಾಟಕದ ಕೊಡುಗೆ ಹೆಚ್ಚಿಸಲು ವಿವಿಧ ಯೋಜನೆಗಳಿಗೆ ತ್ವರಿತ ಅನುದಾನಕ್ಕೆ ಸ್ಪಷ್ಟ ನೀತಿ ಸೇರಿ ದಶಸೂತ್ರಗಳನ್ನು ಸಿಎಂ ಬಸವರಾಜ ಬೊಮ್ಮಾಯಿ ಮಂಡಿಸಿದ್ದಾರೆ. ಹೂಡಿಕೆಗೆ ಉತ್ತೇಜನ ಹಾಗೂ ಆರ್ಥಿಕತೆ ಪುನಶ್ಚೇತನ ಕುರಿತು ಎಲ್ಲ ರಾಜ್ಯಗಳ ಸಿಎಂಗಳೊಂದಿಗೆ ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ವಿಡಿಯೋ ಸಂವಾದ ನಡೆಸಿದರು. ಆನ್‌ಲೈನ್ ಮೂಲಕ ಪಾಲ್ಗೊಂಡಿದ್ದ ಬೊಮ್ಮಾಯಿ, 'ಕೊರೊನೋತ್ತರ ಆರ್ಥಿಕ ಪರಿಸ್ಥಿತಿ ಸುಧಾರಣೆಯಲ್ಲಿ ಕರ್ನಾಟಕ ಮುನ್ನಡೆ ಸಾಧಿಸಿದ ಪರಿಣಾಮ ದೇಶದ ಬೊಕ್ಕಸಕ್ಕೆ ಹೆಚ್ಚಿನ ಸಂದಾಯ ಮಾಡಲು ಶಕ್ತವಾಗಿದೆ. ಕೇಂದ್ರ ಸರ್ಕಾರ ಹಲವು ಉಪಕ್ರಮಗಳ ಮೂಲಕ ಬಲ ತುಂಬಬೇಕು' ಎಂದು ಕೋರಿದರು.

ಕೊರೊನೋತ್ತರ ಪರಿಸ್ಥಿತಿ ಸುಧಾರಣೆಗೆ ಕೈಗೊಂಡ ಉಪಕ್ರಮಗಳು, ಹೂಡಿಕೆದಾರ ಸ್ನೇಹಿ ವಾತಾವರಣ ನಿರ್ಮಾಣ ಹಾಗೂ ಹಲವು ಕಾಯ್ದೆಗಳಿಗೆ ತಿದ್ದುಪಡಿ ತಂದು ಸುಧಾರಣೆಗೆ ಒತ್ತು ನೀಡಿದ್ದರ ಫಲವಾಗಿ ಕರ್ನಾಟಕ ಮುನ್ನಡೆ ಸಾಧಿಸಲು ಸಾಧ್ಯವಾಯಿತು ಎಂದು ಬೊಮ್ಮಾಯಿ ತಿಳಿಸಿದರು.

**ಸೂತ್ರಗಳು ಏನು:–**

1. ಹೂಡಿಕೆಗೆ ಆಸಕ್ತಿ ತೋರುವ ಕಂಪನಿಗಳ ಮಾಹಿತಿಯ ಪಾರದರ್ಶಕ ಹಂಚಿಕೆ.
2. ಖಾಸಗಿ, ಸಾರ್ವಜನಿಕ ಸಹಭಾಗಿತ್ವದ ಪ್ರಸ್ತಾವನೆಗಳಿಗೆ ತ್ವರಿತವಾಗಿ ಅನುಮೋದನೆ.
3. ವಿವಿಧ ಯೋಜನೆಗಳಿಗೆ ಪರಿಸರ ಮತ್ತು ಅರಣ್ಯ ಸಚಿವಾಲಯಗಳ ಅನುಮೋದನೆ ನೀಡುವ ಕುರಿತು ಒಂದು ಸ್ಪಷ್ಟ ನೀತಿ ಜಾರಿ.
4. ವಿಶೇಷ ಉತ್ಪನ್ನಗಳಿಗೆ ವಿಶೇಷ ಪ್ರೋತ್ಸಾಹಕಗಳನ್ನು ನೀಡುವುದು.
5. ವಿವಿಧ ವಿಶೇಷ ವಿತ್ತ ವಲಯಗಳನ್ನು ಟೌನ್‌ಷಿಪ್‌ಗಳಾಗಿ ಅಭಿವೃದ್ಧಿಪಡಿಸುತ್ತಿದ್ದು, ಇದಕ್ಕೆ ನಗರ ಸ್ಥಳೀಯ ಸಂಸ್ಥೆಗಳು, ಗ್ರಾಮೀಣ ಸ್ಥಳೀಯಾಡಳಿತ ಸಂಸ್ಥೆಗಳ ಕಾಯ್ದೆಗಳಿಗೆ ತಿದ್ದುಪಡಿ ಅವಶ್ಯ.
6. ನ್ಯಾಯಾಲಯದ ಹೊರಗೆ ವಿವಾದಗಳನ್ನು ತ್ವರಿತವಾಗಿ ಬಗೆಹರಿಸಲು ವಿವಾದ ಪರಿಹಾರ ವ್ಯವಸ್ಥೆ ರೂಪಿಸುವುದು.
7. ಹೊಸ ಉದ್ಯಮ ವಲಯಗಳಾದ ವಿದ್ಯುತ್ ವಾಹನಗಳು, ಮೆಡ್–ಟೆಕ್, ಎಲ್‌ಓಟಿ ಇತ್ಯಾದಿ ವಲಯಗಳಿಗೆ ಹಣಕಾಸು ನೆರವು ಒದಗಿಸಲು ಬ್ಯಾಂಕುಗಳಿಗೆ ನಿರ್ದೇಶನ
8. ಕರಾವಳಿ ನಿಯಂತ್ರಣ ವಲಯದ ನಿಯಮಾವಳಿಗಳಲ್ಲಿ ಸಡಿಲಿಕೆ ಮಾಡುವ ಮೂಲಕ ಕರಾವಳಿ ಪ್ರದೇಶದಲ್ಲಿ ಆರ್ಥಿಕ ಚಟುವಟಿಕೆಗಳಿಗೆ ಅನುವು ಮಾಡಿಕೊಡಲು ಮನವಿ.
9. ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಹೂಡಿಕೆ ಆಕರ್ಷಿಸಲು ಹೆಚ್ಚುವರಿ ಪ್ರೋತ್ಸಾಹಕಗಳ ಅಗತ್ಯ.
10. ಜಿಲ್ಲಾ ಗಣಿಗಾರಿಕೆ ನಿಧಿಯ ಒಂದು ಭಾಗವನ್ನು ರಾಜ್ಯ ಸರ್ಕಾರಕ್ಕೆ ಹಸ್ತಾಂತರಿಸಲು ಅವಕಾಶ ಕಲ್ಪಿಸಬೇಕು. ಇದರಿಂದ ಅದಿರು ಸಾಗಾಣಿಕೆಯಿಂದ ಇತರ ಜಿಲ್ಲೆಗಳ ಮೂಲಸೌಕರ್ಯಕ್ಕೆ ಆಗಿರುವ ನಷ್ಟವನ್ನು ಸರಿದೂಗಿಸಲು ಸಾಧ್ಯ.

**ರಾಜ್ಯದ ಸಾಧನೆಗೆ ಕಾರಣಗಳು**

- ಕೊರೋನಾ ಬಳಿಕ ರಾಜ್ಯದಲ್ಲಿ ಕೈಗೊಂಡಿರುವ ಕ್ರಮ ಹಾಗೂ ಕೇಂದ್ರ ಸರ್ಕಾರದ ಸಹಯೋಗ.
- ಕೊರೋನಾ ಸಂದರ್ಭದಲ್ಲಿ ರಾಜ್ಯ ಸರ್ಕಾರ ಮೂಲಸೌಕರ್ಯ ಅಭಿವೃದ್ಧಿ ಹಾಗೂ ಹೂಡಿಕೆ ಆಕರ್ಷಣೆಗೆ ಸಂಬಂಧಿಸಿದಂತೆ ನಿರಂತರವಾಗಿ ಕ್ರಮ ಕೈಗೊಂಡ ಹಿನ್ನೆಲೆಯಲ್ಲಿ ಕಳೆದ ವರ್ಷ ಅತಿ ಹೆಚ್ಚು ವಿದೇಶಿ ನೇರ ಬಂಡವಾಳ ಹರಿದು ಬಂದಿದೆ.
- ಹೂಡಿಕೆದಾರಸ್ನೇಹಿ ವಾತಾವರಣ ನಿರ್ಮಿಸಲು ಕೈಗೊಳ್ಳಲಾದ ಭೂಸುಧಾರಣಾ ಕಾಯ್ದೆ ತಿದ್ದುಪಡಿ, ಕಾರ್ಮಿಕ ಕಾಯ್ದೆ ತಿದ್ದುಪಡಿ, ಅಫಿಡೆವಿಟ್ ಆಧಾರಿತ ಅನುಮೋದನೆ ಇತ್ಯಾದಿ ಕ್ರಮಗಳು.
- ಬಂಡವಾಳ ಆಕರ್ಷಣೆ, ಹೂಡಿಕೆ ಹೆಚ್ಚಿಸಲು 2022 ರಲ್ಲಿ ಜಾಗತಿಕ ಹೂಡಿಕೆದಾರರ ಸಮಾವೇಶ ಆಯೋಜಿಸಲು ನಿರ್ಧಾರ.
- ಬೀದರ್ ಮತ್ತು ಕಲಬುರಗಿ ವಿಮಾನ ನಿಲ್ದಾಣಗಳು ಕಾರ್ಯಾರಂಭಿಸಿದ್ದು, ಶಿವಮೊಗ್ಗ, ರಾಯಚೂರು, ವಿಜಯಪುರ, ಕಾರವಾರ ವಿಮಾನ ನಿಲ್ದಾಣಗಳು 2022ರಲ್ಲಿ ಕಾರ್ಯಾರಂಭ ಮಾಡುವ ನಿರೀಕ್ಷೆಯಿದೆ.
- ಒಂಭತ್ತು ರೈಲ್ವೆ ಯೋಜನೆಗಳು ಹಾಗೂ ಸಾಗರಮಾಲಾ ಯೋಜನೆಯಡಿ 4 ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

ಆಧಾರ: ವಿಜಯವಾಣಿ, ದಿನಾಂಕ: 16.11.2021

## 71. ಆಧುನಿಕ ತಂತ್ರಜ್ಞಾನ ಆಧಾರಿತ ಕೌಶಲ್ಯ ಅಳವಡಿಸಿಕೊಳ್ಳಿ

ಬೆಂಗಳೂರು ದೇಶದಲ್ಲಿರುವ ಉನ್ನತ ಶಿಕ್ಷಣ ಸಂಸ್ಥೆಗಳು ವಿದ್ಯಾರ್ಥಿಗಳಲ್ಲಿರುವ ಪ್ರತಿಭೆಯನ್ನು ಗುರುತಿಸಿ ಕೌಶಲ್ಯವಾಗಿ ಮಾರ್ಪಡಿಸಬೇಕಿದೆ. ಆಧುನಿಕ ತಂತ್ರಜ್ಞಾನಗಳಾದ ಕೃತಕ ಬುದ್ಧಿಮತ್ತೆ, ಮಷಿನ್ ಲರ್ನಿಂಗ್, 5ಜಿ ಟೆಕ್ನಾಲಜಿ, ರೋಬ್ಯಾಟಿಕ್ಸ್, ಜೈವಿಕ ತಂತ್ರಜ್ಞಾನ ಮತ್ತು ಡ್ರೋನ್ ತಂತ್ರಜ್ಞಾನಗಳ ಅಳವಡಿಕೆಗೆ ಹೆಚ್ಚಿನ ಆದ್ಯತೆ ನೀಡಬೇಕಿದೆ ಎಂದು ಉಪ ರಾಷ್ಟ್ರಪತಿ ಎಂ.ವೆಂಕಯ್ಯ ನಾಯ್ಡು ಸಲಹೆ ನೀಡಿದರು.

ಪಿಇಎಸ್ ವಿಶ್ವವಿದ್ಯಾಲಯ 6ನೇ ಘಟಿಕೋತ್ಸವದಲ್ಲಿ ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಿ ಮಾತನಾಡಿದ ಅವರು, ದೇಶದಲ್ಲಿ ತಂತ್ರಜ್ಞಾನ ಬೆಳವಣಿಗೆ ಹೊಂದುತ್ತಿದ್ದು, ಅದಕ್ಕೆ ತಕ್ಕಂತೆ ನಾವು ಕೂಡ ಬದಲಾಗಬೇಕಿದೆ. ತಂತ್ರಜ್ಞಾನ ಕ್ಷೇತ್ರದಲ್ಲಿ ಮುಂದಿನ ದಿನಗಳಲ್ಲಿ ಸಾಕಷ್ಟು ಉದ್ಯೋಗವಕಾಶಗಳು ಸೃಷ್ಟಿಯಾಗಲಿದ್ದು, ಯುವ ಜನತೆಗೆ ಹೆಚ್ಚು ಅನುಕೂಲವಾಗಲಿದೆ ಎಂದು ಹೇಳಿದರು.

ಶಿಕ್ಷಣದಲ್ಲಿ ಬದಲಾವಣೆ ತರುವ ಉದ್ದೇಶದಿಂದಲೇ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಜಾರಿಗೊಳಿಸಲಾಗಿದೆ. ಇದರಿಂದ ಜಾಗತಿಕ ಮಟ್ಟದಲ್ಲಿ ಜ್ಞಾನಾಧಾರಿತ ಚಟುವಟಿಕೆಗಳು ಹೆಚ್ಚಾಗಲಿದ್ದು, 2050ರ ವೇಳೆಗೆ ಭಾರತದ ಆರ್ಥಿಕತೆ ಟ್ರಿಲಿಯನ್ ಡಾಲರ್‌ಗೆ ವೃದ್ಧಿಯಾಗಲಿದೆ ಎಂಬ ನಿರೀಕ್ಷೆ ಇದೆ. ಇದರಲ್ಲಿ ಕನಿಷ್ಠ ಶೇ.50ರಷ್ಟು ಶಿಕ್ಷಣ ಕ್ಷೇತ್ರಕ್ಕೆ ಸೇರಲಿದೆ. ತಾಂತ್ರಿಕ ವಿಶ್ವವಿದ್ಯಾಲಯಗಳು ಭಾರತವನ್ನು ಜ್ಞಾನದ ಶಕ್ತಿಯಾಗಿ ಪರಿವರ್ತಿಸುವ ಸಾಮರ್ಥ್ಯವನ್ನು ಹೊಂದಿವೆ ಎಂದು ಹೇಳಿದರು.

ಎಂಜಿನಿಯರಿಂಗ್ ವಿದ್ಯಾರ್ಥಿಗಳು ಸಮಾಜದಲ್ಲಿ ಎದುರಾಗುತ್ತಿರುವ ಸಮಸ್ಯೆಗಳಿಗೆ ಪರಿಹಾರ ಕಂಡು ಹಿಡಿಯುವ ಕಡೆ ಆಲೋಚಿಸಬೇಕು. ಇಂದು ನಮ್ಮ ದೇಶದಲ್ಲಿ ವಾತಾವರಣ ಬದಲಾವಣೆಯಾಗುತ್ತಿದೆ. ಜನಸಂಖ್ಯೆ ಪ್ರಮಾಣ ಹೆಚ್ಚಳವಾಗುತ್ತಿದೆ. ಈ ರೀತಿ ಹತ್ತು ಹಲವು ಸಮಸ್ಯೆಗಳಿದ್ದು, ಇದಕ್ಕೆ ಪರಿಹಾರ ಕಲ್ಪಿಸಲು ವಿದ್ಯಾರ್ಥಿಗಳು ಮುಂದಾಗಬೇಕು ಎಂದು ತಿಳಿಸಿದರು.

ಪಿಇಎಸ್ ವಿಶ್ವವಿದ್ಯಾಲವು ಡಿಆರ್‌ಡಿಓ, ಇಸ್ರೋ ಜೊತೆ ಸೇರಿ ಸಣ್ಣ ಉಪಗ್ರಹಗಳನ್ನು ಉಡಾವಣೆ ಮಾಡಿದೆ. ಡ್ರೋನ್ ಟೆಕ್ನಾಲಜಿ ಕೋರ್ಸ್ ಪರಿಚಯಿಸುತ್ತಿರುವುದು ಖುಷಿಯ ವಿಚಾರ ಎಂದರು.

ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ಮಾತನಾಡಿ, ದೇಶವು ವಿಕಾಸದ ಹಾದಿಯಲ್ಲಿದೆ. ಭವಿಷ್ಯದ ದೃಷ್ಟಿಯಿಂದ ಕೇಂದ್ರ ಸರ್ಕಾರವು ನೂತನ ಶಿಕ್ಷಣ ನೀತಿಯನ್ನು ಜಾರಿಗೊಳಿಸಿದೆ. ಎನ್‌ಇಪಿಯನ್ನು ಅನುಷ್ಠಾನ ಮಾಡುವ ಮೂಲಕ ನಮ್ಮ ರಾಜ್ಯ ಪ್ರಥಮ ರಾಜ್ಯ ಎಂಬ ಪಟ್ಟಿಯಲ್ಲಿದೆ ಎಂದು ಶ್ಲಾಘನೆ ವ್ಯಕ್ತಪಡಿಸಿದರು.

ಇದೇ ವೇಳೆ 22 ವಿದ್ಯಾರ್ಥಿಗಳು ಚಿನ್ನದ ಪದಕ ಮತ್ತು 59 ಬೆಳ್ಳಿ ಪದಕ ಸೇರಿದಂತೆ ಪಿಎಚ್‌ಡಿ, ಎಂ.ಟೆಕ್ ಕೋರ್ಸ್‌ಗಳಲ್ಲಿ ಒಟ್ಟಾರೆ 2,249 ವಿದ್ಯಾರ್ಥಿಗಳು ಪದವಿ ಪ್ರದಾನ ಮಾಡಲಾಯಿತು.

ಸಮಾರಂಭದಲ್ಲಿ ಪಿಇಎಸ್ ವಿವಿ ಕುಲಾಧಿಪತಿ ಎಂ.ಆರ್.ದೊರೆಸ್ವಾಮಿ, ಕುಲಪತಿ ಡಾ.ಜೆ.ಸೂರ್ಯಪ್ರಸಾದ್, ಕುಲಸಚಿವ ಡಾ.ಕೆ.ಎಸ್.ಶ್ರೀಧರ್ ಉಪಸ್ಥಿತರಿದ್ದರು.

ಆಧಾರ: ಉದಯವಾಣಿ, ದಿನಾಂಕ: 16.11.2021

## 72. ಏಷ್ಯಾದ ಅತಿದೊಡ್ಡ ತಂತ್ರಜ್ಞಾನ ಸಂತೆಗೆ ಇಂದು ಚಾಲನೆ

ಏಷ್ಯಾದ ಅತಿದೊಡ್ಡ ತಂತ್ರಜ್ಞಾನಗಳ ಸಂತೆ 'ಬೆಂಗಳೂರು ಟೆಕ್ ಸಮಿಟ್' 24ನೇ ಆವೃತ್ತಿಗೆ ಕ್ಷಣಗಣನೆ ಆರಂಭವಾಗಿದ್ದು, ಮೂರು ದಿನಗಳ ಈ ಮೇಳಕ್ಕೆ ಉಪ ರಾಷ್ಟ್ರಪತಿ ಎಂ.ವೆಂಕಯ್ಯ ನಾಯ್ಡು ಚಾಲನೆ ನೀಡಲಿದ್ದಾರೆ.

ಈ ಸಂಬಂಧಗಳ ಎಲ್ಲ ಸಿದ್ಧತೆಗಳು ಹೋಟೆಲ್ ತಾಜ್‌ವೆಸ್ಟ್ ಎಂಡ್‌ನಲ್ಲಿ ಪೂರ್ಣಗೊಂಡಿದ್ದು, ಹೈಬ್ರಿಡ್ ಮಾದರಿಯಲ್ಲಿ ನಡೆಯಲಿರುವ ಈ ಮೇಳವನ್ನು ಉದ್ದೇಶಿಸಿ ಇಸ್ರೇಲ್ ಪ್ರಧಾನಿ ನಫ್ತಾಲಿ ಬೆನೆಟ್ ಮತ್ತು ಆಸ್ಟ್ರೇಲಿಯಾದ ಪ್ರಧಾನಿ ಸ್ಕಾಟ್ ಮಾರಿಸನ್ ಮಾತನಾಡಲಿದ್ದಾರೆ. ಯುಎಇ, ಐರೋಪ್ಯ ಒಕ್ಕೂಟ, ವಿಯೆಟ್ನಾಂ, ದಕ್ಷಿಣ ಆಫ್ರಿಕಾ ಇದೇ ಮೊದಲ ಬಾರಿಗೆ ಪಾಲ್ಗೊಳ್ಳುತ್ತಿದ್ದು, 30ಕ್ಕೂ ಹೆಚ್ಚು ದೇಶಗಳು ಇದಕ್ಕೆ ಸಾಕ್ಷಿಯಾಗಲಿವೆ ಎಂದು ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವ ಡಾ.ಸಿ.ಎನ್.ಅಶ್ವತ್ಥನಾರಾಯಣ ತಿಳಿಸಿದರು.

ಮೇಳದ ಸಿದ್ಧತೆಗಳನ್ನು ಪರಿಶೀಲಿಸಿ ನಂತರ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ನಾಲ್ಕು ವೇದಿಕೆಗಳಲ್ಲಿ ಒಟ್ಟು 75 ಗೋಷ್ಠಿಗಳನ್ನು ಮತ್ತು ಏಳು ಸಂವಾದಗಳನ್ನು ಏರ್ಪಡಿಸಲಾಗಿದೆ. ಇವುಗಳಲ್ಲಿ ಜಾಗತಿಕ ಸಾಮರ್ಥ್ಯ ಕೇಂದ್ರಗಳ (ಜಿಸಿಸಿ) ಮೂಲಕ ನಾವೀನ್ಯತೆಯ ಬೆಳವಣಿಗೆ, ಫಿನ್-ಟೆಕ್ ಭವಿಷ್ಯದ ಹೆಜ್ಜೆಗಳು, ಕೃಷಿ, ಜೀವವಿಜ್ಞಾನ ಸಂಶೋಧನೆ, ಮಹಿಳಾ ಉದ್ಯಮಶೀಲತೆಯ ಸವಾಲುಗಳು, ಶೈಕ್ಷಣಿಕ ತಂತ್ರಜ್ಞಾನ, ಮುಂದಿನ ತಲೆಮಾರಿನ ವೈದ್ಯಕೀಯ ತಂತ್ರಜ್ಞಾನ, ವಂಶವಾಹಿ ಆಧಾರಿತ ಔಷಧಿಗಳು, ಜೀನ್ ಎಡಿಟಿಂಗ್, ಸೆಮಿಕಂಡಕ್ಟರ್, ಕ್ಯಾನ್ಸರ್ ಚಿಕಿತ್ಸೆ, ಸೆಲ್‌ಥೆರಪಿ, ಸೈಬರ್ ಸೆಕ್ಯುರಿಟಿ, ವೈಮಾನಾಂತರಿಕ್ಷ ಮುಂತಾದ ಕ್ಷೇತ್ರಗಳ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲುವಂತಹ ವಿಚಾರ ವಿನಿಮಯ ನಡೆಯಲಿವೆ ಎಂದು ವಿವರಿಸಿದರು.

**'ಬೆಂಗಳೂರು ನೆಕ್ಸ್ಟ್' ಗೋಷ್ಠಿಗಳು :** ತಂತ್ರಜ್ಞಾನದಲ್ಲಿ ಮುಂಚೂಣಿಯಲ್ಲಿರುವ ಬೆಂಗಳೂರಿನ ಸಾಧನೆಯನ್ನು ಮತ್ತಷ್ಟು ವಿಸ್ತರಿಸುವ ಗುರಿಯಿಂದ ಶೃಂಗದಲ್ಲಿ ಪ್ರತ್ಯೇಕವಾಗಿ 'ಬೆಂಗಳೂರು ನೆಕ್ಸ್ಟ್' ನಾವೀನ್ಯತೆ ಮತ್ತು ನಾಯಕತ್ವ ಗೋಷ್ಠಿಗಳನ್ನು ಏರ್ಪಡಿಸಲಾಗಿದೆ. ಈ ಗೋಷ್ಠಿಗಳಲ್ಲಿ ಕೇಂದ್ರ ಸಚಿವ ರಾಜೀವ್ ಚಂದ್ರಶೇಖರ್, ಬಾಷ್ ಕಂಪನಿ ಸಿಇಒ ದತ್ತಾತ್ರಿ ಸಾಲಗಾಮೆ, ಸರ್ಕಾರದ ಐಟಿ ವಿಷನ್ ಗ್ರೂಪ್ ಮುಖ್ಯಸ್ಥ ಕ್ರಿಸ್ ಗೋಪಾಲಕೃಷ್ಣನ್ ಮತ್ತಿತರರು ಭಾಗವಹಿಸಲಿದ್ದಾರೆ.

ಗೋಷ್ಠಿಗಳನ್ನು ಉದ್ದೇಶಿಸಿ ವಿದೇಶಾಂಗ ಸಚಿವ ಎಸ್.ಜೈಶಂಕರ್, ಆಸ್ಟ್ರೇಲಿಯದ ವಿದೇಶಾಂಗ ಸಚಿವ ಮಾರಿಸ್‌ಪೇನ್, ಇಸ್ರೋ ಅಧ್ಯಕ್ಷ ಕೆ.ಶಿವನ್, ಭಾರತ ಮೂಲದ ನೊಬೆಲ್ ಪುರಸ್ಕೃತ ವಿಜ್ಞಾನಿ ವೆಂಕಿ ರಾಮಕೃಷ್ಣನ್, ಹೆಸರಾಂತ ಲೇಖಕ ಚೇತನ್ ಭಗತ್, ಪ್ರಸಿದ್ಧ ಕ್ಯಾನ್ಸರ್ ವೈದ್ಯ ವಿಜ್ಞಾನಿ ಡಾ.ಸಿದ್ದಾರ್ಥ ಮುಖರ್ಜಿ, ವಿಶ್ವ ಆರ್ಥಿಕ ವೇದಿಕೆ ಸ್ಥಾಪಕ ಪ್ರೊ.ಕ್ಲಾಸ್ ಶ್ವಾಬ್, ಮೈಕ್ರೋಸಾಫ್ಟ್ ಇಂಡಿಯಾದ ಮುಖ್ಯಸ್ಥ ಅನಂತ್ ಮಹೇಶ್ವರಿ, ಆಪಲ್ ಇಂಕ್ ಸಮೂಹದ ಉಪಾಧ್ಯಕ್ಷೆ ಪ್ರಿಯ ಬಾಲಸುಬ್ರಹ್ಮಣ್ಯಂ, ಕ್ರಿಂಡೈಲ್ ಕಂಪನಿಯ ಸಿಇಒ ಮಾರ್ಟಿ ಶ್ರೋಟರ್, ಟೆಲ್‌ಸ್ಟ್ರಾ ಕಂಪನಿಯ ಪಾಲುದಾರ ಗ್ಯಾವೆನ್ ಸ್ಟ್ಯಾಂಡನ್ ಮತ್ತಿತರರು ಮಾತನಾಡಲಿದ್ದಾರೆ ಎಂದರು.

**'ಎಲಿವೇಟ್' ನೂರು ಮಳಿಗೆಗಳು :** ಬಿಟಿಎಸ್–2021ರಲ್ಲಿ ವರ್ಚುವಲ್ ವಸ್ತುಪ್ರದರ್ಶನ ಏರ್ಪಡಿಸಲಾಗಿದ್ದು, 320ಕ್ಕೂ ಹೆಚ್ಚು ಕಂಪನಿಗಳು ಪಾಲ್ಗೊಳ್ಳುತ್ತಿವೆ. ಇವುಗಳ ಪೈಕಿ ಸರ್ಕಾರದ 'ಎಲಿವೇಟ್' ಯೋಜನೆ ಅಡಿ ಆಯ್ಕೆಯಾಗಿರುವ ನೂರು ಮಳಿಗೆಗಳು ಇರಲಿವೆ. 300ಕ್ಕೂ ಹೆಚ್ಚು ಕಂಪನಿಗಳು ಮತ್ತು 5 ಸಾವಿರಕ್ಕೂ ಹೆಚ್ಚು ನವೋದ್ಯಮಗಳು ಸಕ್ರಿಯವಾಗಿ ಭಾಗವಹಿಸಲಿವೆ. ಜೊತೆಗೆ ವಾಣಿಜ್ಯ ವಲಯದ 20 ಸಾವಿರಕ್ಕೂ ಹೆಚ್ಚು ಪ್ರತಿನಿಧಿಗಳು ಹಾಜರಾಗುತ್ತಿದ್ದು, ವರ್ಚುವಲ್ ರೂಪದಲ್ಲಿ 5 ಲಕ್ಷಕ್ಕೂ ಹೆಚ್ಚು ಆಸಕ್ತರು ವೀಕ್ಷಿಸಲಿದ್ದಾರೆ ಎಂದು ಮಾಹಿತಿ ನೀಡಿದರು.

ಉದ್ಘಾಟನೆಯಲ್ಲಿ ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್, ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಕೈಗಾರಿಕಾ ಸಚಿವ ಮುರುಗೇಶ ನಿರಾಣಿ, ಬಿಟಿ ವಿಜನ್ ಗ್ರೂಪ್ ಮುಖ್ಯಸ್ಥರಾದ ಕರಿಣ್ ಮಜುಂದಾರ್ ಷಾ, ಸ್ಟಾರ್ಟ್ ಆಪ್ ವಿಜನ್ ಗ್ರೂಪ್ ಅಧ್ಯಕ್ಷ ಪ್ರಶಾಂತ್ ಪ್ರಕಾಶ್, ಎಸ್‌ಟಿಪಿಐ ನಿರ್ದೇಶಕ ಶೈಲೇಂದ್ರ ಕುಮಾರ್ ತ್ಯಾಗಿ ಮತ್ತಿತರರು ಪಾಲ್ಗೊಳ್ಳಲಿದ್ದಾರೆಂದು ಅವರು ಹೇಳಿದರು. ಸುದ್ದಿಗೋಷ್ಠಿಯಲ್ಲಿ ಐಟಿ–ಬಿಟಿ ಇಲಾಖೆಯ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಇ.ವಿ.ರಮಣರೆಡ್ಡಿ ಇಲಾಖೆ ನಿರ್ದೇಶಕಿ ಮೀನಾ ನಾಗರಾಜ್ ಉಪಸ್ಥಿತರಿದ್ದರು.

ಆಧಾರ: ಉದಯವಾಣಿ, ದಿನಾಂಕ: 17.11.2021

## 73. Legislators propose to add more villages to BBMP, officials dispose

A proposal from MLAs expand the jurisdiction of Bruhat Bengaluru Mahanagara Palike (BBMP) by bringing more villages under it has run into stiff opposition from bureaucrats who feel it would be a Herculean task to ensure adequate infrastructure.

Pointing at the state of the 110 villages that were brought under the Palike in 2008, they say road connectivity, water supply and electricity among others are still an issue.

MLAs from outer Bengaluru constituencies like Mahadevapura, Bytarayanapura, Bengaluru South, Yelahanka, Rajarajeshwari Nagar and Yeshwanthpur are keen on expanding the BBMP's jurdisdiction.

In October 2020, the state government had set up a special committee to look into the issue. The BBMP Commissioner, Bengaluru Urban Deputy Commissioner, BDA Chief and BBMP Special Commissioner (Revenue) were the members of the panel.

Then Commissioner failed to hold even a single meeting and was later transferred to the revenue department. As the panel's term was set to end on June 28, 2021 BBMP Chief Commissioner requested the urban development department to grant more time for the panel considering the pandemic situation. The department issued a circular earlier this month extending another six months for the delimitation committee to complete the task by January 28, 2022.

Sources in the committee said a proposal has been made to include 58 villages on the fringes of Mahadevapura, Yeshwantpur and Bengaluru South.

The rule doesn't allow us to go beyond 1-km radius, but some MLAs are expecting us to include areas that are 5-10 kms away, they said adding. We are getting applications from various organisations too, but it is not possible.

The committee is also looking at other consequences. According to the rules if a village is brought under the BBMP the gram panchayat members concerned will be come associate members of the BBMP council for the rest of their term .

**Will up property tax: Min**

Minister for Co-Operation and Yeshwanthpur MLA said, I understand it is not easy to bring in more villages under BBMP, But our intention was different. Adding more villages will increase property tax and augment the civic agency's revenue.

The Supreme Court meanwhile is hearing the matter of elections to the BBMP on December 6. Expanding the BBMP limits and increasing the number of wards to ensure better administration were some of the reasons that the state government had cited to delay the pools.

We will wait for the Supreme Court hearing, see what it decides and if necessary, make preparation for the elections said senior officials from the Palike.

Courtesy: Times of India , Dated: 17.11.2021

## 74. ರಾಜ್ಯದ 500 ಆಸ್ಪತ್ರೆಗಳ ಮೇಲ್ದರ್ಜೆಗೆ ಕ್ರಮ

ರಾಜ್ಯಕ್ಕೆ ಶಾಶ್ವತ ಹಾಗೂ ದೂರದೃಷ್ಟಿಯ ಹೆಲ್ತ್ ವಿಷನ್‌ಗೆ ಪೂರಕ ದಾಖಲೆಗಳನ್ನು ರೂಪಿಸಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಹೇಳಿದ್ದಾರೆ.

ಜಯದೇವ ಹೃದ್ರೋಗ ಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ಆವರಣದಲ್ಲಿ ಇನ್ಫೋಸಿಸ್ ಪ್ರತಿಷ್ಠಾನದ ವತಿಯಿಂದ ನಿರ್ಮಾಣಗೊಂಡಿರುವ 350 ಹಾಸಿಗೆ ಸಾಮರ್ಥ್ಯದ ನೂತನ ಹೃದ್ರೋಗ ಆಸ್ಪತ್ರೆಯನ್ನು ಉದ್ಘಾಟಿಸಿ ಅವರು ಮಾತನಾಡಿ, ಆರೋಗ್ಯ ಕ್ಷೇತ್ರದಲ್ಲಿ ಮೂಲಸೌಕರ್ಯ ವೃದ್ಧಿಸಲಾಗುವುದು. ಈ ವರ್ಷ 250 ಪ್ರಾಥಮಿಕ ಆರೋಗ್ಯ ಕೇಂದ್ರ ಸರ್ಕಾರದ ಸಹಾಯದಿಂದ 250

ಆಸ್ಪತ್ರೆಗಳನ್ನು ಮೇಲ್ದರ್ಜೆಗೇರಿಸುವ ಕಾರ್ಯ ಕೈಗೊಳ್ಳಲಾಗುವುದು. ಇದಲ್ಲದೆ ಸ್ಪೆಷಲಿಸ್ಟ್ ಆಸ್ಪತ್ರೆ ಹಾಗೂ ಪ್ರಾದೇಶಿಕ ಕೇಂದ್ರಗಳಲ್ಲಿ ಹೃದ್ರೋಗ, ಕ್ಯಾನ್ಸರ್ ಆಸ್ಪತ್ರೆಗಳ ನಿರ್ಮಾಣಕ್ಕೆ ಸರ್ಕಾರ ಕ್ರಮ ಕೈಗೊಳ್ಳಲಿದೆ ಎಂದು ತಿಳಿಸಿದರು.

**ಕನ್ನಡ ನಾಡಿನಲ್ಲಿ ಜ್ಞಾನ ಒಂದು ಶಕ್ತಿ :** ಸುಧಾಮೂರ್ತಿ ಹಾಗೂ ನಾನು ಒಂದೇ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಟೆಲ್ಕೊ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದೇವೆ ಎಂದು ಸ್ಮರಿಸಿದ ಮುಖ್ಯಮಂತ್ರಿಗಳು, ಇನ್ಫೋಸಿಸ್ ಸಂಸ್ಥಾಪಕ ನಾರಾಯಣಮೂರ್ತಿ ಹಾಗೂ ಸುಧಾಮೂರ್ತಿಯವರ ಬದುಕು ನಮಗೆಲ್ಲಾ ಪ್ರೇರಣೆ. ಅವರ ಹೃದಯ ವೈಶ್ಯಾಲ್ಯತೆ, ದೂರದೃಷ್ಟಿ ಬೇರೆ ಯಾರಿಗೂ ಸಾಧ್ಯವಿಲ್ಲ. ಕನ್ನಡ ನಾಡಿನಲ್ಲಿ ಜ್ಞಾನ ಒಂದು ಶಕ್ತಿ ಎಂದು ಈ ದಂಪತಿ ನಿರೂಪಿಸಿದ್ದಾರೆ ಎಂದು ಶ್ಲಾಘಿಸಿದರು.

21ನೇ ಶತಮಾನ ಜ್ಞಾನದ ಶತಮಾನ. ಜ್ಞಾನಕ್ಕೆ ಬಹಳಷ್ಟು ಮಹತ್ವವಿದೆ. ತಮ್ಮ ಕರ್ತವ್ಯದ ಜೊತೆ ಕರ್ತವ್ಯದ ಲಾಭವನ್ನು ಜನೋಪಯೋಗಕ್ಕೆ ಬಳಸಿದಾಗ ಕರ್ತವ್ಯ ಕಾಯಕವಾಗುತ್ತದೆ. ಕೆರೆಯ ನೀರನ್ನು ಕೆರೆಗೆ ಚೆಲ್ಲಿ ಎಂಬಂತೆ ಇನ್ಫೋಸಿಸ್ ಫೌಂಡೇಷನ್ 350 ಹಾಸಿಗೆ ಆಸ್ಪತ್ರೆ ನಿರ್ಮಿಸಿದೆ. ಈ ಆಸ್ಪತ್ರೆಯ ನಿರ್ಮಾಣದಿಂದ ಜಯದೇವ ಆಸ್ಪತ್ರೆಯ ಒತ್ತಡ ತಗ್ಗಲು ಸಹಕಾರಿಯಾಗಿದೆ. ಜಯದೇವ ಹೃದ್ರೋಗ ಸಂಸ್ಥೆ ಹಂತ ಹಂತವಾಗಿ ಬೆಳೆದಿದೆ. ಅಸಂಖ್ಯಾತ ಜನರಿಗೆ ಚಿಕಿತ್ಸೆ ನೀಡುವುದು ಪ್ರಪಂಚದ ಎಂಟನೇ ಅದ್ಭುತದಂತೆ ಭಾಸವಾಗುತ್ತದೆ. ಡಾ.ಮಂಜುನಾಥ ಅವರ ಸಮರ್ಥ ನಾಯಕತ್ವದಲ್ಲಿ ಸಂಸ್ಥೆ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ. ಜಯದೇವ ಸಂಸ್ಥೆಯನ್ನು ಕಟ್ಟಲು ತಮ್ಮ ಜೀವನವನ್ನೇ ಮುಡಪಾಗಿಟ್ಟ ಡಾ.ಮಂಜುನಾಥ್ ಅವರನ್ನು ಅಭಿನಂದಿಸಿದರು.

ಆರೋಗ್ಯ ಸಚಿವ ಡಾ.ಕೆ.ಸುಧಾಕರ್ ಮಾತನಾಡಿ, ದೇವರ ದಯೆಯಿಂದ ರಾಜ್ಯ, ದೇಶಕ್ಕೆ ಕೊರೋನಾ ಮೂರನೇ ಅಲೆ ಕಾಲಿಟ್ಟಿಲ್ಲ. ಅಂತರರಾಷ್ಟ್ರೀಯ ಜನರಲ್ ಪ್ರಕಾರ ಭಾರತದಲ್ಲಿ ಕೊರೋನಾ ಅಂತಿಮ ಹಂತ ತಲುಪಿದೆ. ಪ್ರಸ್ತುತ ವಿದೇಶಗಳಲ್ಲಿ ಕೊರೋನಾ ಪರಿಸ್ಥಿತಿ ಹದಗೆಟ್ಟಿದೆ. ನಾವೆಲ್ಲರೂ ಎಚ್ಚರಿಕೆ ವಹಿಸುವುದು ಅಗತ್ಯವಾಗಿದ್ದು, ಕಡ್ಡಾಯವಾಗಿ ಮಾಸ್ಕ್ ಧರಿಸಬೇಕು ಎಂದು ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ: 18.11.2021

## 75. ಬಯೋಮೆಟ್ರಿಕ್ ಹಾಜರಾತಿ ನ್ಯೂನತೆ ಸರಿಪಡಿಸಿ

ಬಯೋಮೆಟ್ರಿಕ್ ಹಾಜರಾತಿಯಲ್ಲಿನ ನ್ಯೂನತೆಗಳು ಪುನರಾವರ್ತನೆ ಆಗದಂತೆ ಎಚ್ಚರ ವಹಿಸುವಂತೆ ಸರ್ಕಾರದ ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್ ಸಚಿವಾಲಯದ ಎಲ್ಲ ಇಲಾಖೆಗಳಿಗೆ ಸೂಚಿಸಿದ್ದಾರೆ. ಬಹುತೇಕ ಅಧಿಕಾರಿ/ಸಿಬ್ಬಂದಿ ಕಚೇರಿಗೆ ತಡವಾಗಿ ಆಗಮಿಸುವುದು, ನಿಗದಿತ 7.30 ಗಂಟೆಗಳಷ್ಟು ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿಲ್ಲ. ವರ್ಗಾವಣೆ, ಮುಂಬಡ್ತಿಯಿಂದ ಬಹುತೇಕ ಅಧಿಕಾರಿ/ಸಿಬ್ಬಂದಿ ಬಯೋಮೆಟ್ರಿಕ್ ಹಾಜರಾತಿಯನ್ನು ಅವರು ಕಾರ್ಯನಿರ್ವಹಿಸುತ್ತಿರುವ ಇಲಾಖೆಯಲ್ಲಿ ದಾಖಲಿಸುತ್ತಿಲ್ಲ. ಬಹುತೇಕ ಸಿಬ್ಬಂದಿ ಹಾಜರಾತಿ ಪುಸ್ತಕದಲ್ಲಿ ಸಹಿ ಮಾಡುತ್ತಿಲ್ಲ. ಅಧಿಕಾರಿಗಳು ಫ್ಲೆಕ್ಸಿ ಸೌಲಭ್ಯವನ್ನು ದುರುಪಯೋಗ ಮಾಡಿಕೊಳ್ಳುತ್ತಿರುವುದು ಹಾಗೂ ತಿಂಗಳಿನ ಬಹುತೇಕ ಮಿಸ್ಡ್ ಫ್ಲ್ಯಾಷ್‌ಗಳನ್ನು ಸರಿಪಡಿಸಿಕೊಳ್ಳುತ್ತಿರುವುದನ್ನು ಗಮನಿಸಲಾಗಿದೆ. ನಿವೃತ್ತಿ ಹೊಂದಿರುವ, ಮೃತಪಟ್ಟ ಸಿಬ್ಬಂದಿ ಹೆಸರುಗಳನ್ನು ತೆಗೆದುಹಾಕಿರುವುದಿಲ್ಲ. ರಜೆ ಸೌಲಭ್ಯ ಪಡೆಯಲು ಇ–ಲೀವ್ ತಂತ್ರಾಂಶವನ್ನು ಉಪಯೋಗಿಸಿಕೊಳ್ಳದೆ ಭೌತಿಕ ರಜೆ ಅರ್ಜಿ ಸಲ್ಲಿಸುತ್ತಿರುವುದು ಕಂಡುಬಂದಿದೆ. ಅಲ್ಲದೆ, ಹಾಜರಾತಿ ನಿರ್ವಹಣೆ ಜವಾಬ್ದಾರಿ ಹೊಂದಿರುವ ಇಲಾಖೆಗಳ ಎಎಂಎಸ್ ಅಧಿಕಾರಿಗಳು ಕೂಡ ಬಯೋಮೆಟ್ರಿಕ್ ಹಾಜರಾತಿನ್ನು ಸರಿಯಾಗಿ ನಿರ್ವಹಣೆ ಮಾಡುತ್ತಿಲ್ಲ. ಈ ರೀತಿಯ ತಪ್ಪುಗಳು ಪುನರಾವರ್ತನೆಯಾದರೆ ಸಂಬಂಧಪಟ್ಟವರ ವಿರುದ್ಧ ಶಿಸ್ತುಕ್ರಮ ಜರುಗಿಸಲಾಗುವುದು ಎಂದು ರವಿಕುಮಾರ್ ಎಚ್ಚರಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ: 18.11.2021

## 76.ತುರ್ತು ಪರಿಹಾರ ಬಿಡುಗಡೆ

2021–22ನೇ ಸಾಲಿನ ಮುಂಗಾರು ಹಂಗಾಮಿನಲ್ಲಿ ಪ್ರವಾಹದಿಂದ ಬಾಧಿತರಾದ ನೆರೆ ಸಂತ್ರಸ್ಥರಿಗೆ ತುರ್ತು ಪರಿಹಾರ ಹಾಗೂ ಮನೆ ಹಾನಿ ಪರಿಹಾರ ಪಾವತಿಸಲು ರಾಜ್ಯ ಸರ್ಕಾರದ ಹೆಚ್ಚುವರಿ ಮೊತ್ತ ರೂ.352.99 ಕೋಟಿ ಬಿಡುಗಡೆ ಮಾಡಿದೆ. ಗೃಹೋಪಯೋಗಿ ವಸ್ತುಗಳು ಹಾನಿಯಾದ ನೆರೆ ಸಂತ್ರಸ್ತರಿಗೆ ರೂ.65.32 ಕೋಟಿ ಹಾಗೂ ಮನೆಹಾನಿ ಪರಿಹಾರವನ್ನು ಹೆಚ್ಚುವರಿ ದರದಲ್ಲಿ ಪಾವತಿಸಲು ರೂ. 287.66 ಕೋಟಿ ಸೇರಿ ಒಟ್ಟು ರೂ. 352.99 ಗಳನ್ನು 16 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ.

ಆಧಾರ: ವಿಜಯವಾಣಿ, ದಿನಾಂಕ: 21.11.2021

## 77. 2 ದಿನದಲ್ಲಿ 18 ಸಾವು

ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ವರುಣನ ಆರ್ಭಟ ಮುಂದುವರಿದಿದ್ದು, ಕಳೆದ 2 ದಿನದಲ್ಲಿ ಮಳೆಸಂಬಂಧಿ ಅವಘಡಗಳಲ್ಲಿ ಒಟ್ಟು 18 ಮಂದಿ ಸಾವನ್ನಪ್ಪಿದ್ದಾರೆ. ಶುಕ್ರವಾರ ರಾಜ್ಯದಲ್ಲಿ 9 ಮಂದಿ ಮೃತಪಟ್ಟಿದ್ದರು. 9 ಮಂದಿ ಸಾವನ್ನಪ್ಪಿದ್ದಾರೆ. ಅತ್ತ ಆಂಧ್ರಪ್ರದೇಶದಲ್ಲೂ ಮಳೆ, ನೆರೆ ಅರ್ಭಟಕ್ಕೆ ಜನರು ತತ್ತರಿಸಿದ್ದು, ಸಾವಿನ ಸಂಖ್ಯೆ 29ಕ್ಕೆ ಏರಿಕೆಯಾಗಿದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಇಬ್ಬರು ರೈತರು ಮಳೆ ನೀರಲ್ಲಿ ಕೊಚ್ಚಿಹೋಗಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ: 21.11.2021

## 78. ಮಳೆ ಹಾನಿಗೆ ಪರಿಹಾರ

ರಾಜ್ಯದಲ್ಲಿ ಅಕಾಲಿಕ ಮಳೆಯಿಂದಾಗಿ ಅಂದಾಜಿನ ಪ್ರಕಾರ ಸುಮಾರು 5 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆ ಮತ್ತು ಸುಮಾರು 40 ಸಾವಿರ ಮನೆಗಳಿಗೆ ಹಾನಿಯಾಗಿದೆ ಎಂದು ತಿಳಿಸಿರುವ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಸಂಪೂರ್ಣ ಹಾನಿಯಾಗಿರುವ ಮನೆಗಳಿಗೆ ರೂ. 5 ಲಕ್ಷ, ಭಾಗಶಃ ಹಾನಿಗೊಳಗಾದ ಮನೆಗೆ 3 ಲಕ್ಷ ಮತ್ತು ಅಲ್ಪ ಹಾನಿಗೊಳಗಾಗಿರುವ ಮನೆಗಳಿಗೆ 50 ಸಾವಿರ ಪರಿಹಾರ ನೀಡುವುದಾಗಿ ಘೋಷಿಸಿದ್ದಾರೆ. ಇದೇ ವೇಳೆ ಕೂಡಲೇ ಪರಿಹಾರ ಬಿಡುಗಡೆ ಮಾಡುವಂತೆ ಎಲ್ಲ ಜಿಲ್ಲಾಧಿಕಾರಿಗಳಿಗೆ ಸೂಚಿಸಿರುವುದಾಗಿ ಹೇಳಿದ್ದಾರೆ.

ಚಿಕ್ಕಬಳ್ಳಾಪುರ ಜಿಲ್ಲೆಯ ಮಳೆ ಹಾನಿ ಪ್ರದೇಶಗಳಿಗೆ ಭೇಟಿ ಮಾಡಿ ಪರಿಶೀಲನೆ ನಡೆಸಿದ ಬಳಿಕ ಸುದ್ದಿಗಾರರ ಜೊತೆ ಮಾತನಾಡಿದ ಅವರು, ರಾಜ್ಯದ ಕರಾವಳಿ, ಉತ್ತರ ಒಳನಾಡು, ದಕ್ಷಿಣ ಒಳನಾಡಿನಲ್ಲಿ ಬೆಳೆ ಹಾನಿ ಸಾಕಷ್ಟು ಆಗಿದೆ. ಸುಮಾರು 40 ಸಾವಿರ ಮನೆಗಳು ಹಾನಿಯಾಗಿದ್ದು, ಕೂಡಲೇ ಪರಿಹಾರ ಬಿಡುಗಡೆ, ಮಾಡುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಿದ್ದೇನೆ. ಪ್ರವಾಹದಿಂದ ಯಾವ ಗ್ರಾಮಗಳಿಗೆ ಸಂಪರ್ಕ ಕಡಿತ ಆಗಿದೆ ಅಲ್ಲಿ ಮೊದಲು ಸ್ಪಂದಿಸುವಂತೆ ಅಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ವಿದ್ಯುತ್ ಕಂಬಗಳು ಹಾನಿಯಾಗಿವೆ ಅವುಗಳನ್ನು ಸರಿಪಡಿಸಲು ಸೂಚಿಸಿದ್ದು, ಸಂಜೆ ಅಧಿಕಾರಿಗಳ ಜೊತೆ ಸಭೆ ನಡೆಸಿ ನಿಖರ ಮಾಹಿತಿ ಪಡೆಯುವುದಾಗಿ ಮುಖ್ಯಮಂತ್ರಿ ಬೊಮ್ಮಾಯಿ ಹೇಳಿದರು.

**ಪ್ರತಿಪಕ್ಷಗಳ ಟೀಕೆಗೆ ತಿರುಗೇಟು:** ಇದೇ ವೇಳೆ ಜನ ಅತಿವೃಷ್ಟಿಯಿಂದಾಗಿ ತತ್ತರಿಸುವ ವೇಳೆ ಬಿಜೆಪಿಗರು ಯಾತ್ರೆ ಮಾಡುತ್ತಿದ್ದಾರೆ ಎಂಬ ಸಿದ್ದರಾಮಯ್ಯ ಟೀಕೆ ಕುರಿತು ಸುದ್ದಿಗಾರರು ಕೇಳಿದ ಪ್ರಶ್ನೆಗೆ ತೀಕ್ಷ್ಣ ಪ್ರತಿಕ್ರಿಯೆ ನೀಡಿದ ಮುಖ್ಯಮಂತ್ರಿಗಳು, ವಿಪಕ್ಷಗಳು ಇರುವುದೇ ಟೀಕೆ ಮಾಡುವುದಕ್ಕೆ ಅವರು ಟೀಕೆ ಮಾಡಲಿ ಎಂದರು.

ನೀತಿ ಸಂಹಿತೆ ಕಾರಣಗಳಿಂದಾಗಿ ಮಳೆಹಾನಿ ವೀಕ್ಷಣೆಗೆ, ಅಧಿಕಾರಿಗಳ ಸಭೆ ನಡೆಸಲು ಚುನಾವಣಾ ಆಯೋಗಕ್ಕೆ ಪತ್ರ ಬರೆಯುವ ಮೂಲಕ ಅನುಮತಿ ಕೋರಲಾಗಿದೆ. ನಾನೂ ಇದ್ಯಾವುದಕ್ಕೂ ಕಾಯದೆ ಬೆಳೆ ಹಾನಿ ಸಮೀಕ್ಷೆಗೆ ಪ್ರವಾಸ ಕೈಗೊಂಡಿದ್ದೇನೆ. ರಾಜ್ಯಾದ್ಯಂತ ಪ್ರವಾಸ ನಡೆಸಲು ನಿರ್ಧರಿಸಿರುವೆ ಎಂದು ತಿಳಿಸಿದರು. ಈಗಾಗಲೇ ಸಚಿವರು ಮಳೆಯಿಂದ ಹಾನಿಯಾಗಿರುವ ಜಿಲ್ಲೆಗಳಲ್ಲಿ ಇದ್ದಾರೆ ಎಂದು ಮಾಹಿತಿ ನೀಡಿದರು.

ಮಳೆ ಹಾನಿ ಬಗ್ಗೆ ಈಗ ರಾಜ್ಯಾದ್ಯಂತ ಪ್ರಾಥಮಿಕ ಸರ್ವೇ ನಡೆಸಲಾಗುವುದು. ಕಣ್ನೋಟದ ಸರ್ವೇ ಇದಾಗಿದೆ. ಪ್ರಾಥಮಿಕ ಸರ್ವೇ ಆದ ಬಳಿಕ ದೃಢೀಕರಣ ಆಗಬೇಕು. ಎಲ್ಲ ಜಿಲ್ಲೆಗಳಿಂದ ಪರಿಹಾರ ಪೋರ್ಟಲ್‌ಗೆ ಅಪ್ಲೋಡ್ ಆಗಬೇಕು ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ: 22.11.2021

## 79. ಸರ್ಕಾರಿ ನೌಕರರಿಗೆ ಕಡ್ಡಾಯ ಬಡ್ತಿ

ಸ್ವಂತ ಅರ್ಹತೆ ಮೇಲೆ ನೇಮಕವಾದ ಪರಿಶಿಷ್ಟ ಜಾತಿ ಮತ್ತು ಪಂಗಡದ ಸರ್ಕಾರಿ ನೌಕರರಿಗೆ ಮೀಸಲಾತಿ ಕೋಟಾದಡಿ ಪರಿಗಣಿಸದೆ ಸಾಮಾನ್ಯ ವರ್ಗದಲ್ಲೇ ಮುಂಬಡ್ತಿ ಕೊಡಲು ಆದೇಶಿಸುವ ಮೂಲಕ ಸಿಹಿಸುದ್ದಿ ಕೊಟ್ಟಿದ್ದ ರಾಜ್ಯ ಸರ್ಕಾರ, ಈಗ ಎಲ್ಲ ವರ್ಗದ ಸರ್ಕಾರಿ ನೌಕರರಿಗೂ 06 ತಿಂಗಳಿಗೊಮ್ಮೆ ಕಡ್ಡಾಯವಾಗಿ ಮುಂಬಡ್ತಿ ಕೊಡುವ ವ್ಯವಸ್ಥೆ ಜಾರಿಗೆ ತರಲು ನಿರ್ಧರಿಸಿದೆ. ಇದರಿಂದಾಗಿ ಬಡ್ತಿಗಾಗಿ ಕಾಯುವ ಸಂಕಷ್ಟ ತಪ್ಪಲಿದೆ. ಜೊತೆಗೆ, ಎಲ್ಲ ಇಲಾಖೆಗಳಿಗೂ ಒಂದೇ ರೀತಿಯ ಸಾಮಾನ್ಯ ವೃಂದ ಮತ್ತು ನೇಮಕಾತಿ ನಿಯಮ ಅನುಷ್ಠಾನಕ್ಕೂ ಸರ್ಕಾರ ಒಲವು ತೋರಿದೆ.

ಕರ್ನಾಟಕ ನಾಗರಿಕ ಸೇವೆಗಳ ನಿಯಮಾವಳಿಗಳ (ಕೆಸಿಎಸ್‌ಆರ್) ಪ್ರಕಾರ ಪ್ರತಿವರ್ಷ ಸರ್ಕಾರಿ ನೌಕರರ ಜ್ಯೇಷ್ಠತಾ ಪಟ್ಟಿ ಸಿದ್ಧಪಡಿಸಿ, ಅರ್ಹತೆಗೆ ಅನುಗುಣವಾಗಿ ಮುಂಬಡ್ತಿ ಕೊಡಲೇಬೇಕು. ಆದರೆ, ಕೆಲವೊಂದು ಇಲಾಖೆಗಳನ್ನು ಹೊರತುಪಡಿಸಿ ಬಹುತೇಕ ಪ್ರಮುಖ ಇಲಾಖೆಗಳಲ್ಲಿ ಸಮರ್ಪಕವಾಗಿ ಮುಂಬಡ್ತಿ ನಿಯಮ ಪಾಲನೆ ಆಗದಿರುವ ಬಗ್ಗೆ ನೌಕರರ ವಲಯದಲ್ಲಿ ತೀವ್ರ ಅಸಮಾಧಾನ ವ್ಯಕ್ತವಾಗಿತ್ತು. ಸರ್ಕಾರಿ ನೌಕರರ ಸಮಸ್ಯೆಗಳು ಹಾಗೂ ಬೇಡಿಕೆಗಳ ಬಗ್ಗೆ ಅ.28 ರಂದು ಅಪರ ಮುಖ್ಯ ಕಾರ್ಯದರ್ಶಿ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಮಟ್ಟದ ಜಂಟಿ ಸಮಾಲೋಚನಾ ಸಮಿತಿ ಸಭೆಯಲ್ಲಿ ಹೊಸ ವ್ಯವಸ್ಥೆ ಜಾರಿ ಬಗ್ಗೆ ಚರ್ಚೆ ನಡೆಯಿತು. ಸಭೆಯ ನಡಾವಳಿಯ ಅನುಸಾರ ಕೂಡಲೇ ಕ್ರಮ ಕೈಗೊಂಡು ಅನುಪಾಲನಾ ವರದಿ ಕಳುಹಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ನವೆಂಬರ್ 15 ರಂದು ಸಂಬಂಧಪಟ್ಟವರಿಗೆ ಸೂಚನೆ ನೀಡಿದೆ.

**12 ವರ್ಷದಿಂದ ಇಲ್ಲ ಬಡ್ತಿ:** ಸಾರಿಗೆ ಇಲಾಖೆಗೆ ಒಟ್ಟಾರೆ 2650 ಹುದ್ದೆ ಮಂಜೂರಾಗಿವೆ. ಸದ್ಯ 1609 ಹುದ್ದೆ ಭರ್ತಿಯಾಗಿದ್ದು, 1041 ಹುದ್ದೆ ಹಲವು ವರ್ಷಗಳಿಂದ ಖಾಲಿ ಉಳಿದಿವೆ. 2008ರಲ್ಲಿ ಸೇವೆಗೆ ಸೇರಿದ ಬ್ರೇಕ್ ಇನ್‌ಸ್ಪೆಕ್ಟರ್‌ಗಳು ಹಾಗೂ ಇತರ ನೌಕರರಿಗೆ 12 ವರ್ಷಗಳಿಂದ ಮುಂಬಡ್ತಿ ಕೊಟ್ಟಿಲ್ಲ. ಹಿರಿಯ ಮೋಟಾರು ವಾಹನ ನಿರೀಕ್ಷಕ ಹುದ್ದೆಯಿಂದ ಕೆಲವರಿಗೆ ಸಹಾಯಕ ಪ್ರಾದೇಶಿಕ ಅಧಿಕಾರಿ ಹುದ್ದೆಗೆ ಬಡ್ತಿ ಕೊಡಲಾಗಿದೆ. ಉಳಿದಂತೆ ಬಹುತೇಕರಿಗೆ ಸ್ವತಂತ್ರ ಪ್ರಭಾರ ಹುದ್ದೆಯಲ್ಲೇ ಮುಂದುವರಿಸಲಾಗಿದೆ.

**ಹುದ್ದೆಗಳ ಆಧರಿಸಿ ಬಡ್ತಿ:** ಬಹುತೇಕ ಇಲಾಖೆಗಳಲ್ಲಿ ಹುದ್ದೆ ಖಾಲಿ ಉಳಿದಿರುವುದರಿಂದ ಮುಂಬಡ್ತಿ ಕೊಡಲು ತೊಂದರೆಯಾಗುತ್ತಿದೆ. ಅದೇ ಕಾರಣಕ್ಕೆ ಇಲಾಖೆಗೆ ಮಂಜೂರಾಗಿರುವ ಒಟ್ಟಾರೆ ಹುದ್ದೆ ಪರಿಗಣಿಸದೇ ಪ್ರಸ್ತುತ ಭರ್ತಿಯಾಗಿರುವ ಹುದ್ದೆಗಳನ್ನಷ್ಟೇ ಆಧರಿಸಿ ಮುಂಬಡ್ತಿ ನೀಡಲು ಸಚಿವ ಸಂಪುಟದಲ್ಲಿ ಅನುಮೋದನೆ ಸಿಕ್ಕಿದೆ. ಇದೂ ಕೂಡ ಮುಂಬಡ್ತಿ ಪ್ರಕ್ರಿಯೆಗೆ ಅನುಕೂಲವಾಗಲಿದೆ.

ಆಧಾರ: ವಿಜಯವಾಣಿ, ದಿನಾಂಕ: 23.11.2021

## 80. ರಾಜಕಾಲುವೆ ಒತ್ತುವರಿ ತೆರವು – ಮುಖ್ಯಮಂತ್ರಿ ಸೂಚನೆ

ನಗರದ ರಾಜಕಾಲುವೆ ಒತ್ತುವರಿಗಳನ್ನು ತೆರವುಗೊಳಿಸಬೇಕು ಹಾಗೂ ಹೆಬ್ಬಾಳ ಕಣಿವೆಯ ಮಳೆ ನೀರು ಹರಿಸುವುದಕ್ಕೆ ಮುಖ್ಯ ರಾಜಕಾಲುವೆಯನ್ನು ಸಮಗ್ರವಾಗಿ ಅಭಿವೃದ್ಧಿಪಡಿಸಲು ಕ್ರಿಯಾಯೋಜನೆ ರೂಪಿಸಬೇಕು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಬಿಬಿಎಂಪಿ ಅಧಿಕಾರಿಗಳಿಗೆ ಸೂಚಿಸಿದರು.

ಭಾರಿ ಮಳೆಯಿಂದ ಪ್ರವಾಹ ಉಂಟಾಗಿರುವ ಯಲಹಂಕ, ಜಕ್ಕೂರು ಹಾಗೂ ಮಾನ್ಯತಾ ಟೆಕ್‌ಪಾರ್ಕ್ ಪ್ರದೇಶಗಳಿಗೆ ಭೇಟಿ ನೀಡಿ ಪರಿಶೀಲನೆ ನಡೆಸಿದರು. ಸುದ್ದಿಗಾರರ ಜೊತೆ ಮಾತನಾಡಿದ ಮುಖ್ಯಮಂತ್ರಿ, 'ಶ್ರೀಮಂತರು ಮಾಡಿರುವ ರಾಜಕಾಲುವೆ ಹಾಗೂ ಅದರ ಮೀಸಲು ಪ್ರದೇಶಗಳ ಒತ್ತುವರಿಗಳನ್ನು ಮೊದಲ ಹಂತದಲ್ಲಿ ತೆರವುಗೊಳಿಸಲಾಗುತ್ತದೆ. ಬಡವರು ಒತ್ತುವರಿ ಮಾಡಿದ್ದರೆ, ಅವರಿಗೆ ಪರ್ಯಾಯ ನಿವೇಶನಗಳನ್ನು ಒದಗಿಸಿ ನಂತರ ಒತ್ತುವರಿ ತೆರವು ಮಾಡುವಂತೆ ಬಿಬಿಎಂಪಿ ಅಧಿಕಾರಿಗಳಿಗೆ ಸೂಚನೆ ನೀಡಿದ್ದೇನೆ' ಎಂದರು.

'ರಾಜಕಾಲುವೆ ಮೀಸಲು ಪ್ರದೇಶ ಒತ್ತುವರಿ ಮಾಡಿಕೊಂಡು ನಿರ್ಮಾಣವಾಗಿರುವ ಅಪಾರ್ಟ್‌ಮೆಂಟ್ ಸಮುಚ್ಚಯಗಳನ್ನು ತೆರವು ಮಾಡುವಂತೆ ರಾಷ್ಟ್ರೀಯ ಹಸಿರು ನ್ಯಾಯಮಂಡಳಿಯ ಆದೇಶವು ಇದೆ. ಕೆರೆ, ಕಾಲುವೆಗಳ ಮೀಸಲು ಪ್ರದೇಶದಲ್ಲಿ ಅಪಾರ್ಟ್‌ಮೆಂಟ್ ಸಮುಚ್ಚಯಗಳಿರುವುದು ದೊಡ್ಡ ಪ್ರಮಾಣದಲ್ಲಿ ಮಳೆಯಾದಾಗ ಬಯಲಿಗೆ ಬರುತ್ತದೆ. ಇಂತಹ ಕಟ್ಟಡಗಳ ಮಾಲೀಕರಿಗೆ ಈಗಾಗಲೇ ನೋಟಿಸ್ ನೀಡಲಾಗಿದೆ. ಮಳೆನೀರು ಹರಿವಿಗೆ ವ್ಯವಸ್ಥೆ ಕಲ್ಪಿಸಲು ಅವರು ಜಾಗ ಬಿಟ್ಟುಕೊಡಬೇಕು. ಇಲ್ಲದಿದ್ದರೆ ಅವರಿಗೇ ತೊಂದರೆ. ಈ ಕುರಿತು ಒಂದು ಅಭಿಯಾನ ನಡೆಸುತ್ತೇವೆ' ಎಂದು ಮುಖ್ಯಮಂತ್ರಿ ತಿಳಿಸಿದರು.

'ರಾಜಕಾಲುವೆ ಮೇಲೆ ಅಥವಾ ಅದರ ಮೀಸಲು ಪ್ರದೇಶದಲ್ಲಿ ಅಪಾರ್ಟ್‌ಮೆಂಟ್ ಸಮುಚ್ಚಯ ನಿರ್ಮಿಸಲು ಅಧಿಕಾರಿಗಳು ಅನುಮತಿ ನೀಡಿದ್ದರೆ ಅದು ತಪ್ಪು. ಈ ಬಗ್ಗೆ ಮುಖ್ಯ ಆಯುಕ್ತರು ನೋಟಿಸ್ ನೀಡಿ ಇಂತಹ ಅಧಿಕಾರಿಗಳ ವಿರುದ್ಧವೂ ಕ್ರಮ ಕೈಗೊಳ್ಳಲಿದ್ದಾರೆ' ಎಂದರು.

'ಪ್ರವಾಹ ಉಂಟಾಗಲು ರಾಜಕಾಲುವೆ ಒತ್ತುವರಿ ಹಾಗೂ ಕೆಲವೆಡೆ ಕಾಲುವೆಗಳು ಮುಚ್ಚಿ ಹೋಗಿರುವುದರ ಜೊತೆ ಇತರ ಕಾರಣಗಳು ಇವೆ. ಇಷ್ಟು ವರ್ಷ ಮಳೆಯಿಂದ ಇಷ್ಟೊಂದು ಸಮಸ್ಯೆ ಆಗಿರಲಿಲ್ಲ. ಈ ಬಾರಿ ಬೆಂಗಳೂರು ನಗರ ಹಾಗೂ ಗ್ರಾಮಾಂತರ ಪ್ರದೇಶದಲ್ಲೂ ಭಾರಿ ಮಳೆಯಾಗಿದೆ. ಎರಡೇ ಗಂಟೆಯಲ್ಲಿ 138 ಮಿ.ಮೀ. ಮಳೆ ಬಿದ್ದಿದೆ. ಈ ಪ್ರದೇಶದ 11 ಕೆರೆಗಳ ನೀರು ಯಲಹಂಕ ಹಾಗೂ ಜಕ್ಕೂರು ಕೆರೆಗಳನ್ನು ಸೇರುತ್ತದೆ. 11 ಕೆರೆಗಳು ತುಂಬಿ ಹರಿದು ಕೋಡಿ ಹರಿದಿವೆ. ಇಲ್ಲಿನ ರಾಜಕಾಲುವೆಗಳ ಗಾತ್ರ ಕಡಿಮೆ ಇದೆ. ಕೆರೆ ನೀರಿನ ಭಾರಿ ಹೊರ ಹರಿವಿನ ಒತ್ತಡ ತಾಳಲು ಅವುಗಳ ಅಗಲ ಸಾಲುತ್ತಿಲ್ಲ' ಎಂದು ಮುಖ್ಯಮಂತ್ರಿಯವರು ವಿಶ್ಲೇಷಿಸಿದರು.

**ಕ್ರಿಯಾಯೋಜನೆ ಸಿದ್ಧಪಡಿಸಲು ಸೂಚನೆ:** ಈ ಪ್ರದೇಶದ 11 ಕೆರೆಗಳು ತುಂಬಿ ಹರಿದಾಗ ನೀರು ಯಲಹಂಕ ಕೆರೆ, ಜಕ್ಕೂರು ಕೆರೆ, ರಾಚೇನಹಳ್ಳಿ ಕೆರೆಗಳನ್ನು ಸೇರುತ್ತದೆ. ಈ ಪ್ರದೇಶದ ಮಳೆ ನೀರು ಮಹಾದೇವಪುರ ನಾಲ್ಕೈದು ಕೆರೆಗಳನ್ನು ದಾಟಿ ಪಿನಾಕಿನಿ ನದಿಯ ಮೂಲಕ ತಮಿಳುನಾಡಿನತ್ತ ಹರಿಯುತ್ತದೆ. ರಾಜಕಾಲುವೆಗಳು ಮುಚ್ಚಿರುವುದನ್ನು ಹಾಗೂ ಅತಿಕ್ರಮಣಗಳನ್ನು ತೆರವುಗೊಳಿಸಿ ಸರಾಗವಾಗಿ ನೀರು ಹರಿಯಲು ವ್ಯವಸ್ಥೆ ಕಲ್ಪಿಸಬೇಕಿದೆ. ಶಾಶ್ವತ ರಾಜಕಾಲುವೆ ನಿರ್ಮಿಸಲು ಕ್ರಿಯಾಯೋಜನೆ ಸಿದ್ಧಪಡಿಸುವಂತೆ ಸೂಚನೆ ನೀಡಿದ್ದೇನೆ' ಎಂದು ಮುಖ್ಯಮಂತ್ರಿ ತಿಳಿಸಿದರು.

‘ಸದ್ಯ ಇಲ್ಲಿನ ರಾಜಕಾಲುವೆಗಳ ಅಗಲ 8 ಅಡಿಗಳಷ್ಟು ಮಾತ್ರ ಇದೆ. ಅದು 30 ಅಡಿಗಳಷ್ಟಾದರೂ ಆಗಬೇಕು. ರಾಜಕಾಲುವೆ ವಿಸ್ತರಿಸಬೇಕಿದೆ. ಕೆಲವು ಕಡೆ ದಿಕ್ಕು ಬದಲಿಸಿ ಪರ್ಯಾಯ ಕಾಲುವೆ ರಚಿಸಬೇಕಿದೆ. ಇದಕ್ಕಾಗಿ ಅಗತ್ಯವಿರುವ ಕಡೆ ಅಭಿವೃದ್ಧಿ ಹಕ್ಕು ವರ್ಗಾವಣೆ (ಟಿಡಿಆರ್) ಪ್ರಮಾಣಪತ್ರ ನೀಡುವ ಮೂಲಕ ಭೂಮಿ ಪಡೆದುಕೊಳ್ಳುವಂತೆ ಸೂಚಿಸಿದ್ದೇನೆ. ವಸತಿ ಸಮುಚ್ಚಯಗಳ ಬಳಿ ತುಂಬಿರುವ ನೀರು ಹೊರಹಾಕಲು ಚರಂಡಿ ನಿರ್ಮಿಸುವಂತೆ ಸಲಹೆ ನೀಡಿದ್ದೇನೆ. ಯಲಹಂಕ ಪ್ರದೇಶದ ರಾಜಕಾಲುವೆ ರಾಷ್ಟ್ರೀಯ ಹೆದ್ದಾರಿಯ ಅಡಿಯಿಂದ ಮುಂದಕ್ಕೆ ಹಾದುಹೋಗಬೇಕಿದ್ದು, ಇದಕ್ಕೂ ಕ್ರಮ ಕೈಗೊಳ್ಳಲಿದ್ದೇವೆ’ ಎಂದರು.

‘ರಾಜಕಾಲುವೆಗಳ ಸಮಸ್ಯೆ ಬೆಂಗಳೂರಿನಾದ್ಯಂತ ಇದೆ. ಈ ವರ್ಷ 50 ಕಿ.ಮೀ. ಉದ್ದದ ರಾಜಕಾಲುವೆ ಅಭಿವೃದ್ಧಿ ಕಾಮಗಾರಿ ಕೈಗೆತ್ತಿಕೊಳ್ಳಲಾಗಿದೆ. ಹೆಚ್ಚುವರಿಯಾಗಿ ಇನ್ನೂ 50 ಕಿ.ಮೀ.ಗಳಷ್ಟು ರಾಜಕಾಲುವೆ ಅಭಿವೃದ್ಧಿಪಡಿಸಲು ಮೊನ್ನೆ ನಡೆದ ಸಭೆಯಲ್ಲಿ ತೀರ್ಮಾನಿಸಿದ್ದೇವೆ’ ಎಂದು ತಿಳಿಸಿದರು.

**ವರದಿ ಪಡೆದ ಪ್ರಧಾನಿ :** ‘ಪ್ರಧಾನಿ ನರೇಂದ್ರ ಮೋದಿಯವರು ದೂರವಾಣಿ ಕರೆ ಮಾಡಿ ರಾಜ್ಯದಲ್ಲಿ ಮಳೆ, ಬೆಳೆಹಾನಿ, ಪ್ರಾಣಹಾನಿ ಹಾಗೂ ಕೈಗೊಂಡ ಪರಿಹಾರ ಕ್ರಮಗಳ ಬಗ್ಗೆ ವಿಚಾರಿಸಿದ್ದಾರೆ. ಬೆಂಗಳೂರು ನಗರದ ಬಗ್ಗೆ ಹೆಚ್ಚಿನ ಕಾಳಜಿ ತೋರಿಸಿ ವಿವರ ಪಡೆದುಕೊಂಡಿದ್ದಾರೆ. ಪರಿಸ್ಥಿತಿಯ ಸುಧಾರಣೆಗೆ ಅಲ್ಪಾವಧಿ ಹಾಗೂ ದೀರ್ಘಾವಧಿ ಕ್ರಮ ಕೈಕೊಳ್ಳಲು ಸೂಚನೆಯನ್ನು ನೀಡಿದ್ದಾರೆ’ ಎಂದು ಮುಖ್ಯಮಂತ್ರಿ ತಿಳಿಸಿದರು.

**ಮನೆ ಕಳೆದುಕೊಂಡವರಿಗೆ ರೂ. 5 ಲಕ್ಷ :** ‘ಯಲಹಂಕ ಕ್ಷೇತ್ರದಲ್ಲಿ 400 ಮನೆಗಳಿಗೆ ಹಾಗೂ ಬ್ಯಾಟರಾಯನಪುರ ಕ್ಷೇತ್ರದಲ್ಲಿ 600 ಮನೆಗಳಿಗೆ ಹಾನಿ ಉಂಟಾಗಿದೆ’ ಎಂದು ಮುಖ್ಯಮಂತ್ರಿಗಳು ತಿಳಿಸಿದರು.

ನೀರು ನುಗ್ಗಿ, ಸಾಮಗ್ರಿಗಳು, ಪರಿಕರಗಳು ಹಾನಿಗೊಳಗಾಗಿರುವ ಮನೆ ಮಾಲೀಕರಿಗೆ ಕೂಡಲೇ ರೂ.10ಸಾವಿರ ಪರಿಹಾರ ಬಿಡುಗಡೆ ಮಾಡಬೇಕು. ಪೂರ್ಣ ಪ್ರಮಾಣದಲ್ಲಿ ಮನೆಯನ್ನು ಕಳೆದುಕೊಂಡವರಿಗೆ ರೂ. 5 ಲಕ್ಷ ಪರಿಹಾರ ನೀಡಬೇಕು. ಇದರ ಮೊದಲ ಕಂತಿನ ರೂಪದಲ್ಲಿ ರೂ.1 ಲಕ್ಷವನ್ನು ತಕ್ಷಣವೇ ನೀಡಬೇಕು. ಕಟ್ಟಡಕ್ಕೆ ಭಾಗಶಃ ಹಾನಿ ಆಗಿದ್ದರೆ ರೂ.1 ಲಕ್ಷ ಪರಿಹಾರ ನೀಡಬೇಕು ಎಂದು ಮುಖ್ಯಮಂತ್ರಿಯವರು ಬಿಬಿಎಂಪಿ ಮುಖ್ಯ ಆಯುಕ್ತ ಗೌರವ್ ಗುಪ್ತ ಅವರಿಗೆ ಸೂಚನೆ ನೀಡಿದರು.

‘ಹಾನಿಗೊಳಗಾಗಿರುವ ಮೂಲಸೌಕರ್ಯ ದುರಸ್ತಿಗೂ ಅನುದಾನ ಒದಗಿಸುತ್ತೇನೆ. ಇದರ ಅಂದಾಜುಪಟ್ಟಿ ತಯಾರಿಸುವಂತೆ ನಿರ್ದೇಶನ ನೀಡಿದ್ದೇನೆ. ಯಲಹಂಕ ಕ್ಷೇತ್ರದಲ್ಲಿ 10 ಕಿ.ಮೀ. ಉದ್ದದಷ್ಟು ಮುಖ್ಯರಸ್ತೆ ಹಾಗೂ 20 ಕಿ.ಮೀ. ಉದ್ದದಷ್ಟು ಇತರ ರಸ್ತೆಗಳು ಹಾನಿಗೊಳಗಾಗಿವೆ. ಬ್ಯಾಟರಾಯನಪುರ ಕ್ಷೇತ್ರದಲ್ಲಿ 45 ಕಿ.ಮೀ. ಉದ್ದದ ರಸ್ತೆಗಳಿಗೆ ಹಾನಿ ಆಗಿದೆ. ಅವುಗಳ ದುರಸ್ತಿಗೂ ಕ್ರಮ ಕೈಗೊಳ್ಳುತ್ತೇವೆ’ ಎಂದರು.

**ಮಾನ್ಯತಾ ಟೆಕ್‌ಪಾರ್ಕ್ ಸಮಸ್ಯೆ ನೀಗಿಸಲು ಕ್ರಮ** : ಮಾನ್ಯತಾ ಟೆಕ್‌ಪಾರ್ಕ್‌ನಲ್ಲಿರುವ ಆಂತರಿಕ ಚರಂಡಿ ವ್ಯವಸ್ಥೆಯಿಂದ ನೀರು ವಾಪಸ್‌ಬಂದು ಸಮಸ್ಯೆ ಸೃಷ್ಟಿಯಾಗುತ್ತಿದೆ. ಟೆಕ್‌ಪಾರ್ಕ್‌ನ ಆಂತರಿಕ ಚರಂಡಿ ವ್ಯವಸ್ಥೆಯ ಲೋಪ ಹಾಗೂ ಹೊರಗಿನ ರಾಜಕಾಲುವೆ ಸಮಸ್ಯೆ ಬಗ್ಗೆ ಅಧಿಕಾರಿಗಳು ಹಾಗೂ ಟೆಕ್‌ಪಾರ್ಕ್‌ನವರು ಪರಸ್ಪರ ಸಮಲೋಚಿಸಿ ಸರಿಪಡಿಸಲಿದ್ದಾರೆ. ಇಲ್ಲಿ ಕೆಲಸ ಮಾಡುವ ನೌಕರರಿಗೆ ತೊಂದರೆಯಾಗದಂತೆ ಶೀಘ್ರವೇ ಕ್ರಮಕೈಗೊಳ್ಳಲು ಸೂಚನೆ ನೀಡಿದ್ದೇವೆ’ ಎಂದು ಮುಖ್ಯಮಂತ್ರಿ ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ: 24.11.2021

## 81. ಎಂಎಸ್ಪಿಗೇ ಬಲ

ಕನಿಷ್ಠ ಬೆಂಬಲ ಬೆಲೆ ಯೋಜನೆಗೆ ಅಧಿಕೃತ ಕಾನೂನು ಮಾನ್ಯತೆ ನೀಡುವಂತೆ ದೇಶದ್ಯಾಂತ ರೈತರು ನಡೆಸುತ್ತಿರುವ ಪ್ರತಿಭಟನೆಗೆ ಪೂರಕ ಎನ್ನುವಂತೆ, ರಾಜ್ಯ ಕೃಷಿ ಬೆಲೆ ಆಯೋಗವು ಕನಿಷ್ಠ ಬೆಂಬಲ ಬೆಲೆಯನ್ನು 'ಶಾಸನಬದ್ಧ ಕನಿಷ್ಠ ಬೆಲೆ' ಎಂದು ಘೋಷಿಸುವಂತೆ ಶಿಫಾರಸ್ಸು ಮಾಡಿದೆ. ಇದಕ್ಕಾಗಿ ಅಗತ್ಯ ಕಾನೂನು ರೂಪಿಸಲು ಕೇಂದ್ರ ಸರ್ಕಾರಕ್ಕೆ ಮನವಿ ಮಾಡುವಂತೆಯೂ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡಿದೆ.

ಕೃಷಿ ಬೆಲೆ ಆಯೋಗದ ಅಧ್ಯಕ್ಷ ಹನುಮನಗೌಡ ಬೆಳಗುರ್ಕಿ ನೇತೃತ್ವದಲ್ಲಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರನ್ನು ಭೇಟಿಯಾಗಿ, ಕೃಷಿ ಹಾಗೂ ತೋಟಗಾರಿಕೆ ಬೆಳೆಗಳ ವಿಸ್ತೀರ್ಣ, ಇಳುವರಿ, ಉತ್ಪಾದನೆ, ಸಾಗುವಳಿ ವೆಚ್ಚ ಮತ್ತು ಮಾರುಕಟ್ಟೆ ಬೆಲೆಗಳ ವಸ್ತುಸ್ಥಿತಿ ಹಾಗೂ ರೈತರು – ಗ್ರಾಹಕರ ನಡುವಿನ ಬೆಲೆ ಪ್ರಸರಣ ವಿಶ್ಲೇಷಣೆ ಜೊತೆಗೆ ಪ್ರಮುಖ ಶಿಫಾರಸ್ಸು ಮಾಡುವಂತೆ ವರದಿಯಲ್ಲಿ ತಿಳಿಸಲಾಗಿದೆ.

**10 ಸಾವಿರ ಹೆಚ್ಚಿಸಿ :** ಕೇಂದ್ರ ಸರ್ಕಾರ ರೈತರಿಗೆ ಕಿಸಾನ್ ಸಮ್ಮಾನ್ ಯೋಜನೆಯಡಿ ನೀಡುತ್ತಿರುವ ರೂ. 6000 ಗಳನ್ನು 10 ಸಾವಿರಕ್ಕೆ ಹೆಚ್ಚಿಸಿ 2 ಕಂತುಗಳಲ್ಲಿ ರೈತರ ಖಾತೆಗೆ ಹಾಕುವುದು, ರಾಜ್ಯ ಸರ್ಕಾರ ನೀಡುತ್ತಿರುವ ರೂ.4,000 ಗಳನ್ನು 6,000 ಕ್ಕೆ ಹೆಚ್ಚಿಸಿ 2 ಕಂತುಗಳಲ್ಲಿ ಖಾತೆಗಳಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಆಹಾರ ಉತ್ಪನ್ನ ರಫ್ತು ಮತ್ತು ಆಮದು ಮಾಡಿಕೊಳ್ಳುವ ಬಗ್ಗೆ ರೈತರಿಗೆ ಮಾಹಿತಿ ನೀಡಿ, ಅಂತರರಾಷ್ಟ್ರೀಯ ಬೇಡಿಕೆ ಮತ್ತು ಪೂರೈಕೆ ಬಗ್ಗೆ ರೈತರಿಗೆ ತಿಳಿಸಿ ರಫ್ತು ಉತ್ತೇಜನಕ್ಕೆ ಅಗತ್ಯ ತರಬೇತಿ ನೀಡಬೇಕು. ಕೇಂದ್ರ ಸರ್ಕಾರದ ಕೌಶಲ್ಯ ಭಾರತ ಯೋಜನೆ ಅಡಿ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿನ ಉದ್ಯೋಗಾವಕಾಶ ಸೃಷ್ಟಿಸಲು ಆಹಾರ ಸಂಸ್ಕರಣಾ ವಲಯದಲ್ಲಿ ಹೆಚ್ಚಿನ ಅಧ್ಯಯನ ನಡೆಸಲು ಶಿಫಾರಸ್ಸು ಮಾಡಲಾಗಿದೆ. ಅದಕ್ಕಾಗಿ ಎಫ್‌ಪಿಒ, ಎಂಫಿಸಿಎಸ್ ಟಿಎಪಿಸಿಎಂಎಸ್, ಫ್ಯಾಕ್ಸ್‌ಗಳನ್ನು ಪ್ರೋತ್ಸಾಹಿಸುವಂತೆಯೂ ಶಿಫಾರಸ್ಸು ಮಾಡಿದ್ದಾರೆ.

ಕಲಬುರಗಿ ತೊಗರಿಗೆ ಭೌಗೋಳಿಕ ಮಾನ್ಯತೆ ಪಡೆದಂತೆಯೇ ತುಂಗಭದ್ರಾ ಅಚ್ಚುಕಟ್ಟು ಸೋನಾಮಸೂರಿ, ಕರಾವಳಿ ಕರ್ನಾಟಕದ ಕುಸುಬಲಕ್ಕಿ, ಮಂಗಳೂರು ಗೋಡಂಬಿ, ಬಿಜಾಪುರದ ಒಣದ್ರಾಕ್ಷಿ, ಮಳೆನಾಡು ಕರಿ ಮೆಣಸು ಬೆಳೆಗಳಿಗೆ ಭೌಗೋಳಿಕ ಸೂಚ್ಯಂಕ ಪಡೆಯಲು ಸಂಬಂಧಪಟ್ಟ ವಿವಿಗಳಿಗೆ ಜವಾಬ್ದಾರಿ ವಹಿಸುವಂತೆ ಶಿಫಾರಸ್ಸು ಮಾಡಿದ್ದಾರೆ. 'ಒಂದು ಜಿಲ್ಲೆ–ಒಂದು ಉತ್ಪನ್ನ' ಮಾದರಿಯಲ್ಲಿ ನಿರ್ದಿಷ್ಟ ಬೆಳೆಗಳಿಗೆ ಕ್ಲಸ್ಟರ್ ನಿರ್ಮಾಣ ಮಾಡುವಂತೆಯೂ ಸಲಹೆ ನೀಡಲಾಗಿದೆ.

ಆಧಾರ: ಉದಯವಾಣಿ, ದಿನಾಂಕ: 24.11.2021

## 82. ಕಲ್ಯಾಣ ದಾಹ ಇಂಗಿಸಲು ರೂ.1576 ಕೋಟಿ ಜಲ ಜೀವನ್ ಜಾರಿ

ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷೆ ಜಲಜೀವನ ಮಿಷನ್ ಯೋಜನೆಯನ್ನು ರಾಜ್ಯದ ವಿವಿದೆಡೆ ಜಾರಿಗೊಳಿಸಲು ರೂ.1576 ಕೋಟಿ ಮೊತ್ತದ ಯೋಜನೆಗೆ ಸಚಿವ ಸಂಪುಟ ಸಭೆ ಅನುಮೋದನೆ ನೀಡಿದೆ.

ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ವಿಧಾನಸೌಧದಲ್ಲಿ ನಡೆದ ಸಚಿವ ಸಂಪುಟದಲ್ಲಿ ಈ ಬೃಹತ್ ಮೊತ್ತದ ಕಾಮಗಾರಿಗೆ ಅನುಮೋದನೆ ಸಿಕ್ಕಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇ.60–40ರ ಅನುಪಾತದಲ್ಲಿ ಅನುದಾನ ನೀಡಲಿದೆ. ಪ್ರಮುಖವಾಗಿ ಯಾದಗಿರಿ ಜಿಲ್ಲೆಯ ಎಲ್ಲ ಗ್ರಾಮೀಣ ಜನ ವಸತಿಗಳಿಗೆ ಹಾಗೂ ಮೂರು ನಗರ ಸ್ಥಳೀಯ ಸಂಸ್ಥೆಗಳಾದ ಕಕ್ಕೆರಾ, ಕೆಂಭಾವಿ ಮತ್ತು ಹುಣಸಗಿ

ಪಟ್ಟಣಗಳಿಗೆ ಕುಡಿಯುವ ನೀರು ಒದಗಿಸುವ ಬಹು ಗ್ರಾಮ ಕುಡಿಯುವ ನೀರಿನ ಯೋಜನೆಗೆ ರೂ.1358 ಕೋಟಿ ತಗುಲಲಿದೆ. ಇದಕ್ಕೆ ಸಂಪುಟದಲ್ಲಿ ಒಪ್ಪಿಗೆ ನೀಡಲಾಗಿದೆ. ಈ ಮೂಲಕ ಯಾದಗಿರಿಯ ಬಹುತೇಕ ಗ್ರಾಮಗಳಿಗೆ ಕುಡಿಯುವ ನೀರು ಪೂರೈಸುವ ಬಹುದಿನದ ಯೋಜನೆಗೆ ಅನುಮೋದನೆ ಸಿಕ್ಕಿದೆ.

ಮಂಗಳೂರಿನ ಬಂಟ್ವಾಳ ಮತ್ತು ಮಂಗಳೂರು ತಾಲ್ಲೂಕಿನ ಉಳಾಯಿಬೆಟ್ಟು ಮತ್ತು ಇತರೆ 14 ಹಳ್ಳಿಗಳಿಗೆ (132 ಜನವಸತಿಗಳಿಗೆ) ಡಿಬಿಒಟಿ ಆಧಾರದ ಮೇಲೆ ಜಲ ಜೀವನ್ ಮಿಷನ್ ಯೋಜನೆಯಲ್ಲಿ ನೀರು ಪೂರೈಸಲು ರೂ.73.10 ಕೋಟಿ ಹಾಗೂ ಮಂಗಳೂರು ಮತ್ತು ಮೂಡಬಿದರೆ ತಾಲ್ಲೂಕಿನ 39 ಹಳ್ಳಿಗಳಿಗೆ (583 ಜನವಸತಿಗಳಿಗೆ) ಡಿಬಿಒಟಿ ಆಧಾರದ ರೂ.145 ಕೋಟಿಗಳ ಜಲಜೀವನ್ ಮಿಷನ್ ಯೋಜನೆಯಲ್ಲಿ ಬಹುಗ್ರಾಮ ಕುಡಿಯುವ ನೀರಿನ ಯೋಜನೆ ಆರಂಭಿಸಲು ಒಪ್ಪಿಗೆ ನೀಡಲಾಗಿದೆ ಎಂದು ಮೂಲಗಳು ತಿಳಿಸಿವೆ. ರೂ.990 ಕೋಟಿ ವೆಚ್ಚದ ಗೋಕಾಕ್ ತಾಲ್ಲೂಕಿನ ಗಟ್ಟಿ ಬಸವಣ್ಣ ಕುಡಿಯುವ ನೀರು ಸರಬರಾಜು ಯೋಜನೆಗೆ ಘಟನೋತ್ತರ ಅನುಮೋದನೆ ನೀಡಿದೆ.

**ಸಂಪುಟದ ಇತರ ನಿರ್ಣಯಗಳು:**

- ರೂ.41 ಕೋಟಿ ವೆಚ್ಚದಲ್ಲಿ 164 ಸಂಚಾರಿ ಸಸ್ಯ ಆರೋಗ್ಯ ಚಿಕಿತ್ಸಾಲಯ ವಾಹನಗಳ ಖರೀದಿ
- ಕೃಷಿ ವಿವಿಗಳಿಗೆ ಅನುಮೋದನೆಯಾಗಿರುವ ರೂ.79.66 ಕೋಟಿ ಮೊತ್ತದ ಸಿವಿಲ್ ಕಾಮಗಾರಿಗಳಿಗೆ ಒಪ್ಪಿಗೆ
- 2022ನೇ ಸಾಲಿಗೆ ಸಾರ್ವತ್ರಿಕ ರಜೆ ಹಾಗೂ ಪರಿಮಿತ ರಜೆಗಳ ಪಟ್ಟಿಗೆ ಒಪ್ಪಿಗೆ.
- ಕೊರೋನಾ 3ನೇ ಅಲೆ ಸಿದ್ಧತೆಗೆ ರೂ.317 ಕೋಟಿ ಮೊತ್ತದ ಪರಿಕರಗಳನ್ನು ಖರೀದಿಸಲು ಅನುಮೋದನೆ.
- ಶೈಕ್ಷಣಿಕ ಉದ್ದೇಶಕ್ಕಾಗಿ ರಾಷ್ಟ್ರೋತ್ಥಾನ ಪರಿಷತ್‌ಗೆ ಹೆಸರಘಟ್ಟ ಹೋಬಳಿ ಹುರಳಿಚಿಕ್ಕನಹಳ್ಳಿಯಲ್ಲಿ 9.32 ಎಕರೆ ಜಮೀನು.

ಆಧಾರ:ವಿಶ್ವವಾಣಿ, ದಿನಾಂಕ:26.11.2021

## 83. ಕ್ಷೇತ್ರ ಮರು ವಿಂಗಡಣೆ ಆಯೋಗದ ರಚನೆ

ಜನಸಂಖ್ಯೆ ಆಧಾರದಲ್ಲಿ ಪಂಚಾಯಿತಿಗಳ ಕ್ಷೇತ್ರ ಮರುವಿಂಗಡಣೆಗೆ ಮತ್ತು ಮೀಸಲು ನಿಗದಿಗೆ ರಾಜ್ಯ ಸರ್ಕಾರ ರೂಪಿಸಿದ್ದ ಸೀಮಾ ನಿರ್ಣಯಕ್ಕೆ ಚಾಲನೆ ದೊರೆತಿದೆ. ಈ ಸಂಬಂಧ ನಾಲ್ವರು ಸದಸ್ಯರು ಆಯೋಗವನ್ನು ರಚಿಸಿ ರಾಜ್ಯ ಸರ್ಕಾರ ಆದೇಶ ಹೊರಡಿಸಿದೆ.

ಆಯೋಗದ ಅಧ್ಯಕ್ಷರಾಗಿ ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ ಲಕ್ಷ್ಮೀನಾರಾಯಣ, ಸದಸ್ಯರನ್ನಾಗಿ ಸರ್ಕಾರದ ನಿವೃತ್ತ ಕಾರ್ಯದರ್ಶಿ ಎಸ್.ಎಸ್.ಪಟ್ಟಣಶೆಟ್ಟಿ, ಪಂಚಾಯತ್ ತಜ್ಞರಾಗಿ ರಾಮಪ್ರಿಯ ಮತ್ತು ಪದನಿಮಿತ್ತ ಸದಸ್ಯರಾಗಿ ಆರ್‌ಡಿಪಿಆರ್ ಇಲಾಖೆಯ ಆಯುಕ್ತರು ಸೀಮಾ ನಿರ್ಣಯ ಅಂತಿಮಗೊಳಿಸಲಿದ್ದಾರೆ.

ಸಿವಿಲ್ ಪ್ರಕ್ರಿಯೆ ಸಂಹಿತೆ 1908, ಅಧಿನಿಯಮ 5ರ ಅಡಿಯಲ್ಲಿ ಆಯೋಗಕ್ಕೆ ಪರಮಾಧಿಕಾರ ನೀಡಿರುವ ಸರ್ಕಾರ, ಸಿವಿಲ್ ನ್ಯಾಯಾಲಯದ ಎಲ್ಲ ಅಧಿಕಾರಗಳನ್ನು ದೊರೆಕಿಸಿಕೊಟ್ಟಿದೆ. ಯಾವುದೇ ಇಲಾಖೆಯಿಂದ ಎಲ್ಲ ರೀತಿಯ ದಾಖಲೆ ಪಡೆಯುವ ಮತ್ತು ಆಜ್ಞಾಪಿಸುವ ಹಕ್ಕು ಸಾಕ್ಷಿಗಳಿಗೆ ಸಮನ್ಸ್

ನೀಡುವ ಮತ್ತು ಯಾವುದೇ ವ್ಯಕ್ತಿಯನ್ನು ಸೇವೆಗೆ ಬಳಸಿಕೊಳ್ಳುವ ಪರಮಾಧಿಕಾರವನ್ನು ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗಕ್ಕೆ ನೀಡಲಾಗಿದೆ.

ಈ ಮೊದಲು 2003ರಲ್ಲಿ ಕ್ಷೇತ್ರ ಪುನರ್ ವಿಂಗಡಣೆ ಮೀಸಲು ಜವಾಬ್ದಾರಿಯನ್ನು ಚುನಾವಣಾ ಆಯೋಗಕ್ಕೆ ವಹಿಸಲಾಗಿತ್ತಾದರೂ ಆಯೋಗದ ಕಾರ್ಯವೈಖರಿ ಬಗ್ಗೆ ಸಾರ್ವಜನಿಕರಿಂದ ಆರೋಪ ಕೇಳಿಬಂದಿತ್ತು. ಹಾಗಾಗಿ ಕಳೆದ ಸೆಪ್ಟೆಂಬರ್ ಅಧಿವೇಶನದಲ್ಲಿ ಕ್ಷೇತ್ರಗಳ ಸೀಮಾ ನಿರ್ಣಯ ವಿಧೇಯಕ ಮಂಡನೆಯಾಗಿತ್ತು.

ಪ್ರತಿಪಕ್ಷಗಳ ಆಕ್ಷೇಪ ಮತ್ತು ಸಭಾತ್ಯಾಗದ ನಡುವೆಯೂ ಸೀಮಾ ನಿರ್ಣಯ ವಿಧೇಯಕಕ್ಕೆ ಸೆಪ್ಟೆಂಬರ್ 16, 2021ರಂದು ಅಂಗೀಕಾರ ದೊರೆತಿತ್ತು. ಜನಸಂಖ್ಯೆ ಮತ್ತು ಮೀಸಲು ಸಂಬಂಧ ಸಾರ್ವಜನಿಕರಿಂದ ಆಕ್ಷೇಪಣೆಗಳು ವ್ಯಕ್ತವಾಗಿ 2600ಕ್ಕೂ ಹೆಚ್ಚು ಅರ್ಜಿಗಳು ಹೈಕೋರ್ಟ್‌ನಲ್ಲಿ ಸಲ್ಲಿಕೆಯಾಗಿವೆ. ಜನಸಂಖ್ಯೆ ಆಧಾರದಲ್ಲಿ ಕ್ಷೇತ್ರಗಳ ಮರುವಿಂಗಡಣೆ ಮೀಸಲು ಕುರಿತು ವರದಿ ಸಿದ್ಧಪಡಿಸಿ ಸರ್ಕಾರಕ್ಕೆ ವರದಿ ಸಲ್ಲಿಸಲು ಆಯೋಗ ರಚನೆ ಅನಿವಾರ್ಯ ಎಂದು ರಾಜ್ಯ ಸರ್ಕಾರ ಪ್ರತಿಪಕ್ಷಗಳಿಗೆ ವಿವರಣೆ ನೀಡಿತ್ತು.

**ಸ್ಥಳೀಯರ ಸಹಭಾಗಿತ್ವ:** ಸೀಮಾ ನಿರ್ಣಯದಲ್ಲಿ ಗ್ರಾ.ಪಂ. ಸದಸ್ಯರು, ಪಿಡಿಓ, ಗ್ರಾಮದ ಹಿರಿಯರು ಮತ್ತು ಪ್ರಜ್ಞಾವಂತ ನಾಗರಿಕರ ಪಾತ್ರವು ಬಹು ಮುಖ್ಯವಾಗಿದೆ. ಸ್ಥಳೀಯ ಅಸಮತೋಲನ ನಿವಾರಿಸುವ ಸಂಬಂಧ ಹೊಂದಿರುವ ಮೂಲ ಮಾಹಿತಿಯನ್ನು ಪಂಚಾಯಿತಿ ವ್ಯಾಪ್ತಿಯ ಮುಖಂಡರೆ ಬಲ್ಲವರಾಗಿದ್ದಾರೆ. ಹೀಗಾಗಿ ಗ್ರಾ.ಪಂ.ಗಳ ಮೂಲಕವೇ ಪರಿಪೂರ್ಣ ಮಾಹಿತಿಯನ್ನು ಡಿಸಿಗಳು ಪಡೆಯಲಿದ್ದು, ಅವರು ವರದಿ ಸಿದ್ಧಪಡಿಸಿ ಆಯೋಗಕ್ಕೆ ಸಲ್ಲಿಸಲಿದ್ದಾರೆ.

**ಆಯೋಗದ ಕಾರ್ಯಗಳೇನು:–**

- ಪ್ರತಿ ಕ್ಷೇತ್ರಗಳ ಜನಸಂಖ್ಯೆಯ ಕಾರ್ಯ ಸಾಧುವಾಗುವಷ್ಟು ಸಮನಾಗಿರುವಂತೆ ಸೀಮಾ ನಿರ್ಣಯಗೊಳಿಸುವುದು.
- ಜನಸಂಖ್ಯೆ ಆಧಾರದಲ್ಲಿ ಜಿ.ಪಂ, ತಾ.ಪಂ ಮತ್ತು ಗ್ರಾ.ಪಂಗೆ ಚುನಾಯಿಸಬೇಕಾದ ಸದಸ್ಯರ ಸಂಖ್ಯೆ ನಿಗದಿಪಡಿಸುವುದು.
- ಪಂಚಾಯತಿಗೆ ಚುನಾಯಿಸಲು ಅಗತ್ಯವಾದ ಸದಸ್ಯರ ಸಂಖ್ಯೆಯನ್ನು ವಾರ್ಡ್/ಕ್ಷೇತ್ರಗಳಾಗಿ ವಿಂಗಡಿಸಲು ಶಿಫಾರಸ್ಸು.
- ಪ್ರತಿಯೊಂದು ಕ್ಷೇತ್ರವು ಭೌಗೋಳಿಕವಾಗಿ ನಿಬಿಡತೆ ಇರುವಂತೆ ಸೀಮೆ ನಿರ್ಣಯಿಸುವುದು.
- ಸರ್ಕಾರ ನಿಗದಿಪಡಿಸಿದ ಪ್ರಕಾರ್ಯಗಳನ್ನು ನೆರವೇರಿಸುವುದು.

**ಸಭೆ ಆಕ್ಷೇಪಣೆಗಳಿಗೆ ಸ್ವಾಗತ:** ಸದ್ಯದಲ್ಲೇ ಜಿಲ್ಲಾಧಿಕಾರಿಗಳ ಜೊತೆ ಸದಸ್ಯರು ಪ್ರಾಥಮಿಕ ಸಭೆ ನಡೆಸಲಿದ್ದಾರೆ. ಈ ಬಗ್ಗೆ ಪೂರ್ವ ತಯಾರಿ ನಡೆಯುತ್ತಿದೆ. ಕ್ಷೇತ್ರದ ಜನಸಂಖ್ಯೆ, ಭೌಗೋಳಿಕ ವ್ಯಾಪ್ತಿ ಕ್ಷೇತ್ರದಿಂದ ಹೊರಗುಳಿದ, ಕೇವಲ ಮತದಾನಕ್ಕೆ ಸೀಮಿತ ಕ್ಷೇತ್ರಗಳ ಬಗ್ಗೆ ಪ್ರಾಥಮಿಕ ಮಾಹಿತಿ ಪಡೆಯಲಿದ್ದಾರೆ. 2011ರ ಜನಗಣತಿ ಆಧಾರದಲ್ಲಿ ಜನಸಂಖ್ಯೆ ಸರಾಸರಿ ಏರಿಕೆ ಪ್ರಮಾಣವನ್ನು ಲೆಕ್ಕ ಹಾಕಲಾಗುತ್ತದೆ ಜಿಲ್ಲಾಧಿಕಾರಿಗಳ ಮಾಹಿತಿಯೇ ಅಂತಿಮವಲ್ಲ. ಕ್ಷೇತ್ರ ವಿಂಗಡಣೆ ಬಗ್ಗೆ ಆಕ್ಷೇಪಗಳಿದ್ದರೆ ಸಾರ್ವಜನಿಕರಿಂದಲೂ ಆಕ್ಷೇಪಣೆಗಳನ್ನು ಆಯೋಗವು ಸ್ವೀಕರಿಸುತ್ತದೆ.

**ವಿಂಗಡಣೆ ಬಳಿಕ ಚುನಾವಣೆ**: ಕ್ಷೇತ್ರ ಮರು ವಿಂಗಡಣೆ ಕಾರ್ಯ ಪೂರ್ಣಗೊಳಿಸಲು ಕಾಲಮಿತಿ ನಿಗದಿಪಡಿಸಿಲ್ಲ. ಈ ಪ್ರಕ್ರಿಯೆ ಎಷ್ಟು ದಿನಗಳಲ್ಲಿ ಮುಗಿಯಲಿದೆ ಎಂಬ ಸ್ಪಷ್ಟತೆ ಇಲ್ಲ. ಜಿ.ಪಂ ಮತ್ತು ತಾ.ಪಂ. ಚುನಾವಣೆಯನ್ನು ಕ್ಷೇತ್ರ ಮರು ವಿಂಗಡಣೆ ಕಾರ್ಯ ಮುಗಿದ ಬಳಿಕವಷ್ಟೇ ನಡೆಸಲು ಸಾಧ್ಯವಾಗಲಿದೆ ಎಂಬು ಗ್ರಾಮೀಣಾಭಿವೃದ್ದಿ ಇಲಾಖೆಯ ಹಿರಿಯ ಅಧಿಕಾರಿಗಳು ತಿಳಿಸಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:26.11.2021.

## 84. ಆತಂಕ ಅಗತ್ಯವಿಲ್ಲ

ಕೊರೋನಾದ ಹೊಸ ರೂಪಾಂತರಿ ಒಮಿಕ್ರಾನ್ 13 ದೇಶಗಳಲ್ಲಿ ಕಂಡು ಬಂದಿದ್ದು, ಎಲ್ಲೆಡೆ ಆತಂಕದ ವಾತಾವರಣ ನಿರ್ಮಾಣವಾಗಿದೆ. ಆದರೆ, ಇದು ವೇಗವಾಗಿ ಹರಡಬಲ್ಲ ಶಕ್ತಿ ಹೊಂದಿದ್ದರೂ, ಹೆಚ್ಚಿನ ಹಾನಿ ಮಾಡುವ ಲಕ್ಷಣಗಳು ಕಂಡುಬಂದಿಲ್ಲ ಎಂದು ದಕ್ಷಿಣ ಆಫ್ರಿಕಾದ ವೈದ್ಯರು ಹೇಳಿದ್ದಾರೆ. ಅಲ್ಲದೆ ಸೋಂಕಿತರು ಯಾರು ಆಸ್ಪತ್ರೆಗೆ ದಾಖಲಾಗಿಲ್ಲ ಎಂದು ಹೇಳಿದ್ದಾರೆ.

ಇದರ ಮಧ್ಯೆಯೇ ವಿಶ್ವ ಆರೋಗ್ಯ ಸಂಸ್ಥೆ ಈ ವೈರಸ್ ಬಗ್ಗೆ ಎಚ್ಚರದಿಂದ ಇರುವಂತೆ ಮತ್ತೊಮ್ಮೆ ಸೂಚನೆ ನೀಡಿದೆ. ಕರ್ನಾಟಕದ ಮುಖ್ಯಮಂತ್ರಿಯವರು ಆತಂಕ ಬೇಡ, ಎಚ್ಚರ ಇರಲಿ ಎಂದಿದ್ದು, ಸದ್ಯ ಶಾಲೆ ಮುಚ್ಚುವುದಿಲ್ಲ. ಲಾಕ್‌ಡೌನ್ ಮಾಡುವುದಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಈ ಮಧ್ಯೆ ಆರೋಗ್ಯ ಸಚಿವ ಡಾ: ಸುಧಾಕರ್ ದಕ್ಷಿಣ ಆಫ್ರಿಕಾದಲ್ಲಿರುವ ತಮ್ಮ ಸಹಪಾಠಯಾಗಿದ್ದ ವೈದ್ಯರ ಜೊತೆ ಮಾತನಾಡಿದ ವಿಚಾರವನ್ನು ಹಂಚಿಕೊಂಡಿದ್ದಾರೆ. ಈ ವೈದ್ಯರ ಪ್ರಕಾರ ಡೆಲ್ಟಾಗೆ ಹೋಲಿಕೆ ಮಾಡಿದರೆ, ಒಮಿಕ್ರಾನ್ ರೂಪಾಂತರಿಯಿಂದ ಹೆಚ್ಚಿನ ಆತಂಕ ಕಂಡು ಬರುವುದಿಲ್ಲ ಎಂದು ಹೇಳಿದ್ದಾರೆ ಎಂಬ ಮಾಹಿತಿಯನ್ನು ನೀಡಿದ್ದಾರೆ. ತೀವ್ರತೆ ಕಡಿಮೆ ಪ್ರಮಾಣದ್ದಾಗಿರುವುದರಿಂದ ಆಸ್ಪತ್ರೆಗೆ ದಾಖಲಾಗುವ ಅಗತ್ಯ ಬರುವುದಿಲ್ಲ ಎಂದಿದ್ದಾರೆ ಎಂದು ಹೇಳಿದ್ದಾರೆ.

ಇದರ ಜೊತೆಗೆ ಹೊಸ ರೂಪಾಂತರಿ ಬಗ್ಗೆ ಹೆಚ್ಚಿನ ವಿವರಗಳನ್ನು ಕಳುಹಿಸಿಕೊಡುವಂತೆ ದಕ್ಷಿಣ ಆಫ್ರಿಕಾದಲ್ಲಿನ ವೈದ್ಯರಿಗೆ ಮನವಿ ಮಾಡಿದ್ದಾಗಿ ತಿಳಿಸಿದ್ದಾರೆ. ರೋಗಲಕ್ಷಣಗಳ ಬಗ್ಗೆ ಮಾತನಾಡಿದ ಸಚಿವ ಸುಧಾಕರ್, ವಾಕರಿಕೆ ಮತ್ತು ವಾಂತಿ ಕಂಡು ಬರುತ್ತದೆ. ಆದರೆ, ಡೆಲ್ಟಾ ಇತರ ರೂಪಾಂತರಿಗಳು ದೃಢಪಟ್ಟರೆ ವಾಸನೆ, ರುಚಿ ಗ್ರಹಿಸಲು ಸಾಧ್ಯವಾಗದೇ ಇರುವಂಥ ಅಂಶ ಕಡಿಮೆ  ಎಂದು ತಿಳಿಸಿದ್ದಾರೆ

**ಕೇಂದ್ರ ನಿರ್ಧರಿಸಬೇಕು:** ಆರೋಗ್ಯ ಕಾರ್ಯಕರ್ತರಿಗೆ ಬೂಸ್ಟರ್ ಡೋಸ್ ಲಸಿಕೆ ನೀಡಬೇಕು ಎನ್ನುವುದು ಹೌದಾದರೂ ಈ ಬಗ್ಗೆ ಕೇಂದ್ರ ಸರ್ಕಾರವೇ ನಿರ್ಧಾರ ಕೈಗೊಳ್ಳಬೇಕಾಗಿದೆ. ಏಕೆಂದರೆ ಅವರಿಗೆ ಲಸಿಕೆ ನೀಡಿ ಹತ್ತು ತಿಂಗಳು ಪೂರ್ತಿಯಾಗುತ್ತಾ ಬರುತ್ತಿದೆ ಎಂದರು. ಮುಖ್ಯಮಂತ್ರಿಯವರು ಕೇರಳದಿಂದ ಬಂದಿರುವ ಎಲ್ಲರನ್ನು ಪರೀಕ್ಷೆಗೆ ಒಳಪಡಿಸಲಾಗುತ್ತಿದೆ. 7 ದಿನಗಳ ನಂತರ ಮತ್ತೊಮ್ಮೆ ಪರೀಕ್ಷೆ ನಡೆಸಲಾಗುವುದು ಎಂದರು.

**ವದಂತಿ ಹಬ್ಬಿಸುವವರ ವಿರುದ್ಧ ಕ್ರಮ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಡಾ: ಕೆ. ಸುಧಾಕರ್ ಮಾತನಾಡಿ ವದಂತಿ ಹಬ್ಬಿಸುವವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳುತ್ತೇವೆ ಎಂದು ಎಚ್ಚರಿಕೆ ನೀಡಿದ್ದಾರೆ ಈ ಹಿಂದೆ ಲಾಕ್‌ಡೌನ್ ಜಾರಿ ಮಾಡಿದ ಪರಿಣಾಮ ಸಾಕಷ್ಟು ನಷ್ಟ ಅನುಭವಿಸಬೇಕಾಯಿತು. ಅನೇಕರು ಉದ್ಯೋಗಗಳನ್ನು ಕಳೆದುಕೊಂಡರು. ನಮ್ಮ ಮುಂದೆ ಲಾಕ್‌ಡೌನ್ ಮಾಡುವ ಚಿಂತನೆ ಇಲ್ಲ ಸಾಮಾಜಿಕ ಜಾಲತಣಗಳಲ್ಲಿ ಲಾಕ್‌ಡೌನ್ ಮಾಡಲಾಗುತ್ತದೆ ಎಂದು ಸುಳ್ಳು ಸುದ್ದಿ ಹಬ್ಬಿಸುತ್ತಿದ್ದಾರೆ. ಈ ರೀತಿ ವದಂತಿಗಳನ್ನು ಹಬ್ಬಿಸಿದರೆ ಅಂಥವರ ವಿರುದ್ಧ ಕ್ರಮದ ಎಚ್ಚರಿಕೆ ನೀಡಿದ್ದಾರೆ.

**ಭಿನ್ನ ವೈದ್ಯಕೀಯ ವರದಿ ತಂದ ಆಂತಕ:** ಒಮಿಕ್ರಾನ್ ರೂಪಾಂತರಿ ಭೀತಿ ನಡುವೆಯೇ, ದಕ್ಷಿಣ ಆಫ್ರಿಕಾದಿಂದ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಬಂದ ವ್ಯಕ್ತಿಯ ವೈದ್ಯಕೀಯ ವರದಿ ಭಿನ್ನವಾಗಿರುವುದು ಆತಂಕ ಮೂಡಿಸಿದೆ. ಈ ಬಗ್ಗೆ ಮಾತನಾಡಿದ ಆರೋಗ್ಯ ಸಚಿವ ಡಾ: ಕೆ. ಸುದಾಕರ್ 63 ವರ್ಷ ಹಿರಿಯರೊಬ್ಬರ ವೈದ್ಯಕೀಯ ವರದಿ ಭಿನ್ನವಾಗಿದೆ. ಅದರ ಬಗ್ಗೆ ಐಸಿಎಂಆರ್ ಜೊತೆಗೆ ಚರ್ಚೆ ಮಾಡುತ್ತೇವೆ ಎಂದು ಹೇಳಿದ್ದಾರೆ. ಈ ಪ್ರಕರಣದ ಜಿನೋಮ್ ಸೀಕ್ವೆನ್ಸ್ ವರದಿ ಬರಲು 1 ವಾರ ಬೇಕು. ಡಿಸೆಂಬರ್ 1 ರಂದು ವರದಿ ಕೈಸೇರುವ ನಿರೀಕ್ಷೆ ಇದೆ ಎಂದರು. ದಕ್ಷಿಣ ಆಫ್ರಿಕಾದಿಂದ ಬಂದ ಹಿರಿಯ ನಾಗರಿಕರಿಗೆ ದೃಢಪಟ್ಟಿರುವುದು ಡೆಲ್ಟಾ ಆಲ್ಲ ಒಮಿಕ್ರಾನ್ ಇರಬಹುದು ಎನ್ನುವುದು ಅನುಮಾನ. ಈ ಬಗ್ಗೆ ಅಧಿಕೃತವಾಗಿ ಹೇಳಲು ಸಾಧ್ಯವಾಗದು ಅಂದರು.

**ಹೆಚ್ಚು ಅಪಾಯಕಾರಿಯಾಗಲಿದೆ – ಡಬ್ಲ್ಯೂಎಚ್ಒ:** ಹೊಸ ರೂಪಾಂತರಿ ಜಗತ್ತಿನಲ್ಲಿ ವೇಗವಾಗಿ ಹಬ್ಬಲಿದೆ. ಆದರೆ, ಅದು ಹೆಚ್ಚಿನ ಪ್ರಮಾಣದಲ್ಲಿ ಹರಡಲು ಕಾರಣವಾಗಲಿದೆ ಎಂದು ವಿಶ್ವ ಆರೋಗ್ಯ ಸಂಸ್ಥೆ ಎಚ್ಚರಿಕೆ ನೀಡಿದೆ. ಕೆಲವೊಂದು ಪ್ರದೇಶಗಳಲ್ಲಿ ಅದು ಗಂಭೀರ ಆರೋಗ್ಯ ಸವಾಲುಗಳನ್ನು ತಂದೊಡ್ಡಲಿದೆ ಅದು ಜಗತ್ತಿನ ಯಾವುದೇ ಭಾಗದಲ್ಲಿ ಹೊಸ ರೂಪಾಂತರಿ ತಳಿಯಿಂದಾಗಿ ಅಸುನೀಗಿದ್ದು ಇದುವರೆಗೆ ದೃಢಪಟ್ಟಿಲ್ಲ ಎಂದು ಹೇಳಿದೆ.

ಆಧಾರ:ಉದಯವಾಣಿ, ದಿನಾಂಕ:30.11.2021.

## 85. ಪ್ರೋಟೋಕಾಲ್ ಸಮಿತಿ ರಚನೆ

ರಾಜ್ಯದಲ್ಲಿ ಕೊರೋನಾ ಮತ್ತು ಒಮಿಕ್ರಾನ್ ರೂಪಾಂತರಿ ಆತಂಕದ ಹಿನ್ನೆಲೆಯಲ್ಲಿ ಸರ್ಕಾರ ಅಗತ್ಯ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳುತ್ತಿದೆ. ಒಮೈಕ್ರಾನ್ ರೂಪಾಂತರಿ ಎದುರಿಸಲು ಬೇಕಾದ ಸಿದ್ಧತೆ ಮಾಡಿಕೊಳ್ಳಲು ತಜ್ಞ ವೈದ್ಯ ಡಾ:ರವಿ ಅವರ ನೇತೃತ್ವದಲ್ಲಿ 10 ತಜ್ಞರನ್ನೊಳಗೊಂಡ ಟ್ರೀಟ್‌ಮೆಂಟ್ ಪ್ರೋಟೋಕಾಲ್ ಸಮಿತಿ ರಚಿಸಲಾಗಿದೆ.

- ವಿಶ್ವ ಆರೋಗ್ಯ ಸಂಸ್ಥೆ ಮಾರ್ಗಸೂಚಿ ಬಿಡುಗಡೆ ಮಾಡುವವರೆಗೆ ಹೊಸ ನಿಬಂಧನೆಗಳು ಇಲ್ಲ: ಸಚಿವ ಡಾ:ಕೆ. ಸುಧಾಕರ್.
- ವಿದೇಶದಿಂದ ಬಂದವರಿಗೆ ನೆಗೆಟಿವ್ ಬಂದರು 7 ದಿನ ಕಡ್ಡಾಯ ಕ್ವಾರಂಟೈನ್.

ಹೈರಿಸ್ಕ್ ದೇಶಗಳಿಂದ ಬರುವ ಎಲ್ಲ ಪ್ರಯಾಣಿಕರ ಮೇಲೆ ನಿಗಾ ಇಡಲಾಗಿದೆ. ಬರುವ ಎಲ್ಲರಿಗೂ ಪರೀಕ್ಷೆ ನಡೆಸಲಾಗುತ್ತಿದ್ದು, ಸೋಂಕಿನ ಲಕ್ಷಣ ಇರುವವರನ್ನು ನಿಗದಿತ ಆಸ್ಪತ್ರೆಗೆ ಕಳುಹಿಸಿ ಚಿಕಿತ್ಸೆ ಕೊಡಿಸಲು ನಿರ್ಧರಿಸಲಾಗಿದೆ. ನೆಗೆಟಿವ್ ವರದಿ ಬಂದರು ಏಳು ದಿನ ಕ್ವಾರಂಟೈನ್ ಕಡ್ಡಾಯಗೊಳಿಸಲಾಗಿದೆ. ಏಳು ದಿನಗಳ ನಂತರ ಮತ್ತೆ ಆರ್‌ಟಿಪಿಸಿಆರ್ ಪರೀಕ್ಷೆ ನಡೆಸಿ ಮತ್ತೆ ನೆಗೆಟಿವ್ ಬಂದರೆ ಮಾತ್ರ ಹೊರಗೆ ಓಡಾಡಲು ಅವಕಾಶ ನೀಡಲು ತೀರ್ಮಾನಿಸಲಾಗಿದೆ.

ಈ ಮಧ್ಯೆ ರಾಜ್ಯದಲ್ಲಿ ಮತ್ತೆ ಲಾಕ್‌ಡೌನ್ ಜಾರಿಗೊಳಿಸುವುದಿಲ್ಲ ಈ ಕುರಿತ ಊಹಾಪೋಹಗಳಿಗೆ ಯಾರು ಕಿವಿಗೊಡಬಾರದು. ಈಗಿರುವ ಡೆಲ್ಟಾ ತಳಿಯಿಂದ ಸೋಂಕು ಹೆಚ್ಚಾಗಿ ಅಲ್ಲಲ್ಲಿ ಕ್ಲಸ್ಟರ್ ನಿರ್ಮಾಣವಾಗಿದೆ. ಒಮಿಕ್ರಾನ್ ಬಗ್ಗೆ ಸರ್ಕಾರ ತೀವ್ರ ನಿಗಾ ಇಟ್ಟಿದೆ. ಸಾಮಾನ್ಯ ಪರೀಕ್ಷೆಗಳನ್ನು ಹೆಚ್ಚಿಸುವಂತೆ ಸೂಚನೆ ನೀಡಲಾಗಿದೆ ಎಂದು ಮುಖ್ಯಮಂತ್ರಿಯವರು ಸ್ಪಷ್ಟಪಡಿಸಿದ್ದಾರೆ. ಮತ್ತೊಂದೆಡೆ, ರೂಪಾಂತರಿ ಒಮಿಕ್ರಾನ್ ವಿಚಾರದಲ್ಲಿ ವಿಶ್ವ ಆರೋಗ್ಯ ಸಂಸ್ಥೆ ಹೊಸ ಮಾರ್ಗಸೂಚಿ ಬಿಡುಗಡೆ ಮಾಡುವವರೆಗೆ ಸೋಂಕು ಹಬ್ಬದಂತೆ ಕಡಿವಾಣ ಹಾಕುವ ಕುರಿತು ಯಾವುದೇ ಚಟುವಟಿಕೆಗಳಿಗೆ ನಿಬಂಧನೆ ಹಾಕುವುದಿಲ್ಲ ಎಂದು ಆರೋಗ್ಯ ಸಚಿವ ಡಾ: ಕೆ. ಸುಧಾಕರ್ ಹೇಳಿದ್ದಾರೆ.

**ತಜ್ಞರೊಂದಿಗೆ ಸಭೆ:** ಒಮಿಕ್ರಾನ್ ಆತಂಕದ ಹಿನ್ನೆಲೆಯಲ್ಲಿ ಆರೋಗ್ಯ ಸಚಿವ ಡಾ:ಕೆ. ಸುಧಾಕರ್ ತಜ್ಞರೊಂದಿಗೆ ಸಭೆ ನಡೆಸಿದ್ದಾರೆ, ಒಮಿಕ್ರಾನ್ ವೈರಾಣು ಬಂದರೆ ಯಾವ ರೀತಿ ಎದುರಿಸಬೇಕು ಹೇಗೆ ನಿಯಂತ್ರಿಸಬೇಕು ಆಸ್ಪತ್ರೆ ಮೆಡಿಕಲ್ ಕಾಲೇಜುಗಳಲ್ಲಿ ಸಿದ್ಧತೆಗಳು ಹೇಗಿದೆ ಎಂಬ ಬಗ್ಗೆ ಚರ್ಚಿಸಿದ್ದಾರೆ. ಕ್ವಾರಂಟೈನ್ ಆ್ಯಪ್, ಟೆಲಿ ಮೆಡಿಸಿನ್ ಮೊದಲಾದ ತಂತ್ರಜ್ಞಾನ ಬಳಸಿಕೊಳ್ಳಲು ಚರ್ಚೆಯಾಗಿದೆ. ಜೊತೆಗೆ ಒಮಿಕ್ರಾನ್ ಕಾಣಿಸಿಕೊಂಡರೆ ಚಿಕಿತ್ಸೆಗೆ ಪ್ರತ್ಯೇಕ ಮಾರ್ಗಸೂಚಿ ರೂಪಿಸಲು 10 ತಜ್ಞರನ್ನೊಳಗೊಂಡ ಸಮಿತಿ ರಚಿಸಲಾಗಿದೆ. ಈ ಸಮಿತಿ ಯಾವ ರೀತಿ ರಚಿಸಲಾಗಿದೆ. ಈ ಸಮಿತಿ ಯಾವ ರೀತಿ ಚಿಕಿತ್ಸೆ ನೀಡಬೇಕೆಂದು ನಿಯಮ ರೂಪಿಸಲಿದೆ. ಸಭೆಯ ಬಳಿಕ ಡಾ: ಸುಧಾಕರ್, ತಜ್ಞರ ಸಭೆಯ ವಿವರ ಮತ್ತು ಕೈಗೊಂಡ ನಿಧಾರಗಳ ಕುರಿತು ಮುಖ್ಯಮಂತ್ರಿಯವರು ಮಾಹಿತಿ ನೀಡಿದ್ದಾರೆ. ತಾಂತ್ರಿಕ ಸಲಹಾ ಸಮಿತಿಯ ಶಿಫಾರಸ್ಸುಗಳನ್ನು ಕೂಡ ಮುಖ್ಯಮಂತ್ರಿಗಳಿಗೆ ಸಲ್ಲಿಸಿದ್ದಾರೆ. ಇದರ ಜೊತೆಗೆ ಕೇಂದ್ರದಿಂದ ಬರುವ ಮಾರ್ಗಸೂಚಿಗಳು ಸೇರಿದಂತೆ ಸದ್ಯದಲ್ಲೇ ಮುಖ್ಯಮಂತ್ರಿ ನೇತೃತ್ವದಲ್ಲಿ ಉನ್ನತ ಮಟ್ಟದ ಸಭೆ ನಡೆಯಲಿದೆ ಎಂದು ತಿಳಿದುಬಂದಿದೆ.

ಆಧಾರ: ವಿಶ್ವವಾಣಿ, ದಿನಾಂಕ:01.12.2021

## 86. ಸವಲತ್ತಿಗೆ ಲಸಿಕೆ ಕಡ್ಡಾಯ

ವಿದೇಶದಿಂದ ಬರುವ ಎಲ್ಲ ಪ್ರಯಾಣಿಕರಿಗೂ ಆರ್‌ಟಿಪಿಸಿಆರ್ ಪರೀಕ್ಷೆ ಹಾಗೂ ಒಂದು ವಾರ ಕಡ್ಡಾಯ ಕ್ವಾರಂಟೈನ್ ಹೊಸ ವೈರಾಣು ಸೋಂಕಿತರಿಗೆ ಚಿಕಿತ್ಸೆ ನಿರ್ಧಾರಕ್ಕೆ ಸಮಿತಿ ರಚನೆ, ಲಸಿಕೆ ಪ್ರಮಾಣ ಹೆಚ್ಚಿಸಲು ಕ್ರಮ ತೀವ್ರ ಆತಂಕ ತಂದೊಡ್ಡಿರುವ ಒಮಿಕ್ರಾನ್ ತಡೆಗೆ ಸರ್ಕಾರ ಕೈಗೊಂಡಿರುವ ಬಿಗಿ ಕ್ರಮಗಳಿವು.

ವಿಧಾನಸೌಧದಲ್ಲಿ ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣ ಸಚಿವ ಡಾ: ಕೆ. ಸುಧಾಕರ್ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯಲ್ಲಿ ಬಂದ ಸಲಹೆಗಳಂತೆ ಕೆಲವು ಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಲಾಗಿದೆ.

ಯಾವ ದೇಶದಿಂದ ಬಂದರೂ ಕಡ್ಡಾಯವಾಗಿ ಕೋವಿಡ್ ಪರೀಕ್ಷೆ ಮಾಡಿಸಬೇಕು. ನೆಗೆಟಿವ್ ಬಂದರು ಅವರ್ನು ಕಡ್ಡಾಯವಾಗಿ 7 ದಿನ ಮನೆಯಲ್ಲಿಯೇ ಕ್ವಾರಂಟೈನ್ ಮಾಡಲು ತೀರ್ಮಾನಿಸಲಾಗಿದೆ.

ಸಭೆ ಬಳಿಕ ಸುದ್ದಿಗಾರರಿಗೆ ಮಾಹಿತಿ ನೀಡಿದ ಸಚಿವ ಡಾ:ಕೆ. ಸುಧಾಕರ್, ಪ್ರತಿ ದಿನ ರಾಜ್ಯಕ್ಕೆ ವಿದೇಶದಿಂದ 2,500 ಪ್ರಯಾಣಿಕರು ಬರುವ ಕಾರಣ ವಿಮಾನ ನಿಲ್ದಾಣಗಳಲ್ಲಿ ಪರೀಕ್ಷೆಗೆ ಕಟ್ಟುನಿಟ್ಟಿನ ವ್ಯವಸ್ಥೆ ಮಾಡಲಾಗಿದೆ ಎಂದು ಹೇಳಿದರು.

ಹೊಸ ವೈರಾಣು ಕಂಡು ಬಂದಿರುವ ದೇಶಗಳಿಂದ ರಾಜ್ಯಕ್ಕೆ ಬರುವ ಪ್ರಯಾಣಿಕರಿಗೆ ಕಡ್ಡಾಯವಾಗಿ ಆರ್‌ಟಿಪಿಸಿಆರ್ ಪರೀಕ್ಷೆ ನಡೆಸಲಾಗುತ್ತಿದೆ. ಇನ್ನು ಮುಂದೆ ಯಾವುದೇ ದೇಶಗಳಿಂದ ಬಂದ ಪ್ರಯಾಣಿಕರಿಗೂ ಪರೀಕ್ಷೆ ನಡೆಸಲು ಮುಖ್ಯಮಂತ್ರಿಗಳು ಸೂಚಿಸಿದ್ದಾರೆ ಎಂದರು.

**ಹೋಂ ಕ್ವಾರಂಟೈನ್:** ಪರೀಕ್ಷೆ ವೇಳೆ ನೆಗೆಟಿವ್ ಇದ್ದವರಿಗೆ 7 ದಿನ ಮನೆ ಕ್ವಾರಂಟೈನ್ ಕಡ್ಡಾಯ. 5ನೇ ದಿನ ಮತ್ತೆ ಮನೆಯಲ್ಲೇ ಪರೀಕ್ಷೆ ಮಾಡಲಾಗುತ್ತದೆ. ಎ ಸಿಂಪ್ಟಮ್ಯಾಟಿಕ್ ಆದವರಿಗೆ 7ನೇ ದಿನ ಪರೀಕ್ಷೆ ಮಾಡಲಾಗುತ್ತದೆ. ಪಾಸಿಟಿವ್ ಬಂದರೆ ಕೂಡಲೇ ಆಸ್ಪತ್ರೆಗೆ ದಾಖಲಿಸಲಾಗುವುದು ಎಂದರು.

**ಪ್ರತ್ಯೇಕ ಚಿಕಿತ್ಸೆ** : ಒಮಿಕ್ರಾನ್ ವೈರಸ್ ಬಂದರೆ ಯಾವ ರೀತಿ ಚಿಕಿತ್ಸೆ ನೀಡಬೇಕು ಎನ್ನುವ ಬಗ್ಗೆ ಸಭೆಯಲ್ಲಿ ಚರ್ಚೆ ಮಾಡಲಾಗಿದೆ. ತಂತ್ರಜ್ಞಾನ ಬಳಸಿ ಅನೇಕ ಆ್ಯಪ್ ಮಾಡಿದ್ದೇವೆ. ವಿದೇಶಗಳಿಂದ

ಬಂದವರು ಪಾಸಿಟಿವ್ ಆದರೆ, ಅವರನ್ನು ಪ್ರತ್ಯೇಕವಾಗಿರಿಸಿ ಚಿಕಿತ್ಸೆ ನೀಡಲಾಗುವುದು ಎಂದು ಸುಧಾಕರ್ ತಿಳಿಸಿದರು.

**ಲಸಿಕೆ ಹೆಚ್ಚಿಸಲು ಕ್ರಮ:** ಲಸಿಕೆಗೆ ಕಾನೂನು ತರಬೇಕು ಇಲ್ಲದಿದ್ದರೆ ದಂಡ ವಿಧಿಸಿ ಲಸಿಕೆ ಹಾಕಿಸಬೇಕು ಅನ್ನೋದು ಸರಿಯಲ್ಲ. ತಾಂತ್ರಿಕ ಸಲಹಾ ಸಮಿತಿ ಒಂದಿಷ್ಟು ಸಲಹೆ ನೀಡಿದೆ. ಆದರೆ, ಜನ ಸ್ವಯಂಪ್ರೇರಿತರಾಗಿ ಲಸಿಕೆ ಪಡೆಯಬೇಕು ಎಂದು ಮನವಿ ಮಾಡಿದರು.

**ಡಾ: ರವಿ ನೇಮಕ**: ಪ್ರೋಟೋಕಾಲ್ ಸಮಿತಿಗೆ ಅಧ್ಯಕ್ಷರನ್ನಾಗಿ ಡಾ: ರವಿ ಅವರನ್ನು ನೇಮಕ ಮಾಡಲಾಗಿದೆ. ಈ ಸಮಿತಿ ಹೊಸ ಪ್ರಭೇದದಲ್ಲಿ ಇನ್ಫೆಕ್ಟ್ ಆದವರಿಗೆ ಯಾವ ಚಿಕಿತ್ಸೆ ನೀಡಬೇಕು ಎಂದು ಪ್ರೋಟೋಕಾಲ್ ನೀಡುತ್ತಾರೆ. ಇಡೀ ರಾಜ್ಯದಲ್ಲಿ ಈ ಪ್ರೋಟೋಕಾಲ್ ಆಳವಡಿಸಲಾಗುವುದು. ಇದಕ್ಕೆ ಯಾವ ಔಷಧ ಬೇಕು ಎಂಬುದನ್ನು ಕೂಡ ಹೇಳಲಾಗುತ್ತದೆ ಎಂದರು.

**ಬೂಸ್ಟರ್ ಡೋಸ್ ನಿರ್ಧಾರವಾಗಿಲ್ಲ**: ಬೂಸ್ಟರ್ ಡೋಸ್ ನೀಡುವ ವಿಚಾರದಲ್ಲಿ ಕೇಂದ್ರ ಯಾವುದೇ ನಿರ್ಧಾರ ತೆಗೆದುಕೊಂಡಿಲ್ಲ. ಕೊರೋನಾ ವಾರಿಯರ್‌ಗೆ ಬೂಸ್ಟರ್ ಕೊಡೋಣ ಎಂದಿತ್ತು. ತಾಂತ್ರಿಕ ಸಮಿತಿ ಮೊದಲು ಸಲಹೆ ನೀಡಿತ್ತು. ಆದರೆ, ಕೇಂದ್ರದಿಂದ ಯಾವುದೇ ಮಾಹಿತಿ ಬಂದಿಲ್ಲ. ಹಾಗಾಗಿ ನಾವು ಏಕಪಕ್ಷೀಯ ನಿರ್ಧಾರಕ್ಕೆ ಬರಲಾಗುವುದಿಲ್ಲ ಎಂದು ಸಚಿವ ಸುಧಾಕರ್ ತಿಳಿಸಿದರು.

**ಇಬ್ಬರಿಗೆ ಪಾಸಿಟಿವ್:** ಹೊಸ ತಳಿ ಬಗ್ಗೆ ಯಾವುದೇ ಅಧಿಕೃತ ಮಾಹಿತಿ ಬಂದಿಲ್ಲ ಡಿಸೆಂಬರ್ 1 ಅಥವಾ 2ರ ಒಳಗೆ ವಿಶ್ವ ಆರೋಗ್ಯ ಸಂಸ್ಥೆ ನಮಗೆ ಮಾರ್ಗಸೂಚಿ ಕೊಡಬಹುದು. ಬಳಿಕ ನಾವು ರಾಜ್ಯದಲ್ಲಿ ಯಾವ ಕ್ರಮ ತೆಗೆದುಕೊಳ್ಳಬೇಕು ಅಂತ ನಿರ್ಧಾರ ಮಾಡುತ್ತೇವೆ. ಸದ್ಯಕ್ಕೆ ಯಾವುದೇ ಚಟುವಟಿಕೆಗಳ ಮೇಲೆ ನಿರ್ಬಂಧ ಇಲ್ಲ ಎಂದು ಸುಧಾಕರ್ ಸ್ಪಷ್ಟಪಡಿಸಿದರು.

**ತಜ್ಞರ ಸಮಿತಿಯ ಸಲಹೆಗಳು:**

- ಅಂತರರಾಷ್ಟ್ರೀಯ ಪ್ರಯಾಣಿಕರಿಗೆ ಪಾಸಿಟಿವ್ ಬಂದರೆ ಜಿನೊಮಿಕ್ ಸಿಕ್ವೆನ್ಸ್ ಪರೀಕ್ಷೆಗೆ ಒಳಪಡಿಸಬೇಕು. ವಿದೇಶಗಳಿಂದ 14 ದಿನಗಳ ಹಿಂದೆ ಬಂದವರಿಗೆ ಆರ್‌ಟಿಪಿಸಿಆರ್ ಪರೀಕ್ಷೆ ಕಡ್ಡಾಯ.
- ಬೌರಿಂಗ್ ಆಸ್ಪತ್ರೆಯಲ್ಲಿ ಒಮಿಕ್ರಾನ್ ಚಿಕಿತ್ಸೆಗೆ ಪ್ರತ್ಯೇಕ ವ್ಯವಸ್ಥೆ ಮೀಸಲು.
- ಅಂತರರಾಷ್ಟ್ರೀಯ ಪ್ರಯಾಣಿಕರಿಗೆ ರೋಗದ ಲಕ್ಷಣಗಳಿದ್ದರೆ, ಪ್ರತ್ಯೇಕ ಚಿಕಿತ್ಸೆ, ಸರ್ಕಾರಿ ಸೌಲಭ್ಯ ಪಡೆಯಲು ವ್ಯಾಕ್ಸಿನ್ ಕಡ್ಡಾಯ ಮಾಡಬೇಕು.
- ವಿದ್ಯುತ್, ನೀರು, ಗ್ಯಾಸ್, ಪೆಟ್ರೋಲ್, ಗ್ಯಾಸ್ ಸಿಲಿಂಡರ್, ಪಿಂಚಣಿಗೆ ವ್ಯಾಕ್ಸಿನ್, ಮೆಟ್ರೋ, ಶಾಪಿಂಗ್ ಕಾಂಪ್ಲೆಕ್ಸ್, ಮಾಲ್‌ಗಳ ಬಳಕೆ ಪಡಿತರ ಬಳಕೆಗೆ ವ್ಯಾಕ್ಸಿನ್ ಕಡ್ಡಾಯ.
- ಸಾರ್ವಜನಿಕ ಸ್ಥಳಗಳ ಬಳಕೆ ವೇಳೆ 2 ಡೋಸ್ ಕಡ್ಡಾಯ, ಶಿಕ್ಷಕರು ಮತ್ತು ಮಕ್ಕಳಿಗೆ ನಿರಂತರವಾಗಿ ಕೋವಿಡ್ ಪರೀಕ್ಷೆ ಮಾಡುತ್ತಿರಬೇಕು.
- ಜನಸಂದಣಿ ಇರುವ ಪ್ರದೇಶಗಳಲ್ಲಿ ರ್‍ಯಾಂಡಮ್ ಟೆಸ್ಟಿಂಗ್ ಕಡ್ಡಾಯ.
- ವಾರದಲ್ಲಿ ಶೇ.5 ಮಕ್ಕಳಿಗೆ ಕೋವಿಡ್ ಪರೀಕ್ಷೆ ನಡೆಸಬೇಕು.
- ಸಾರ್ವಜನಿಕ ಸಭೆ, ಸಮಾರಂಭಗಳಿಗೆ ಸಂಖ್ಯೆ ನಿಗದಿ ಕಡ್ಡಾಯ.

- 500ಕ್ಕಿಂತ ಕಡಿಮೆ ಜನರಿಗೆ ಮಾತ್ರ ಅವಕಾಶ ಕೊಡಬೇಕು.
- ಒಳಾಂಗಣ ಕಾರ್ಯಕ್ರಮಗಳಿಗೆ 200 ಮಂದಿಗೆ ಮಾತ್ರ ಅವಕಾಶ
- ಮಾಲ್, ಬಸ್ ನಿಲ್ದಾಣ, ರೈಲ್ವೆ ನಿಲ್ದಾಣಗಳಲ್ಲಿ ವಿಶೇಷ ಲಸಿಕಾ ಆಂದೋಲನ ನಡೆಸಿ, ಸೋಶಿಲ್ ಮೀಡಿಯಾ, ಸುದ್ದಿ ಮಾಧ್ಯಮಗಳಲ್ಲಿ ಸುಳ್ಳು ಸುದ್ಧಿ ಹರಡುವುದನ್ನು ತಡೆಯಬೇಕು.

ಆಧಾರ: ವಿಜಯವಾಣಿ, ದಿನಾಂಕ:01.12.2021

## 87. ಬೂಸ್ಟರ್ ಬೇಕು

ಕೊರೋನಾದ ಹೊಸ ರೂಪಾಂತರಿ ಒಮಿಕ್ರಾನ್ ಭೀತಿ ಬೆನ್ನಲ್ಲೆ ರಾಜ್ಯದಲ್ಲಿ ಆರೋಗ್ಯ ಕಾರ್ಯಕರ್ತರಿಗೆ ಮೂರನೇ ಡೋಸ್ ನೀಡುವ ಚರ್ಚೆಗಳು ಆರಂಭವಾಗಿವೆ. ಸ್ವತ: ಮುಖ್ಯಮಂತ್ರಿ ಮತ್ತು ಆರೋಗ್ಯ ಸಚಿವ ಡಾ:ಕೆ. ಸುಧಾಕರ್ ಅವರೇ ಡೋಸ್ ನೀಡುವ ಬಗ್ಗೆ ಪ್ರತಿಪಾದಿಸುತ್ತಿದ್ದಾರೆ. ಇದಕ್ಕೆ ಪೂರಕವಾಗಿ ರಾಜ್ಯದ ಪ್ರಖ್ಯಾತ ವೈದ್ಯರು ಆರೋಗ್ಯ ಕಾರ್ಯಕರ್ತರು, ಮುಂಚೂಣಿ ಕಾರ್ಯಕರ್ತರಿಗೆ ಬೂಸ್ಟರ್ ಡೋಸ್ ಅಗತ್ಯವಿದೆ ಎಂದಿದ್ದಾರೆ.

**ಕೇಂದ್ರ ಸಚಿವರ ಜೊತೆ ಚರ್ಚೆ**: ಹುಬ್ಬಳ್ಳಿಯಲ್ಲಿ ಮಾತನಾಡಿದ ಮುಖ್ಯಮಂತ್ರಿ ಸೋಂಕಿನ ಮೂರನೇ ಅಲೆ ಭೀತಿ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಮುಂಚೂಣಿ ಕಾರ್ಯಕರ್ತರಿಗೆ ಬೂಸ್ಟರ್ ಡೋಸ್ ನೀಡಬಹುದೇ ಎಂಬ ಯೋಚನೆ ಇದೆ. ತಾವು ನವದೆಹಲಿಗೆ ತೆರಳಲಿದ್ದು, ಕೇಂದ್ರ ಆರೋಗ್ಯ ಸಚಿವ ಮನಸುಖ ಮಾಂಡವೀಯ ಜೊತೆ ಚರ್ಚಿಸಲಾಗುವುದು ಎಂದು ಹೇಳಿದ್ದಾರೆ. ಬೆಂಗಳೂರಿನಲ್ಲಿ ಮಾತನಾಡಿದ ಆರೋಗ್ಯ ಸಚಿವ ಡಾ: ಕೆ. ಸುಧಾಕರ್, ವಾರಿಯರ್ಸ್‌ಗಳು ಲಸಿಕೆ ಪಡೆದು 7–8 ತಿಂಗಳು ಪೂರ್ಣಗೊಂಡಿದೆ. ಅವರಲ್ಲಿ ರೋಗ ನಿರೋಧಕ ಶಕ್ತಿ ಕ್ಷೀಣಿಸುವ ಸಾಧ್ಯತೆ ಇದೆ. ಡೋಸ್ ಬಗ್ಗೆ ಕೇಂದ್ರ ಸಚಿವರ ಜೊತೆಗೆ ಮುಖ್ಯಮಂತ್ರಿ ಚರ್ಚಿಸಿ ಅದು ಎಷ್ಟು ಪರಿಣಾಮಕಾರಿಯಾಗಲಿದೆ ಎಂಬ ಬಗ್ಗೆ ಪರಾಮರ್ಶೆ ನಡೆಸಲಿದ್ದಾರೆ ಎಂದರು.

**ಎಲ್ಲೆಲ್ಲಿ ಬೂಸ್ಟರ್ ಡೋಸ್:** ಒಮಿಕ್ರಾನ್ ರೂಪಾಂತರಿ ಆತಂಕದಿಂದಾಗಿ ಹೊಸದಾಗಿ ಹಲವು ರಾಷ್ಟ್ರಗಳಲ್ಲಿ ಬೂಸ್ಟರ್ ಡೋಸ್ ನೀಡಲು ತೀರ್ಮಾನಿಸಲಾಗಿದೆ. ಇಸ್ರೇಲ್, ಕೆನಡಾ, ಬ್ರಿಜಿಲ್, ಬ್ರಿಟನ್, ಐರೋಪ್ಯ ಒಕ್ಕೂಟಗಳ ಪೈಕಿ ಹಂಗೇರಿಯಲ್ಲಿ ಮೊದಲ ಬಾರಿಗೆ ಬೂಸ್ಟರ್ ಡೋಸ್ ನೀಡಲು ತೀರ್ಮಾನಿಸಲಾಗಿತ್ತು. ಫ್ರಾನ್ಸ್‌ನಲ್ಲಿ ಕಳೆದ ವಾರ ಹೆಚ್ಚುವರಿ ಡೋಸ್ ನೀಡಲು ತೀರ್ಮಾನಿಸಲಾಗಿದೆ. ಯುಎಇನಲ್ಲಿ ಮೇನಲ್ಲಿಯೇ ಮೂರನೇ ಡೋಸ್ ಲಸಿಕೆ ಹಾಕಲು ತೀರ್ಮಾನಿಸಲಾಗಿತ್ತು. ಚೀನಾ ಕೂಡ ತನ್ನ ನಾಗರಿಕರಿಗೆ ಬೂಸ್ಟರ್ ಡೋಸ್ ಪಡೆದುಕೊಳ್ಳಲು ಒತ್ತಾಯಿಸುತ್ತಿದೆ. ದಕ್ಷಿಣ ಕೊರಿಯಾದಲ್ಲಿ ಕಳೆದ ತಿಂಗಳು ಶುರುವಾಗಿದೆ.

ಆಧಾರ: ಉದಯವಾಣಿ, ದಿನಾಂಕ:02.12.2021

## 88. ಭದ್ರಾ ಮೇಲ್ದಂಡೆ ರಾಷ್ಟ್ರೀಯ ಯೋಜನೆ

ದೆಹಲಿಯಲ್ಲಿ ನಡೆಯಲಿರುವ ಕೇಂದ್ರ ಜಲಶಕ್ತಿ ಯೋಜನೆಯ ಮಹತ್ವದ ಸಭೆಯಲ್ಲಿ ಭದ್ರಾ ಮೇಲ್ದಂಡೆ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಘೋಷಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಕುರಿತು ಕೇಂದ್ರ ಸರ್ಕಾರದಿಂದ ಸಕಾರಾತ್ಮಕ ಸ್ಪಂದನೆ ದೊರೆತಿದೆ ಎಂದು ಮುಖ್ಯಮಂತ್ರಿಯವರು ತಿಳಿಸಿದ್ದಾರೆ.

ರಾಷ್ಟ್ರ ರಾಜಧಾನಿ ನವದೆಹಲಿಯಲ್ಲಿ ಕೇಂದ್ರ ಜಲಶಕ್ತಿ ಸಚಿವ ಗಜೇಂದ್ರ ಸಿಂಗ್ ಶೇಖಾವತ್, ಆರೋಗ್ಯ ಸಚಿವ ಮನಸುಖ್ ಮಾಂಡವೀಯ, ಕಾನೂನು ಸಚಿವ ಕಿರಣ್ ರಿಜಿಜು ಅವರನ್ನು ಭೇಟಿ

ಮಾಡಿದರು. ಜಲಶಕ್ತಿ ಸಚಿವರ ಭೇಟಿ ವೇಳೆ ಮುಖ್ಯಮಂತ್ರಿ ಅವರು ಚಿತ್ರದುರ್ಗ, ದಾವಣಗೆರೆ, ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲೆಗಳ ದೃಷ್ಟಿಯಿಂದ ಮಹತ್ವದಾಗಿರುವ ಭದ್ರಾ ಮೇಲ್ದಂಡೆ ಸೇರಿ ಅನೇಕ ಯೋಜನೆಗಳನ್ನು ಪ್ರಸ್ತಾಪಿಸಿದರು.

ಭೇಟಿಯ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಮುಖ್ಯಮಂತ್ರಿಗಳು, ಮಧ್ಯ ಕರ್ನಾಟಕದ ಬಯಲು ಪ್ರದೇಶಗಳಿಗೆ ನೀರುಣಿಸುವ ಮಹತ್ವದ ಭದ್ರಾ ಮೇಲ್ದಂಡೆ ಯೋಜನೆ ರಾಷ್ಟ್ರೀಯ ಯೋಜನೆಯಾಗಿ ಘೋಷಣೆಯಾಗುವ ಕಾಲ ಸನ್ನಿಹಿತವಾಗಿದೆ. ಡಿಸೆಂಬರ್ 6 ರಂದು ದೆಹಲಿಯಲ್ಲಿ ನಡೆಯುವ ಕೇಂದ್ರ ಜಲಶಕ್ತಿ ಇಲಾಖೆಯ ಮಹತ್ವದ ಸಭೆಯಲ್ಲಿ ಅಂತಿಮ ನಿರ್ಣಯವಾಗುವ ಸಾಧ್ಯತೆ ಇದೆ ಎಂದು ತಿಳಿಸಿದರು.

ಭದ್ರಾ ಮೇಲ್ದಂಡೆಯ ರಾಷ್ಟ್ರೀಯ ಯೋಜನೆಯನ್ನಾಗಿ ಘೋಷಿಸುವ ಸಂಬಂಧ ಕೇಂದ್ರ ಜಲಶಕ್ತಿ ಮಂತ್ರಾಲಯ ಈಗಾಗಲೇ ಎರಡು ಸಭೆ ನಡೆಸಿದೆ. ಕೇಂದ್ರದ ಅಧಿಕಾರಿಗಳ ತಂಡ ಕೂಡಾ ಯೋಜನೆ ವ್ಯಾಪ್ತಿ ಪ್ರದೇಶಗಳಿಗೆ ಭೇಟಿ ನೀಡಿ ಪರಿಶೀಲಿಸಿದೆ. ಯೋಜನೆಯ ಪರಿಷ್ಕೃತ ಅಂದಾಜು ಪಟ್ಟಿ ಸಲ್ಲಿಸುವಂತೆ ಜಲ ಸಂಪನ್ಮೂಲ ಇಲಾಖೆಗೆ ಸೂಚಿಸಲಾಗಿತ್ತು. ರೂ.22 ಸಾವಿರ ಕೋಟಿಗೆ ಭದ್ರಾ ಮೇಲ್ದಂಡೆಯ ಪರಿಷ್ಕೃತ ಅಂದಾಜು ಪಟ್ಟಿ ತಯಾರಿಸಿ ಕೇಂದ್ರಕ್ಕೆ ಸಲ್ಲಿಸಲಾಗಿದೆ. ರಾಷ್ಟ್ರೀಯ ಯೋಜನೆಯಾಗಿ ಘೋಷಣೆಯಾದಲ್ಲಿ ಶೇ.90 ರಷ್ಟು (ರೂ.18 ಸಾವಿರ ಕೋಟಿ) ಅನುದಾನ ರಾಜ್ಯಕ್ಕೆ ಕೇಂದ್ರ ನೀಡಲಿದೆ.

ಇನ್ನು ಕೃಷ್ಣ ಮೇಲ್ದಂಡೆ ಯೋಜನೆಯ 2ನೇ ನ್ಯಾಯಾಧೀಕರಣದ ಅಧಿಸೂಚನೆಯಲ್ಲಿ ನ್ಯಾಯಾಲಯದ ಆದೇಶದಂತೆ ಕೇಂದ್ರ ಸರ್ಕಾರ ತನ್ನ ನಿಲುವನ್ನು ಪ್ರಕಟಣೆ ಮಾಡಿ, ನ್ಯಾಯಾಧೀಕರಣದ ಸಂಪೂರ್ಣ ವರದಿಯ ನಂತರ ಸುಪ್ರೀಂಕೋರ್ಟ್ ತೀರ್ಪಿನ ಪರಿಪಾಲನೆಯಾಗಬೇಕು ಎನ್ನುವ ನಿಟ್ಟಿನಲ್ಲಿ ಕೇಂದ್ರದಿಂದ ಸೂಕ್ತ ನಿರ್ದೇಶನ ನೀಡಬೇಕೆಂದು ಮನವಿ ಮಾಡಲಾಗಿದೆ ಎಂದರು.

ಗೋದಾವರಿ, ಕಾವೇರಿ, ಕೃಷ್ಣ ಮಹಾನದಿ ಲಿಂಗ್ ಬಗ್ಗೆ ರಾಜ್ಯದ ಆಹವಾಲನ್ನು ಕೇಳದೇ ಡಿಪಿಆರ್ ಮಾಡಬಾರದು ಹಾಗೂ ತಮಿಳುನಾಡಿಗೆ ಲಿಂಕ್ ಯೋಜನೆಗೆ ಸಂಬಂಧಿಸಿದಂತೆ ಮೇಕೆದಾಟು ಯೋಜನೆಯ ಅನುಷ್ಠಾನಕ್ಕೆ ಅನುಮೋದನೆ ನೀಡಬಾರದು ಎನ್ನುವ ಬಗ್ಗೆ ಸುದೀರ್ಘ ಚರ್ಚೆ ನಡೆಸಲಾಗಿದೆ ಎಂದು ತಿಳಿಸಿದರು.

**ಹೆಚ್ಚುವರಿ ಡಿಎಪಿಗೆ ಮನವಿ:** ರಾಜ್ಯಕ್ಕೆ ಹೆಚ್ಚುವರಿ ಡಿಎಪಿಗೆ ಕೇಂದ್ರ ರಸಗೊಬ್ಬರ ಸಚಿವರಿಗೆ ಬೇಡಿಕೆ ಸಲ್ಲಿಸಲಾಗಿದೆ. ಅಕ್ಟೋಬರ್ ಮತ್ತು ನವೆಂಬರ್ ತಿಂಗಳಲ್ಲಿ ರಾಜ್ಯಕ್ಕೆ ನಿಗದಿಯಾಗಿರುವ 48 ಸಾವಿರ ಮೆಟ್ರಿಕ್ ಟನ್ ಡಿಎಪಿಯನ್ನು ಸಂಪೂರ್ಣವಾಗಿ ಪೂರೈಸುವ ಭರವಸೆ ನೀಡಿದ್ದಾರೆ ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:03.12.2021

## 89. ರಾಜ್ಯಕ್ಕೂ ಕಾಲಿಟ್ಟ ಒಮಿಕ್ರಾನ್

ವಿಶ್ವವನ್ನೇ ಆತಂಕಕ್ಕೆ ದೂಡಿರುವ ಕೋವಿಡ್ ರೂಪಾಂತರಿ ಒಮಿಕ್ರಾನ್ ಕರ್ನಾಟಕಕ್ಕೆ ಕಾಲಿಟ್ಟಿದೆ ದಕ್ಷಿಣ ಆಫ್ರಿಕಾದಿಂದ ಬೆಂಗಳೂರಿಗೆ ಆಗಮಿಸಿದ್ದ ವ್ಯಕ್ತಿ ಸೇರಿ ಇಬ್ಬರಲ್ಲಿ ಸೋಂಕು ದೃಢಪಡುವ ಮೂಲಕ ರೂಪಾಂತರಿ ಭಾರತ ಪ್ರವೇಶಿಸಿದಂತಾಗಿದೆ. ಕೊರೋನಾ ನಿಯಮ ಪಾಲಿಸುವಲ್ಲಿ ನಿರ್ಲಕ್ಷ್ಯದ ಪರಿಣಾಮ ರಾಜ್ಯದಲ್ಲಿ ಕಳೆದೊಂದು ವಾರದಿಂದ ಸೋಂಕು ಪ್ರಕರಣಗಳ ಸಂಖ್ಯೆ ಹೆಚ್ಚಾಗುತ್ತಿರುವ ಬೆನ್ನಲ್ಲೇ ಹೊಸ ರೂಪಾಂತರಿ ಪತ್ತೆಯಾಗಿರುವುದು ಜನರ ನೆಮ್ಮದಿಗೆಡಿಸಿದೆ. ಇನ್ನೊಂದೆಡೆ ಪರಿಸ್ಥಿತಿ ನಿಯಂತ್ರಣದಲ್ಲಿದ್ದು, ಭೀತಿಪಡುವುದು ಬೇಡ ಎಂದು ಸರ್ಕಾರ ಜನತೆಗೆ ಭರವಸೆ ತುಂಬಿದೆ.

**ಯಾರಿಗೆ ಸೋಂಕು:** ನವೆಂಬರ್ 20 ರಂದು ದಕ್ಷಿಣ ಆಫ್ರಿಕಾದಿಂದ ಬಂದಿದ್ದ 66 ವರ್ಷದ ವೈದ್ಯ ಮತ್ತು ಸಾಮಾನ್ಯ ಕೋವಿಡ್ ಲಕ್ಷಣಗಳಿಂದ ಆರ್‌ಟಿಪಿಸಿಆರ್ ಪರೀಕ್ಷೆಗೊಳಪಟ್ಟ ಸ್ಥಳೀಯ ವ್ಯಕ್ತಿಯಲ್ಲಿ ಒಮಿಕ್ರಾನ್ ರೂಪಾಂತರ ತಳಿಯ ವೈರಸ್ ಪತ್ತೆಯಾಗಿದೆ. ಆಫ್ರಿಕಾದಿಂದ ಬಂದಿದ್ದ ವ್ಯಕ್ತಿಗೆ ವಿಮಾನ ನಿಲ್ದಾಣದಲ್ಲಿ ಪರೀಕ್ಷೆ ಮಾಡಿಸಿದಾಗ ಸೋಂಕು ದೃಢಪಟ್ಟಿದ್ದು, ಹೋಟೆಲ್ ಕ್ವಾರಂಟೈನ್‌ಗೆ ಒಳಪಡಿಸಲಾಗಿತ್ತು. ಈ ವೇಳೆ ವೈಯಕ್ತಿಕವಾಗಿ ಖಾಸಗಿ ಪ್ರಯೋಗಾಲಯದಲ್ಲಿ ಪರೀಕ್ಷೆ ಮಾಡಿದಾಗ ನೆಗೆಟಿವ್ ಬಂದಿದ್ದರಿಂದ ಪೂರ್ವ ನಿರ್ಧಾರದಂತೆ ವಿಮಾನದ ಮೂಲಕ ದುಬೈಗೆ ತೆರಳಿದ್ದಾರೆ. ನಗರದಲ್ಲಿ ಮೊದಲ ಬಾರಿಗೆ ಪತ್ತೆಯಾದ ರೂಪಾಂತರಿ ಒಮಿಕ್ರಾನ್ ಸೋಂಕಿತರಿಗೆ ಬೌರಿಂಗ್ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಲು ಗುರುತು ಪಡಿಸಲಾಗಿದೆ.

**ಡಬ್ಲುಎಚ್‌ಒ ಎಚ್ಚರಿಕೆ:** ಬಿ 1.1.529 ರೂಪಾಂತರಿಗೆ ಡಬ್ಲುಎಚ್‌ಒ ಒಮಿಕ್ರಾನ್ ಎಂದು ಹೆಸರಿಸಿದೆ. ವೈರಸ್ ವಿಕಾಸ ಕುರಿತ ತಾಂತ್ರಿಕ ಸಲಹಾ ಗುಂಪಿನ (ಟಿಎಜಿ–ವಿಇ) ಶಿಫಾರಸ್ಸಿನ ಆಧಾರದಲ್ಲಿ ಗ್ರೀಕ್ ವರ್ಣಮಾಲೆ ಈ ಹೆಸರು ಇಡಲಾಗಿದೆ.

ಈ ಪ್ರಭೇದದಲ್ಲಿ ಅನೇಕ ರೂಪಾಂತರಿಗಳಿದ್ದು, ಅದರ ವರ್ತನೆಯ ಮೇಲೆ ಬೀರುವ ಪರಿಣಾಮದ ಪುರಾವೆಯ ಆಧಾರದಲ್ಲಿ ಈ ನಿರ್ಧಾರ ಕೈಗೊಳ್ಳಲಾಗಿತ್ತು. ಅದು ಹರಡುವ ಸ್ವರೂಪ ಮತ್ತು ಉಂಟು ಮಾಡುವ ರೋಗ ತೀವ್ರತೆ ಮೊದಲಾದವರನ್ನು ಇದಕ್ಕೆ ಪರಿಗಣಿಸಲಾಗಿದೆ. ಇದುವರೆಗೆ ಭಾರತ ಸಹಿತ 29 ದೇಶಗಳಲ್ಲಿ ಒಮಿಕ್ರಾನ್ ಪತ್ತೆಯಾಗಿದ್ದು, ಒಟ್ಟು 373 ಪ್ರಕರಣಗಳು ವರದಿಯಾಗಿದೆ. ಅದರ ಬಗ್ಗೆ ಅಧ್ಯಯನಗಳು ನಡೆಯುತ್ತಿವೆ. ಈಗಿನ ಮಾಹಿತಿ ಪ್ರಕಾರ 32 ಸ್ಪೈಕ್ ಪ್ರೋಟೀನ್ ಸಹಿತ 50 ರೂಪಾಂತರಗಳು (ಮ್ಯುಟೇಸನ್) ಒಮಿಕ್ರಾನ್‌ನಲ್ಲಿವೆ.

**ವ್ಯಾಧಿ ತೀವ್ರತೆ:** ಇತರ ತಳಿಗಳಗೆ ಹೋಲಿಸಿದರೆ ಒಮಿಕ್ರಾನ್ ಸೋಂಕಿತರಲ್ಲಿ ಕೋವಿಡ್ ಹೆಚ್ಚು ತೀವ್ರವಾಗಿರುತ್ತದೆಯೇ ಎನ್ನುವುದು ಸ್ಪಷ್ಟವಾಗಿಲ್ಲ. ದಕ್ಷಿಣ ಆಫ್ರಿಕಾದಲ್ಲಿ ಹೆಚ್ಚು ಜನರು ಆಸ್ಪತ್ರೆಗಳಿಗೆ ದಾಖಲಾಗುತ್ತಿದ್ದಾರೆ. ಒಮಿಕ್ರಾನ್ ಒಂದೇ ಅದಕ್ಕೆ ಕಾರಣವಲ್ಲ. ಒಟ್ಟಾರೆ ಸೋಂಕಿತರ ಹೆಚ್ಚಳದಿಂದ ಹೀಗಾಗಿರಬಹುದು ಎನ್ನಲಾಗಿದೆ. ಹಿಂದೆ ಕೋವಿಡ್–19 ಸೋಂಕು ಇದ್ದವರಲ್ಲಿ ಒಮಿಕ್ರಾನ್ ಸೋಂಕು ತಗಲುವ ಅಪಾಯ ಜಾಸ್ತಿಯಾಗಿದೆ. ವ್ಯಾಕ್ಸಿನ್ ಸಹಿತ ಇತರ ಔಷಧಿ–ಚಿಕಿತ್ಸೆಗಳು ಒಮಿಕ್ರಾನ್ ವಿರುದ್ಧ ಎಷ್ಟು ಪರಿಣಮಕಾರಿಯಾಗಬಹುದು ಎನ್ನುವುದನ್ನು ತಿಳಿಸಲು ಡಬ್ಲುಎಚ್‌ಒ ಪ್ರಯತ್ನಿಸುತ್ತಿದೆ.

ಆಧಾರ: ವಿಜಯವಾಣಿ, ದಿನಾಂಕ:03.12.2021

## 90. ಕೃಷಿ ಸುಧಾರಣೆಗೆ ತಂತ್ರಜ್ಞಾನ ಪೂರಕವಾಗಲಿ

ದೇಶದ ಮೂಲ ಸಂಸ್ಕೃತಿ ಕೃಷಿ ಮತ್ತು ಅವಲಂಬಿತ ರೈತರು ಎದುರಿಸುತ್ತಿರುವ ಹಲವು ರೀತಿಯ ಸವಾಲುಗಳಿಗೆ ಪರಿಹಾರ ಕಲ್ಪಿಸುವ ನಿಟ್ಟಿನಲ್ಲಿ ಆವಿಷ್ಕಾರಗಳು ಹೆಚ್ಚು ಕೇಂದ್ರಿತವಾಗಬೇಕು. ಇದರಲ್ಲಿ ತಂತ್ರಜ್ಞಾನ ದಿಗ್ಗಜರ ಜವಾಬ್ದಾರಿ ಅಧಿಕವಾಗಿದೆ ಎಂಬ ಕೂಗು ಏಷ್ಯಾದ ಅತಿದೊಡ್ಡ ಮೇಳ ಬೆಂಗಳೂರು ಟೆಕ್ ಸಮಿಟ್‌ನಲ್ಲಿ ಕೇಳಿ ಬಂತು.

ವರ್ಷದಿಂದ ವರ್ಷಕ್ಕೆ ಟೆಕ್ ಸಮಿಟ್ ತನ್ನ ವ್ಯಾಪ್ತಿ ವಿಸ್ತರಿಸುತ್ತಿದೆ. ಹತ್ತಾರು ಕ್ಷೇತ್ರಗಳಲ್ಲಿ ಹೊಸ ಆವಿಷ್ಕಾರಗಳು ಮುನ್ನೆಲೆಗೆ ಬರುತ್ತಿವೆ. ನೀತಿಗಳು ಸೇರಿದಂತೆ ಇದೆಲ್ಲದಕ್ಕೂ ಪೂರಕ ವಾತಾವರಣ ಕೂಡ ಎಲ್ಲೆಡೆ ನಿರ್ಮಾಣವಾಗುತ್ತಿದೆ. ಇದರೊಂದಿಗೆ ದೇಶದ ಮೂಲ ಸಂಸ್ಕೃತಿ ಕೃಷಿ ಸುಧಾರಣೆಗೆ ಹೆಚ್ಚು ಒತ್ತು ನೀಡುವ ಅವಶ್ಯಕತೆ ಇದೆ. ಆಗ ಈ ಮೇಳ ಮತ್ತಷ್ಟು ಅರ್ಥಪೂರ್ಣಗೊಳ್ಳುತ್ತದೆ. ಇದು ನಮ್ಮೆಲ್ಲರ ಜವಾಬ್ದಾರಿ ಕೂಡ ಆಗಿದೆ ಎಂದು ಗಣ್ಯರು ಅಭಿಪ್ರಾಯಪಟ್ಟರು.

ಮೂರು ದಿನಗಳ ಬೆಂಗಳೂರು ಟೆಕ್ ಸಮಿಟ್–2021ಕ್ಕೆ ಚಾಲನೆ ನೀಡಿ ಮಾತನಾಡಿದ ಉಪ ರಾಷ್ಟ್ರಪತಿ ಎಂ. ವೆಂಕಯ್ಯನಾಯ್ಡು ತಂತ್ರಜ್ಞಾನಗಳು ಸಾಮಾನ್ಯರ ಬದುಕಿನಲ್ಲಿ ಬದಲಾವಣೆಗೆ

ಕಾರಣವಾಗಬೇಕು. ಅದರಲ್ಲೂ ವಿಶೇಷವಾಗಿ ನಮ್ಮದು ಕೃಷಿ ಪ್ರಧಾನ ರಾಷ್ಟ್ರವಾಗಿದ್ದು, ಆ ಕ್ಷೇತ್ರದ ಸುಧಾರಣೆಗೆ ಪೂರಕವಾದ ತಂತ್ರಜ್ಞಾನಗಳು ಅಭಿವೃದ್ಧಗೊಳ್ಳಬೇಕು ಹಾಗೂ ಅವುಗಳು ರೈತರಿಗೆ ತಲುಪುವಂತಾಗಬೇಕು ಎಂದು ಹೇಳಿದರು.

ಉದ್ಯೋಗ ಸೃಷ್ಟಿಯಲ್ಲಿ ಖಾಸಗಿ ವಲಯದ ಪಾತ್ರ ಬಹುಮುಖ್ಯ. ಇದಕ್ಕೆ ಪೂರಕವಾಗಿ ಪ್ರಧಾನಿಯವರು ಸುಧಾರಣೆ–ಸಾಧನೆ–ಪರಿವರ್ತನೆ ಎಂಬುದನ್ನೇ ಮಂತ್ರವಾಗಿಸಿಕೊಂಡು ನೀತಿಗಳನ್ನು ರೂಪಿಸುತ್ತಿದ್ದಾರೆ ಎಂದು ಹೇಳಿದರು.

**ಹೊಣೆಗಾರಿಕೆ ಅವಶ್ಯಕತೆ:** ಮುಖ್ಯಮಂತ್ರಿಯವರು ಮಾತನಾಡಿ ಟೆಕ್ ಸಮಿಟ್ ವರ್ಷದಿಂದ ವರ್ಷಕ್ಕೆ ದೊಡ್ಡಮಟ್ಟದಲ್ಲಿ ನಡೆಯುವುದರ ಜೊತೆಗೆ ಯಶಸ್ವಿಯಾಗಿಯೂ ಆಗುತ್ತಿದೆ. ಇಲ್ಲಿ ಅನಾವರಣಗೊಳ್ಳುವ ತಂತ್ರಜ್ಞಾನಗಳು ಮತ್ತು ಆವಿಷ್ಕಾರಗಳು ರೈತರು, ಸಾಮಾನ್ಯ ಜನರ ಬಳಿಗೆ ಕೊಂಡೊಯ್ಯುವ ಮೂಲಕ ಇದರಲ್ಲಿ ಮತ್ತಷ್ಟು ಹೊಣೆಗಾರಿಕೆ ತರುವ ಅವಶ್ಯಕತೆ ಇದೆ. ಇದಕ್ಕೆ ಪೂರಕವಾಗಿ ಸರ್ಕಾರದ ನೀತಿಗಳು ಮತ್ತು ವಾತಾವರಣವನ್ನು ನಿರ್ಮಿಸಲಾಗುತ್ತಿದೆ ಎಂದು ಅಭಿಪ್ರಾಯಪಟ್ಟರು.

ಬೆಂಗಳೂರು ಮತ್ತು ಒಟ್ಟಾರೆಯಾಗಿ ರಾಜ್ಯದಲ್ಲಿ ಮನುಷ್ಯನ ಪ್ರತಿಭೆಯ ವಿಕಾಸನಕ್ಕೆ ತಕ್ಕ ವಾತಾವರಣವಿದ್ದು, ಉದ್ಯಮಗಳ ಬೆಳವಣಿಗೆಗೆ ಪೂರಕವಾದ ರಚನಾತ್ಮಕ ನೀತಿಗಳಿವೆ. ಪ್ರತಿಯೊಂದು ಉದ್ಯಮವನ್ನು ರಾಜ್ಯವು ಮುಕ್ತವಾಗಿ ಸ್ವಾಗತಿಸಲಿದೆ ಎಂದ ಅವರು ರಾಜ್ಯವು ಐಟಿ–ಬಿಟಿ ತಂತ್ರಜ್ಞಾನ, ಬಾಹ್ಯಾಕಾಶ ವೈಮಾನಿಕ ಅಂತರಿಕ್ಷ ಸಂಶೋಧನೆ ಮತ್ತು ಅಭಿವೃದ್ಧಿ ಸೆಮಿಕಂಡಕ್ಟರ್ ಹೀಗೆ ಎಲ್ಲರದಲ್ಲೂ ಇಡೀ ದೇಶಕ್ಕೆ ಅಗ್ರಸ್ಥಾನದಲ್ಲಿದೆ ಇದರ ಜೊತೆಗೆ ಕೌಶಲ್ಯ ಪೂರ್ಣ ಮಾವನ ಸಂಪನ್ಮೂಲ ಸೃಷ್ಟಿಯಲ್ಲೂ ಪ್ರಥಮ ಸ್ಥಾನದಲ್ಲಿದೆ. ರಾಜ್ಯವು ತಂತ್ರಜ್ಞಾನದ ಭವಿಷ್ಯದ ಬೆಳವಣಿಗೆಗೆ ಪ್ರಶಸ್ತವಾಗಿದೆ ಎಂದು ವಿವರಿಸಿದರು.

ಐಟಿ–ಬಿಟಿ ಮತ್ತು ವಿಜ್ಞಾನ ಹಾಗೂ ತಂತ್ರಜ್ಞಾನ ಸಚಿವ ಡಾ: ಸಿ.ಎನ್. ಅಶ್ವತ್ಥನಾರಾಯಣ ಕೋವಿಡ್ ಪಿಡುಗಿನ ನಂತರ ಅಭಿವೃದ್ಧಿಯ ಮಾನದಂಡಗಳು ಬದಲಾಗಿದ್ದು, ರಾಜ್ಯವು ಈ ಪರಿಸ್ಥಿತಿಯನ್ನು ತಂತ್ರಜ್ಞಾನದ ಬಲದಿಂದ ಸಕಾರಾತ್ಮಕವಾಗಿ ಬಳಸಿಕೊಳ್ಳುತ್ತಿದೆ ಎಂದರು.

ಆಧಾರ: ಉದಯವಾಣಿ, ದಿನಾಂಕ:18.12.2021.

## 91. ಮಹಿಳಾ ಉದ್ಯಮಿಗಳಿಗೆ ಪ್ರತ್ಯೇಕ ಆರ್ಥಿಕ ಸಂಸ್ಥೆಗೆ ಚಿಂತನೆ

ಗ್ರಾಮಗಳ ಸ್ತ್ರೀಶಕ್ತಿ ಸಂಘಗಳಿಂದ ಹಿಡಿದು ಬೃಹತ್ ಮಟ್ಟದ ಉದ್ಯಮಗಳಿಗಾಗಿಯೆ ಉತ್ತಮ ಆರ್ಥಿಕ ವ್ಯವಸ್ಥೆ ಕಲ್ಪಿಸಲು ಪ್ರತ್ಯೇಕ ಆರ್ಥಿಕ ಸಂಸ್ಥೆಯನ್ನು ರಚಿಸುವ ಸಂಬಂಧ ಸರ್ಕಾರ ಚಿಂತನೆ ನಡೆಸಿದೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಉಬುಂಟು ಮಹಿಳಾ ಉದ್ಯಮಿಗಳ ಸಂಘದ ವತಿಯಿಂದ ಆಯೋಜಿಸಿದ್ದ ಅಂತರರಾಷ್ಟ್ರೀಯ ಮಹಿಳಾ ಉದ್ಯಮಿಗಳ ದಿನಾಚರಣೆಯನ್ನು ಉದ್ಘಾಟಿಸಿ ಮಾತನಾಡಿದ ಅವರು ಮಹಿಳೆಯರು ಉದ್ಯಮದಲ್ಲಿ ತೊಡಗಿಸಿಳ್ಳಬೇಕು ಅದಕ್ಕಾಗಿ ಪ್ರತ್ಯೇಕ ಸಂಸ್ಥೆ ಸ್ಥಾಪಿಸುವ ಚಿಂತನೆ ಇದೆ ಎಂದರು.

ಅಂಥ ಮಹಿಳೆಯರಿಗೆ ವಿಶೇಷ ಕಾರ್ಯಕ್ರಮವನ್ನು ಒಂದು ವಾರದೊಳಗೆ ರೂಪಿಸಿ ಅಂಧ ಮಹಿಳೆಯರು ಉದ್ಯೋಗ ಹೊಂದುವಂತೆ ಅನುಕೂಲ ಕಲ್ಪಿಸಲಾಗುವುದು. ಉಬುಂಟು ಸದಸ್ಯರು ಸಹ ತಮ್ಮ ಉದ್ಯಮ ಸಂಸ್ಥೆಗಳಲ್ಲಿ ಅಂಧರು ಹಾಗೂ ದಿವ್ಯಾಂಗರಿಗೆ ಕೆಲಸವನ್ನು ಒದಗಿಸಿ ಅವರ ಸಹಾಯಕಕ್ಕೆ ನಿಲ್ಲಬೇಕು ಎಂದು ಕರೆ ನೀಡಿದರು.

ಸರ್ಕಾರಕ್ಕೆ ಸ್ತ್ರೀಶಕ್ತಿಯ ಬಗ್ಗೆ ವಿಶ್ವಾಸವಿದೆ, ಸ್ತ್ರೀಶಕ್ತಿಯನ್ನು ಬೆಂಬಲಿಸಿ, ಬೆಳೆಸಿ ಪ್ರತಿಯೊಬ್ಬ ಕನ್ನಡದ ಮಹಿಳೆ ಆರ್ಥಿಕವಾಗಿ ಸಬಲವಾಗಿ ಕುಟುಂಬ ಹಾಗೂ ಅದರೊಂದಿಗೆ ರಾಜ್ಯದ ಅರ್ಥಿಕ ಬೆಳವಣಿಗೆ ಅವರು ಕೊಡುಗೆ ನೀಡಬೇಕೆಂಬ ಚಿಂತನೆ ಸರ್ಕಾರದ್ದು, ಈ ನಿಟ್ಟಿನಲ್ಲಿ ಎಲ್ಲ ಕಾರ್ಯಕ್ರಮಗಳನ್ನು ಸ್ತ್ರೀಶಕ್ತಿಯ ಪರವಾಗಿ ಮಾಡಲಾಗುವುದು ಎಂದು ಭರವಸೆ ನೀಡಿದರು.

ಉಬುಂಟು ಎಂಬ ಛತ್ರಿಯಡಿ 30ಕ್ಕೂ ಹೆಚ್ಚು ಸಂಸ್ಥೆಗಳನ್ನು ಹೊಂದಿವೆ. ಇನ್ನು ಇನ್ನೂ ಹೆಚ್ಚಬೇಕು ಹಿಂದುಳಿದ ಎಸ್.ಸಿ/ಎಸ್.ಟಿ ಮಹಿಳೆಯರು ಆರ್ಥಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತಾಗಬೇಕು. ಈ ನಿಟ್ಟಿನಲ್ಲಿ ಉಬುಂಟು ಕಾರ್ಯನಿರ್ವಹಿಸಬೇಕು. ಮಹಿಳಾ ಸಮುದಾಯ ಉದ್ಯಮ ಸಮುದಾಯವಾಗಿ ಪರಿವರ್ತನೆಗೊಳ್ಳಬೇಕು ಮಹಿಳೆಯರು ಪುರುಷರಿಗಿಂತ ಹೆಚ್ಚು ಶ್ರಮಜೀವಿಗಳು, ಪ್ರಾಮಾಣಿಕರು ಹಾಗೂ ದಕ್ಷರಿದ್ದಾರೆ. ಇದು ಯಶಸ್ವಿ ಉದ್ಯಮಿಗಳಿಗಿರುವ ಗುಣಗಳು ಎಂದು ನೀಡಿದರು.

2019ರ ಕೈಗಾರಿಕಾ ನೀತಿ ಒಳಗೊಂಡಿದ್ದ ಮಹಿಳಾ ಉದ್ಯಮಿಗಳಿಗೆ ನೀಡುವ ಪ್ರೋತ್ಸಾಹಕಗಳ ಅಧ್ಯಾಯವನ್ನು 2020–2025ರ ನೀತಿಯಲ್ಲಿ ಸೇರ್ಪಡೆಗೊಳಿಸಲಾಗುವುದು. ಮಹಿಳಾ ಉದ್ಯಮಿಗಳಿಗೆ ನೀಡುವ ಅನುದಾನದಲ್ಲಿ ರಿಯಾಯಿತಿ ಈಗಾಗಲೇ ನೀಡಲಾಗುತ್ತಿದ್ದು, ಜಮೀನು ಖರೀದಿಗೆ ರಿಯಾಯಿತಿ ಒದಗಿಸಲು ಚಿಂತನೆ ನಡೆಸಲಾಗುವುದು ಎಂದರು. ಐಟಿ ಬಿಟಿಗೆ ಇರುವ ರೀತಿಯಲ್ಲಿಯೇ ಕಾರ್ಯಕ್ರಮವನ್ನು ಮಹಿಳಾ ಉದ್ಯಮಿಗಳಿಗೆ ರೂಪಿಸಲಾಗುವುದು ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:19.12.2021

## 92. ಪಿಹೆಚ್‌ಸಿಗಳಿಗೆ ಆಯುಷ್ ವೈದ್ಯರ ನೇಮಕ

ರಾಜ್ಯದ ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಿ ಅಲ್ಲಿ ತಲಾ ಒಬ್ಬರಂತೆ ಆಯುಷ್ ವೈದ್ಯರನ್ನು ನಿಯೋಜಿಸಲಾಗುವುದು ಎಂದು ವೈದ್ಯಕೀಯ ಶಿಕ್ಷಣ ಹಾಗೂ ಆರೋಗ್ಯ ಸಚಿವ ಡಾ.ಕೆ. ಸುಧಾಕರ್ ಭರವಸೆ ನೀಡಿದರು.

ಕರ್ನಾಟಕ ಆಯುಷ್ ವಿಶ್ವವಿದ್ಯಾಲಯ ವಿಧೇಯಕ ಮಂಡನೆ ಸಂದರ್ಭದಲ್ಲಿ ಎದುರಾದ ಗೊಂದಲಗಳನ್ನು ಪರಿಹರಿಸಿದ ಅವರು, ರಾಜ್ಯದ ಎಲ್ಲ ಪಿಎಚ್‌ಸಿಗಳನ್ನು ಮೇಲ್ದರ್ಜೆಗೇರಿಸಿ ತಲಾ ಮೂವರು ವೈದ್ಯರನ್ನು ಅದರಲ್ಲಿ ಇಬ್ಬರು ಅಲೋಪತಿ, ಒಬ್ಬರು ಆಯುಷ್ ವೈದ್ಯರನ್ನು ನಿಯೋಜಿಸಲಾಗುವುದು ಎಂದು ಭರವಸೆ ನೀಡಿದರು.

ಪಾರಂಪರಿಕ ಚಿಕಿತ್ಸಾ ಪದ್ಧತಿಯನ್ನು ಮುಖ್ಯವಾಹಿನಿ ತರುವ ಉದ್ದೇಶದಿಂದ ಈ ವಿ.ವಿ ರಚನೆ ಮಾಡಲಾಗುತ್ತಿದೆ, ರಾಜೀವ ಗಾಂಧಿ ವೈದ್ಯಕೀಯ ವಿ.ವಿ. ವ್ಯಾಪ್ತಿಯಲ್ಲಿ 41 ವೈದ್ಯಕೀಯ ಮಹಾವಿದ್ಯಾಲಯಗಳು, 38 ದಂತ ವೈದ್ಯಕೀಯ, 473 ನರ್ಸಿಂಗ್ ಹಾಗೂ 953 ಫಾರ್ಮಸಿ ಕಾಲೇಜುಗಳು ಸಂಲಗ್ನಗೊಂಡಿವೆ. ಈ ಕಾರ್ಯ ಬಾಹುಳ್ಯದಿಂದಾಗಿ ಪ್ರತ್ಯೇಕವಾದ ವಿಶ್ವವಿದ್ಯಾಲಯ ಸ್ಥಾಪಿಸಲಾಗುತ್ತಿದೆ. ಎಂದರು.

ಆಗ ಸದಸ್ಯ ಯು.ಬಿ.ವೆಂಕಟೇಶ, ಪ್ರತಿ ವರ್ಷ ಸಾವಿರಾರು ಸಂಖ್ಯೆಯಲ್ಲಿ ಆಯುಷ್ ವೈದ್ಯರು ಹೊರಬರುತ್ತಿದ್ದಾರೆ, ಖಾಸಗಿಯಾಗಿ ಸೇವೆ ಸಲ್ಲಿಸಲು ಅನೇಕ ತೊಡಕುಗಳು ಎದುರಾಗಿವೆ, ಈ ಬಗ್ಗೆ ಪರಿಶೀಲನೆ ನಡೆಸಬೇಕು ಎಂದು ಕೋರಿದರು.

ಆಯುಷ್ ವೈದ್ಯರು ಪ್ರಮಾಣ ಪತ್ರ ಪಡೆದು ಖಾಸಗಿಯಾಗಿ ಸೇವೆ ಸಲ್ಲಿಸಲು ಯಾವ ಅಡ್ಡಿ ಆತಂಕಗಳು ಇಲ್ಲ, ಆದರೆ ಆಯುಷ್ ವೈದ್ಯರು ತಾವು ಅಧ್ಯಯನ ಮಾಡಿದ ವಿಷಯವನ್ನೇ ಆಧರಿಸಿ

ಚಿಕಿತ್ಸೆ ನೀಡಬೇಕು ಎಂದು ವಿವರಿಸಿದರು. ರಾಮನಗರದಲ್ಲಿ ರಾಜೀವಗಾಂಧಿ ವೈದ್ಯಕೀಯ ವಿಶ್ವವಿದ್ಯಾಲಯದ ಸ್ವಂತ ಕಟ್ಟಡ ನಿರ್ಮಾಣ ಕಾರ್ಯವನ್ನು 2 ತಿಂಗಳಲ್ಲಿ ಕೈಗೊಳ್ಳಲಾಗುವುದು ಎಂದು ಇದೇ ಸಂದರ್ಭದಲ್ಲಿ ಭರವಸೆ ನೀಡಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:23.12.2021

## 93. ವೈರಾಣು ಬಿಗಿ ನಿಗ್ರಹಕ್ಕೆ ರಾಜ್ಯದಲ್ಲಿ ರಾತ್ರಿ ಕರ್ಫ್ಯೂ

ರಾಜ್ಯದಲ್ಲಿ ಓಮೈಕ್ರಾನ್ ವೈರಸ್ ವೇಗವಾಗಿ ಹರಡುತ್ತಿರುವ ಹಿನ್ನೆಲೆಯಲ್ಲಿ ಡಿಸೆಂಬರ್ 28ರಿಂದ 10 ದಿನಗಳ ಕಾಲ ರಾತ್ರಿ ಕರ್ಫ್ಯೂ ಹೇರುವ ಜೊತೆಗೆ ಹಲವಾರು ನಿರ್ಬಂಧಗಳನ್ನು ಜಾರಿಗೊಳಿಸಲು ರಾಜ್ಯ ಸರ್ಕಾರ ನಿರ್ಧರಿಸಿದೆ.

ಮುಖ್ಯಮಂತ್ರಿಯವರು ಗೃಹ ಕಚೇರಿ ಕೃಷ್ಣಾದಲ್ಲಿ ರಾಜ್ಯಮಟ್ಟದ ಕೋವಿಡ್ ನಿಯಂತ್ರಣ ಟಾಸ್ಕ್ ಫೋರ್ಸ್‌ನ ಸದಸ್ಯರು, ಸಚಿವ ಸಂಪುಟದ ಸದಸ್ಯರು ಹಾಗೂ ಆರೋಗ್ಯ ತಾಂತ್ರಿಕ ಸಲಹಾ ಸಮಿತಿ ಸದಸ್ಯರೊಂದಿಗೆ ಸಭೆ ನಡೆಸಿದ ನಂತರ ಸರ್ಕಾರ ಈ ನಿರ್ಧಾರಕ್ಕೆ ಬಂದಿದೆ.

ಸಭೆಯ ಬಳಿಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಡಾ.ಕೆ.ಸುಧಾಕರ್ ಸುದ್ದಿಗಾರರಿಗೆ ಈ ಕುರಿತು ಮಾಹಿತಿ ನೀಡಿದರು. ರಾಜ್ಯವೂ ಸೇರಿದಂತೆ ದೇಶಾದ್ಯಂತ ಓಮೈಕ್ರಾನ್ ವೈರಸ್ ವೇಗವಾಗಿ ಹರಡುತ್ತಿರುವ ಕಾರಣದಿಂದ ಕೋವಿಡ್ ಪ್ರಕರಣಗಳ ಸಂಖ್ಯೆ ಹೆಚ್ಚಳವಾಗುತ್ತಿದೆ. ರಾಜ್ಯದಲ್ಲಿ ಓಮೈಕ್ರಾನ್ ಸೋಂಕಿತರ ಸಂಖ್ಯೆ 38ಕ್ಕೆ ಹೆಚ್ಚವಾಗಿದೆ. ಈ ನಿಟ್ಟಿನಲ್ಲಿ ಹೊಸ ವರ್ಷಾಚರಣೆಯೂ ಸೇರಿದಂತೆ ನಾನಾ ರೀತಿಯ ಚಟುವಟಿಕೆಗಳ ಮೇಲೆ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ಜಾರಿಗೊಳಿಸಲು ತೀರ್ಮಾನಿಸಲಾಗಿದೆ ಎಂದರು.

ರಾಜ್ಯಾದ್ಯಂತ ಡಿಸೆಂಬರ್ 28 ರಿಂದ 10 ದಿನಗಳ ಕಾಲ ರಾತ್ರಿ 10 ರಿಂದ ಬೆಳಗ್ಗೆ 5 ಗಂಟೆವರೆಗೆ ರಾತ್ರಿ ಕರ್ಫ್ಯೂ ಜಾರಿ ಮಾಡಲಾಗುವುದು. ಇದು ಆರಂಭಿಕ ಕ್ರಮವಾಗಿದ್ದು, ಪರಿಸ್ಥಿತಿ ಅವಲೋಕಿಸಿ ಮುಂದಿನ ಕ್ರಮ ಕೈಗೊಳ್ಳಲಾಗುವುದು. ರಾಜ್ಯಾದ್ಯಂತ ಬಹಿರಂಗವಾಗಿ ಹೊಸ ವರ್ಷಾಚರಣೆ ಕಾರ್ಯಕ್ರಮವನ್ನು ನಿಷೇಧ ಮಾಡಲಾಗಿದೆ. ಹೋಟೇಲ್, ಬಾರ್ ಮತ್ತು ರೆಸ್ಟೋರೆಂಟ್‌ಗಳಲ್ಲಿ ಒಟ್ಟು ಆಸನದ ಶೇ.50 ರಷ್ಟು ಮಾತ್ರ ಪ್ರವೇಶ ಕಲ್ಪಿಸಲಾಗುವುದು. ಮೊದಲ ಹಂತದಲ್ಲಿ ಹೋಟೇಲ್, ಬಾರ್ ಮತ್ತು ರೆಸ್ಟೋರೆಂಟ್‌ಗಳಿಗೆ ಮಾತ್ರ ಈ ನಿಯಮ ಅನ್ವಯ ಆಗಲಿದ್ದು, ಚಿತ್ರಮಂದಿರಗಳ ಬಗ್ಗೆ ಈ ತನಕ ಯಾವುದೇ ನಿರ್ಧಾರ ತೆಗೆದು ಕೊಂಡಿಲ್ಲ ಎಂದು ಸ್ಪಷ್ಟ ಪಡಿಸಿದರು.

ರಾಜ್ಯದಲ್ಲಿ ಲಸಿಕೆ ಹಾಕುವ ಅಭಿಯಾನ ವೇಗದಿಂದ ಸಾಗಿದ್ದು, ಈಗಾಗಲೇ ಶೇ.97 ರಷ್ಟು ಅರ್ಹ ನಾಗರೀಕರಿಗೆ ಮೊದಲ ಡೋಸ್ ಲಸಿಕೆ ಹಾಕಲಾಗಿದೆ. ಬಾಕಿ ಉಳಿದ ಶೇ.3ರಷ್ಟು ಜನರಿಗೂ ಮೊದಲ ಡೋಸ್ ಹಾಕಲು ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳಲು ಮುಖ್ಯಮಂತ್ರಿಯವರು ಸೂಚಿಸಿದ್ದಾರೆ. ಅತಿ ಶೀಘ್ರದಲ್ಲಿ ಶೇ.100 ರಷ್ಟು ಸಾಧನೆ ಮಾಡಲು ಸಮರೋಪಾದಿಯಲ್ಲಿ ಪ್ರಯತ್ನ ಮಾಡಲಾಗುತ್ತಿದೆ. ಎರಡನೇ ಡೋಸ್ ಲಸಿಕೆಯನ್ನು ಶೇ.75 ರಷ್ಟು ಜನರಿಗೆ ಹಾಕಲಾಗಿದ್ದು, ದೇಶದ ಅತಿದೊಡ್ಡ ರಾಜ್ಯಗಳಿಗೆ ಹೊಲಿಸಿದಾಗ ಕರ್ನಾಟಕ ಎರಡನೇ ಸ್ಥಾನದಲ್ಲಿದೆ. ಆದಷ್ಟು ಶೀಘ್ರ ಬಾಕಿ ಉಳಿದ 45 ಲಕ್ಷ ಜನರಿಗೆ ಎರಡನೆ ಡೋಸ್ ಹಾಕಲು ಮನವೊಲಿಸಲಾಗುವುದು ಎಂದು ಹೇಳಿದರು.

ಎರಡನೆ ಡೋಸ್ ಬಾಕಿ ಉಳಿದ ಜನರು ಲಸಿಕೆ ಪಡೆಯಲು ಮುಂದೆ ಬರಬೇಕು. ಏಕೆಂದರೆ ದೇಶದಲ್ಲಿ ಓಮೈಕ್ರಾನ್ ಸೊಂಕಿತರ ಸಂಖ್ಯೆ 400ರ ಗಡಿ ದಾಟಿದ್ದು, ರಾಜ್ಯದಲ್ಲಿ 38 ತಲುಪಿದೆ. ಇದರ ತೀವ್ರತೆ ಅರ್ಥ ಮಾಡಿಕೊಂಡು ಜನರೇ ಮುಂದಾಗಿ ಎರಡನೇ ಡೊಸ ಹಾಕಿಸಿಕೊಳ್ಳಬೇಕು. ಅದರಿಂದ ಸಂಪೂರ್ಣ ರೋಗ ನಿರೋಧಕ ಶಕ್ತಿ ಹೆಚ್ಚಳವಾಗುತ್ತದೆ. ಮುಂದಿನ ದಿನಗಳಲ್ಲಿ ಬರಬಹುದಾದ

ಯಾವುದೇ ರೂಪಾಂತರಿ ತಳಿಯನ್ನು ಎದುರಿಸುವ ಶಕ್ತಿ ಬರುತ್ತದೆ ಎಂದು ಮನವಿ ಮಾಡಿದರು. ರಾಜ್ಯದಲ್ಲಿ ಮುಂದಿನ ದಿನಗಳಲ್ಲಿ ಎದುರಾಗಬಹುದಾದ ಎಂಥದೇ ಆರೋಗ್ಯ ಸಮಸ್ಯೆ ಎದುರಿಸಲು ಸರ್ಕಾರ ಸನ್ನದ್ಧವಾಗುತ್ತಿದೆ. ಸದ್ಯ 4 ಸಾವಿರ ಐಸಿಯು ಬೆಡ್‌ಗಳನ್ನು ಸಿದ್ಧಪಡಿಸಲಾಗುತ್ತಿದೆ ಎಂದರು.

ಪ್ರಧಾನ ಮಂತ್ರಿ ನರೇಂದ್ರ ಮೋದಿ ಅವರು ಘೋಷಿಸಿದಂತೆ ರಾಜ್ಯದಲ್ಲಿ 60 ವರ್ಷ ಮೀರಿದ ಇತರ ರೋಗಗಳಿಂದ ಬಳಲುತ್ತಿರುವ ಹಿರಿಯ ನಾಗರಿಕರಿಗೆ ಹೆಚ್ಚುವರಿ ಮೂರನೇ ಡೋಸ ಲಸಿಕೆಯನ್ನು ಜನವರಿ 10 ರಿಂದ ಹಾಕಲಾಗುವುದು. ಆರೋಗ್ಯ ಕ್ಷೇತ್ರದಲ್ಲಿ ಕೆಲಸ ಮಾಡುವ ಮುಂಚೂಣೀಯ ಆರೋಗ್ಯ ಅಧಿಕಾರಿಗಳು ಮತ್ತು ಕಾರ್ಯಕರ್ತರಿಗೆ ಪ್ರತಿ ಜಿಲ್ಲೆ ಮತ್ತು ತಾಲ್ಲೂಕಿನಲ್ಲಿ ಮೂರನೇ ಡೋಸ್ ಹಾಕುವ ಕಾರ್ಯಕ್ಕೆ ಚಾಲನೆ ನೀಡಲಾಗುವುದು ಎಂದು ಹೇಳಿದರು. ಜನರು ಸಾಕಷ್ಟು ನಿರೀಕ್ಷೆ ಹೊಂದಿರುವಂತೆ ರಾಜ್ಯದಲ್ಲಿ 15 ರಿಂದ 18 ವರ್ಷಗೊಳಗಿನ 43 ಲಕ್ಷ ಯುವಕರಿಗೆ ಲಸಿಕೆ ಹಾಕುವ ಕಾರ್ಯಕ್ರಮಕ್ಕೆ ಜನವರಿ 3 ರಂದು ಚಾಲನೆ ನೀಡಲಾಗುವುದು. ಅಂದು ರಾಜ್ಯದಲ್ಲಿ ಆಯಾ ಜಿಲ್ಲೆ ಮತ್ತು ತಾಲ್ಲೂಕಿನಲ್ಲಿ ಮುಖ್ಯಮಂತ್ರಿಗಳು, ಮಂತ್ರಿಗಳು, ಶಾಸಕರು ಕಾರ್ಯಕ್ರಮಕ್ಕೆ ಚಾಲನೆ ನೀಡುತ್ತಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:23.12.2021

## 94. ರೈತ ಕುಟುಂಬದ 8–9ನೇ ತರಗತಿ ಹೆಣ್ಮಕ್ಕಳಿಗೂ ವಿದ್ಯಾನಿಧಿ

ಗ್ರಾಮೀಣ ಭಾಗದ ರೈತರ ಹೆಣ್ಣು ಮಕ್ಕಳಿಗೆ ವಿದ್ಯಾನಿಧಿ ಶಿಷ್ಯವೇತನ ನೀಡಲು ನಿರ್ಧರಿಸಿದ್ದು, ಶೀಘ್ರದಲ್ಲೇ ಆದೇಶ ಹೊರಬೀಳಲಿದೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಇಲ್ಲಿನ ಜಿಲ್ಲಾ ಪಂಚಾಯಿತಿ ಸಮೀಪ ಜಿಲ್ಲಾಡಳಿತ ಸಂಕೀರ್ಣಕ್ಕೆ ಅಡಿಗಲ್ಲು, ಅಭಿವೃದ್ಧಿ ಕಾಮಗಾರಿಗಳಿಗೆ ಚಾಲನೆ ಹಾಗೂ ಪೂರ್ಣಗೊಂಡ ಯೋಜನೆಗಳ ಉದ್ಘಾಟನೆ ನೆರೆವೇರಿಸಿ ಅವರು ಮಾತನಾಡಿದರು. ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ ತಕ್ಷಣ ರೈತರ ಮಕ್ಕಳಿಗೆ ಶಿಷ್ಯವೇತನ ನೀಡಲು ಉದ್ದೇಶ ಹೊಂದಲಾಗಿದೆ. ಅದೇ ರೀತಿ 8, 9 ಹಾಗೂ 10ನೇ ತರಗತಿ ಓದುತ್ತಿರುವ ಗ್ರಾಮೀಣ ರೈತರ ಹೆಣ್ಣು ಮಕ್ಕಳಿಗಾಗಿ ವಿದ್ಯಾನಿಧಿ ಯೋಜನೆ ವಿಸ್ತರಿಸಲು ನಿರ್ಧರಿಸಿರುವುದಾಗಿ ತಿಳಿಸಿದರು. ಉತ್ತರ ಕರ್ನಾಟಕದ ಮುಖ್ಯಮಂತ್ರಿಯಾಗಿ ಈ ಭಾಗದ ಅಭಿವೃದ್ಧಿಗೆ ಬದ್ಧನಾಗಿದ್ದೇನೆ. ಅಧಿವೇಶನದಲ್ಲಿ ಉತ್ತರ ಕರ್ನಾಟಕದ ಅಭಿವೃದ್ಧಿ ಬಗ್ಗೆ ಸಾಕಷ್ಟು ಚರ್ಚೆಯಾಗಿದ್ದು, ವಿಶೇಷ ಅನುದಾನ ನೀಡುವೆ. ಅದಕ್ಕಾಗಿ ಅಧಿಕಾರಗಳನ್ನು ನೇಮಿಸಿ ಮೇಲ್ವಿಚಾರಣೆ ನಡೆಸುವೆ ಎಂದರು.

**ದ್ರಾಕ್ಷಿ ಬೆಳೆಗಾರರಿಗೆ ಬಂಪರ್ :** ದ್ರಾಕ್ಷಿ ಬೆಳೆಗಾರರು ಸಾಕಷ್ಟು ಸಮಸ್ಯೆ ಅನುಭವಿಸುತ್ತಿದ್ದಾರೆ. ಹೀಗಾಗಿ ಅವರನ್ನು ವೈನ್ ಬೋರ್ಡ್‌ಗೆ ಸೇರ್ಪಡೆಗೊಳಿಸಲಾಗಿದೆ. ಇನ್ಮುಂದೆ ದ್ರಾಕ್ಷಿ ಬೆಳೆಗಾರರು ಸಹ ವೈನ್ ಬೋರ್ಡ್ ಸದಸ್ಯರಾಗಬಹುದೆಂದು ಸಿಎಂ ತಿಳಿಸಿದರು.

ಆಧಾರ: ವಿಜಯವಾಣಿ, ದಿನಾಂಕ:26.12.2021

## 95. ನಿಗಮ–ಮಂಡಳಿ ನೇಮಕಾತಿ ಶೀಘ್ರ

ಬಿಜೆಪಿ ಮುಖಂಡರು ಹಾಗೂ ಕಾರ್ಯಕರ್ತರು ಚಾತಕಪಕ್ಷಿಯಂತೆ ಕಾಯುತ್ತಿರುವ ನಿಗಮ–ಮಂಡಳಿಗಳ ಪುನರ್ ರಚನೆಯ ಕಾಲ ಸನ್ನಿಹಿತವಾಗಿದೆ. ಹುಬ್ಬಳ್ಳಿಯಲ್ಲಿ ಡಿಸೆಂಬರ್ 28 ರಂದು ಪಕ್ಷದ ರಾಜ್ಯ ಪದಾಧಿಕಾರಿಗಳು, ಕಾರ್ಯಕಾರಿ ಸಮಿತಿ ಹಾಗೂ ಕೋರ್ ಕಮಿಟಿ ಸಭೆಗಳು ನಿಗದಿಯಾಗಿದ್ದು, ಇದೇ ಸಂದರ್ಭದಲ್ಲಿ ನಿಗಮ–ಮಂಡಳಿ ಪಟ್ಟಿಯೂ ಒಪ್ಪಿಗೆ ಪಡೆಯುವ ಸಾಧ್ಯತೆಗಳಿವೆ.

ಮುಂಬರುವ ಬಿಬಿಎಂಪಿ, ಜಿಲ್ಲಾ, ತಾಲ್ಲೂಕು ಪಂಚಾಯಿತಿ ಚುನಾವಣೆ ಜೊತೆಗೆ 2023ರ ವಿಧಾನಸಭೆ ಸಾರ್ವತ್ರಿಕ ಚುನಾವಣೆ ದೃಷ್ಟಿಯಿಂದಲೂ ಹೊಸದಾಗಿ ನೇಮಕ ಅಗತ್ಯ ಎನ್ನುವುದು ವರಿಷ್ಠರ

ನಿಲುವಾಗಿದೆ ಎಂದು ಪಕ್ಷದ ಮೂಲಗಳು ತಿಳಿಸಿವೆ. ಬಸವರಾಜ ಬೊಮ್ಮಾಯಿಯವರು ಮುಖ್ಯಮಂತ್ರಿಯಾದ ತಕ್ಷಣ ಸಚಿವ ಸಂಪುಟ ಪುನರ್ ರಚನೆ ಸಹಿತ ಆಡಳಿತಾತ್ಮಕವಾಗಿ ಸಾಕಷ್ಟು ಬದಲಾವಣೆಗಳಾಗಿವೆ. ಪುನರ್ ರಚನೆಗೆ ಒಂದಿಲ್ಲೊಂದು ಚುನಾವಣೆ, ಕೊರೊನಾ ಅಡ್ಡಗಾಲಾಗಿವೆ. ಶಾಸಕರು ಮತ್ತು ಹಿರಿಯ ಕಾರ್ಯಕರ್ತರಿಗೆ ತಲಾ ಅರ್ಧ ಸ್ಥಾನಗಳ ಹಂಚಿಕೆ ನಿರ್ಧಾರ ಅನುಷ್ಠಾನಕ್ಕೆ ಬರದಿದ್ದರೆ ಬೇರೆ ಸಂದೇಶ ರಚನೆಯಾಗಲಿದೆ ಎಂಬ ಕಳವಳ ವ್ಯಕ್ತವಾಗಿದೆ.

**ಕೊನೆ ಘಳಿಗೆಯಲ್ಲಿ ಹಿಂದಡಿ**: ವರಿಷ್ಠರು, ಪಕ್ಷದ ರಾಜ್ಯ ನಾಯಕರೊಂದಿಗೆ ಮುಖ್ಯಮಂತ್ರಿಯವರು ಚರ್ಚಿಸಿ ಪಟ್ಟಿ ಸಿದ್ಧಪಡಿಸಿದ್ದು ಬೆಂಗಳೂರಿನಲ್ಲಿ ಕಳೆದ ತಿಂಗಳು ನಡೆದ ಪಕ್ಷದ ರಾಜ್ಯ ಕೋರ್ ಕಮಿಟಿ ಸಭೆಯ ಅನುಮೋದನೆ ನೀಡಿಯಾಗಿತ್ತು. ಇನ್ನೇನು ಅಧಿಕೃತ ಆದೇಶ ಹೊರಬೀಳಲಿದೆ ಎನ್ನುವಾಗ ಸ್ಥಳೀಯ ಸಂಸ್ಥೆಗಳಿಂದ ವಿಧಾನ ಪರಿಷತ್ ಚುನಾವಣೆ ವೇಳಾ ಪಟ್ಟಿ ಪ್ರಕಟವಾಯಿತು. ಚುನಾವಣೆ ಮಾದರಿ ನೀತಿ ಸಂಹಿತೆ ಜಾರಿಗೆ ಬಂದ ಹಿನ್ನೆಲೆಯಲ್ಲಿ ಪಟ್ಟಿ ಬಿಡುಗಡೆ ಯೋಚನೆಯಿಂದ ಸಿಎಂ ಹಿಂದಡಿಯಿಟ್ಟರು ಎಂದು ಉನ್ನತ ಮೂಲಗಳು ತಿಳಿಸಿವೆ. ವಿಧಾನ ಪರಿಷತ್ ಚುನಾವಣೆ ಫಲಿತಾಂಶ ಆಧಾರದಲ್ಲಿ ಸಿದ್ಧವಾದ ಪಟ್ಟಿ ಮತ್ತೆ ಪರಿಷ್ಕರಣೆಯಾಗುವ ಸಂಭವವಿದ್ದು, ಸಮತೋಲನೆ ಕಸರತ್ತು ನಡೆಯಲಿದೆ.

ಆಧಾರ:ವಿಜಯವಾಣಿ, ದಿನಾಂಕ:26.12.2021

## 96. ಮಕ್ಕಳಿಗೆ ಕೊರೋನಾ ಲಸಿಕೆ ಪ್ರಕ್ರಿಯೆ ಶುರು

ಅರವತ್ತು ವರ್ಷ ಮೇಲ್ಪಟ್ಟವರಿಗೆ ಮುನ್ನೆಚ್ಚರಿಕೆ (ಬೂಸ್ಟರ್) ಡೋಸ್ ಮತ್ತು ಹದಿನೈದರಿಂದ 18 ವರ್ಷ ವಯಸ್ಸಿನ ಮಕ್ಕಳಿಗೆ ಲಸಿಕೆಗೆ ಕೇಂದ್ರ ಸರ್ಕಾರ ಮಾರ್ಗಸೂಚಿಯನ್ನು ಪ್ರಕಟಿಸಿದೆ. ಮಕ್ಕಳಿಗೆ ಕೇವಲ ಕೋವ್ಯಾಕ್ಸಿನ್ ಲಸಿಕೆಯನ್ನು ನೀಡಲಾಗುತ್ತದೆ. ಅರವತ್ತು ವರ್ಷ ಮೇಲ್ಪಟ್ಟವರು ಮತ್ತು ವಿವಿಧ ಆರೋಗ್ಯ ಸಮಸ್ಯೆಗಳನ್ನು ಹೊಂದಿರುವವರಿಗೆ 2ನೇ ಡೋಸ್ ಪಡೆದು ಕೊಂಡ 9 ತಿಂಗಳ ನಂತರ ಮುನ್ನೆಚ್ಚರಿಕೆಯ ಮುರನೇ ಡೋಸ ನೀಡಲಾಗುವುದು.

ಜನವರಿ 3 ರಿಂದಲೇ 15–18 ವರ್ಷ ವಯಸ್ಸಿನ ಮಕ್ಕಳಿಗೆ ಲಸಿಕೆ ನೀಡುವುದಾಗಿ ಮತ್ತು ಆರೋಗ್ಯ ಕಾರ್ಯಕರ್ತರು ಮತ್ತು ಕೊರೋನಾ ಮುಂಚೂಣಿ ಕಾರ್ಯಕರ್ತರಿಗೆ ಬುಸ್ಟರ್ ಡೋಸ್ ಲಸಿಕೆಯನ್ನು ಜನವರಿ 10 ರಿಂದ ನೀಡುವುದಾಗಿ ಮೋದಿ ಪ್ರಕಟಿಸಿದ್ದರು.

ಅರವತ್ತು ವರ್ಷ ಮೇಲ್ಪಟ್ಟವರಿಗೆ ವೈದ್ಯರ ಸಲಹೆಯಂತೆ ಮುನ್ನೆಚ್ಚರಿಕಾ ಡೋಸ್ ನೀಡಲಾಗುವುದು. ಎಲ್ಲ ಆರೋಗ್ಯ ಕಾರ್ಯಕರ್ತರು, ಮತ್ತು 60 ವರ್ಷ ಮೇಲ್ಪವರು ಮತ್ತು ವಿವಿಧ ಕಾಯಿಲೆಗಳಿಂದ ಬಳಲುತ್ತಿರುವವರು ಕೊ–ವಿನ್‌ನಲ್ಲಿ ನೋಂದಾಯಿಸಿಕೊಳ್ಳಬಹುದು. ಕೊ–ವಿನ್ ವ್ಯವಸ್ಥೆ ನೊಂದಾಯಿತರಿಗೆ ಎರಡನೇ ಡೋಸ್ ಪಡೆದು 9 ತಿಂಗಳು ಕಳೆಯುವಷ್ಟರಲ್ಲಿ ಅವರಿಗೆ ಎಸ್‌ಎಂಎಸ್ ಮೂಲಕ ಸಂದೇಶ ರವಾನಿಸುತ್ತದೆ. ಲಸಿಕಾ ಸರ್ಟಿಫಿಕೇಟ್‌ನಲ್ಲಿ ಮುನ್ನೆಚ್ಚರಿಕಾ ಡೋಸ ಕುರಿತು ನಮೂದಿಸಲಾಗುವುದು.

**ಮಕ್ಕಳ ಲಸಿಕೆ:** ಹದಿನೈದು ವರ್ಷ ತುಂಬಿರುವ ಎಲ್ಲ ಮಕ್ಕಳೂ ಅಥವಾ 2007 ಅಥವಾ ಅದಕ್ಕೂ ಮೊದಲು ಜನಿಸಿರುವ ಎಲ್ಲರೂ ಲಸಿಕಗೆ ಅರ್ಹರು. ಅರ್ಹ ಫಲಾನುಭವಿಗಳು ಈಗಾಗಲೇ ಇರುವ ಅಕೌಂಟ್ ನಂಬರ್ ಮೂಲಕ ಅಥವಾ ಹೊಸ ಮೊಬೈಲ್ ನಂಬರ್‌ನೊಂದಿಗೆ ಆನ್‌ಲೈನ್ ಮೂಲಕ ನೋಂದಣಿ ಮಾಡಿಕೊಳ್ಳಲು ತಮ್ಮ ಐಡಿ ಕಾರ್ಡ್‌ಗಳನ್ನು ಕೂಡ ಬಳಸಬಹುದಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:28.12.2021

## 97. ಸಾರಿಗೆ, ಎಸ್ಕಾಂ ಪುನಶ್ಚೇತನಕ್ಕೆ ಒತ್ತು

ಸಾರಿಗೆ ನಿಗಮಗಳು ಹಾಗೂ ಎಸ್ಕಾಂಗಳ ಪುನಶ್ಚೇತನ ಸರ್ಕಾರದ ಸಂಕಲ್ಪ ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ. ವಿಧಾನ ಸೌಧ ಮುಂಭಾಗದ ಬಿಎಂಟಿಸಿ ವತಿಯಿಂದ ವಿದ್ಯುತ್ ಚಾಲಿತ ಬಸ್ಸು ಮತ್ತು ಬಿಎಸ್–6 ಡೀಸೆಲ್ ಬಸ್ಸುಗಳಿಗೆ ಹಸಿರು ನಿಶಾನೆ ತೋರಿ ಮಾತನಾಡಿದ ಅವರು, ಸಾರಿಗೆ ಹಾಗೂ ಎಸ್ಕಾಂಗಳನ್ನು ಆರ್ಥಿಕವಾಗಿ ಸ್ವಾವಲಂಬನೆಯಾಗಿಸುವ ನಿಟ್ಟಿನಲ್ಲಿ ಸುಧಾರಣಾ ಕ್ರಮ ಕೈಗೊಳ್ಳಲಾಗುತ್ತಿದೆ ಎಂದು ತಿಳಿಸಿದರು.

ಸಬ್ಸಿಡಿ ಆಧಾರದ ಮೇಲೆ ಸಾರಿಗೆ ಸಂಸ್ಥೆಗಳನ್ನು ನಡೆಸುವುದು ಕಷ್ಟಸಾಧ್ಯ. ಅದಕ್ಕಾಗಿ ರಾಜ್ಯದ ಎಲ್ಲ ಸಾರಿಗೆ ನಿಗಮಗಳನ್ನು ಪುನಶ್ಚೇತನಗೊಳಿಸಲು ಸರ್ಕಾರದ ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ ಎಂ.ಆರ್.ಶ್ರೀನಿವಾಸ್ ಮೂರ್ತಿ ಅವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದೆ. ಸಾರಿಗೆ ವ್ಯವಸ್ಥೆಯ ಸೋರಿಕೆ ತಡೆಗಟ್ಟಿ ಸಂಪನ್ಮೂಲ ಸೃಜನೆತೆಗೆ ಒತ್ತು ನೀಡಲು ಹಾಗೂ ಸಂಸ್ಥೆಗಳ ಉತ್ತಮ ಸೇವೆಯ ಮೂಲಕ ಲಾಭದಾಯಕವಾಗಿ ಕಾರ್ಯನಿರ್ವಹಿಸುವ ಕುರಿತು ಈ ಸಮಿತಿ ತನ್ನ ಶಿಫಾರಸು ನೀಡಲಿದೆ ಎಂದರು.

ಎಸ್ಕಾಂಗಳ ಪುನಶ್ಚೇತನಕ್ಕೆ ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ ಕೆ. ಜೈರಾಜ್ ಅವರ ಅಧ್ಯಕ್ಷತೆಯ ಸಮಿತಿ ರಚಿಸಲಾಗಿದೆ. ಸರ್ಕಾರದ ಮೇಲೆ ಹೊರೆ ಕಡಿಮೆ ಮಾಡುವ ಉದ್ದೇಶದಿಂದ ಈ ಸಮಿತಿಗಳನ್ನು ರಚಿಸಲಾಗಿದೆ ಎಂದು ತಿಳಿಸಿದರು.

ಸಮಿತಿಯ ಸಲಹೆಗಳನ್ನು ಜಾರಿಗೆ ತರುವ ಮೂಲಕ ಸಾರಿಗಗೆ ಹೊಸ ಆಯಾಮ ನೀಡುವ ಕೆಲಸ ಮಾಡಬೇಕು ಎಂದರು. ಹಿಂದೆ ಸಾರ್ವಜಿನಿಕ ಉದ್ದಿಮೆಗಳ ಹೆಚ್ಚಿನ ಪ್ರಮಾಣದಲ್ಲಿ ಬಿಎಂಟಿಸಿ ಸೇವೆ ಪಡೆಯುತ್ತಿದ್ದವು. ಮುಂದಿನ ದಿನಗಳಲ್ಲಿ ಎಚ್‌ಎಎಲ್ ಮತ್ತಿತರ ಸಾರ್ವಜನಿಕ ಉದ್ದಿಮೆಗಳು ಹಾಗೂ ಐಟಿ ಕಂಪನಿಗಳೊಂದಿಗೆ ಮಾತುಕತೆ ನಡೆಸಿ ಬಿಎಂಟಿಸಿ ಸೇವೆಯನ್ನು ಬಳಸುವ ಬಗ್ಗೆ ಮನವೊಲಿಸಲಾಗುವುದು ಎಂದರು.

ಹೊಸ ಪ್ರಯೋಗ ಮಾಡಿ ದಕ್ಷತೆ, ಕ್ಷಮತೆಯನ್ನು ಹೆಚ್ಚಿಸುವ ಮೂಲಕ ಸಾರಿಗೆ ಸಚಿವರ ನೇತೃತ್ವದಲ್ಲಿ ಅಧಿಕಾರಿಗಳು ಸಹಕಾರ ನೀಡಿದರೆ ಫಲಪ್ರದವಾಗುವುದು. ಬಿಎಂಟಿಸಿ ಬದಲಾಗಿ ಹೊಸ ವಿನ್ಯಾಸ ರೂಪಿಸುವಂತೆ ಮುಖ್ಯಮಂತ್ರಿಯವರು ಇದೇ ಸಂದರ್ಭದಲ್ಲಿ ಸಲಹೆ ನೀಡಿದರು.

ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಹೊಸ ವಿನ್ಯಾಸ, ಉತ್ತಮ ಸೇವೆ ಹಾಗೂ ಸಂಪನ್ಮೂಲ ಸೃಜನೆಯ ಮೂಲಕ ಭಾರತದಲ್ಲಿಯೇ ನಂ. 1 ಸಾರಿಗೆ ಸಂಸ್ಥೆಯಾಗಬೇಕು ಎಂದು ಸಿಎಂ ಆಶಿಸಿದರು. ಸಾರಿಗೆ ಸಚಿವ ಬಿ.ಶ್ರೀರಾಮಲು, ಸಹಕಾರ ಸಚಿವ ಎಸ್.ಟಿ.ಸೋಮಶೇಖರ್, ಸಂಸದ ಪಿ.ಸಿ.ಮೋಹನ್, ಬಿಎಂಟಿಸಿ ಅಧ್ಯಕ್ಷ ನಂದೀಶ್ ರೆಡ್ಡಿ, ಶಾಸಕರು, ಸಾರಿಗೆ ಇಲಾಖೆ ಕಾರ್ಯದರ್ಶಿ ರಾಜೇಂದ್ರ ಕುಮಾರ್ ಕಟಾರಿಯಾ, ಬಿಎಂಟಿಸಿ ವ್ಯವಸ್ಥಾಪಕ ನಿರ್ದೇಶಕ ಅನ್ಬುಕುಮಾರ್ ಇತರರಿದ್ದರು.

ಆಧಾರ: ಉದಯವಾಣಿ, ದಿನಾಂಕ:28.12.2021.

## 98. 8 ತಿಂಗಳಲ್ಲಿ 358 ಶಿಶುಗಳ ದುರ್ಮರಣ

ಕೊರೋನಾ ಮೂರನೇ ಅಲೆ ಭೀತಿ ನಡುವೆಯೇ ಗಣಿ ನಾಡು ಬಳ್ಳಾರಿಯಲ್ಲಿ ಅಪೌಷ್ಟಿಕತೆ, ಕಡಿಮೆ ತೂಕ, ಅವಧಿ ಪೂರ್ವ ಜನನ, ವಿವಿಧ ಸೋಂಕಿನ ಕಾರಣಗಳಿಂದಾಗಿ ನವಜಾತ ಶಿಶುಗಳು ಕಣ್ಮುಚ್ಚುತ್ತಿರುವವುದು ಕಳವಳ ಮೂಡಿಸಿದೆ. ಪ್ರಸಕ್ತ ಸಾಲಿನ ಏಪ್ರಿಲ್‌ನಿಂದ ನವೆಂಬರ್‌ವರೆಗೆ ಬಳ್ಳಾರಿ-ವಿಜಯನಗರ ಜಿಲ್ಲೆಯಲ್ಲಿ 65 ಶಿಶುಗಳ ಸಾವಾಗಿದೆ. ಅದರಲ್ಲಿ ಆಂಧ್ರದ ಅನಂತಪುರ, ಕರ್ನೂಲ್ ಮತ್ತು

ಉತ್ತರ ಕರ್ನಾಟಕದ ಹಲವು ಜಿಲ್ಲೆಗಳ ಜನತೆಗೆ ಆಸರೆಯಾಗಿರುವ ಬಳ್ಳಾರಿಯ ವಿಮ್ಸ್ ಆಸ್ಪತ್ರೆಗಳಲ್ಲಿಯೇ 293 ಹಸುಳೆಗಳು ಮೃತಪಟ್ಟಿರುವುದು ಆತಂಕ ಮೂಡಿಸಿದೆ. ದಿನಕ್ಕೆ ಸರಾಸರಿ ಮೂರು ಹಸುಗೂಸುಗಳು ಜೋಡಿ ಜಿಲ್ಲೆಯಲ್ಲಿ ಇಹಲೋಕ ತ್ಯಜಿಸುತ್ತಿವೆ. ಹೀಗಿದ್ದರೂ ಆರೋಗ್ಯ ಇಲಾಖೆ ಕಾಳಜಿ ತೊರುತ್ತಿಲ್ಲ ಎಂಬ ಆರೋಪ ಕೇಳಿಬರುತ್ತಿದೆ. ಗ್ರಾಮೀಣ ಭಾಗದ ಗರ್ಭಿಣಿಯರು ಆಸ್ಪತ್ರೆಗೆ ಬರುವ ಮುನ್ನವೇ ಹಲವು ಕಂದಮ್ಮಗಳು ಕಣ್ಮುಚ್ಚುತ್ತಿವೆ.

ಗಣಿ ನಾಡಿನಲ್ಲಿ ಕಳೆದ ಎಂಟು ತಿಂಗಳ ಅವಧಿಯಲ್ಲಿ ಶಿಶುಗಳು ದುರ್ಮರಣ ಹೊಂದಿರುವುದನ್ನು ಆರ್‌ಸಿಎಚ್ ಅಧಿಕಾರಿ ಅನಿಲ್ ಕುಮಾರ್ ಖಚಿತ ಪಡಿಸಿದ್ದಾರೆ. ಹಸುಗೂಸುಗಳ ಸಾವಿನ ಪ್ರಮಾಣ ಕಡಿಮೆ ಮಾಡಲು ಹಲವು ಯೋಜನೆಗಳೇನೋ ಇವೆ. ಅಪೌಷ್ಟಿಕತೆ, ಕಡಿಮೆ ತೂಕ, ಪ್ರಿಮೆಚ್ಯೂರ್, ಸೋಂಕು, ಹೆರಿಗೆ ಸಂದರ್ಭದಲ್ಲಿ ತಾಯಂದಿರ ಆರೋಗ್ಯದಲ್ಲಿ ಏರುಪೇರು ಇತ್ಯಾದಿ ಕಾರಣಗಳಿಂದ ಹಸುಗೂಸುಗಳು ಮೃತಪಡುತ್ತಿವೆ. ಸೂಕ್ತ ಚಿಕಿತ್ಸೆ, ಆರೈಕೆಯಿಂದ ಶಿಶುಗಳ ಸಾವಿನ ಸಂಖ್ಯೆ ಕಡಿಮೆ ಮಾಡಲು ಇಲಾಖೆ ಇಚ್ಛಾಶಕ್ತಿ ತೋರಬೇಕಿದೆ.

**ಇತರ ಜಿಲ್ಲೆಗಳ ಸ್ಥಿತಿ:–**

- ಕಳೆದ ಏಪ್ರಿಲ್‌ನಿಂದ ಇಲ್ಲಿಯ ತನಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 187 ಹಾಗೂ ಉಡುಪಿಯಲ್ಲಿ 83 ಶಿಶುಗಳು ಸಾವನ್ನಪ್ಪಿದ್ದಾರೆ. ಅವಧಿಪೂರ್ಣ ಜನನ ಮತ್ತು ಜನ್ಮಜಾತ ನ್ಯೂನತೆಗಳಿಂದ ಸಾವು ಸಂಭವಿಸುತ್ತವೆ. ಅಪೌಷ್ಠಿಕತೆಯಿಂದ ಸಂಭವಿಸುವ ಸಾವುಗಳು ಕರಾವಳಿಯಲ್ಲಿ ಕಡಿಮೆ.
- ಕೊಪ್ಪಳ ಜಿಲ್ಲೆಯಲ್ಲಿ ಕಳೆದ ಒಂದು ವರ್ಷದಲ್ಲಿ 317 ಶಿಶುಗಳು ಮರಣವಾಗಿದೆ. ಕಡಿಮೆ ತೂಕ, ಅವಧಿ ಪೂರ್ವ ಹೆರಿಗೆ, ಅಪೌಷ್ಠಿಕತೆ, ಗರ್ಭ ಧರಿಸಿದಾಗ ಕಾಳಜಿ ವಹಿಸದಿರುವುದು, ರಕ್ತಹೀನತೆ ಸೇರಿ ಇತರ ಕಾರಣಗಳಿಂದ ಶಿಶುಮರಣ ಸಂಭವಿಸುತ್ತಿದೆ.
- ರಾಯಚೂರು ಜಿಲ್ಲೆಯಲ್ಲಿ ಕಳೆದ ಒಂದು ವರ್ಷದಲ್ಲಿ 256 ಶಿಶುಗಳ ಮರಣವಾಗಿದೆ. ಅವಧಿಪೂರ್ವ ಹೆರಿಗೆ, ರಕ್ತಹೀನತೆ ಸೇರಿ ಇತರ ಕಾರಣಗಳಿಂದ ಶಿಶುಮರಣ ಸಂಭವಿಸಿದೆ.
- ಚಿತ್ರದುರ್ಗದಲ್ಲಿ ಜನವರಿಯಿಂದ ಕಳೆದ ನವೆಂಬರ್ ಅಂತ್ಯದವರೆಗೆ 162 ನವಜಾತ ಶಿಶುಗಳ ಮರಣವಾಗಿದೆ.
- ಬಾಗಲಕೋಟೆ ಜಿಲ್ಲೆಯಲ್ಲಿ ಕಳೆದ 8 ತಿಂಗಳಿಂದ ಪ್ರತಿ ತಿಂಗಳು ಸರಾಸರಿ 7 ನವಜಾತ ಶಿಶುಗಳು ಮೃತಪಡುತ್ತಿವೆ.
- ವಿಜಯಪುರ ಜಿಲ್ಲೆಯಲ್ಲಿ ಕಳೆದ ಒಂದು ವರ್ಷದಲ್ಲಿ 226 ಶಿಶುಗಳ ಮರಣವಾಗಿದೆ. ಅವಧಿಪೂರ್ವ ಹೆರಿಗೆ, ರಕ್ತಹೀನತೆ ಸೇರಿ ಇತರ ಕಾರಣಗಳಿಂದ ಶಿಶುಮರಣ ಸಂಭವಿಸಿದೆ.
- ದಾವಣಗೆರೆ ಜಿಲ್ಲಾಸ್ಪತ್ರೆಯಲ್ಲಿ ತಿಂಗಳಿಗೆ 8 ರಿಂದ 10 ಸಾವು ಸಂಭವಿಸುತ್ತವೆ. ಕಡಿಮೆ ತೂಕ ಇರುವುದು, ಅವಧಿ ತುಂಬುವ ಮುಂಚೆ ಹೆರೆಗೆಯಾಗುವುದು, ಮಗು ಜನಿಸಿದಾಗ ಉಸಿರು ತೆಗೆದುಕೊಳ್ಳದೆ ಇರುವುದು, ನಂಜಾಗುವಿಕೆ ಇವು ಪ್ರಮುಖ ಕಾರಣಗಳು.
- ಚಿತ್ರದುರ್ಗ ಜಿಲ್ಲೆಯಲ್ಲಿ 2021 ಏಪ್ರಿಲ್‌ನಿಂದ ಕಳೆದ ನವೆಂಬರ್ ಅಂತ್ಯದವರೆಗೆ ಜಿಲ್ಲೆಯಲ್ಲಿ 162 ನವಜಾತ ಶಿಶುಗಳ ಮರಣವಾಗಿದೆ.

ಆಧಾರ: ವಿಜಯವಾಣಿ, ದಿನಾಂಕ:28.12.2021

## 99. ಪ್ರತಿ ಜಿಲ್ಲಾ ಕೇಂದ್ರದಲ್ಲಿ ಕಾರ್ಮಿಕ ಭವನ

ಪ್ರತಿ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಭವನ ನಿರ್ಮಿಸಿ ಕಾರ್ಮಿಕರಿಗೆ ಅಗತ್ಯವಾದ ಎಲ್ಲಾ ಸವಲತ್ತುಗಳನ್ನು ಒದಗಿಸಲಾಗುವುದು ಎಂದು ಮುಖ್ಯಮಂತ್ರಿಯವರು ಹೇಳಿದರು.

ಇಲ್ಲಿನ ಕೃಷ್ಣಾಪುರದಲ್ಲಿ 21 ಗುಂಟೆ ಜಾಗಯಲ್ಲಿ 7.5 ಕೋಟಿ ಮೊತ್ತದಲ್ಲಿ ರಾಜ್ಯ ಕಾರ್ಮಿಕ ಇಲಾಖೆಯು ನೂತನವಾಗಿ ನಿರ್ಮಿಸಿದ ಕಾರ್ಮಿಕ ಭವನ ಕಟ್ಟಡವನ್ನು ಉದ್ಘಾಟಿಸಿ, ಸಂಚಾರಿ ಚಿಕಿತ್ಸಾ ಘಟಕ, ಶ್ರಮಿಕ್ ಸಂಜೀವಿನಿಗೆ ಚಾಲನೆ ನೀಡಿದ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದರು.

ಸಚಿವ ಶಿವರಾಮ್ ಹೆಬ್ಬಾರ್ ಅವರ ನೇತೃತ್ವದಲ್ಲಿ ಕಾರ್ಮಿಕ ಇಲಾಖೆ ಉತ್ತಮವಾಗಿ ಕಾರ್ಯನಿರ್ವಹಿಸುತ್ತದೆ. ಹುಬ್ಬಳ್ಳಿಯಲ್ಲಿ ನಿರ್ಮಾಣಗೊಂಡಂತಾಗಿದೆ. ಮುಂದಿನ ದಿನಗಳಲ್ಲಿ ಪ್ರತಿ ಜಿಲ್ಲೆಗೆ ಒಂದರಂತೆ ಕಾರ್ಮಿಕ ಭವನ ನಿರ್ಮಾಣ ಮಾಡಲಾಗುವುದು ಎಂದರು.

ಹುಬ್ಬಳ್ಳಿಯಲ್ಲಿ ನಿರ್ಮಾಣಗೊಂಡ ಈ ಸುಸಜ್ಜಿತ ಕಟ್ಟಡದಲ್ಲಿ ಕಾರ್ಮಿಕ ಇಲಾಖೆ ಕಚೇರಿ, ಸಂಬಂಧಿಸಿದ ಇತರೆ ಕಚೇರಿಗಳು, ಕಾರ್ಮಿಕ ನ್ಯಾಯಾಲಯ ಸ್ಥಾಪಿಸಿ, ಒಂದೇ ಸೂರಿನಡಿ ಕಾರ್ಮಿಕರಿಗೆ ಎಲ್ಲಾ ಸವಲತ್ತುಗಳನ್ನು ಒದಗಿಸಲಾಗುತ್ತಿದೆ. ಇದೇ ಮಾದರಿಯಲ್ಲಿ ಬಾಕಿ ಇರುವ ಜಿಲ್ಲೆಗಳಲ್ಲಿಯೂ ಕಾರ್ಮಿಕ ಭವನ ನಿರ್ಮಿಸಲಾಗುವುದು. ಕೋವಿಡ್ ಸಂಧರ್ಭದಲ್ಲಿ ಕಾರ್ಮಿಕರ ಹಿತಾಸಕ್ತಿ ಕಾಪಾಡಿ ಎಲ್ಲಾ ರೀತಿಯ ಸವಲತ್ತು ಹಾಗೂ ನೆರವುಗಳನ್ನು ಕಾರ್ಮಿಕ ಇಲಾಖೆ ನೀಡಿದೆ ಎಂದು ಮುಖ್ಯಮಂತ್ರಿಯವರು ಶ್ಲಾಘಿಸಿದರು.

ಕಾರ್ಮಿಕ ಸಚಿವ ಅರಬೈಲು ಶಿವರಾಮ ಹೆಬ್ಬಾರ ಅವರು ಮುಖ್ಯಮಂತ್ರಿಯವರು, ಸಚಿವರುಗಳಾದ ಸಿ.ಸಿ.ಪಾಟೀಲ್, ಶಂಕರ್ ಪಾಟೀಲ ಬ ಮುನೇನ ಕೊಪ್ಪ, ಎಸ್.ಟಿ.ಸೋಮಶೇಖರ್, ಆನಂದ್ ಸಿಂಗ್ ಸತ್ಕರಿಸಿದರು.

ಕಾರ್ಮಿಕ ಇಲಾಖೆ ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಡಾ.ಜಿ.ಕಲ್ಪನಾ, ಕಾರ್ಮಿಕ ಆಯುಕ್ತ ಅಕ್ರಂ ಪಾಷ, ಜಿಲ್ಲಾಧಿಕಾರಿ ನಿತೇಶ್ ಪಾಟೀಲ್, ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಗುರುಪ್ರಸಾದ್ ಎಮ್.ಪಿ., ಡಿಸಿಪಿ ಸಾಹೀಲ್ ಬಾಂಗ್ಲಾ , ಬೆಳಗಾವಿ ಪ್ರಾದೇಶಿಕ ಉಪ ಕಾರ್ಮಿಕ ಆಯುಕ್ತ ವೆಂಕಟೇಶ್ ಶಿಂದಿಹಟ್ಟಿ, ಧಾರವಾಡ ವಿಭಾಗದ ಸಹಾಯಕ ಕಾರ್ಮಿಕ ಆಯುಕ್ತೆ ಶ್ವೇತಾ ಎಸ್. ಸೇರಿದಂತೆ ಮತ್ತಿತರರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:30.12.2021

## 100. ದೇಗುಲಗಳಿಗೆ ಸ್ವಾತಂತ್ರ

ಮತಾಂತರ ನಿಷೇಧ ಕಾಯ್ದೆ ಬೆನ್ನಲ್ಲೇ ದೇವಾಲಯಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅವಕಾಶ ಮಾಡಿಕೊಡಲು ಬಿಜೆಪಿ ಸರ್ಕಾರ ಮುಂದಾಗಿದೆ. ಈ ನಿಟ್ಟಿನಲ್ಲಿ ಬಹು ದಿನಗಳ ಬೇಡಿಕೆಯಂತೆ ದೇವಾಲಯಗಳನ್ನು ನಿಯಂತ್ರಣ ಕಾಯ್ದೆಗಳಿಂದ ಮುಕ್ತಗೊಳಿಸಿ ಸ್ವತಂತ್ರ ಗೊಳಿಸಲು ಕಾನೂನು ತರಲು ಚಿಂತನೆ ನಡೆಸಿದೆ.

ಮುಖ್ಯಮಂತ್ರಿಯವರು ಹುಬ್ಬಳ್ಳಿಯ ಬಿಜೆಪಿ ಕಾರ್ಯಕಾರಣಿ ಸಮರೋಪದಲ್ಲಿ ಈ ಕುರಿತು ಹೇಳಿಕೆ ನೀಡಿದ್ದು, ದೇಗುಲಗಳ ಸ್ವತಂತ್ರ್ಯಕ್ಕೆ ಬಜೆಟ್ ಪೂರ್ವದಲ್ಲಿಯೇ ಕಾನೂನು ತರಲಾಗುವುದು ಎಂದು ಹೇಳಿದ್ದಾರೆ.

ಇದರಿಂದಾಗಿ ರಾಜ್ಯದಲ್ಲಿರುವ ಪ್ರಮುಖ ಹಾಗೂ ಖ್ಯಾತ ದೇವಾಲಯಗಳು ಹಾಲಿ ಇರುವ ಸರ್ಕಾರದ ನಿಯಮ–ನಿಯಂತ್ರಣಗಳಿಂದ ಮುಕ್ತವಾಗಲಿದೆ. ಭಕ್ತರ ಅನುಕೂಲ ಹಾಗೂ ಒತ್ತಾಸೆಯಂತೆ ಸ್ವತಂತ್ರ್ಯವಾಗಿ ಕಾರ್ಯನಿರ್ವಹಿಸಲಿವೆ.

ದೇಗುಲಗಳ ಅಭಿವೃದ್ಧಿಗೆ ನಿಯಂತ್ರಣ ಕಾಯ್ದೆ ಅಡ್ಡಿಯಾಗುತ್ತಿರುವುದು ತಮ್ಮ ಗಮನಕ್ಕೆ ಬಂದಿದೆ. ಇತರ ಪ್ರಾರ್ಥನಾ ಮಂದಿರಗಳಿಗೆ ಇಲ್ಲದ ಕಾಯ್ದೆ ನಿಯಂತ್ರಣ ದೇವಸ್ಥಾನಗಳಿಗೆ ಮಾತ್ರ ಏಕೆ? ದೇವಸ್ಥಾನಗಳಿಗೆ ಭಕ್ತರಿಂದ ಬಂದ ಕಾಣಿಕೆಯನ್ನು ಅಲ್ಲಿನ ಅಭಿವೃದ್ಧಿಗೆ ಬಳಸಲು ಪರವಾನಗಿಗೆ ಕಾಯಬೇಕು ಎಂಬುದು ಸರಿಯಲ್ಲ ಎಂಬ ವಾದ ಇದೆ ಎಂದು ತಿಳಿಸಿದರು.

ಅನೇಕ ಹಿರಿಯರ ಅನಿಸಿಕೆಗೆ ಪೂರಕವಾಗಿ ಬಜೆಟ್ ಮಂಡನೆ ಪೂರ್ವದಲ್ಲಿಯೇ ದೇವಸ್ಥಾನಗಳನ್ನು ನಿಯಂತ್ರಣ ಕಾಯ್ದೆಯಿಂದ ಮುಕ್ತವಾಗಿಸಿ ಅದಕ್ಕೆ ಕಾನೂನು ರೂಪ ನೀಡುವ ಮೂಲಕ ಸ್ವತಂತ್ರಗೊಳಿಸಲಾಗುವುದು ಎಂದು ಹೇಳಿದರು. ರಾಜ್ಯದ ಅಂಜನಾದ್ರಿ ಬೆಟ್ಟವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಅಭಿವೃದ್ಧಿ ಪಡಿಸಲಾಗುವುದು. ಅಲ್ಲಿ ಶ್ರೀರಾಮ ಮಂದಿರ ನಿರ್ಮಾಣ ಮಾಡಬೇಕಾಗಿದೆ. ಇಡೀ ಬೆಟ್ಟವನ್ನು ಅಭಿವೃದ್ಧಿಪಡಿಸಿ ಪ್ರಧಾನಿ ನರೇಂದ್ರ ಮೋದಿ ಅವರಿಂದ ಅದನ್ನು ಉದ್ಘಾಟಿಸಲಾಗುವುದು ಎಂದು ಇದೇ ಸಂದರ್ಭದಲ್ಲಿ ತಿಳಿಸಿದರು.

ಬಜೆಟ್‌ಗಳು ತಮ್ಮ ನಿರೀಕ್ಷೆಗಳಿಗೆ ಆಶಾದಾಯವಕವಾಗಿ ಗೋಚರಿಸಿಲ್ಲ ಎಂಬ ನೋವು ಜನತೆಯದ್ದಾಗಿದೆ. ಯಾರಿಗಾಗಿ ನಾವು ಬಜೆಟ್ ಮಾಡುತ್ತೇವೆಯೋ ಅವರಲ್ಲಿ ಆಶಾಭಾವನೆ ಮೂಡಿಸುವ, ತೃಪ್ತಿ ತರುವ ನಿಟ್ಟಿನಲ್ಲಿ ಬಜೆಟ್‌ಗೆ ಹೊಸ ರೂಪ ನೀಡಲು ಯೋಜಿಸಿದ್ದೇನೆ. ಇದಕ್ಕಾಗಿ ಅಧಿಕಾರಿಗಳೊಂದಿಗೆ ಸುದೀರ್ಘವಾಗಿ ಚರ್ಚಿಸಿದ್ದೇನೆ. ಸಚಿವರು, ಶಾಸಕರೊಂದಿಗೆ ಚರ್ಚಿಸಿ ಹೊಸ ರೂಪ ನೀಡುತ್ತೇನೆ ಎಂದರು.

ಸಾಮಾಜಿಕ ನ್ಯಾಯಕ್ಕೆ ಸಕಾರಾತ್ಮ ಕತೆ ನೀಡುವ ಚಿಂತನೆ ನಡೆದಿದೆ. ಸಾಮಾಜಿಕ ಸಮಾನತೆ ಅವಕಾಶಗಳು ನೀಡಲಾಗಿದೆ. ಆಡಳಿತಾತ್ಮಕ ನ್ಯೂನತೆಗಳ ನಿವಾರಣೆಗೆ ಯತ್ನಿಸಲಾಗುವುದು. ಕಳೆದ ನಾಲ್ಕೈದು ತಿಂಗಳಿಂದ ಸರ್ಕಾರದಲ್ಲಿ ಭದ್ರ ಬುನಾದಿ ಕಾರ್ಯ ಮಾಡಿದ್ದು, ಜನವರಿಯಿಂದ ಎರಡನೇ ಆಯಾಮ ನೀಡುತ್ತೇನೆ. ಆಡಳಿತಾತ್ಮವಾಗಿ ಗಟ್ಟಿತನ ನಿಲುವು ಕೈಗೊಳ್ಳುವೆ. ಇರುವ ವ್ಯವಸ್ಥೆ ಸರಿಪಡಿಸುವ, ಭ್ರಷ್ಟಚಾರ ಇಲ್ಲದೆ ಪಾರದರ್ಶಕ ಆಡಳಿತ ನೀಡುವುದಕ್ಕೆ ಒತ್ತು ನೀಡುವೆ. ಅಭಿವೃದ್ಧಿ ರಾಜ್ಯದ ಹಿತ ವಿಚಾರದಲ್ಲಿ ಯಾವುದೇ ರಾಜಿಗೆ ಸಿದ್ದನಿಲ್ಲ. ಇದನ್ನು ನಾನು ಅತ್ಯಂತ ಜವಾಬ್ದಾರಿಯುತವಾಗಿ ಹೇಳುತ್ತಿದ್ದೇನೆ ಎಂದು ತಿಳಿಸಿದರು.

**ಪ್ರತಿಷ್ಠೆ ಸ್ವ ಹಿತಾಸಕ್ತಿ ಇಲ್ಲ:** ಮುಖ್ಯಮಂತ್ರಿಯವರು ಯಾವುದೇ ಪ್ರತಿಷ್ಠೆ ಸ್ವಹಿತಾಸಕ್ತಿ ಎಂಬುದಿಲ್ಲ ನನಗೇನಿದ್ದರೂ, ಪಕ್ಷ ಹಾಗೂ ಪ್ರಧಾನಿ ನರೇಂದ್ರ ಮೋದಿಯವರ ಪ್ರತಿಷ್ಠೆ ರಾಜ್ಯದ ಜನರ ಹಾಗೂ ಪಕ್ಷದ ಕಾರ್ಯಕರ್ತರ ಹಿತ ಮುಖ್ಯವಾಗಿದೆ ಎಂದು ಹೇಳಿದ ಬಸವರಾಜ್ ಬೊಮ್ಮಾಯಿ, ಎಲ್ಲರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು ಹಿರಿಯರ ಮಾರ್ಗದರ್ಶನದಲ್ಲಿ 2023ರಲ್ಲಿ ಪಕ್ಷವನ್ನು ಅಧಿಕಾರಕ್ಕೆ ತರುವ ಗುರಿ ನನ್ನ ಮುಂದಿದೆ. ಇದಕ್ಕಾಗಿ ನೀಲನಕ್ಷೆ ಸಿದ್ಧಪಡಿಸಿ, ಬಜೆಟ್‌ಗೆ ಹೊಸರೂಪ ನೀಡುವ ಮೂಲಕ ರಾಜ್ಯದಲ್ಲಿ ಮತ್ತೆ ಕಮಲ ಅರಳುವಂತೆ ಮಾಡುವ ಸಂಕಲ್ಪ ಮಾಡಿದ್ದೇನೆ ಎಂದು ಹೇಳಿದರು. ಹಿರಿಯರಾದ ಯಡಿಯೂರಪ್ಪ ಜಗದೀಶ ಶೆಟ್ಟರ್, ಸದಾನಂದಗೌಡ ಅವರ ಮಾರ್ಗದರ್ಶನದಲ್ಲಿ ಸಂಪುಟ ಸಹೋದ್ಯೋಗಿಗಳು, ಶಾಸಕರ ಸಹಕಾರ, ಅಭಿವೃದ್ಧಿಯ ರಿಪೋರ್ಟ್ ಕಾರ್ಡ್‌ನೊಂದಿಗೆ 2023ರ ಚುನಾವಣೆಗೆ ಹೋಗುತ್ತೇನೆ ಎಂದು ಘೋಷಿಸಿದರು.

ಆಧಾರ: ಉದಯವಾಣಿ, ದಿನಾಂಕ:30.12.2021.

## 101. ಆಡಳಿತ ಚುರುಕು: ಸಿಎಂ ತಾಕೀತು

ಅಧಿಕಾರ ವಿಕೇಂದ್ರೀಕರಣದ ಮೂಲಕ ನಿಮಗೆ ಹೆಚ್ಚಿನ ಅಧಿಕಾರ ನೀಡಲಾಗಿದೆ. ನಿಮ್ಮ ವಿವೇಚನಾಧಿಕಾರವನ್ನು ಜನರ ಹಿತಕ್ಕಾಗಿ ಬಳಕೆ ಮಾಡಿ. ಸರ್ಕಾರದ ಯೋಜನೆಗಳ ಅನುಷ್ಠಾನದಲ್ಲಿನ ವಿಳಂಬ ಧೋರಣೆಗೆ ದುಬಾರಿ ಬೆಲೆ ತೆರಬೇಕಾಗುತ್ತದೆ' ಎಂದು ಮುಖ್ಯಮಂತ್ರಿಯವರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಿಗೆ ಚಾಟಿ ಬೀಸಿದ್ದಾರೆ.

ರಾಜ್ಯದ ಎಲ್ಲ ಜಿಲ್ಲಾ ಪಂಚಾಯ್ತಿಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯಲ್ಲಿ ರಾಜ್ಯದ ಸಮಸ್ಯೆಗಳ ಕುರಿತು ಚರ್ಚಿಸಿದ ಮುಖ್ಯಮಂತ್ರಿಗಳು ಆಡಳಿತಕ್ಕೆ ಚುರುಕು ಮುಟ್ಟಿಸಿದರು. ಜಲ ಜೀವನ ಮಿಷನ್, ಬೆಲೆ ಪರಿಹಾರ, ನೆರೆ ಪರಿಹಾರ ಸೇರಿ ಹಲವು ಜನಪರ ಯೋಜನೆಗಳಡಿ ಪ್ರಗತಿ ಸಾಧಿಸದ ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡರು.

**ವಾರದಲ್ಲಿ 3 ದಿನ ಹಳ್ಳಿಗಳಿಗೆ ಭೇಟಿ ನೀಡಿ:** ಬಡವರ ಅನುಕೂಲಕ್ಕಾಗಿ ಸರ್ಕಾರದ ಪೂರ್ತಿ ಬೆಂಬಲ ಇರುತ್ತದೆ. ಅಧಿಕಾರಿಗಳು ಸ್ಪಷ್ಟ ನಿರ್ಣಯ ತೆಗೆದುಕೊಳ್ಳಬೇಕು. ತಳಹಂತದ ಅಧಿಕಾರಿ, ಸಿಬ್ಬಂದಿ ಮೇಲೆ ಹತೋಟಿ ಇಟ್ಟುಕೊಳ್ಳಿ, ಕಾಲಕಾಲಕ್ಕೆ ಪ್ರಗತಿ ಪರಿಶೀಲನೆ ಮಾಡಿ. ಸಮರ್ಪಕವಾಗಿ ಕೆಲಸ ನಿರ್ವಹಿಸದ ಅಧಿಕಾರಿಗಳ ಮೇಲೆ ಮುಲಾಜಿಲ್ಲದೆ ಕ್ರಮ ಕೈಗೊಳ್ಳಲಾಗುವುದು ಎಂದು ಎಚ್ಚರಿಸಿದರು. ಜನಪ್ರತಿನಿಧಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಅವರ ನೆರವು ಪಡೆದು ಕಾರ್ಯ ನಿರ್ವಹಿಸಬೇಕು ಎಂದು ಸಲಹೆ ನೀಡಿದರು.

**ನಿಗದಿತ ಸಮಯದಲ್ಲಿ ಯೋಜನೆ ಪೂರ್ಣ:** ಹಳ್ಳಿಗಳ ದಿಢೀರ್ ಭೇಟಿ ನೀಡಿ ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ನಡೆಸಬೇಕು. ಗ್ರಾಮೀಣ ಜನರ ಬದುಕು ಹಸನು ಮಾಡುವ ಜವಾಬ್ದಾರಿ ಅಧಿಕಾರಿಗಳ ಮೇಲಿದೆ. ಜಿಲ್ಲೆಗಳಲ್ಲಿ ಹಲವು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಅಭಿನಂದನೀಯ. ಜಲಜೀವನ ಮಿಷನ್, ವಸತಿ ಶಾಲೆಗಳ ದುರಸ್ತಿ ಸೇರಿ ನಿಗದಿಪಡಿಸಿರುವ ಗುರಿಯನ್ನು ನಿಗದಿಪಡಿಸಿದ ಸಮಯದೊಳಗೆ ಪೂರ್ಣಗೊಳಿಸಬೇಕು. ನರೇಗಾ ಯೋಜನೆಯಡಿ ಕ್ರಿಯಾತ್ಮಕವಾಗಿ ಕಾರ್ಯಕ್ರಮಗಳನ್ನು ರೂಪಿಸಬೇಕು ಎಂದು ತಿಳಿಸಿದರು.

**ಜಿಲ್ಲಾ ಪಂಚಾಯಿತಿಗಳಿಗೆ ರ್‍ಯಾಂಕ್:** ಮುಂದಿನ ದಿನದಲ್ಲಿ ಜಿಲ್ಲಾಪಂಚಾಯಿತಿ ಮತ್ತು ಸಿಇಓಗಳ ಕಾರ್ಯನಿರ್ವಹಣೆಗೆ ಜಿಲ್ಲವಾರು ಶ್ರೇಯಂಕ್ ನೀಡಲಾಗುವುದು ಎಂದು ಇದೇ ವೇಳೆ ಮುಖ್ಯಮಂತ್ರಿ ಬೊಮ್ಮಾಯಿ ತಿಳಿಸಿದರು. ಜನೋಪಯೋಗಿ ಸರ್ಕಾರ ಆಗಬೇಕಾದರೆ ಜಿಲ್ಲಾ ಪಂಚಾಯಿತಿಗಳು ಅತ್ಯುತ್ತಮ ಕಾರ್ಯಶೈಲಿಯಿಂದ ನಿಮ್ಮದೇ ಛಾಪನ್ನು ಮುಡಿಸಬೇಕು. ತಳಹಂತದಲ್ಲಿ ಯೋಜನೆಗಳ ಅನುಷ್ಠಾನ ಅತಿ ಮುಖ್ಯವಾದುದು ಎಂದರು.

**ದುಡಿಯುವವರಿಗೆ ತರಬೇತಿ ನೀಡಿ:** ಸ್ತ್ರೀ ಶಕ್ತಿ ಮಾನವ ಸಂಪನ್ಮೂಲದ ದೊಡ್ಡ ಆಸ್ತಿ. ಎಸ್‌ಸಿ/ಎಸ್‌ಟಿ, ಒಬಿಸಿ ಮಹಿಳೆಯರನ್ನು ಆರ್ಥಿಕವಾಗಿ ಸಬಲರಾಗಿಸಬೇಕು. ಕರ್ನಾಟಕ ರಾಜ್ಯ ತಲಾವಾರು ಆದಾಯದಲ್ಲಿ 4ನೇ ಸ್ಥಾನದಲ್ಲಿದೆ. ತಲಾವಾರು ಆದಾಯಕ್ಕೆ ಕೇವಲ ಶೇ.30 ರಷ್ಟು ಜನ ಮಾತ್ರ ಕೊಡುಗೆ ನೀಡುತ್ತಿದ್ದಾರೆ. ಉಳಿದ ಶೇ.70ರಷ್ಟು ಜನ ದಿನನಿತ್ಯದ ಬದುಕಿಗೆ ದುಡಿಯುವುದಾಗಿದೆ. ಈ ವರ್ಗದವರಿಗೆ ಆರ್ಥಿಕ ನೆರವು, ತರಬೇತಿ ನೀಡಿದರೆ ಅವರ ಜೀವನ ಮಟ್ಟ ಸುಧಾರಿಸುತ್ತದೆ. ಕೃಷಿಯಲ್ಲಿ ಶೇ.1 ರಷ್ಟು ಅಭಿವೃದ್ಧಿಯಾದರೆ, ಕೈಗಾರಿಕೆಗಳಲ್ಲಿ ಶೇ.4ರಷ್ಟು ಮತ್ತು ಸೇವಾ ಕ್ಷೇತ್ರದಲ್ಲಿ ಶೇ.10ರಷ್ಟು ಅಭಿವೃದ್ಧಿಯಾಗುತ್ತದೆ. ಸಿಇಓಗಳು ತಮ್ಮ ಜಿಲ್ಲಾ ವ್ಯಾಪ್ತಿಯಲ್ಲಿ ಕನಿಷ್ಠ ಶೇ.1 ರಷ್ಟಾದರೂ ಕೃಷಿ ಕ್ಷೇತ್ರವನ್ನು ಅಭಿವೃದ್ಧಿ ಪಡಿಸಿದರೆ, ಗ್ರಾಮೀಣ ಜನರ ಜೀವನದಲ್ಲಿ ಬದಲಾವಣೆ ತಂದಂತಾಗುತ್ತದೆ. ಜನರಿಗೆ ಇದರಿಂದ ವ್ಯವಸ್ಥೆಯ ಮೇಲೆ ವಿಶ್ವಾಸ ಮೂಡಿಸಲು ಸಾಧ್ಯ ಎಂದು ಅಭಿಪ್ರಾಯಪಟ್ಟರು.

ಸಭೆಯಲ್ಲಿ ಗ್ರಾಮೀಣಾಭಿವೃದ್ಧಿ ಸಚಿವ ಕೆ.ಎಸ್.ಈಶ್ವರಪ್ಪ, ವಸತಿ ಸಚಿವ ವಿ.ಸೋಮಣ್ಣ, ಲೋಕೋಪಯೋಗಿ ಸಚಿವ ಸಿ.ಸಿ.ಪಾಟೀಲ್, ಅಬಕಾರಿ ಸಚಿವ ಗೋಪಲಯ್ಯ, ಮುಖ್ಯಕಾರ್ಯದರ್ಶಿ ಪಿ. ರವಿಕುಮಾರ್ ಇತರರು ಉಪಸ್ಥಿತರಿದ್ದರು.

ಆಧಾರ: ಕನ್ನಡಪ್ರಭ, ದಿನಾಂಕ:31.12.2021.

## 102. ರಾಜ್ಯದಲ್ಲಿ ಕೋವಿಡ್ ಮತ್ತಷ್ಟು ಹೆಚ್ಚಳ

ರಾಜ್ಯದಲ್ಲಿ ಕೋವಿಡ್ ಹೊಸ ಪ್ರಕರಣಗಳ ಸಂಖ್ಯೆ ಮತ್ತಷ್ಟು ಹೆಚ್ಚಳವಾಗಿದ್ದು, 707 ಮಂದಿ ಕೊರೋನಾ ಸೋಂಕಿತರಾಗಿರುವುದು ದೃಢಪಟ್ಟಿದೆ.

ಮೂರುವರೆ ತಿಂಗಳಲ್ಲಿ ವರದಿಯಾದ ಗರಿಷ್ಠ ಪ್ರಕರಣಗಳು ಇವಾಗಿವೆ. ರಾಜ್ಯದ 29 ಜಿಲ್ಲೆಗಳಿಂದ 142 ಮಂದಿ ಕೋವಿಡ್ ಪೀಡಿತರಾದರೇ, ಬೆಂಗಳೂರಿನಲ್ಲಿ 565 ಮಂದಿ ಸೋಂಕಿತರಾಗಿದ್ದಾರೆ.

ರಾಜ್ಯದ 23 ಜಿಲ್ಲೆಗಳಲ್ಲಿ ಕೋವಿಡ್ ಪ್ರಕರಣಗಳು ಹೊಸದಾಗಿ ಪತ್ತೆಯಾಗಿವೆ. ಕೋವಿಡ್ ಪರೀಕ್ಷೆಗಳ ಸಂಖ್ಯೆಯೂ ಏರಿಕೆ ಕಂಡಿದ್ದು, ಒಂದು ದಿನದ ಅವಧಿಯಲ್ಲಿ 1.14 ಲಕ್ಷ ಮಾದರಿಗಳನ್ನು ಪರೀಕ್ಷೆ ಮಾಡಲಾಗಿದೆ. ಸೋಂಕು ದೃಢ ಪ್ರಮಾಣ ಶೇ.0.61ರಷ್ಟಿದೆ. ಐದು ಜಿಲ್ಲೆಗಳಲ್ಲಿ ಹೊಸ ಪ್ರಕರಣಗಳ ಸಂಖ್ಯೆ ಎರಡಂಕಿ, 16 ಜಿಲ್ಲೆಗಳಲ್ಲಿ ಒಂದಂಕಿಯಲ್ಲಿದೆ. ಬಾಗಲಕೋಟೆ, ಚಿಕ್ಕಬಳ್ಳಾಪುರ ಸೇರಿದಂತೆ 8 ಜಿಲ್ಲೆಗಳಲ್ಲಿ ಹೊಸದಾಗಿ ಪ್ರಕರಣಗಳು ವರದಿಯಾಗಿಲ್ಲ.

ಉಡುಪಿಯಲ್ಲಿ 19, ಹಾಸನದಲ್ಲಿ 17, ಮೈಸೂರಿನಲ್ಲಿ 16, ಕೊಡಗಿನಲ್ಲಿ 12, ಹಾಗೂ ದಕ್ಷಿಣ ಕನ್ನಡದಲ್ಲಿ 11 ಪ್ರಕರಣಗಳು ವರದಿಯಾಗಿವೆ. ಉಳಿದ ಜಿಲ್ಲೆಗಳಲ್ಲಿ ಹೊಸ ಪ್ರಕರಣಗಳು 10ಕ್ಕಿಂತ ಕಡಿಮೆ ಇವೆ. ಈವರೆಗೆ ವರದಿಯಾದ ಒಟ್ಟು ಪ್ರಕರಣಗಳ ಸಂಖ್ಯೆ 30.06 ಲಕ್ಷ ದಾಟಿದೆ.

ಸೋಂಕಿತರಲ್ಲಿ 252 ಮಂದಿ ಚೇತರಿಸಿಕೊಂಡಿದ್ದಾರೆ. ಗುಣಮುಖರಾದವರ ಒಟ್ಟು ಸಂಖ್ಯೆ 29.59 ಲಕ್ಷ ದಾಟಿದೆ. ಸಕ್ರಿಯ ಪ್ರಕರಣಗಳ ಸಂಖ್ಯೆ 8 ಸಾವಿರದ ಗಡಿ(8,223) ದಾಟಿದೆ. ಬೆಂಗಳೂರಿನಲ್ಲಿ 6,846 ಸೋಂಕಿತರಿದ್ದಾರೆ. ಹಾವೇರಿ ಹಾಗೂ ಗದಗ ಜಿಲ್ಲೆಯಲ್ಲಿ ಸಕ್ರಿಯ ಪ್ರಕರಣಗಳಿಲ್ಲ. ಬೀದರ್, ಬಾಗಲಕೋಟೆ ಸೇರಿದಂತೆ ಆರು ಜಿಲ್ಲೆಗಳಲ್ಲಿ ಸಕ್ರಿಯ ಪ್ರಕರಣಗಳ ಸಂಖ್ಯೆ 10 ಕ್ಕಿಂತ ಕಡಿಮೆಯಿದೆ.

ಕೋವಿಡ್ ಪೀಡಿತರಲ್ಲಿ ಬೆಂಗಳೂರಿನಲ್ಲಿ ಮೂವರು ಮೃತಪಟ್ಟಿದ್ದಾರೆ. ರಾಜ್ಯದಲ್ಲಿ ಮರಣ ಪ್ರಮಾಣ ದರವು ಶೇ.0.42 ರಷ್ಟು ಇದೆ. ಈವರೆಗೆ ಕೋವಿಡ್‌ಗೆ ಸಾವಿಗೀಡದವರ ಒಟ್ಟು ಸಂಖ್ಯೆ 38,327ಕ್ಕೆ ಏರಿಕೆಯಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ:31.12.2021.

## 103. ಕೇಂದ್ರದಿಂದ ರಾಜ್ಯಕ್ಕೆ 504 ಕೋಟಿ ಹೆಚ್ಚುವರಿ ನೆರೆ ಪರಿಹಾರ ಬಿಡುಗಡೆ

ಕೇಂದ್ರ ಸರ್ಕಾರ ಕರ್ನಾಟಕಕ್ಕೆ ರೂ.504 ಕೋಟಿ ಸೇರಿ 6 ರಾಜ್ಯಗಳಿಗೆ ರೂ.3,063.21 ಕೋಟಿ ಹೆಚ್ಚುವರಿ ನೆರೆ ಪರಿಹಾರ ಬಿಡುಗಡೆ ಮಾಡಿದೆ. 2021ರಲ್ಲಿ ಪ್ರವಾಹ, ಚಂಡಮಾರುತ ಸೇರಿ ಇತರೆ ನೈಸರ್ಗಿಕ ವಿಕೋಪಗಳಿಗೆ ತುತ್ತಾದ ರಾಜ್ಯಗಳಿಗೆ ಈ ಹಣವನ್ನು ಗೃಹ ಸಚಿವ ಅಮಿತ ಶಾ ನೇತೃತ್ವದ ಉನ್ನತ ಮಟ್ಟದ ಸಮಿತಿಯು ರಾಷ್ಟ್ರೀಯ ವಿಪತ್ತು ನಿರ್ವಹಣಾ ನಿಧಿ(ಎನ್‌ಡಿಆರ್‌ಎಫ)ಯಿಂದ ಬಿಡುಗಡೆಗೆ ಅನುಮೋದಿಸಿದೆ. ಗುಜರಾತ್‌ಗೆ 1,133.35 ಕೋಟಿ, ಪಶ್ಚಿಮ ಬಂಗಾಳಕ್ಕೆ ರೂ.586.59 ಕೋಟಿ, ಕರ್ನಾಟಕಕ್ಕೆ ರೂ.504 ಕೋಟಿ ಹಾಗೂ ಅಸ್ಸಾಂ ರೂ.51.53 ಕೋಟಿ ಬಿಡುಗಡೆಯಾಗಿದೆ.

ಉಳಿದಂತೆ ಮಧ್ಯಪ್ರದೇಶಕ್ಕೆ ರೂ.600.50 ಕೋಟಿ ಹಾಗೂ ಉತ್ತರಾಖಂಡ್‌ಗೆ 187.18 ಕೋಟಿ ಹೆಚ್ಚುವರಿ ಪರಿಹಾರ ಬಿಡುಗಡೆ ಮಾಡಲಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ:31.12.2021.

# ಭಾಗ – 5

# ರಾಜ್ಯ ನೆಲ, ಜಲ, ಭಾಷೆ ಸುದ್ದಿಗಳು

## 1. ರಾಜ್ಯದ 7 ಜಿಲ್ಲೆಗಳಲ್ಲಿ ಭಾರಿ ಮಳೆ: 1 ಸಾವು, ಬೆಳೆ ನಾಶ

ಕಲಬುರಗಿ, ಮಂಡ್ಯ, ಬಾಗಲಕೋಟೆ, ಚಿಕ್ಕಬಳ್ಳಾಪುರ ಸೇರಿದಂತೆ ರಾಜ್ಯದ 7 ಜಿಲ್ಲೆಗಳಲ್ಲಿ ಭಾರೀ ಮಳೆಯಾಗಿದೆ. ಕಲಬುರಗಿಯಲ್ಲಿ ಮಳೆಯಬ್ಬರಕ್ಕೆ ನಗರದ ಪ್ರದೇಶದ ತಗ್ಗುಪ್ರದೇಶಗಳಿಗೆ ನೀರು ನುಗ್ಗಿ ಜನಜೀವನ ಅಸ್ತವ್ಯಸ್ತಗೊಂಡಿದೆ. ಮಳೆ ಸಂಬಂಧಿ ಕಾರಣಕ್ಕೆ ವ್ಯಕ್ತಿಯೊಬ್ಬರು ಮೃತಪಟ್ಟಿರುವ ಘಟನೆ ರಾಜಧಾನಿ ಬೆಂಗಳೂರಿನಿಂದ ವರದಿಯಾಗಿದೆ. ಈ ಮಧ್ಯೆ ತುಂಗಭದ್ರಾ ಡ್ಯಾಂನಿಂದ 45 ಸಾವಿರ ಕ್ಯೂಸಿಕ್ಸ್ ನೀರು ಹೊರಬಿಟ್ಟಿರುವ ಕಾರಣ ಹಂಪಿಯ ಕೆಲವು ಸ್ಮಾರಕಗಳು ಜಲಾವೃತವಾಗಿವೆ.

ರಾಜ್ಯ ರಾಜಧಾನಿಯಲ್ಲಿ ಕಳೆದ 3 ದಿನಗಳಿಂದ ನಿರಂತರ ಮಳೆಯಾಗುತ್ತಿದ್ದು, ಕೆಲವೆಡೆ ತಗ್ಗು ಪ್ರದೇಶಗಳಲ್ಲಿ ನೀರು ನುಗ್ಗಿ ಅವಾಂತರವಾಗಿದೆ. ನಗರದ ನೈಸ್ ರೋಡ್ ಸಮೀಪದ ಮಾಗಡಿ ರಸ್ತೆಯ ಬದಿಯಲ್ಲಿ ಬೈಕ್ ನಿಲ್ಲಿಸಿ ಮರದಡಿ ನಿಂತಿದ್ದ ತಿಪ್ಪೇಸ್ವಾಮಿ ಎಂಬುವರು ಸಿಡಿಲು ಬಡಿದು ಮೃತಪಟ್ಟಿದ್ದಾರೆ. ಅವರ ಪುತ್ರ ಗಂಭೀರ ಗಾಯಗೊಂಡಿದ್ದು ಆಸ್ಪತ್ರೆಗೆ ದಾಖಲಾಗಿದ್ದಾನೆ. ಕಳೆದ ಕೆಲ ದಿನಗಳಿಂದ ಉತ್ತಮ ಮಳೆ ಕಾಣುತ್ತಿರುವ ಕಲಬುರಗಿಯಲ್ಲಿ ಮಧ್ಯಾಹ್ನವೂ 2 ಗಂಟೆಗಳ ಕಾಲ ಸಿಡಿಲಬ್ಬರದೊಂದಿಗೆ ಬಿರುಸಿನ ಮಳೆಯಾಗಿದ್ದು, ಇದರಿಂದ ನಗರದ ಮುಖ್ಯ ರಸ್ತೆಗಳಲ್ಲಿ 2 ಅಡಿಗೂ ಅಧಿಕ ನೀರು ನಿಂತು ವಾಹನ ಸವಾರರು ಪರದಾಡಬೇಕಾಯಿತು. ಲಾಲ್‌ಗೇರ್ ಕ್ರಾಸ್ ಸೇರಿ ಹಲವು ಕಡೆ ತಗ್ಗುಪ್ರದೇಶಗಳಲ್ಲಿರುವ ಅಂಗಡಿ, ಮನೆಗಳಿಗೆ ನೀರು ನುಗ್ಗಿ ಜನಜೀವನ ಅಸ್ತವ್ಯಸ್ತಗೊಂಡಿತು. ಚಿಂಚೋಳಿಯಲ್ಲಿ ಮುಲ್ಲಾಮಾರಿ ನದಿ ಉಕ್ಕಿ ಹರಿಯುತ್ತಿದೆ.

**ಹಳ್ಳದಲ್ಲಿ ಸಿಲುಕಿದ ಬಸ್**: ಬಾಗಲಕೋಟೆಯಲ್ಲಿ ತಡರಾತ್ರಿ ಸುರಿದ ಮಳೆಯ ಪರಿಣಾಮ ಹುನಗುಂದ ತಾಲ್ಲೂಕಿನ ಬೇಕಮಲದಿನ್ನಿ ಹಳ್ಳದಲ್ಲಿ ಬಸ್‌ವೊಂದು ಸಿಲುಕಿದ ಘಟನೆ ನಡೆದಿದೆ. ಭಾರೀ ಮಳೆಯಿಂದಾಗಿ ಹಲವೆಡೆ ರಸ್ತೆ ಸಂಪರ್ಕ ಕಡಿತವಾಗಿದ್ದರೆ, ಹುನಗುಂದ ಕರಡಿ ರಸ್ತೆ ಮಾರ್ಗದಲ್ಲಂತೂ ಸಂಚಾರ ಸಂಪೂರ್ಣ ಅಸ್ತವ್ಯಸ್ತವಾಗಿತ್ತು. ಜೊತೆಗೆ ಇದೇ ಮಾರ್ಗದ ಬೇಕಮದಿನ್ನಿ ಹಳ್ಳದಲ್ಲಿ ಸಿಕ್ಕಿಹಾಕಿಕೊಂಡ ಬಸ್ ಅನ್ನು ಟ್ರ್ಯಾಕ್ಟರ್ ಸಹಾಯ ಪಡೆದು ಹೊರಗೆಳೆಯಲಾಯಿತು.

ಮಂಡ್ಯ ಜಿಲ್ಲೆಯಲ್ಲೂ ಉತ್ತಮ ಮಳೆಯಾಗಿದ್ದು ಹಲವೆಡೆ ತಗ್ಗುಪ್ರದೇಶಗಳಿಗೆ ನೀರು ನುಗ್ಗಿದೆ. ಮಂಡ್ಯ, ಭಾರತೀನಗರ, ಮದ್ದೂರು, ನಾಗಮಂಗಲ ತಾಲ್ಲೂಕಿನಲ್ಲಿ ಕೆಲಗಂಟೆಗಳ ಕಾಲ ಭರ್ಜರಿ ಮಳೆಯಾಗಿದ್ದರೆ, ಶ್ರೀರಂಗಪಟ್ಟಣದಲ್ಲಿ ಸಾಧಾರಣ ಮಳೆಯಾಗಿದೆ. ಭಾರತೀನಗರದಲ್ಲಿ ಹನುಮಂತನಗರ ಸಮೀಪವಿರುವ ಹೆಬ್ಬಾಳ ಚನ್ನಯ್ಯನಾಲೆ ಸೇತುವೆ ಸಂಪೂರ್ಣ ಮುಳುಗಡೆಯಾಗಿದ್ದು ವಾಹನ ಸಂಚಾರ ಅಸ್ತವ್ಯಸ್ತವಾಗಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:11.10.2021

## 2. ಕನ್ನಡದಲ್ಲಿ ಪರಿಸರ ಕರಡು ಅಧಿಸೂಚನೆ

ಕೇಂದ್ರ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಸಚಿವಾಲಯ ಕೊನೆಗೂ ವಿವಾದಿತ ಪರಿಸರದ ಮೇಲಿನ ಪರಿಣಾಮ ವಿಶ್ಲೇಷಣೆ (ಇಐಎ) ಕರಡು ಅಧಿಸೂಚನೆಯನ್ನು ಕನ್ನಡದಲ್ಲಿ ಪ್ರಕಟಿಸಿದೆ.

ಸುಪ್ರೀಂಕೋರ್ಟ್ ಸೂಚಿಸಿದ ಹಿನ್ನೆಲೆಯಲ್ಲಿ ಈ ಕರಡು ಅಧಿಸೂಚನೆಯನ್ನು ಕನ್ನಡ ಸೇರಿದಂತೆ 22 ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಿಸಲಾಗಿದ್ದು, ಸಚಿವಾಲಯದ ವೆಬ್‌ನಲ್ಲಿ ಇದೀಗ ಲಭ್ಯವಿದೆ.

2020ರಲ್ಲಿ ಈ ಕರಡು ಅಧಿಸೂಚನೆಯನ್ನು ಇಂಗ್ಲೀಷ್ ಮತ್ತು ಹಿಂದಿಯಲ್ಲಿ ಪ್ರಕಟಿಸಿದ್ದ ಸಚಿವಾಲಯ, ಆಕ್ಷೇಪಣೆ ಸಲ್ಲಿಸಲು ಅವಕಾಶ ನೀಡಿತ್ತು. ಆದರೆ ಈ ಕರಡು ಅಧಿಸೂಚನೆಯನ್ನು ಪ್ರಾದೇಶಿಕ ಭಾಷೆಯಲ್ಲಿಯೂ ಒದಗಿಸಬೇಕೆಂದು ಪರಿಸರವಾದಿಗಳು ಪಟ್ಟು ಹಿಡಿದಿದ್ದು ದೆಹಲಿ ಹೈಕೋರ್ಟ್ ಮೆಟ್ಟಿಲೇರಿದ್ದರು.

ಆದರೆ ಕೇಂದ್ರ ಇದಕ್ಕೆ ಒಪ್ಪಿರಲಿಲ್ಲ. ಈಗಾಗಲೇ ಇದಕ್ಕೆ ಲಕ್ಷಾಂತರ ಮಂದಿ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಅಲ್ಲದೆ 22 ಭಾಷೆಗಳಿಗೆ ಅನುವಾದ ಮಾಡುವುದರಿಂದ ಸಾಕಷ್ಟು ಆಡಳಿತಾತ್ಮಕ ಸಮಸ್ಯೆಗಳು ಸೃಷ್ಟಿಯಾಗುತ್ತವೆ. ಜೊತೆಗೆ ಸರ್ಕಾರದ ಬಳಿ ಈ ಎಲ್ಲ ಭಾಷೆಗಳಿಗೆ ಅನುವಾದ ಮಾಡುವ ಸೌಲಭ್ಯವೂ ಇಲ್ಲ ಎಂದು ವಾದಿಸಿತ್ತು.

ಕೇಂದ್ರದ ವಾದವನ್ನು ತಳ್ಳಿಹಾಕಿದ್ದ ಹೈಕೋರ್ಟ್ ಪ್ರಾದೇಶಿಕ ಭಾಷೆಯಲ್ಲಿ ಕರಡು ಅಧಿಸೂಚನೆ ಪ್ರಕಟಿಸಿ ಆಕ್ಷೇಪಣೆ ವ್ಯಕ್ತಪಡಿಸಲು ಎಲ್ಲರಿಗೂ ಅವಕಾಶ ಮಾಡಿಕೊಡಬೇಕೆಂದು ಕಳೆದ ಜನವರಿಯಲ್ಲಿಯೇ ತೀರ್ಪು ನೀಡಿತ್ತು.

ಈ ತೀರ್ಪಿನ ವಿರುದ್ಧ ಮತ್ತೆ ಕೇಂದ್ರ ಸುಪ್ರೀಂಕೋರ್ಟ್ ಮೆಟ್ಟಿಲೇರಿತ್ತು. ಸುಪ್ರಿಂಕೋರ್ಟ್ ಕೂಡ ಕೇಂದ್ರದ ನಿಲುವನ್ನು ಒಪ್ಪದೆ, ಪ್ರಾದೇಶಿಕ ಭಾಷೆಗಳಲ್ಲಿಯೂ ಕರಡು ಅಧಿಸೂಚನೆ ಪ್ರಕಟಿಸುವಂತೆ ಮತ್ತು ದೆಹಲಿ ಹೈಕೋರ್ಟ್‌ನ ತೀರ್ಪಿನ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಹಿಂದಕ್ಕೆ ಪಡೆಯುವಂತೆ ಕಳೆದ ಆಗಸ್ಟ್‌ನಲ್ಲಿ ಕೇಂದ್ರಕ್ಕೆ ಸೂಚಿಸಿತ್ತು. ರಾಜ್ಯ ಹೈಕೋರ್ಟ್ ಕೂಡ ಕೇಂದ್ರಕ್ಕೆ ಈ ಸಂಬಂಧ ಸೂಚನೆ ನೀಡಿತ್ತು.

ಕೊನೆಗೂ ಸೋತ ಕೇಂದ್ರ ಸರ್ಕಾರ ಕಳೆದ ಸೆಪ್ಟೆಂಬರ್ 22 ರಂದು ಮದ್ರಾಸ್ ಹೈಕೋರ್ಟ್‌ನಲ್ಲಿನ ಈ ಪ್ರಕರಣವೊಂದರ ವಿಚಾರಣೆ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯಲ್ಲಿ ಕರಡು ಅಧಿಸೂಚನೆಯನ್ನು ಸದ್ಯದಲ್ಲಿಯೇ ಪ್ರಕಟಿಸಲಾಗುವುದು ಎಂದು ತಿಳಿಸಿತ್ತು. ಅದರಂತೆ ಈಗ ಕನ್ನಡ ಸೇರಿದಂತೆ 22 ಪ್ರಾದೇಶಿಕ ಭಾಷೆಯಲ್ಲಿ ಕರಡು ಅಧಿಸೂಚನೆ ಪ್ರಕಟಗೊಂಡಿದೆ. ಆಕ್ಷೇಪಣೆ ಸಲ್ಲಿಸಲು 2 ತಿಂಗಳ ಕಾಲಾವಕಾಶ ನೀಡಲಾಗಿದೆ.

ಆಧಾರ:ವಿಜಯಕರ್ನಾಟಕ, ದಿನಾಂಕ:16.10.2021

## 3. ಕರ್ನಾಟಕದ 12 ದ್ವೀಪ ವಶಕ್ಕೆ ಗೋವಾ ಪತ್ರ

ಕರ್ನಾಟಕದ ಹನ್ನೆರಡು ದ್ವೀಪಗಳನ್ನು ಪಡೆಯಲು ಗೋವಾ ಸರ್ಕಾರ ಕೇಂದ್ರ ಸರ್ಕಾರಕ್ಕೆ ಮನವಿ ಮಾಡಿದೆ. ಈ ಹಿನ್ನೆಲೆಯಲ್ಲಿ ಸರ್ವೇ ನಡೆಸಲು ಕರ್ನಾಟಕ ಸರ್ಕಾರ ಉತ್ತರ ಕನ್ನಡದ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ ಎನ್ನಲಾಗಿದೆ.

ಕಾರವಾರ ಸಮೀಪವಿರುವ ಅಂಜಿವಾಡಾ, ಕೊರ್ಮಗಡ, ದೇವಗಡ, ಗುಂಜಿ, ಜನಿಗುಡ್ಡ, ಮದಲಿಗುಡ್ಡ ಸೇರಿದಂತೆ 12 ದ್ವೀಪಗಳನ್ನು ಪಡೆಯಲು ಗೋವಾ ಸರ್ಕಾರ ಪ್ರಯತ್ನ ನಡೆಸಿದೆ.

ಈ ಕುರಿತ ಪತ್ರವನ್ನು ಗೋವಾ ಮುಖ್ಯಮಂತ್ರಿಯವರ ನೇತೃತ್ವದ ಕೇಂದ್ರ ಗೃಹ ಸಚಿವಾಲಯಕ್ಕೆ ಕಳುಹಿಸಿದೆ. ಈ ದ್ವೀಪಗಳು ಕರ್ನಾಟಕ ಕಡಲ ತೀರದಿಂದ ಸುಮಾರು 12 ರಿಂದ 15 ನಾಟೀಕಲ್ ಮೈಲಿ ದೂರವಿದ್ದು ಭೌಗೋಳಿಕವಾಗಿ ಕರ್ನಾಟಕ ಸರ್ಕಾರದ ವ್ಯಾಪ್ತಿಗೆ ಬರುತ್ತವೆ. 1947ರಲ್ಲಿ ಭಾರತ ಬ್ರಿಟಿಷರಿಂದ ಸ್ವಾತಂತ್ರ್ಯಗೊಂಡರೂ ಪೋರ್ಚುಗೀಸರು ಗೋವಾದಲ್ಲಿ ಆಡಳಿತ ಕೊನೆಗೊಳಿಸಿರಲಿಲ್ಲ. ಹೀಗಾಗಿ ಈ ನಡುಗಡ್ಡೆಗಳು ಸ್ವಾತಂತ್ರ್ಯದ ಬಳಿಕ ದಶಕಗಳ ಕಾಲ ಪೋರ್ಚುಗೀಸರ ಹಿಡಿತದಲ್ಲಿದ್ದ ಕಾರಣ ಗೋವಾ ರಾಜ್ಯದ ಹೆಸರಿನಲ್ಲಿಯೇ ದಾಖಲಾಗಿದ್ದವು.

ಪೋರ್ಚುಗೀಸರು ಭಾರತ ಬಿಟ್ಟು ತೆರಳಿದ ಬಳಿಕ ಕರ್ನಾಟಕದ ಕಂದಾಯ ಇಲಾಖೆ ಈ ನಡುಗಡ್ಡೆಗಳನ್ನು ತನ್ನ ಹೆಸರಿಗೆ ಮಾಡಿಕೊಳ್ಳಬೇಕಿತ್ತು. ಆದರೆ ಕಂದಾಯ ಭೂ ದಾಖಲೆ ಪುಟದಲ್ಲಿ ಇವುಗಳ ಸೇರ್ಪಡೆ ಆಗಿಲ್ಲ. ಹೀಗಾಗಿ 500 ವರ್ಷದ ಹಿಂದಿನ ದಾಖಲೆ ಪ್ರಕಾರ ಈ ನಡುಗಡ್ಡೆಗಳು ಇನ್ನೂ ಗೋವಾದ ಹೆಸರಿನಲ್ಲಿವೆ. ಆದರೆ ಹೆಸರಿಗೆ ಮಾತ್ರ ಕಾರವಾರ ಬಳಿಯ ನಡುಗಡ್ಡೆಗಳಾಗಿ ರಾಜ್ಯಕ್ಕೆ ಸೀಮಿತವಾಗಿದೆ. ಕಾರವಾರ ಬಳಿಯ ಕೂರ್ಮಗಡ ದ್ವೀಪದಲ್ಲಿ ನರಸಿಂಹ ದೇವರ ಗುಡಿಯಿದ್ದು, ಅಲ್ಲಿನ ಪ್ರಜಾ ಕೈಂಕರ್ಯಗಳನ್ನು ಕಾರವಾರದ ಕಡವಾಡದ ಮನೆತನವೇ ನೋಡಿಕೊಳ್ಳುತ್ತಿದೆ.

ಆಧಾರ:ಉದಯವಾಣಿ, ದಿನಾಂಕ:21.10.2021

## 4. ಸಮುದ್ರದಾಳದಲ್ಲಿ ಮೊದಲ ಸಲ ಕನ್ನಡ ಧ್ವಜಾರೋಹಣ

ಇಲ್ಲಿನ ನೇತ್ರಾಣಿ ಅಡ್ವೆಂಚರ್ಸ್‌ನ ಸ್ಕೂಬಾ ಡೈವಿಂಗ್ ಪರಿಣತರು ಇದೇ ಪ್ರಥಮ ಬಾರಿಗೆ ನೇತ್ರಾಣಿಯ ಸಮುದ್ರದಾಳದಲ್ಲಿ ಕನ್ನಡ ಬಾವುಟ ಹಿಡಿದು ರಾಜ್ಯೋತ್ಸವ ಆಚರಿಸಿದರು.

ಮುರ್ಡೇಶ್ವರದಿಂದ ನೇತ್ರಾಣಿ ದ್ವೀಪದ ಬಳಿ ತೆರಳಿದ ಸ್ಕೂಬಾ ಡೈವಿಂಗ್ ಪರಿಣತರು 20 ಅಡಿ ಉದ್ದದ ಕನ್ನಡ ಬಾವುಟವನ್ನು ಸಮುದ್ರದಾಳದಲ್ಲಿ ಪ್ರದರ್ಶಿಸಿ ಸಂಭ್ರಮಿಸಿದರು. ಮೂವರು ಡೈವಿಂಗ್ ತಜ್ಞರು ಈ ಸಾಹಸವನ್ನು ಮಾಡಿದ್ದಾರೆ. ನೇತ್ರಾಣಿ ಅಡ್ವಂಚರ್ಸ್‌ನ ಮಾಲೀಕರಾದ ಗಣೇಶ ಹರಿಕಂತ್ರ ಈ ಸಾಹಸವನ್ನು ಯೋಜಿಸಿದ್ದರು. ನೇತ್ರಾಣಿ ದ್ವೀಪ ಸ್ಕೂಬಾ ಡೈವಿಂಗ್‌ಗೆ ದೇಶ, ವಿದೇಶಿ ಜಲಸಾಹಸಿಗರನ್ನು ಆಕರ್ಷಿಸುತ್ತಿದೆ. ಅಂಡಮಾನ್ ನಿಕೋಬಾರ್ ಹೊರತು ಪಡಿಸಿದರೆ ನೇತ್ರಾಣಿಯಲ್ಲಿ ಜೀವ ವೈವಿಧ್ಯತೆ ವಿಪುಲವಾಗಿದೆ. ಇಲ್ಲಿ ನೇತ್ರಾಣಿ ಅಡ್ವೆಂಚರ್ಸ್ ಕೆಲವು ವರ್ಷಗಳಿಂದ ಸ್ಕೂಬಾ ಡೈವಿಂಗ್ ನಡೆಸುತ್ತಿದ್ದು, ಈ ಬಾರಿ ರಾಜ್ಯೋತ್ಸವವನ್ನು ಕಡಲಿನಾಳದಲ್ಲಿ ವಿಶಿಷ್ಟವಾಗಿ ಆಚರಿಸುವ ಮೂಲಕ ರಾಜ್ಯೋತ್ಸವಕ್ಕೆ ಮೆರಗು ತಂದಿಟ್ಟಿದೆ.

ಇದೇ ವೇಳೆ ಮುರ್ಡೇಶ್ವರ ಕಡಲತೀರದಲ್ಲಿ ಸ್ಪೀಡ್ ಬೋಟ್ ಒಂದರಲ್ಲಿ ಕನ್ನಡ ಬಾವುಟ ಹಿಡಿದು ಸಮುದ್ರದಲ್ಲಿ ಪ್ರಯಾಣಿಸಿರುವುದು ಗಮನ ಸೆಳೆದಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:02.11.2021

## 5. ದೀಪಾವಳಿ ಸಂಭ್ರಮಕ್ಕೆ ವರುಣಾಘಾತ

ನಗರದಲ್ಲಿ ರಾತ್ರಿ ಸುರಿದ ಭಾರೀ ಮಳೆಯಿಂದಾಗಿ ನಗರದ ಕೇಂದ್ರ ಪ್ರದೇಶದ ಹಲವು ರಸ್ತೆಗಳು ಕೆರೆಯಂತಾಗಿ ರಾಜಕಾಲುವೆ ತುಂಬಿ ಹರಿದ ಪರಿಣಾಮ ಕೆಲವು ಮನೆಗಳಿಗೆ ನೀರು ನುಗ್ಗಿ ಅವಾಂತರ ಸೃಷ್ಟಿಸಿತು.

ಮಲ್ಲೇಶ್ವರದ ಶ್ರೀರಾಮಮಂದಿರ ಮೈದಾನದ ಪಟಾಕಿ ಮಳಿಗೆಗಳಿಗೂ ನೀರು ನುಗ್ಗಿದ್ದರಿಂದ ಪಟಾಕಿಗಳು ನೀರಲ್ಲಿ ತೊಯ್ದು ಹೋಗಿವೆ.

ಇದರಿಂದ ಅಲ್ಲಿನ ವ್ಯಾಪಾರಿಗಳಿಗೆ ಲಕ್ಷಾಂತರ ರೂ. ನಷ್ಟವಾಗಿದೆ. ಸಂಜೆಯ ನಂತರ ಹಬ್ಬದ ಸಡಗರದಲ್ಲಿ ಶಾಪಿಂಗ್ ಹೋದವರು, ಕೆಲಸ ಮುಗಿಸಿ ಮನೆಗೆ ಹಿಂತಿರುಗಿದ್ದವರು ಸೇರಿದಂತೆ ವಾಹನ ಸವಾರರು ಪರದಾಡಿದರು. ಬಳ್ಳಾರಿ ರಸ್ತೆ ಮತ್ತು ಶಾಂತಿ ನಗರದ ಡಬಲ್ ರಸ್ತೆಯಲ್ಲಿ ಮಳೆ ನೀರಿನಿಂದ ಎರಡು ಬೈಕ್, ಒಂದು ಆಟೋ ಸೇರಿದಂತೆ ನಾಲ್ಕೈದು ವಾಹನಗಳು ರಸ್ತೆ ಮಧ್ಯೆಯೇ ಕೆಟ್ಟು ನಿಂತಿದ್ದ ದೃಶ್ಯ ಕಂಡು ಬಂತು.

**ಮನೆಗಳಿಗೆ ನುಗ್ಗಿದ ನೀರು:** ಮೈಸೂರು ರಸ್ತೆಯ ಸ್ಯಾಟಲೈಟ್ ಬಳಿಯ ಎಂಸಿಟಿ ಕ್ವಾರ್ಟ್ರಸ್ ಬಳಿ ರಾಜಕಾಲುವೆ ಉಕ್ಕಿ ಹರಿದು ಏಳೆಂಟು ಮನೆಗಳಿಗೆ ಕೊಳಚೆ ನೀರು ನುಗ್ಗಿದೆ. ಜೆ.ಸಿ.ನಗರದ ಜರ್ನಲಿಸ್ಟ್ ಕಾಲೋನಿ ಮತ್ತು ಟಾಟಾ ಸಿಲ್ಕ್ ಫಾರಂನಲ್ಲಿ ತಲಾ ಒಂದು ಮನೆ, ಬಾಪೂಜಿ ನಗರದ ಶೋಭಾ ಚಿತ್ರಮಂದಿರ ಸಮೀಪ ರಾಜಕಾಲುವೆ ತುಂಬಿ ಹರಿದು ಎರಡು ಮನೆಗಳಿಗೆ ನೀರು ನುಗ್ಗಿದ್ದು ಕುಟುಂಬದ ಜನರು ನೀರು ಹೊರಹಾಕಲು ಹರಸಾಹಸ ಪಟ್ಟರು. ಕೆ.ಜಿ.ನಗರ, ಛಲವಾದಿ ಪಾಳ್ಯದ ಕೆಲ ಮನೆಗಳಿಗೆ ನೀರು ನುಗ್ಗಿ ಅವಾಂತರ ಸೃಷ್ಟಿಸಿತು.

**ಕೆರೆಯಂತಾದ ರಸ್ತೆಗಳು:** ಇಂದಿರಾನಗರ, ಡಬಲ್ ರಸ್ತೆ, ಟೀಚರ್, ದೊಡ್ಡನೆಕ್ಕುಂದಿಯಲ್ಲಿ ರಸ್ತೆಗಳಲ್ಲಿ ನೀರು ನಿಂತಿತ್ತು. ಜೆ.ಜೆ.ನಗರದ ಬಡಾವಣೆಯೊಂದರಲ್ಲಿ ಎರಡು ಅಡಿಗೂ ಹೆಚ್ಚು ನೀರು ನಿಂತಿದ್ದರಿಂದ ದ್ವಿಚಕ್ರ ವಾಹನಗಳು ಮುಳುಗಿದ್ದವು.

ಉಲ್ಲಾಳ ಮುಖ್ಯರಸ್ತೆಯ ಚೈತನ್ಯ ಪಿಯು ಕಾಲೇಜು ರಸ್ತೆ, ಶಾಂತಿನಗರ ಡಬಲ್ ರಸ್ತೆ, ಮೈಸೂರು ರಸ್ತೆ, ಚಾಮರಾಜಪೇಟೆಯ ಕೆಲವು ರಸ್ತೆಗಳು ನೀರು ನಿಂತು ಕೆರೆಯಂತಾಗಿದ್ದವು.

ಯಲಹಂಕ, ಬೊಮ್ಮನಹಳ್ಳಿ, ಮಹದೇವಪುರ, ದಾಸರಹಳ್ಳಿಗಳಲ್ಲಿ ಹೆಚ್ಚಿನ ಮಳೆ ಆಗಿಲ್ಲ. ದಕ್ಷಿಣ ವಲಯ ರಾಜರಾಜೇಶ್ವರಿನಗರ, ದಕ್ಷಿಣ ವಲಯಗಳಲ್ಲಿ ಅತೀ ಹೆಚ್ಚು ಮಳೆಯಾಗಿದ್ದು, ಪೂರ್ವ ಮತ್ತು ಪಶ್ಚಿಮ ವಲಯಗಳಲ್ಲಿ ಸಾಧಾರಣ ಮಳೆಯಾಗಿದೆ ಎಂದು ಹವಾಮಾನ ಇಲಾಖೆ ತಿಳಿಸಿದೆ.

ಆಧಾರ:ವಿಜಯಕರ್ನಾಟಕ, ದಿನಾಂಕ:05.11.2021

## 6. ನದಿ ಜೋಡಣೆಯ ಮುನ್ನ ನೀರು ಹಂಚಿಕೆ ಇತ್ಯರ್ಥ

ಗೋದಾವರಿ, ಕೃಷ್ಣಾ, ಕಾವೇರಿ ಮತ್ತು ಪಾಲಾರ್ ನದಿ ಜೋಡಣೆಗೆ ಡಿಪಿಆರ್ ತಯಾರಿಸುವ ಮೊದಲು ರಾಜ್ಯಗಳ ನೀರಿನ ಹಂಚಿಕೆ ಆಗಬೇಕೆಂದು ಕೇಂದ್ರ ಗೃಹ ಸಚಿವರಿಗೆ ಮನವಿ ಸಲ್ಲಿಸಲಾಗಿದೆ. ಅದಕ್ಕೆ ಸ್ಪಂದಿಸಿರುವ ಅವರು ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲು ಜಲಶಕ್ತಿ ಮಂತ್ರಾಲಯಕ್ಕೆ ಸೂಚಿಸಿದ್ದಾರೆ ಎಂದು ಬಸವರಾಜ ಬೊಮ್ಮಾಯಿ ತಿಳಿಸಿದ್ದಾರೆ.

ಸುದ್ದಿಗಾರರೊಂದಿಗೆ ಮಾತನಾಡಿ ದಕ್ಷಿಣದ ರಾಜ್ಯಗಳಿಗೆ ಸಂಬಂಧಿಸಿದ ಸಭೆಯಲ್ಲಿ ಈ ಬಗ್ಗೆ ಪ್ರಸ್ತಾಪಿಸಲಾಯಿತು. ಕೃಷ್ಣಾ ನ್ಯಾಯಾಧಿಕರಣ–2ರ ತೀರ್ಪಿನ ಅಧಿಸೂಚನೆ ಹೊರಡಿಸಿರುವ ಬಗ್ಗೆಯೂ ಗಮನ ಸೆಳೆಯಲಾಯಿತು. ರಾಜ್ಯದ ನೀರಾವರಿ ಯೋಜನೆಗಳ ಸಂಬಂಧ ಸಭೆಯಲ್ಲಿ ಗಟ್ಟಿಯಾಗಿ ವಿಷಯ ಮಂಡಿಸಲಾಯಿತು ಎಂದರು.

ಮೆಟ್ರೊ ಯೋಜನೆಗೆ ರೈಲ್ವೆ ಇಲಾಖೆ ಸುಪರ್ದಿಯಲ್ಲಿರುವ ಭೂಮಿ ಒದಗಿಸುವಂತೆ ಕೇಳಲಾಗಿದೆ. ಆ್ಯಂಟಿ ಬಯೋಟಿಕ್ ಬಳಕೆಯಿಂದ ಮೀನು ರಫ್ತಿಗೆ ಅಡಚಣೆಯಾಗುತ್ತಿದೆ. ಈ ಕುರಿತು ಮೀನುಗಾರರು ಮುನ್ನೆಚ್ಚರಿಕೆ ವಹಿಸಬೇಕಿದೆ. ಫೋಕ್ಸೊ ಪ್ರಕರಣಗಳನ್ನು ಶೀಘ್ರವೇ ಇತ್ಯರ್ಥ ಪಡಿಸಬೇಕು ಎಂದು ಕೇಂದ್ರ ಸಚಿವರು ಸೂಚಿಸಿದರು ಎಂದು ಹೇಳಿದರು.

**ಮೇಕೆದಾಟು:** ಮೇಕೆದಾಟು ಯೋಜನೆ ಬಗ್ಗೆ ಪ್ರಸ್ತಾಪಿಸಲಾಯಿತು, ತಮಿಳುನಾಡಿನ ಸಿಎಂ ಸಭೆಗೆ ಆಗಮಿಸಿರಲಿಲ್ಲ. ಹಾಗಾಗಿ ಚರ್ಚಿಸಲು ಸಾಧ್ಯವಾಗಿಲ್ಲ. ಆದರೆ, ಕೇಂದ್ರ ಜಲಶಕ್ತಿ ಸಚಿವರು ಮತ್ತು ಸಚಿವಾಲಯಕ್ಕೆ ಮೇಕೆದಾಟು ಯೋಜನೆ ಅನುಷ್ಠಾನಕ್ಕೆ ಎದುರಾಗಿರುವ ತೊಡಕು ನಿವಾರಿಸುವಂತೆ ಮನವಿ ಮಾಡಲಾಗುವುದು. ದಿಲ್ಲಿಗೆ ತೆರಳಿದಾಗಲೂ ಕಾನೂನು ತಜ್ಞರೊಂದಿಗೆ ಈ ಬಗ್ಗೆ ಸಮಾಲೋಚಿಸಲಾಗಿದೆ ಎಂದರು.

**ಹಳೆಯ ಸಂಘರ್ಷ**: ಕರ್ನಾಟಕ ಮತ್ತು ತಮಿಳುನಾಡು ನಡುವೆ ಸ್ವಾತಂತ್ರ್ಯ ಪೂರ್ವದಿಂದಲೂ ಜಲವಿವಾದ ಇದೆ. ತಮಿಳುನಾಡು ನೀರಿನ ರಾಜಕಾರಣ ಮಾಡುತ್ತಿದೆ. ಕಾವೇರಿ ನ್ಯಾಯಾಧೀಕರಣದ ತೀರ್ಪಿನಂತೆ ಮಂಡಳಿ ಅಸ್ತಿತ್ವಕ್ಕೆ ಬಂದಿದೆ. ಈ ನಡುವೆಯೂ ನಾನಾ ಯೋಜನೆಗಳಿಗೆ ಆಕ್ಷೇಪ ಸಲ್ಲಿಸಲಾಗುತ್ತಿದೆ. ನಾವು ಕೆಲವು ಆಕ್ಷೇಪ ಎತ್ತಿದ್ದೇವೆ. ಈ ವಿಷಯಗಳು ನ್ಯಾಯಸಮ್ಮತವಾಗಿ ತೀರ್ಮಾನವಾಗಬೇಕು ಎಂದು ಸುದ್ದಿಗಾರರ ಪ್ರಶ್ನೆಗೆ ಪ್ರತಿಕ್ರಿಯಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:16.11.2021

## 7. ಸತತ ಮಳೆಯಿಂದ 82 ಕೆರೆ ಭರ್ತಿ

ಪ್ರಸಕ್ತ ಸಾಲಿನಲ್ಲಿ ಮುಂಗಾರು ಮತ್ತು ಹಿಂಗಾರು ಅವಧಿಯಲ್ಲಿ ನಿರೀಕ್ಷೆಗಿಂತ ಅಧಿಕ ಮಳೆಯಾಗಿರುವ ಹಿನ್ನೆಲೆಯಲ್ಲಿ ರಾಜಧಾನಿಯಲ್ಲಿರುವ 82 ಕೆರೆಗಳು ಭರ್ತಿಯಾಗಿ ಮೈದುಂಬಿಕೊಂಡಿವೆ.

ಪಾಲಿಕೆ ವ್ಯಾಪ್ತಿಯಲ್ಲಿ ಒಟ್ಟು 205 ಕೆರೆಗಳಿದ್ದು, ಅವುಗಳನ್ನು ಅಭಿವೃದ್ಧಿ ಮಾಡುವಲ್ಲಿ ಬಿಬಿಎಂಪಿ ನೂರಾರು ಕೋಟಿ ರೂ. ಖರ್ಚು ಮಾಡಿದೆ. ಈ ಕೆರೆಗಳನ್ನು ಪುನಶ್ಚೇತನ ಮಾಡಿದ ಫಲ ಕಳೆದ ಎರಡು ವರ್ಷಗಳಿಂದ ಕಂಡುಬರುತ್ತಿದೆ. 2020ರ ಅಂತ್ಯಕ್ಕೆ ಒಟ್ಟು 75ಕ್ಕೂ ಅಧಿಕ ಕೆರೆಗಳ ಪುನಶ್ಚೇತನ ಕಾರ್ಯ ಪೂರ್ಣಗೊಂಡಿದ್ದು, ಉತ್ತಮ ಮಳೆ ಆಗಿದ್ದರಿಂದ 65 ಕೆರೆಗಳು ಭರ್ತಿಯಾಗಿದ್ದವು. ಪ್ರಸ್ತುತ 90ಕ್ಕೂ ಅಧಿಕ ಕೆರೆಗಳ ಪುನಶ್ಚೇತನ ಕಾರ್ಯ ಪೂರ್ಣಗೊಂಡಿದೆ. ಈ ವರ್ಷವು ವಾಡಿಕೆಗಿಂತ ಅಧಿಕವಾಗಿ ಮಳೆಯಾಗಿದ್ದರಿಂದ 82 ಕೆರೆಗಳೂ ಭರ್ತಿಯಾಗಿವೆ. ಹಲವು ವರ್ಷಗಳಿಂದ ಹೂಳು ತುಂಬಿಕೊಂಡು ಕೆರೆಗೆ ನೀರು ಬರದೆ ಬತ್ತಿದಂತೆ ಕಾಣುತ್ತಿದ್ದ ಕೆರೆಗಳು, ಪುನಶ್ಚೇತನ ಕಾರಣದಿಂದ ಕೆರೆಗಳಲ್ಲಿ ಕೋಡಿ ಹರಿದಿರುವುದು ಕಂಡುಬಂದಿದೆ.

ಹೆಬ್ಬಾಳ, ನಾಗವಾರ, ಜಕ್ಕೂರು, ಮಲ್ಲಸಂದ್ರ, ಅಮೃತಹಳ್ಳಿ, ಬೆಳ್ಳಂದೂರು, ವರ್ತೂರು, ಮಡಿವಾಳ, ಕೋರಮಂಗಲ, ಪರಪ್ಪನ ಅಗ್ರಹಾರ, ಅಂಜನಾಪುರ, ಆವಲಹಳ್ಳಿ, ಕೊತ್ತನೂರು, ಗುಬ್ಬಲಾಳು, ಕೆಂಬತ್ತಹಳ್ಳಿ, ಸುಬ್ರಮಣ್ಯ, ಕೂಡ್ಲು ದೊಡ್ಡಕೆರೆ, ಸಾರಕ್ಕಿ, ಪುಟ್ಟೇನಹಳ್ಳಿ, ಕೆಂಚೇನಹಳ್ಳಿ, ಲಕ್ಷ್ಮೀಪುರು, ನರಸೀಪುರ, ವಡೇರಹಳ್ಳಿ, ಚಿಕ್ಕನಹಳ್ಳಿ, ಕೈಕೊಂಡನಹಳ್ಳಿ, ಸ್ಯಾಂಕಿ ಕೆರೆ, ಸೀಗೇಹಳ್ಳ, ದೇವಸಂದ್ರ, ದೊಡ್ಡಕಾಣೇನಹಳ್ಳೀ, ಮುನೇಕೊಳಲು ಕೆರೆ ಸೇರಿ ಹಲವು ಕೆರೆಗಳು ಭರ್ತಿಯಾಗಿವೆ. ಹಲವು ವರ್ಷಗಳಿಂದ ಭರ್ತಿಯಾಗದ ಕೆರೆಗಳಲ್ಲಿ ಕೋಡಿ ಹರಿದಿರುವುದು ನಗರದ ಸೌಂದರ್ಯ ಹೆಚ್ಚಳಕ್ಕೆ ಕಾರಣವಾಗಿದೆ.

**ಸೇರ್ಪಡೆಯಾಗುತ್ತಿದೆ ಕಲುಷಿತ ನೀರು** : ನಗರದ ದೊಡ್ಡಕಲ್ಲಸಂದ್ರ ಕೆರೆಯನ್ನು ಪಾಲಿಕೆಯಿಂದ ಪುನಶ್ಚೇತನ ಮಾಡಲಾಗಿದೆ. ಮಳೆಗಾಲದಲ್ಲಿ ಕಲುಷಿತ ನೀರು ಕೆರೆಗೆ ಸೇರ್ಪಡೆಯಾಗುತ್ತಿದೆ. 21 ಎಕರೆ ವಿಸ್ತೀರ್ಣದ ಕೆರೆಗೆ ತ್ಯಾಜ್ಯ ನೀರು ಸೇರದಂತೆ ಸಂಸ್ಕರಣೆ ಮಾಡಲು 3 ಎಕರೆ ಪ್ರದೇಶವನ್ನು ವೆಟ್‌ಲ್ಯಾಂಡ್ ಮಾದರಿಯಾಗಿ ಬಳಕೆ ಮಾಡಲಾಗಿದೆ. ಅತಿ ಹೆಚ್ಚು ಮಳೆಯಾದ ಸಂದರ್ಭದಲ್ಲಿ ಕೆರೆಗೆ ಹರಿದುಬರುವ ದೊಡ್ಡ ಪ್ರಮಾಣದ ನೀರಿನಲ್ಲಿ ಕೊಳಚೆ ನೀರು ಕೂಡ ಕೆರೆಯ ಒಡಲು ಸೇರುತ್ತಿದೆ. ಅಭಿವೃದ್ಧಿಯಾಗದ ಹಲವು ಕೆರೆಗಳಿಗೆ ಕಲುಷಿತ ನೀರು ಸೇರ್ಪಡೆ ಆಗುತ್ತಿದ್ದು, ಪುನಶ್ಚೇತನಗೊಳಿಸಿ ಕೆರೆ ಸೌಂದರ್ಯ ಹೆಚ್ಚಿಸಬೇಕಿದೆ.

**ಕೊಳವೆ ಬಾವಿಗಳಲ್ಲಿ ಜಲ ಮರುಪೂರಣ** : ಉದ್ಯಾನನಗರಿಯಲ್ಲಿ ವಾರ್ಷಿಕವಾಗಿ 90 ರಿಂದ 100 ಸೆಂ.ಮೀ. ಮಳೆಯಾಗುತ್ತದೆ. ಈ ವರ್ಷಾಂತ್ಯಕ್ಕೆ ಒಂದೂವರೆ ತಿಂಗಳು ಬಾಕಿ ಇರುವಂತೆಯೇ ವಾರ್ಷಿಕ ವಾಡಿಕೆಗಿಂತ ಅಧಿಕ ಮಳೆಯಾಗಿದೆ. ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ (ಕೆ.ಎಸ್.ಎನ್.ಎಂ.ಡಿ.ಸಿ.) ಮಾಹಿತಿಯಂತೆ ನಗರದಲ್ಲಿ ಒಟ್ಟು 82 ಸೆಂ.ಮೀ. ಮಳೆಯಾಗಬೇಕಿತ್ತು. 108.5

ಸೆಂ.ಮೀ. ಮಳೆಯಾಗಿದ್ದು, ಹೆಚ್ಚಿನ ಕೆರೆಗಳು ಭರ್ತಿಯಾಗಲು ಕಾರಣವಾಗಿದೆ. ಕಳೆದ ಎರಡು ವರ್ಷಗಳಿಂದ ಉತ್ತಮ ಮಳೆಯಾಗಿ ಕೆರೆಗಳು ಭರ್ತಿಯಾಗುತ್ತಿರುವ ಹಿನ್ನೆಲೆಯಲ್ಲಿ ಭೂಮಿಯ ಅಂತರ್ಜಲ ಮಟ್ಟ ಹೆಚ್ಚಳವಾಗುತ್ತಿದೆ. ನಗರದಲ್ಲಿ 1.2 ಲಕ್ಷಕ್ಕೂ ಅಧಿಕ ಕೊಳವೆಬಾವಿಗಳಿದ್ದು, ಅದರಲ್ಲಿ ಬತ್ತಿ ಹೋಗಿದ್ದ 30 ಸಾವಿರಕ್ಕೂ ಅಧಿಕ ಕೊಳವೆ ಬಾವಿಗಳು ಜಲಮರುಪೂರಣಗೊಂಡಿವೆ.

ಆಧಾರ: ವಿಜಯವಾಣಿ, ದಿನಾಂಕ: 21.11.2021

## 8. ಬೆಳೆ ನಷ್ಟ ಪರಿಹಾರಕ್ಕೆ ಹೊಸ ಆ್ಯಪ್

ಮಳೆ ಸೇರಿದಂತೆ ಪ್ರಕೃತಿ ವಿಕೋಪದಿಂದ ಹಾನಿಗೀಡಾದ ಬೆಳೆ ನಷ್ಟ ಕುರಿತು ರೈತರಿಗೆ ಶೀಘ್ರ ಪರಿಹಾರ ನೀಡಲು ಅನುಕೂಲವಾಗುವಂತೆ ಪರಿಹಾರ್ ಎಂಬ ಆ್ಯಪ್‌ನ್ನು ರಾಜ್ಯ ಸರ್ಕಾರ ಸಿದ್ಧಪಡಿಸಿದೆ. ಬೆಳೆನಷ್ಟದ ವಿವರ ಅಪ್‌ಲೋಡ್ ಆದ 24 ಗಂಟೆಯೊಳಗೆ ರೈತರ ಖಾತೆಗೆ ಪರಿಹಾರದ ಹಣ ಜಮೆ ಆಗುತ್ತದೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ತಿಳಿಸಿದರು.

ಕೋಲಾರ ಜಿಲ್ಲೆಯ ಪ್ರವಾಹಪೀಡಿತ ಪ್ರದೇಶಗಳಲ್ಲಿ ಪರಿಶೀಲಿಸಿದ ಅವರು ಬೆಳೆ ನಷ್ಟಕ್ಕೆ ಸಂಬಂಧಿಸಿದಂತೆ ವಿವಿಧ ಇಲಾಖೆ ಅಧಿಕಾರಿಗಳು ಜಂಟಿ ಸಮೀಕ್ಷೆ ನಡೆಸಿದ ಕೂಡಲೇ ಸ್ಥಳದಿಂದಲೇ ವಿವರಗಳನ್ನು ಅಪ್‌ಲೋಡ್ ಮಾಡುವಂತೆ ನೋಡಿಕೊಳ್ಳಿ ಎಂದು ಜಿಲ್ಲಾಧಿಕಾರಿ ಆರ್.ಸೆಲ್ವಮಣಿಗೆ ಸೂಚಿಸಿದರು.

ಅಕಾಲಿಕ ಮಳೆಯಿಂದ ಜಿಲ್ಲೆಯಲ್ಲಿ 55 ಸಾವಿರ ಹೆಕ್ಟೇರ್ ಪ್ರದೇಶದ ರಾಗಿ ಬೆಳೆಯಲ್ಲಿ ಶೇ.90 ನಾಶವಾಗಿದೆ. ತೋಟಗಾರಿಕೆ ಹಾಗೂ ಹೂವಿನ ಬೆಳೆಗಳು ಹಾನಿಗೀಡಾಗಿರುವುದನ್ನು ಖುದ್ದು ಕಂಡಿದ್ದೇನೆ. 189 ಕಿಲೋಮೀಟ್ ರಸ್ತೆ ಹಾಗೂ 34 ಸೇತುವೆಗಳು ಹಾಳಾಗಿವೆ. 80 ಮನೆಗಳು ಸಂಪೂರ್ಣವಾಗಿ ನೆಲಕ್ಕೆ ಕುಸಿದು ಬಿದ್ದಿದೆ. 790 ಮನೆಗಳು ಹಾನಿಗೊಂಡಿದೆ ಒಬ್ಬರು ಮೃತಪಟ್ಟಿದ್ದಾರೆ. ಇದಕ್ಕೆಲ್ಲ ಸಂಬಂಧಿಸಿದಂತೆ ಪರಿಹಾರ ಕ್ರಮಗಳನ್ನು ತೀವ್ರಗೊಳಿಸಲಾಗುವುದು ಎಂದು ಮುಖ್ಯಮಂತ್ರಿ ಭರವಸೆ ನೀಡಿದರು.

ಪೂರ್ಣ ಪ್ರಮಾಣದಲ್ಲಿ ಕುಸಿದ ಮನೆಗಳಿಗೆ ಮೂರು ಹಂತದಲ್ಲಿ ಒಟ್ಟು ಐದು ಲಕ್ಷ ರೂ. ಪರಿಹಾರ ನೀಡುವ ಜೊತೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಹಾನಿಯಾದ ಮನೆಗೆ 3 ಲಕ್ಷ ನೀಡಲಾಗುವುದು. ಕೆರೆಗಳು ಕೋಡಿ ಹರಿದು ತಗ್ಗು ಪ್ರದೇಶಗಳಿಗೆ ನೀರು ನುಗ್ಗಿದ ಮನೆಗಳಿಗೆ ರೂ. ಹತ್ತು ಸಾವಿರ ನೀಡಲಾಗುತ್ತದೆ ಎಂದು ವಿವರಿಸಿದರು.

ಜಿಲ್ಲೆಯ ಸರ್ಕಾರಿ ಕೆರೆ ಮತ್ತು ರಾಜಕಾಲುವೆಗಳ ಒತ್ತುವರಿಯನ್ನು ಅಧಿಕಾರಿಗಳು ಮುಲಾಜಿಲ್ಲದೆ ತೆರವುಗೊಳಿಸಲು ಸೂಚಿಸಲಾಗಿದೆ. ಮುಂದಿನ ನಾಲ್ಕು ದಿನಗಳ ಕಾಲ ಮಳೆಯ ಸೂಚನೆ ಇದ್ದು ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳುವಂತೆ ಸೂಚಿಸಲಾಗಿದೆ ಎಂದು ಹೇಳಿದರು.

ಲೋಕಸಭಾ ಸದಸ್ಯ ಎಸ್.ಮುನಿಸ್ವಾಮಿ, ತೋಟಗಾರಿಕೆ ಸಚಿವ ಮುನಿರತ್ನ, ವಿಧಾನಪರಿಷತ್ ಸದಸ್ಯ ವೈ.ಎ.ನಾರಾಯಣಸ್ವಾಮಿ, ಶಾಸಕರಾದ ರಮೇಶ್‌ಕುಮಾರ್ ಮತ್ತು ಕೆ.ಶ್ರೀನಿವಾಸಗೌಡ ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 23.11.2021

## 9. 5 ಲಕ್ಷ ಹೆಕ್ಟೇರ್ ಬೆಳೆ ಹಾನಿ: ಸಿಎಂ

ರಾಜ್ಯಾದ್ಯಂತ ಸುರಿದ ಅಕಾಲಿಕ ಮಳೆಯಿಂದಾಗಿ ಸುಮಾರು ಐದು ಲಕ್ಷ ಹೆಕ್ಟೇರ್ ಕೃಷಿ ಭೂಮಿ ನಾಶವಾಗಿದೆ ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ.

ಸುದ್ದಿಗಾರರೊಂದಿಗೆ ಮಾತನಾಡಿದ ಅವರು ಮಳೆಯಿಂದಾಗಿ ರಾಜ್ಯದ ಹಲವು ಜಿಲ್ಲೆಗಳಲ್ಲಿ ಭಾರೀ ಹಾನಿಯಾಗಿದೆ. ಮಳೆಯಿಂದಾಗಿ ಸಂಪೂರ್ಣ ಮನೆ ಕಳೆದುಕೊಂಡವರಿಗೆ ರೂ.1.00 ಲಕ್ಷ ಪರಿಹಾರದ ಜೊತೆಗೆ ಭಾಗಶಃ ಮನೆ ಕಳೆದುಕೊಂಡವರಿಗೂ ಪರಿಹಾರ ನೀಡುವಂತೆ ಅಧಿಕಾರಿಗಳಿಗೆ ಸೂಚಿಸಲಾಗಿದೆ. ಪರಿಹಾರ ಮೊತ್ತವನ್ನು ಚರ್ಚಿಸಿ ನಿರ್ಧರಿಸಲಾಗುವುದು ಎಂದು ಸ್ಪಷ್ಟಪಡಿಸಿದರು.

**ಸೇತುವೆ ದುರಸ್ತಿಗೆ ರೂ.500 ಕೋಟಿ ಬಿಡುಗಡೆ**: ಮಳೆಯಿಂದ ಹಾಳಾದ ರಸ್ತೆ ಸೇತುವೆ ದುರಸ್ತಿಗೆ ರೂ.500 ಕೋಟಿ ಬಿಡುಗಡೆ ಮಾಡಲಾಗಿದೆ. ಬೆಳೆ ಪರಿಹಾರ ಕುರಿತಂತೆ ಸಮೀಕ್ಷೆ ನಡೆಸಿ ಅಧಿಕಾರಿಗಳು ಪರಿಹಾರ ಸಾಫ್ಟ್‌ವೇರ್‌ನಲ್ಲಿ ಮಾಹಿತಿಯನ್ನು ದಾಖಲು ಮಾಡುತ್ತಿದ್ದಂತೆ ಪರಿಹಾರ ನೀಡುವ ಕೆಲಸ ಆರಂಭಿಸಲಾಗುವುದು ಎಂದರು.

ಈಗಾಗಲೇ ಚಾಲ್ತಿಯಲ್ಲಿರುವ ನಿಯಮದ ಪ್ರಕಾರ ಸಂಪೂರ್ಣ ಮಳೆಯಿಂದ ಮನೆ ಕುಸಿದು ಬಿದ್ದಿದ್ದರೆ ಅಂತಹ ಮನೆಗಳಿಗೆ ರೂ.5 ಲಕ್ಷ, ಭಾಗಶಃ ಕುಸಿದು ಬಿದ್ದಿದ್ದರೆ ರೂ.3 ಲಕ್ಷ, ಸಣ್ಣಪುಟ್ಟ ಹಾನಿಯಾದ ಮನೆಗಳ ನಿರ್ಮಾಣಕ್ಕೆ ರೂ.1 ಲಕ್ಷ ಬಿಡುಗಡೆ ಮಾಡುವಂತೆ ಅಧಿಕಾರಿಗಳಿಗೆ ಸೂಚಿಸಲಾಗಿದೆ ಎಂದು ಬಸವರಾಜ ಬೊಮ್ಮಾಯಿ ಅವರು ಹೇಳಿದರು.

ಆಧಾರ:ವಿಶ್ವವಾಣಿ, ದಿನಾಂಕ:23.11.2021

## 10. ಸಾಹಿತ್ಯ ಸಮಾಜಕ್ಕೆ ದಿಕ್ಸೂಚಿಯಾಗಲಿ

ಭಾಷೆ ಮತ್ತು ಸಾಹಿತ್ಯಕ್ಕೆ ಜಾತಿ, ಧರ್ಮದ ಸೋಂಕು ಇಲ್ಲ. ಇಂದಿನ ಜಾಗತೀಕರಣ ಉದಾರೀಕರಣದ ಯುಗದಲ್ಲಿ ಅಂತಃಕರಣ ಹೊಂದಿರುವ ಸಾಹಿತ್ಯ ರಚಿಸುವ ಅಗತ್ಯ ಇದೆ ಎಂದು ಮುಖ್ಯಮಂತ್ರಿಯವರು ಅಭಿಪ್ರಾಯಪಟ್ಟಿದ್ದಾರೆ.

ಸಪ್ನ ಬುಕ್ ಹೌಸ್ 66ನೇ ಕರ್ನಾಟಕ ರಾಜ್ಯೋತ್ಸವದ ಅಂಗವಾಗಿ ಆಯೋಜಿಸಿದ್ದ 66 ಕನ್ನಡ ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಸಾಹಿತ್ಯ ಸಂಸ್ಕೃತಿ ಮತ್ತು ಸಮಾಜದ ನಡುವೆ ಬಾಂಧವ್ಯ ಬೆಳೆಸಿ ಕನ್ನಡ ನಾಡಿಗೆ ಹೊಸ ದಿಕ್ಸೂಚಿ ತೋರಿಸಬೇಕು. ಈ ವಿಷಯದಲ್ಲಿ ಸರ್ಕಾರ ಪ್ರಮುಖ ಪಾತ್ರವಹಿಸುತ್ತದೆ ಎಂದು ಹೇಳಿದರು.

ಕನ್ನಡ ನಾಡು ಕೇವಲ ಆರ್ಥಿಕವಾಗಿ, ಶೈಕ್ಷಣಿಕವಾಗಿ ಪ್ರಗತಿ ಸಾಧಿಸಿದರೆ ಸಾಲದು. ಸಾಹಿತ್ಯಿಕವಾಗಿಯೂ ಶ್ರೀಮಂತವಾಗಬೇಕು. ಸಾಹಿತ್ಯದ ಮೂಲಕ ಸತ್ಯದರ್ಶನ ಪಡೆಯಲು ಉದಾರೀಕರಣ, ಜಾಗತೀಕರಣ, ಖಾಸಗೀಕರಣ ಪ್ರಕ್ರಿಯೆ ಆರಂಭವಾಯಿತು. ಹೆಚ್ಚಿದ ಆರ್ಥಿಕ ವಹಿವಾಟಿನ ಪರಿಣಾಮ ಅಂತಃಕರಣ ಮರೆಯಾಯಿತು. ಮಾರುಕಟ್ಟೆ ಶಕ್ತಿಗಳ ಪ್ರಾಬಲ್ಯ ಇದ್ದಾಗ ಅಂತಃಕರಣ ಇರುವುದಿಲ್ಲ. ಕೇವಲ ಲಾಭ ಮತ್ತು ನಷ್ಟದ ವಿಷಯ ಮಾತ್ರ ಮುಖ್ಯವಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಜನರ ಮನ ಪರಿವರ್ತನೆಯಲ್ಲಿ ಸಾಹಿತ್ಯ ಪರಿಣಾಮ ಬೀರುತ್ತದೆ ಎಂದು ಅಭಿಪ್ರಾಯಪಟ್ಟರು

ಕನ್ನಡ ಸಾಹಿತ್ಯ ಮತ್ತು ಪುಸ್ತಕ ಲೋಕಕ್ಕೆ ಸಪ್ನ ಬುಕ್ ಹೌಸ್ ತನ್ನದೇ ಆದ ಕೊಡುಗೆ ನೀಡಿದೆ. ಇಂದಿನ ಡಿಜಿಟಲ್ ಯುಗದಲ್ಲಿ ಮುದ್ರಣ ಉಳಿಸಿಕೊಂಡು ಬೆಳೆಯುತ್ತಿದೆ. ಅದೇ ರೀತಿ ಪುಸ್ತಕಗಳಿಗೂ

ಮಹತ್ವ ದೊರೆಯುತ್ತಿದೆ ಎಂದರು. ಡಾ:ಕಿಕ್ಕೇರಿ ಮತ್ತು ತಂಡದವರಿಂದ ಸುಗಮ ಸಂಗೀತ ಕಾರ್ಯಕ್ರಮ ನಡೆಯಿತು.

ಆಧಾರ:ಪ್ರಜಾವಾಣಿ, ದಿನಾಂಕ:28.11.2021

## 11. ಮಳೆಗೆ ಕರ್ನಾಟಕದಲ್ಲೇ ಹೆಚ್ಚು ಬೆಳೆ ಹಾನಿ: ಕೇಂದ್ರ

ಪ್ರಸಕ್ತ ವರ್ಷ ಸಂಭವಿಸಿದ ಭಾರೀ ಮಳೆ ಪ್ರವಾಹ ಮತ್ತು ಭೂಕುಸಿತದ ಪರಿಣಾಮ ದೇಶದಲ್ಲಿ 50.40 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಬೆಳೆದ ಬೆಳೆಗಳು ಹಾನಿಗೀಡಾಗಿವೆ. ಈ ಪೈಕಿ ಕರ್ನಾಟಕದಲ್ಲಿ ಅತಿ ಹೆಚ್ಚು ಹಾನಿ ಸಂಭವಿಸಿದೆ ಎಂದು ಕೇಂದ್ರ ಲೋಕಸಭೆಗೆ ಮಾಹಿತಿ ನೀಡಿದೆ.

ಈ ಕುರಿತು ಲೋಕಸಭೆಗೆ ಲಿಖಿತ ಉತ್ತರ ನೀಡಿರುವ ಕೇಂದ್ರ ಕೃಷಿ ಸಚಿವರು ಪ್ರಸಕ್ತ ವರ್ಷ ಭಾರೀ ಮಳೆ, ಪ್ರವಾಹ, ಭೂಕುಸಿತದಿಂದ ದೇಶಾದ್ಯಂತ 50.40 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಬೆಳೆದ ಬೆಳೆಗಳು ಹಾನಿಯಾಗಿವೆ. ಈ ಪೈಕಿ ಕರ್ನಾಟದ 13.98 ಲಕ್ಷ ಹೆಕ್ಟೇರ್, ಪಶ್ಚಿಮ ಬಂಗಾಳ 6.90 ಲಕ್ಷ ಹೆಕ್ಟೇರ್, ರಾಜಾಸ್ತಾನ 6.79 ಲಕ್ಷ ಹೆಕ್ಟೇರ್, ಬಿಹಾರ್ಲ 5.80 ಲಕ್ಷ ಹೆಕ್ಟೇರ್, ಮಹಾರಾಷ್ಟ್ರ 4.55 ಲಕ್ಷ ಹೆಕ್ಟೇರ್ ಮತ್ತು ಉತ್ತರ ಪ್ರದೇಶ 3.61 ಲಕ್ಷ ಹೆಕ್ಟೇರ್ ಬೆಳೆಗಳಿಗೆ ಹಾನಿಯಾಗಿದೆ ಎಂದು ತಿಳಿಸಿದ್ದಾರೆ.

**ಹಣ ಬಿಡುಗಡೆ:** ನಷ್ಟ ಸಂಬಂಧ ರಾಜ್ಯ ವಿಪತ್ತು ನಿರ್ವಹಣಾ ನಿಧಿಗೆ ನವೆಂಬರ್ 25ರವರೆಗೆ ರೂ.8873 ಕೋಟಿ ಬಿಡುಗಡೆ ಮಾಡಲಾಗಿದೆ. ಇದಕ್ಕೆ ಹೆಚ್ಚುವರಿಯಾಗಿ ರಾಷ್ಟ್ರೀಯ ವಿಪತ್ತು ನಿರ್ವಹಣಾ ನಿಧಿಯಿಂದಲೂ ಹಣ ಬಿಡುಗಡೆ ಮಾಡಲಾಗಿದೆ ಎಂದು ಸರ್ಕಾರ ತಿಳಿಸಿದೆ.

**ಸಾಲ ಮನ್ನಾ ಇಲ್ಲ:** ಇದೇ ವೇಳೆ ಮಳೆ, ಪ್ರವಾಹ ಪೀಡಿತ ಜಿಲ್ಲೆಗಳ ರೈತರ ಸಾಲವನ್ನು ಮನ್ನಾ ಮಾಡುವ ಯಾವುದೇ ಉದ್ದೇಶ ಸರ್ಕಾರಕ್ಕೆ ಇಲ್ಲ ಎಂದು ಇನ್ನೊಂದು ಪ್ರಶ್ನೆಗೆ ಅವರು ಉತ್ತರ ನೀಡಿದ್ದಾರೆ.

ಆಧಾರ:ಕನ್ನಡ ಪ್ರಭ, ದಿನಾಂಕ:01.12.2021

## 12. Western Ghats: Karnataka again rejects Kasturirangan report

Chief Minister told the Centre that Karnataka was against declaring the Western Ghats as Ecologically Sensitive Areas (ESA) as that would hit the livelihoods of people.

Bommai said this during a meeting with Union Minister for Environment, Forest and Climate Change on the recommendations of the Kasturirangan report on conserving the Western Ghats, Bommai attended the meeting virtually.

The Kasturirangan Committee has recommended that 20,668 sq.km spread across 11 districts in the Western Ghats cradling 1592 villages be declared an ESA.

The Cabinet has decided after consulting residents of the Western Ghats region officials and other stakeholders to oppose the implementation of the Kasturirangan Committee report Bommai told the meeting according to a statement from his office.

Karnataka has repeatedly rejected the report as the ESA tag is feared to bring restrictions that the government believes will hamper development works.

Karnataka is proud to be one of the states having a large forest area. Even before there were laws, people (in the Western Ghats region) followed environment friendly agriculture and horticulture activities. They have been conscious of conserving the Western Ghats Bommai said.

We already have the Geological Diversity Act, the Forest (Conservation) Act among others. It's not right to introduce another law that will affect the livelihood of people he added.

Bommai also pointed out that the Kasturirangan Committee report is based on satellite Surveys. Ground reality is different. A Physical Survey of every acre will show the environment friendly lifestyle of people he said.

According to the Chief Minister's office Yadav assured Karnataka that a team of officials will be sent to Karnataka for talks.

Courtesy:- Deccan Herald, Dated: 05.12.2021

## 13. ಮಳೆಯಿಂದ ರೂ.11,916 ಕೋಟಿ ನಷ್ಟ

ರಾಜ್ಯದಲ್ಲಿ ಸುರಿದ ಅಕಾಲಿಕ ಮಳೆಯಿಂದಾಗಿ ಸುಮಾರು ರೂ.11,916.30 ಕೋಟಿ ನಷ್ಟ ಹಾನಿಯುಂಟಾಗಿದೆ. ಇದು ಜಿಲ್ಲಾಡಳಿತಗಳು ಮಾಡಿರುವ ಅಂದಾಜು. ಆದರೆ, ಎಸ್‌ಡಿಆರ್‌ಎಫ್ ಪ್ರಕಾರ ರಾಜ್ಯದಲ್ಲಿ ರೂ.1,281.92 ಕೋಟಿ ನಷ್ಟವಾಗಿದೆ.

ಜಿಲ್ಲಾ ವಿಪತ್ತು ನಿರ್ವಹಣಾ ಪ್ರಾಧಿಕಾರಗಳಿಂದ ಮಾಹಿತಿ ಪಡೆದ ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರವು ಹಾನಿಯಾದ ಭೌತಿಕ ನಷ್ಟದ ಕುರಿತು ರಾಜ್ಯ ಸರ್ಕಾರಕ್ಕೆ ವರದಿ ಸಲ್ಲಿಸಿದೆ. ರಾಜ್ಯದ 31 ಜಿಲ್ಲೆಗಳ ಪೈಕಿ 23 ಜಿಲ್ಲೆಗಳಲ್ಲಿ ಮಳೆಯಿಂದ ಭಾರಿ ಪ್ರಮಾಣದ ಆಸ್ತಿ–ಪಾಸ್ತಿ ಹಾನಿಗೊಳಗಾಗಿವೆ. ಬೆಳೆ ಕೊಯ್ಲು ಜೀವ ಹಾನಿ ಹಾಗೂ ಮೂಲ ಸೌಕರ್ಯಕ್ಕೂ ಧಕ್ಕೆಯುಂಟಾಗಿದೆ.

ಒಟ್ಟು 20,083 ಮನೆಗಳು ಹಾನಿಗೊಳಗಾಗಿವೆ. ಈ ಪೈಕಿ 7,795 ಮನೆಗಳು ಸಂಪೂರ್ಣವಾಗಿ ಹಾನಿಗೀಡಾಗಿವೆ. ರಸ್ತೆ, ಸೇತುವೆಗಳು, ವಿದ್ಯುತ್ ಮೂಲಸೌಕರ್ಯಗಳು, ಶಾಲೆ, ಆಸ್ಪತ್ರೆಗಳು ಮತ್ತು ಅಂಗನವಾಡಿ ಸೇರಿದಂತೆ ಸರ್ಕಾರಿ ಕಟ್ಟಡಗಳು ತೀವ್ರ ಬಾಧಿತವಾಗಿವೆ.

19,366 ಕಿ.ಮೀ. ರಾಜ್ಯ ಹೆದ್ದಾರಿ, ಪ್ರಮುಖ ಜಿಲ್ಲೆ ಮನೆಗಳು ರಾಜ್ಯ ಹೆದ್ದಾರಿ, ಪ್ರಮುಖ ಜಿಲ್ಲೆ, ಗ್ರಾಮ ಮತ್ತು ನಗರ ರಸ್ತೆಗಳು 1,258 ಸೇತುವೆಗಳು, 7,204 ವಿದ್ಯುತ್ ಕಂಬಗಳು, 1,008 ವಿದ್ಯುತ್ ಸರಬರಾಜು ಟ್ರಾನ್ಸ್‌ಫಾರ್ಮರ್‌ಗಳು 446 ಕಿ.ಮೀ. ವಿದ್ಯುತ್ ಸರಬರಾಜು ಮಾರ್ಗಗಳು 439 ಸಣ್ಣ ನೀರಾವರಿ ಮತ್ತು ಟ್ಯಾಂಕ್‌ಗಳು 977 ನೀರು ಸರಬರಾಜು ಯೋಜನೆಗಳು ಮತ್ತು 7,711 ಸರ್ಕಾರಿ ಕಟ್ಟಡಗಳು ಹಾನಿಪಟ್ಟಿಯಲ್ಲಿವೆ.

ನೆರೆ ಹಾವಳಿಯಿಂದ ಬೆಳಗಾವಿ, ಉತ್ತರ ಕನ್ನಡ, ಬಾಗಲಕೋಟೆ ಜಿಲ್ಲೆಗಳು ಸೇರಿದಂತೆ ಹಲವು ಜಿಲ್ಲೆಗಳಲ್ಲೂ ಹಾನಿ ಸಂಭವಿಸಿತ್ತು. ಪ್ರವಾಹದಿಂದ ರೂ.8,962.02 ಕೋಟಿ ನಷ್ಟವಾಗಿತ್ತು. ಭೌತಿಕ ಹಾನಿ, ಬೆಳೆ ನಷ್ಟದ ನಕಲು ಎಸ್‌ಡಿಆರ್‌ಎಫ್ ವರದಿ ಸಲ್ಲಿಸಿದೆ.

ಆಧಾರ:ವಿಜಯಕರ್ನಾಟಕ, ದಿನಾಂಕ:05.12.2021

## 14. ಮೇಕೆದಾಟು ಚರ್ಚೆ ಉಳಿದ ರಾಜ್ಯಗಳ ನಕಾರ

ರಾಜ್ಯದ ಕಾವೇರಿ ನದಿಗೆ ಅಡ್ಡಲಾಗಿ ಮೇಕೆದಾಟು ಅಣೆಕಟ್ಟು ನಿರ್ಮಾಣ ಹಾಗೂ ಕುಡಿಯುವ ನೀರು ಯೋಜನೆಯ ಸಮಗ್ರ ಯೋಜನಾ ವರದಿ ಕುರಿತ ಚರ್ಚೆಯನ್ನು ಕಾವೇರಿ ನೀರು ನಿರ್ವಹಣಾ ಪ್ರಾಧಿಕಾರದ ಹಲವು ಸಭೆಗಳಿಗೆ ಅಜೆಂಡಾ ಎಂದು ಪರಿಗಣಿಸಲಾಗಿತ್ತಾದರೂ ಕರ್ನಾಟಕ ಹೊರತುಪಡಿಸಿ ಉಳಿದ ಕಣಿವೆ ರಾಜ್ಯಗಳ ಅಸಮ್ಮತಿಯಿಂದಾಗಿ ಈ ಬಗ್ಗೆ ಚರ್ಚೆ ಸಾಧ್ಯವಾಗಿಲ್ಲ ಎಂದು ಕೇಂದ್ರ ಜಲಶಕ್ತಿ ಇಲಾಖೆ ಸಂಸತ್ತಿಗೆ ತಿಳಿಸಿದೆ.

ಲೋಕಸಭೆಯಲ್ಲಿ ಹಾಸನ ಸಂಸದರು ಮೇಕೆದಾಟು ಯೋಜನೆಗೆ ಒಪ್ಪಿಗೆ ನೀಡಲಾಗಿದೆಯೇ ಎಂದು ಕೇಳಿದ್ದ ಪ್ರಶ್ನೆಗೆ ಈ ಲಿಖಿತ ಉತ್ತರ ನೀಡಲಾಗಿದೆ. ರಾಜ್ಯದ ಮೇಕೆದಾಟು ಯೋಜನೆಯಂತೆ ಕಾವೇರಿ ನದಿಯ ಕಟ್ಟಲೈ ಅಥವಾ ಮಾಯನೂರು ಬ್ಯಾರೇಜ್‌ನಲ್ಲಿ ಲಭ್ಯವಾಗುವ ಹೆಚ್ಚುವರಿ ನೀರನ್ನು ಕಾವೇರಿ–ವೈಗೈ–ಗುಂಡಾರ್ ಲಿಂಕ್ ಯೋಜನೆಗೆ ಬಳಸಿಕೊಳ್ಳುವ ಬಗ್ಗೆಯೂ ಪ್ರಜ್ವಲ್ ರೇವಣ್ಣ ಅವರು ಗಮನಸೆಳೆದಿದ್ದರು. ಈ ಬಗ್ಗೆ ರಾಜ್ಯ ಸರ್ಕಾರ ಕೇಂದ್ರಕ್ಕೆ ನೀಡಿರುವ ಮಾಹಿತಿ ಹಂಚಿಕೊಂಡ ಸಚಿವರು ಕಟ್ಟಲೈ ಬ್ಯಾರೇಜ್‌ನ್ನು 2014ರಲ್ಲಿ ನಿರ್ಮಾಣ ಮಾಡಲಾಗಿದೆ. ಆದರೆ ಈ ಯೋಜನೆ ಬಗ್ಗೆ ಕರ್ನಾಟಕದೊಂದಿಗೆ ಯಾವುದೇ ಮಾಹಿತಿ ಹಂಚಿಕೊಂಡಿರಲಿಲ್ಲ. ಅದೇ ರೀತಿ ಕಾವೇರಿ–ಗುಂಡಾರ್ ಲಿಂಕ್ ಯೋಜನೆ ಮಾಹಿತಿಯನ್ನು ರಾಜ್ಯದೊಂದಿಗೆ ಹಂಚಿಕೊಳ್ಳಲಾಗಿಲ್ಲ ಎಂದು ತಿಳಿಸಿದ್ದರು. ಇದು ಕರ್ನಾಟಕ ನೀಡಿರುವ ವಿವರಣೆ ಎಂದು ಅವರು ದಾಖಲಿಸಿದ್ದಾರೆ. ಹಳೆಯ ಕಟ್ಟಲೈ ಅಥವಾ ಮಾಯನೂರು ಬ್ಯಾರೇಜ್‌ನ್ನು 2014ರಲ್ಲಿ ಮರು ನಿರ್ಮಾಣ ಮಾಡಲಾಗಿತ್ತು. ಇಲ್ಲಿ ಹೆಚ್ಚಿನ ನೀರು ಸಂಗ್ರಹವೂ ಆಗಿಲ್ಲ ಎಂದು ತಮಿಳುನಾಡು ನವೆಂಬರ್ 30 ರಂದು ವಿವರಣೆ ನೀಡಿದ್ದ ಬಗ್ಗೆಯೂ ಕೇಂದ್ರ ಸಚಿವರು ಲೋಕಸಭೆಗೆ ತಿಳಿಸಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:05.12.2021

## 15. ನೀರಾವರಿ ಯೋಜನೆ ಶೀಘ್ರ ಪೂರ್ಣ

ಉತ್ತರ ಕರ್ನಾಟಕ ಭಾಗದ ಬಹು ವರ್ಷಗಳಿಂದ ಕನಸಾಗಿ ಉಳಿದಿರುವ ನೀರಾವರಿ ಯೋಜನೆಗಳನ್ನು ಶೀಘ್ರವಾಗಿ ಪೂರ್ಣಗೊಳಿಸಿ ರೈತರ ಹೊಲಗಳಿಗೆ ನೀರು ಹರಿಸಲಾಗುವುದು ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ.

ಕೊಪ್ಪಳ ನಗರದ ಸಾರ್ವಜನಿಕ ಮೈದಾನದಲ್ಲಿ ಹಮ್ಮಿಕೊಂಡಿದ್ದ ಬಿಜೆಪಿಯ ಜನ ಸ್ವರಾಜ್ ಸಮಾವೇಶಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು. ಈ ಹಿಂದೆ ನಾನು ನೀರಾವರಿ ಸಚಿವನಾಗಿದ್ದಾಗ ಉತ್ತರ ಕರ್ನಾಟಕ ಭಾಗದ ನೀರಾವರಿ ಯೋಜನೆಗಳಿಗೆ ಚಾಲನೆ ನೀಡಲಾಗಿದೆ.

ಕೃಷ್ಣಾ ಬಿ ಸ್ಕೀಮ್ ಯೋಜನೆಯ ಕಮಗಾರಿಗಳಿಗೂ ಚಾಲನೆ ನೀಡಲಾಗಿದೆ. ಅಲ್ಲದೇ ತುಂಗಭದ್ರಾ ಜಲಾಶಯದ ನಾಲೆಗಳ ಅಭಿವೃದ್ಧಿಗಾಗಿ 1200 ಕೋಟಿ ಅನುದಾನ ನೀಡಲಾಗಿತ್ತು. ಅದರ ಪರಿಣಾಮ ಇಂದು ಎಲ್ಲಾ ನಾಲೆಗಳ ಕಾಮಗಾರಿ ಪೂರ್ಣಗೊಂಡಿವೆ. ಕೊಪ್ಪಳ ಏತ ನೀರಾವರಿ ಯೋಜನೆ ಅಂತಿಮ ಹಂತದಲ್ಲಿದೆ ಎಂದರು.

ಕೃಷ್ಣ ಕೊಳ್ಳದ ಎ ಮತ್ತು ಬಿ ಸ್ಕೀಂ ಯೋಜನೆಯಲ್ಲಿ ಕಾಂಗ್ರೆಸ್ ಸರ್ಕಾರ ಈ ಭಾಗದ ರೈತರಿಗೆ ಮೋಸ ಮಾಡಿದೆ. ತುಂಭಭದ್ರಾದಿಂದ ಕೂಡಲಸಂಗಮದವರೆಗೂ ಪಾದಯಾತ್ರೆ ನಡೆಸಿ, ಈ ಭಾಗದ ನೀರಾವರಿ ಯೋಜನೆಗಾಗಿ ಪ್ರತಿವರ್ಷ 50 ಸಾವಿರ ಕೋಟಿ ಅನುದಾನ ನೀಡಿ, ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸುತ್ತೇವೆ ಎಂದು ಕೂಡಲ ಸಂಗಮದಲ್ಲಿ ಆಣೆ ಪ್ರಮಾಣ ಮಾಡಿದ

ಕಾಂಗ್ರೆಸ್ ನಾಯಕರು, ನಂತರದಲ್ಲಿ ಪಕ್ಷ ಅಧಿಕಾರಕ್ಕೆ ಬಂದ ಬಳಿಕ ಐದು ವರ್ಷಗಳಲ್ಲಿ ಕೇವಲ 17 ಸಾವಿರ ಕೋಟಿ ನೀಡಿದ್ದಾರೆ. ಕಾಂಗ್ರೆಸ್ ಪಕ್ಷಕ್ಕೆ ಜನರು ತಕ್ಕ ಪಾಠ ಕಲಿಸಬೇಕು ಎಂದರು.

ಕಾಂಗ್ರೆಸ್ ಪಕ್ಷವು ಉತ್ತರ ಕರ್ನಾಟಕಕ್ಕೆ ಸಾಕಷ್ಟು ಅನ್ಯಾಯ ಮಾಡಿದೆ. ಅಷ್ಟೇ ಅಲ್ಲದೆ ಹೈದ್ರಾಬಾದ್ ಕರ್ನಾಟಕ ಕಲ್ಯಾಣ ಕರ್ನಾಟಕ ಎಂದು ನಾಮಕರಣ ಮಾಡುವ ಮೂಲಕ ನಮ್ಮ ನಾಯಕರಾದ ಯಡಿಯೂರಪ್ಪನವರು ಗುಲಾಮಗಿರಿಯ ಸಂಕೇತವನ್ನು ಕಿತ್ತೆಸೆದಿದ್ದಾರೆ.

ಕಲ್ಯಾಣ ಕರ್ನಾಟಕದ ಅಭಿವೃದ್ಧಿಯ ಆಶಯ ಹೊಂದಿರುವ ಯಡಿಯೂರಪ್ಪನವರ ಕನಸು ನನಸು ಮಾಡಲು ನಮ್ಮ ಸರ್ಕಾರ ಪ್ರತಿವರ್ಷ ಅಭಿವೃದ್ಧಿ ಮಂಡಳಿಗೆ ರೂ.3 ಸಾವಿರ ಕೋಟಿ ನೀಡುತ್ತಿದೆ ಎಂದರು.

ಈ ಸಂದರ್ಭದಲ್ಲಿ ಬಿಜೆಪಿ ರಾಜಾಧ್ಯಕ್ಷ ನಳೀನ್ ಕುಮಾರ ಕಟೀಲ್, ಜಿಲ್ಲಾ ಉಸ್ತುವಾರಿ ಸಚಿವ ಹಾಲಪ್ಪ ಆಚಾರ್ ಸೇರಿದಂತೆ ಅನೇಕರು ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:19.12.2021.

## 16. ಮೇಕೆದಾಟು ಯೋಜನೆ ಹಂತ ಹಂತವಾಗಿ ಪೂರ್ಣ

ಮೇಕೆದಾಟು ವಿಚಾರವಾಗಿ ರಾಜ್ಯ ಸರ್ಕಾರ ತುಂಬ ಗಂಭೀರವಾಗಿದ್ದು, ಹಂತ ಹಂತವಾಗಿ ಎಲ್ಲವನ್ನೂ ಪೂರ್ಣಗೊಳಿಸಲಿದ್ದೇವೆ ಎಂದು ಮುಖ್ಯ ಮಂತ್ರಿ ಅವರು ಹೇಳಿದರು. ಪ್ರಶ್ನೋತ್ತರ ವೇಳೆಯಲ್ಲಿ ಮೇಕೆದಾಟು ಯೋಜನೆ ಕುರಿತು ಶರತ್ ಬಚ್ಚೇಗೌಡ ಅವರು ಪ್ರಶ್ನೆ ಕೇಳಿದಾಗ ಸ್ಪೀಕರ್ ಅವರು ಮಾತನಾಡಿ ಈ ವಿಷಯ ತುಂಬ ಸೂಕ್ಷ್ಮವಾಗಿದ್ದು, ಇಲ್ಲಿ ಚರ್ಚೆ ಬೇಡ ಸಚಿವರೊಂದಿಗೆ ಚರ್ಚಿಸಿ ಮಾಹಿತಿ ಪಡೆಯಲು ಸೂಚಿಸಿದರು. ಆಗ ಡಿ.ಕೆ.ಶಿವಕುಮಾರ್, ಕೃಷ್ಣಬೈರೇಗೌಡ ಅವರು ಮಧ್ಯಪ್ರವೇಶ ಮಾಡಿದರು. ನಂತರ ಬಸವರಾಜ ಬೊಮ್ಮಾಯಿ ಮಾತನಾಡಿ ಮೇಕೆದಾಟು ಯೋಜನೆ ಇಂದಿನದಲ್ಲ, ನೀರಾವರಿ ಕಾರ್ಪೋರೇಷನ್ ಕಾಲದಿಂದಲೂ ಇದೆ. ಇದರ ಡಿಪಿಆರ್‌ಗೆ ಐದು ವರ್ಷ ಬೇಕಾಗಿತ್ತು. ಸುಮಾರು ರೂ. 20 ರಿಂದ 25 ಕೋಟಿಗಳನ್ನು ಕೇವಲ ಡಿಪಿಆರ್ ಸಿದ್ದಪಡಿಸಲು ಖರ್ಚು ಮಾಡಿದ್ದಾರೆ. ನಂತರ ಸಾಮಾನ್ಯ ಟೆಂಡರ್, ಗ್ಲೋಬಲ್ ಟೆಂಡರ್ ಕೂಡ ಮಾಡಲಾಗಿತ್ತು. ಕಾವೇರಿ ನದಿ ನೀರು ಹಂಚಿಕೆ ಸಂಬಂಧಿಸಿದಂತೆ ನ್ಯಾಯಾಧೀಕರಣ ತೀರ್ಪು ಬಂದಿದೆ. ಹೆಚ್ಚುವರಿ ನೀರು ಬಂದಾಗ ಹಿಡಿದಿಡಲು ಸಾಧ್ಯವಿಲ್ಲ. ಭೌಗೋಳಿಕವಾಗಿ ನಮ್ಮ ಭೂಮಿ ಮೇಲ್ಭಾಗದಲ್ಲಿ ಇರುವುದರಿಂದ ಕೃಷಿ ಚಟುವಟಿಕೆ ಮಾಡುವುದು ಕಷ್ಟವಾಗಿದೆ. ನಾವು ಯಾವುದೇ ಯೋಜನೆ ತಂದರೂ ತಮಿಳುನಾಡಿನವರು ಕ್ಯಾತೆ ತೆಗೆಯುತ್ತಾರೆ. ಡಿಪಿಆರ್ ಮಾಡಿದಾಗಲೂ ತಗಾದೆ ಎತ್ತಿದ್ದರು. ಮುಂದಿನ ಸಭೆಯಲ್ಲಿ ಕೇಂದ್ರಕ್ಕೆ ಮನವಿ ಮಾಡಲಿದ್ದೇವೆ. ಹಂತ ಹಂತವಾಗಿ ಯೋಜನೆ ಅನುಷ್ಠಾನ ಮಾಡುತ್ತೇವೆ ಎಂದರು.

ಆಧಾರ:ಉದಯವಾಣಿ, ದಿನಾಂಕ:22.12.2021

# ಭಾಗ – 6

# ಚುನಾವಣಾ ಸುದ್ದಿಗಳು

## 1. ಇಂದು ಹಾನಗಲ್, ಸಿಂದಗಿ ಉಪಸಮರ

ಆಡಳಿತ ಮತ್ತು ಪ್ರತಿಪಕ್ಷಗಳ ನಡುವೆ ಜಿದ್ದಾಜಿದ್ದಿನ ಕಣವಾಗಿ ಮಾರ್ಪಟ್ಟಿರುವ ಹಾನಗಲ್ ಮತ್ತು ಸಿಂದಗಿ ಕ್ಷೇತ್ರಗಳ ಉಪಚುನಾವಣೆಯ ಮತದಾನ ಅಕ್ಟೋಬರ್ 29 ರಂದು ನಡೆಯಲಿದೆ.

ಮುಂಬರುವ ವಿಧಾನಸಭಾ ಚುನಾವಣೆಗೆ ಮತದಾರರ ನಾಡಿಮಿಡಿತ ತಿಳಿಯುವ ಚುನಾವಣೆ ಎಂದೇ ವಿಶ್ಲೇಷಣೆಗೊಳಪಟ್ಟಿರುವ ಈ ಎರಡು ಕ್ಷೇತ್ರಗಳ ಫಲಿತಾಂಶ ಘಟಾನುಘಟಿ ನಾಯಕರ ಹಣೆಬರಹವನ್ನೂ ನಿರ್ಧರಿಸಲಿದೆ. ಶನಿವಾರ ಬೆಳಗ್ಗೆ 7 ರಿಂದ ಸಂಜೆ 7 ರವರೆಗೆ ಮತದಾನ ನಡೆಯಲಿದೆ. ಮುಕ್ತ ಮತ್ತು ನ್ಯಾಯಸಮ್ಮತ ಮತದಾನಕ್ಕೆ ಚುನಾವಣಾ ಆಯೋಗ ಸಿದ್ಧವಾಗಿದೆ.

**ಕದನ ಕಣದಲ್ಲಿ:** ಸಿಂದಗಿಯಲ್ಲಿ 297 ಮತಕೇಂದ್ರ ಸ್ಥಾಪಿಸಲಾಗಿದ್ದು, ಮತದಾನ ಕಾರ್ಯಕ್ಕೆ 1,308 ಸಿಬ್ಬಂದಿ ನಿಯೋಜಿಸಲಾಗಿದೆ. ಒಟ್ಟ 2,34,584 ಮತದಾರರಿದ್ದಾರೆ. ಮತದಾನಕ್ಕಾಗಿ ಹಾನಗಲ್ ಕ್ಷೇತ್ರ ವ್ಯಾಪ್ತಿಯಲ್ಲಿ 263 ಮತಗಟ್ಟೆ ಸ್ಥಾಪಿಸಲಾಗಿದೆ. 1,155 ಸಿಬ್ಬಂದಿಯನ್ನು ನಿಯೋಜಿಸಿ ತರಬೇತಿ ನೀಡಲಾಗಿದೆ. ಒಂದು ಅಂಗವಿಕಲ ಸ್ನೇಹಿ ಮತಗಟ್ಟೆ, 2 ಸಖಿ ಮತಗಟ್ಟೆ ಸ್ಥಾಪಿಸಲಾಗಿದೆ. ಒಟ್ಟು 2,04,481 ಮತದಾರರಿದ್ದಾರೆ. 121 ಮತಗಟ್ಟೆಗಳಲ್ಲಿ ವೆಬ್ ಕಾಸ್ಟಿಂಗ್ ಸೌಲಭ್ಯ ಕಲ್ಪಿಸಲಾಗಿದೆ.

**ನಿರ್ಣಾಯಕ :** ಹಾನಗಲ್, ಸಿಂದಗಿಯಲ್ಲಿಗೆ ಗೆಲುವು ಆಡಳಿತಾರೂಢ ಬಿಜೆಪಿ ಹಾಗೂ ಕಾಂಗ್ರೆಸ್ ಮತ್ತು ಜೆಡಿಎಸ್‌ಗೆ ನಿರ್ಣಾಯಕವಾಗಿದೆ. ಈ ಎರಡೂ ಕ್ಷೇತ್ರಗಳನ್ನು ಗೆದ್ದು ತಮ್ಮ ನಾಯಕತ್ವ ಸಾಬೀತುಪಡಿಸುವ ಅನಿವಾರ್ಯತೆ ಸಿಎಂಗಿದೆ. ಹೀಗಾಗಿಯೇ ಎರಡೂ ಕ್ಷೇತ್ರಗಳಲ್ಲಿ 10 ದಿನ ಬೀಡುಬಿಟ್ಟು ಅಭ್ಯರ್ಥಿಗಳ ಪರ ಪ್ರಚಾರ ನಡೆಸಿದ್ದರು. ಸಿದ್ದರಾಮಯ್ಯ, ಯಡಿಯೂರಪ್ಪ, ಡಿ.ಕೆ.ಶಿವಕುಮಾರ್, ಎಚ್.ಡಿ.ದೇವೇಗೌಡ, ಎಚ್.ಡಿ.ಕುಮಾರಸ್ವಾಮಿ ಸೇರಿದಂತೆ ಅನೇಕ ಘಟಾನುಘಟಿಗಳು ಕ್ಷೇತ್ರದಲ್ಲಿ ಬೀಡುಬಿಟ್ಟು ಅಬ್ಬರದ ಪ್ರಚಾರ ನಡೆಸಿದ್ದರು. ಬಿಜೆಪಿ ಹೋಬಳಿಗೊಬ್ಬ ಸಚಿವರನ್ನು ನಿಯೋಜಿಸಿತ್ತು.

ಆಧಾರ: ವಿಜಯವಾಣಿ, ದಿನಾಂಕ: 30.10.2021

## 2. ಕಾಂಗ್ರೆಸ್‌ಗೆ ಚೇತೋಹಾರಿ ಫಲಿತಾಂಶ

ಹದಿಮೂರು ರಾಜ್ಯಗಳ 29 ವಿಧಾನಸಭಾ ಕ್ಷೇತ್ರಗಳು ಹಾಗೂ 3 ಲೋಕ ಸಭಾ ಚುನಾವಣೆಗಳಿಗೆ ನಡೆದ ಉಪಚುನಾವಣೆಯಲ್ಲಿ ಕಾಂಗ್ರೆಸ್ ಕೆಲವೊಂದು ರಾಜ್ಯಗಳಲ್ಲಿ ಮೇಲುಗೈ ಸಾಧಿಸಿದ್ದು, ಪಶ್ಚಿಮ ಬಂಗಾಳದ ಎಲ್ಲ ನಾಲ್ಕು ಸ್ಥಾನಗಳನ್ನು ಟಿಎಂಸಿ ಬಾಚಿಕೊಂಡಿದೆ.

ಹಿಮಾಚಲ ಪ್ರದೇಶ ಮತ್ತು ಹರಿಯಾಣಾಗಳಲ್ಲಿ ಆಡಳಿತರೂಢ ಬಿಜೆಪಿಗೆ ಹಿನ್ನಡೆಯಾಗಿದೆ. ಎಲ್ಲ ಮೂರು ಕ್ಷೇತ್ರಗಳನ್ನು ಕಾಂಗ್ರೆಸ್ ಗೆದ್ದುಕೊಂಡಿದೆ. ಇದು ಅಲ್ಲಿ ಆಡಳಿತ ವಿರೋಧಿ ಬಲವಾಗಿದೆ ಎನ್ನುವುದನ್ನು ತೋರಿಸಿದೆ. ಅಸ್ಸಾಂನಲ್ಲಿ ಎಲ್ಲ ಐದು ಸ್ಥಾನಗಳು ಬಿಜೆಪಿ ಬುಟ್ಟಿಗೆ ಬಿದ್ದಿವೆ. ಪಶ್ಚಿಮ ಬಂಗಾಳದಲ್ಲಿ ಟಿಎಂಸಿ ಪಾರುಪತ್ಯ ಮುಂದುವರೆದಿದ್ದು, ನಾಲ್ಕೂ ಕ್ಷೇತ್ರಗಳನ್ನು ಬಾಚಿಕೊಂಡಿದೆ. ಎಲ್ಲ ಕ್ಷೇತ್ರಗಳಲ್ಲೂ ಬಿಜೆಪಿ ಠೇವಣಿ ಕಳೆದುಕೊಂಡಿದೆ. ನಾಲ್ಕೂ ಕ್ಷೇತ್ರಗಳಲ್ಲಿ ಒಟ್ಟು ಶೇ.75 ರಷ್ಟು ಮತಗಳನ್ನು ಟಿಎಂಸಿ ಗಳಿಸಿದೆ ಎನ್ನುವುದು ಮಮತಾ ಬ್ಯಾನರ್ಜಿ ಅವರಿಗೆ ಜನರ ಮುಂದುವರಿದ ಬೆಂಬಲವನ್ನು ಸೂಚಿಸುತ್ತದೆ. ಮೂರು ಲೋಕಸಭಾ ಕ್ಷೇತ್ರಗಲನ್ನು ಶಿವಸೇನೆ, ಕಾಂಗ್ರೆಸ್ ಹಾಗೂ ಬಿಜೆಪಿ ಹಂಚಿಕೊಂಡಿವೆ.

ಹಿಮಾಚಲ ಪ್ರದೇಶದ ಮಂಡಿ ಲೋಕಸಭ ಕ್ಷೇತ್ರದಿಂದ ಮಾಜಿ ಮುಖ್ಯಮಂತ್ರಿ ವೀರಭದ್ರ ಸಿಂಗ್ ಅವರ ಪತ್ನಿ ಪ್ರತಿಭಾ ಸಿಂಗ್ ಅವರಿಗೆ ವಿಜಯಲಕ್ಷ್ಮಿ ಒಲಿದಿದ್ದಾಳೆ. ಕೇಂದ್ರಾಡಳಿತ ಪ್ರದೇಶ ದಾದ್ರಾ ಮತ್ತು ನಗರ್ ಹವೇಲಿ ಲೋಕಸಭಾ ಕ್ಷೇತ್ರದಲ್ಲಿ ಶಿವಸೇನಾ ಜಯಭೇರಿ ಬಾರಿಸಿದೆ. ಶಿವಸೇನಾಗೆ ಇದು ಮಹಾರಾಷ್ಟ್ರದ ಹೊರಗೆ ಸಾಧಿಸಿರುವ ಮೊದಲ ಗೆಲುವಾಗಿದೆ. ಮಧ್ಯಪ್ರದೇಶ ಖಂಡವಾ ಲೋಕಸಭಾ ಕ್ಷೇತ್ರದಲ್ಲಿದ ಬಿಜೆಪಿ ಅಭ್ಯರ್ಥಿ ಜ್ಞಾನೇಶ್ವರ್ ಪಾಟೀಲ್ ಗೆದ್ದಿದ್ದಾರೆ.

ಹರಿಯಾಣದ ಎಲ್ಲೆನಾಬಾದ್‌ನಿಂದ ಮಾಜಿ ಮುಖ್ಯಮಂತ್ರಿ ಓಂ ಪ್ರಕಾಶ್ ಚೌತಾಲಾ ಅವರ ಪುತ್ರ ಅಭಯ್ ಚೌತಾಲಾ ವಿಧಾನಸಭೆ ಪ್ರವೇಶಿಸಿದ್ದಾರೆ. ಮೇಘಾಲಯದಲ್ಲಿ ಯುನೈಟೆಡ್ ಡೆಮೊಕ್ರಾಟಿಕ್ ಪಾರ್ಟಿಯಿಂದ ಸ್ಪರ್ಧಿಸಿದ್ದ ಮಾಜಿ ಫುಟ್‌ಬಾಲ್ ಆಟಗಾರ ಯೂಗೆನಿಸನ್ ಲಿಂಗಡೋ ಜಯ ದಾಖಲಿಸಿದ್ದಾರೆ. ತೆಲಂಗಾಣದ ಹುಜುರಾಬಾದ್ ವಿಧಾನಸಭಾ ಕ್ಷೇತ್ರದಲ್ಲಿ ಬಿಜೆಪಿ ಗೆಲುವಿನ ನಗೆ ಬೀರಿದ್ದಾರೆ. ರಾಜಸ್ಥಾನದ ವಲ್ಲಭನಗರ ಮತ್ತು ಧಾರಿಯಾವಾಡ ಎರಡೂ ಕ್ಷೇತ್ರಗಳು ಕಾಂಗ್ರೆಸ್ ಪಾಲಾಗಿವೆ. ಮಧ್ಯಪ್ರದೇಶದಲ್ಲಿ ಬಿಜೆಪಿ 2, ಕಾಂಗ್ರೆಸ್ 1 ಸ್ಥಾನಗಳನ್ನು ಗೆದ್ದಿದೆ. ಮಹಾರಾಷ್ಟ್ರದ ದೇಗಲೂರ್ ಮೀಸಲು ಕ್ಷೇತ್ರ ಕಾಂಗ್ರೆಸ್ ಪಾಲಾಗಿದೆ. ಬಿಹಾರದಲ್ಲಿ ಆರ್‌ಜೆಡಿಯಿಂದ ಪ್ರಬಲ ಪೈಪೋಟಿ ನಡುವೆಯೂ ಎರಡೂ ಸ್ಥಾನಗಳನ್ನು ಜೆಡಿಯು ಗೆದ್ದುಕೊಳ್ಳುವಲ್ಲಿ ಯಶಸ್ವಿಯಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 03.11.2021

## 3. ಕೈ – ಕಮಲ ಸಮಬಲ

ವಿವಿಧ ರಾಜ್ಯಗಳ 30 ವಿಧಾನಸಭಾ ಕ್ಷೇತ್ರಗಳಿಗೆ ನಡೆದ ಉಪ ಚುನಾವಣೆಯಲ್ಲಿ ಒಟ್ಟಾರೆ ಪ್ರಾದೇಶಿಕ ಪಕ್ಷಗಳು ಪ್ರಾಬಲ್ಯ ಮೆರೆದಿದ್ದರೂ, ರಾಜ್ಯದಲ್ಲಿ ಮಾತ್ರ ರಾಷ್ಟ್ರೀಯ ಪಕ್ಷಗಳಾದ ಬಿಜೆಪಿ ಹಾಗೂ ಕಾಂಗ್ರೆಸ್ ನಡುವೆಯೇ ಜಿದ್ದಾಜಿದ್ದಿ ಇರುವುದನ್ನು ಹಾನಗಲ್ ಹಾಗೂ ಸಿಂದಗಿ ಕ್ಷೇತ್ರಗಳ ಫಲಿತಾಂಶ ಮತ್ತೊಮ್ಮೆ ಸಾಬೀತುಪಡಿಸಿದೆ. ಸ್ವತಃ ಮುಖ್ಯಮಂತ್ರಿಗಳೇ ಪ್ರತಿಷ್ಠೆ ಪಣಕ್ಕಿಟ್ಟು ಪ್ರಚಾರ ನಡೆಸಿದ್ದ ಹಾನಗಲ್ ಕಾಂಗ್ರೆಸ್ ಪಾಲಾಗಿದ್ದರೆ, ಸಿಂದಗಿ ಗೆಲ್ಲುವ ಮೂಲಕ ಬಿಜೆಪಿ ಕೊಂಚ ಸಮಾಧಾನ ಪಟ್ಟಿದೆ. ಎರಡೂ ಕ್ಷೇತ್ರಗಳಲ್ಲಿ ಠೇವಣಿ ಕಳೆದುಕೊಂಡಿರುವ ಜೆಡಿಎಸ್ ಮುಖಭಂಗಕ್ಕೀಡಾಗಿದೆ. ರಾಜ್ಯದ ಈ ಫಲಿತಾಂಶ ಮುಂದಿನ ಸಾರ್ವತ್ರಿಕ ಚುನಾವಣೆಯಲ್ಲೂ ರಾಷ್ಟ್ರೀಯ ಪಕ್ಷಗಳ ನಡುವಿನ ಪೈಪೋಟಿ ಇದೇ ಹಾದಿಯಲ್ಲಿರಬಹುದು ಎಂಬುದಕ್ಕೆ ಮುನ್ನುಡಿ ಬರೆದಿದೆ. ಉಪ ಚುನಾವಣೆ ನಡೆದ ದೇಶದ 30 ಕ್ಷೇತ್ರಗಳ ಪೈಕಿ ಕಾಂಗ್ರೆಸ್ 8, ಬಿಜೆಪಿ 7ರಲ್ಲಿ ಗೆಲುವು ಸಾಧಿಸಿದೆ. ಉಳಿದ 15 ಕ್ಷೇತ್ರಗಳು ಪ್ರಾದೇಶಿಕ ಪಕ್ಷಗಳ ಪಾಲಾಗಿವೆ. ಹಾನಗಲ್‌ನಲ್ಲಿ ಕಾಂಗ್ರೆಸ್‌ನ ಶ್ರೀನಿವಾಸ ಮಾನೆ, ಸಿಂದಗಿಯಲ್ಲಿ ಬಿಜೆಪಿಯ ರಮೇಶ್ ಭೂಸನೂರ ಗೆಲುವು ಸಾಧಿಸಿದ್ದರೆ. ಯಾವುದೇ ಉಪ ಚುನಾವಣೆ ಮುಂದಿನ ಸಾರ್ವತ್ರಿಕ ಚುನಾವಣೆಗೆ ದಿಕ್ಸೂಚಿಯಲ್ಲವಾದರೂ ಸಾರ್ವತ್ರಿಕ ಚುನಾವಣೆ 16 ತಿಂಗಳು ಇರುವಾಗ ನಡೆದಿರುವ ಈ ಚುನಾವಣೆಯ ಫಲಿತಾಂಶ ಜನರ ನಾಡಿಮಿಡಿತದ ಬಿಂಬ ಎಂದೇ ವ್ಯಾಖ್ಯಾನಿಸಲಾಗುತ್ತಿದೆ. ಸಾರ್ವತ್ರಿಕ ಚುನಾವಣೆಯಲ್ಲಿ ಆಗಿನ ಸಂದರ್ಭಗಳು, ಚುನಾವಣಾ ವಿಷಯಗಳೇ ಬೇರೆ ಬೇರೆಯಾಗಿರುತ್ತವೆ. ದೇಶದಲ್ಲಿ ಪ್ರಾದೇಶಿಕ ಪಕ್ಷಗಳು ರಾಷ್ಟ್ರೀಯ ಪಕ್ಷಗಳ ಎದುರು ಅಸ್ತಿತ್ವ ಉಳಿಸಿಕೊಂಡಿವೆ. ಆದರೆ, ರಾಜ್ಯದಲ್ಲಿ ರಾಷ್ಟ್ರೀಯ ಪಕ್ಷಗಳು ಪ್ರಾಬಲ್ಯ ಉಳಿಸಿಕೊಂಡಿವೆ.

| ಉಪ ಸಮರ ಫಲಿತಾಂಶ – ಹಾನಗಲ್ | | |
|---|---|---|
| **ಅಭ್ಯರ್ಥಿ** | **ಪಕ್ಷ** | **ಪಡೆದ ಮತ** |
| ಶ್ರೀನಿವಾಸ ಮಾನೆ | ಕಾಂಗ್ರೆಸ್ | 87,490 (ಗೆಲುವು)<br>ಅಂತರ – 7,373 |
| ಶಿವರಾಜ ಸಜ್ಜನತರ | ಬಿಜೆಪಿ | 80,117 |
| ನಿಯಾಜ್ ಶೇಖ್ | ಜೆಡಿಎಸ್ | 927 |

| ಸಿಂದಗಿ | | |
|---|---|---|
| **ಅಭ್ಯರ್ಥಿ** | **ಪಕ್ಷ** | **ಪಡೆದ ಮತ** |
| ರಮೇಶ ಭುಸನೂರ | ಬಿಜೆಪಿ | 93,865 (ಗೆಲುವು)<br>ಅಂತರ – 31,185 |
| ಅಶೋಕ ಮನಗೂಳಿ | ಕಾಂಗ್ರೆಸ್ | 62,680 |
| ನಾಜಿಯಾ ಅಂಗಡಿ | ಜೆಡಿಎಸ್ | 4,353 |

ಆಧಾರ: ವಿಜಯವಾಣಿ, ದಿನಾಂಕ: 03.11.2021

## 4. Political parties gear up for election to 25 Council Seats

Even before the dust of the bitterly fought byelections to Hangal and Sindgi has settled, political parties are gearing up for election to 25 seats in the Legislative Council in December. In the current seat matrix, none of the parties have a majority, but this election is being seen as an opportunity for the BJP to get majority in the House while the JD(S) will be fighting to retain its seats - numbers that have been declining in the recent years.

On January 5, 2022, the tenure of some of the senior members across the three parties, who have been elected to the Legislative Council from local bodies will come to an end. Currently, in the 75-member House, BJP is the largest party with 32 seats, Congress has 29, and JD(S) has 12 members. Besides the Chairman, there is one Independent.

Of the 25 members set to retire, Congress member Srinivas Mane has been elected to the Legislative Assembly from the recently held byelections from Hangal.

Though the Election Commission is yet to announce the dates for the election, the parties have started preparations. On Sunday, senior Congress leaders were in a huddle to discuss strategies to retain the seats and to thwart BJP’s effort to get a majority in the House. The BJP on the other hand has announced ‘Jana Swaraj’ conclaves from November 19, involving gram

panchayat members, Legislative Assembly and Council members and MPs. “The conclaves are being held to win the maximum number of seats and we are starting poll preparations early. The list of candidates will be shortlisted here but finalised by the Central leadership,” BJP state general secretary N. Ravikumar said on Sunday. “We will focus on gram panchayat members.”

The election is being held in the absence of formation of zilla panchayats and taluk panchayats for which elections have been postponed. Voting in the Council polls will be affected due to this change while the newly elected gram panchayat members will be key in the polls.

The JD(S) is expecting desertion with three of its members Sandesh Nagaraj, Kantharaj (BML), and C.R. Manohar believed to be leaving the party. Mr. Nagaraj and Mr. Manohar have approached the BJP for ticket, it is learnt. Acknowledging the development, Mr. Ravikumar said: “The party’s core committee will decide on these issues.”

Meanwhile, JD(S) spokesperson T.A. Sharavana said the preparation has already started, and some possible candidates have come forward seeking ticket. “Candidates will be finalised by senior leaders in the party forum after the dates are announced by the Election Commission.”

Riding on a morale boosting victory in Hangal, the Congress is strategising to retain its seats, and increase its presence in the House. Currently, despite being the largest Opposition party in the House, it has been unable to block some crucial Bills as the JD(S) has either supported or abstained when the Bills are being passed, helping the BJP Government, Congress sources said. Though the discussion has begun, the list of probable candidates will be announced later, sources said.

Courtesy: The Hindu –dt:- 08.11.2021

## 5. ಪರಿಷತ್ ಚುನಾವಣೆ : ಮಹಿಳೆಯರಿಗಿಲ್ಲ ಅವಕಾಶ

ಸ್ಥಳೀಯ ಸಂಸ್ಥೆಗಳಿಂದ ವಿಧಾನ ಪರಿಷತ್ ಸದಸ್ಯರ ಆಯ್ಕೆಗೆ ನಡೆಯುತ್ತಿರುವ ಚುನಾವಣೆಯ ಒಟ್ಟು ಮತದಾರರ ಪೈಕಿ ಅರ್ಧಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳಾ ಮತದಾರರಿದ್ದಾರೆ. ಆದರೆ, ಆಕಾಂಕ್ಷಿಗಳ ಪಟ್ಟಿಯಲ್ಲಿ ಅವರ ಹೆಸರು ಕೇಳಿ ಬರುತ್ತಿಲ್ಲ.

ಅವಿಭಜಿತ ಧಾರವಾಡ ಜಿಲ್ಲೆ (ಧಾರವಾಡ, ಗದಗ, ಹಾವೇರಿ), ಬೆಳಗಾವಿ ಜಿಲ್ಲೆ ಹಾಗೂ ಅವಿಭಜಿತ ವಿಜಯಪುರ ಜಿಲ್ಲೆ (ವಿಜಯಪುರ, ಬಾಗಲಕೋಟೆ) ಯಿಂದ ತಲಾ ಎರಡು ಸ್ಥಾನಗಳಿಗೆ ನಡೆಯುತ್ತಿರುವ ಚುನಾವಣೆಗೆ ಸ್ಪರ್ಧಿಸಲು ಟಿಕೆಟ್‌ಗಾಗಿ ತೀವ್ರ ಯತ್ನ ನಡೆಸುತ್ತಿರುವವರಲ್ಲಿ ಪುರುಷ ಅಭ್ಯರ್ಥಿಗಳ ಹೆಸರೇ ಮುಂಚೂಣಿಯಲ್ಲಿವೆ.

‘ವಿಧಾನ ಪರಿಷತ್ ಚುನಾವಣೆಗೆ ಸ್ಪರ್ಧಿಸುವ ಆಕಾಂಕ್ಷಿಗಳಿಂದ ಅರ್ಜಿ ಅಹ್ವಾನಿಸಿದಾಗ ಮಹಿಳೆಯರು ಯಾರೂ ಅರ್ಜಿ ಸಲ್ಲಿಸಿಲ್ಲ. ಆದರೆ, ಇತ್ತೀಚೆಗೆ ಕೆಲ ಮಹಿಳೆಯರಿಗೆ ಟಿಕೆಟ್ ನೀಡಬೇಕು ಎಂದು ಕೆಲವರು ಮನವಿ ಮಾಡಿದ್ದಾರೆ. ಪಕ್ಷದ ರಾಜ್ಯ ನಾಯಕರು ಈ ವಿಷಯ ತೀರ್ಮಾನಿಸಲಿದ್ದಾರೆ’ ಎನ್ನುತ್ತಾರೆ ಕಾಂಗ್ರೆಸ್ ಧಾರವಾಡ ಗ್ರಾಮೀಣ ಜಿಲ್ಲಾ ಘಟಕದ ಅಧ್ಯಕ್ಷ ಅನಿಲಕುಮಾರ್ ಪಾಟೀಲ್.

ಉತ್ತರ ಪ್ರದೇಶದ ಮುಂಬರುವ ವಿಧಾನಸಭೆ ಚುನಾವಣೆಯಲ್ಲಿ ಶೇ.40 ರಷ್ಟು ಸ್ಥಾನಗಳನ್ನು ಮಹಿಳೆಯಿರಿಗೆ ನೀಡಲಾಗುವುದು ಎಂದು ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಪ್ರಿಯಾಂಕಾ ಗಾಂಧಿ ಹೇಳಿದ್ದಾರೆ. ಆದರೆ, ಇಲ್ಲಿ ಮಹಿಳೆಯರು ಅರ್ಜಿ ಸಲ್ಲಿಸಿಲ್ಲ ಎಂಬ ನೆಪ ಒಡ್ಡಲಾಗುತ್ತಿದೆ ಎನ್ನುವುದು ಪಕ್ಷದ ನಾಯಕಿಯರ ದೂರು.

'ಬಿಜೆಪಿಯು ಬೇರೆ, ಬೇರೆ ಸಂದರ್ಭಗಳಲ್ಲಿ ಮಹಿಳೆಯಿರಿಗೆ ಅವಕಾಶ ನೀಡಿದೆ. ವಿಧಾನ ಪರಿಷತ್ ಚುನಾವಣೆಯಲ್ಲಿ ಮಹಿಳೆಯರು ಮುಂಚೂಣಿಯಲ್ಲಿಲ್ಲ' ಎಂದು ಬಿಜೆಪಿ ಹುಬ್ಬಳ್ಳಿ–ಧಾರವಾಡ ಜಿಲ್ಲಾ ಮಹಾನಗರ ವಕ್ತಾರೆ ರವಿ ನಾಯಕ.

ಸ್ಥಳೀಯ ಸಂಸ್ಥೆಗಳಲ್ಲಿ ಶೇ.50 ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಟ್ಟಿರುವುದರಿಂದ ಆ ಚುನಾವಣೆಯಲ್ಲಿ ಪಕ್ಷದ ಮುಖಂಡರ ಪತ್ನಿ, ತಾಯಿ, ಸಹೋದರಿ, ಸೊಸೆ ಸೇರಿದಂತೆ ಅವರ ಕುಟುಂಬ ಸದಸ್ಯರಿಗೆ ಸ್ಪರ್ಧಿಸಲು ಅವಕಾಶ ನೀಡಲಾಗುತ್ತದೆ. ಮೀಸಲಾತಿ ಇಲ್ಲದ್ದಿದ್ದರೆ, ನಮಗೆ ಅವಕಾಶ ಸಿಗುವುದೇ ಇಲ್ಲ ಎಂದು ಬಿಜೆಪಿ ನಾಯಕಿಯೊಬ್ಬರ ಅಸಮಾಧಾನ ವ್ಯಕ್ತಪಡಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ: 14.11.2021

## 6. Council elections : Women outnumber male voters

Women voters outnumber male voters in the upcoming biennial elections to 25 seats of the Legislative Council from 20 local authorities constituencies across the State.

Of the 98,846 voters on the list, 51,474 are women while 47,368 are men. Most of the voters are those who have been elected to gram panchayats in the elections held in December 2020. In all, the Election Commission is proposing to have 6,073 polling stations in these constituencies to enable voters, who are members of urban and rural local bodies, to cast their ballot.

**A Challenge**

Of the 20 local authorities, Belagavi, Vijayapura, Dharwad, Dakshina Kannada, and Mysuru constituencies will elect two members each to the Legislative Council. While the fight would be straight between parties in other constituencies, it is these dual constituencies that pose a challenge to parties before they field candidates.

Belagavi Local Authority constituency has the highest number of voters at 8,871, followed by Dharwad – 7,502, Vijayapura – 7,385, Mysuru – 6,764, and Dakshin Kannada – 6,043 voters.

**Preferential Voting**

"Parties are carefully calculating their moves to field two candidates in these constituencies. Since it is preferential voting system, same party candidates may fight for the same votes and the party may end up losing both the seats," a Congress leader said, adding that the members of the Legislative Assembly had an important role in mustering support for the party candidates in these elections. Among constituencies that elect one member,

Kalaburagi Local Authorities constituency has the highest number of voters at 6,990, while Kodagu Local Authorities has the lowest number of voters – 1,328.

**Absence of members**

The absence of taluk and zilla panchayats members in these elections could reduce on an average about 200 to 250 votes across constituencies while it straight away reduces 198 votes in Bengaluru constituency due to the absence of BBMP councillors. While the State Government has been postponing elections to taluk and zilla panchayats, the matter of holding elections to the BBMP council is in court.

Courtesy: The Hindu ,dt:17.11.2021

## 7. ಮೇಲ್ಮನೆ ಚುನಾವಣೆ ಮತದಾರರ ಅಂತಿಮ ಪಟ್ಟಿ ಪ್ರಕಟ

ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ 20 ಕ್ಷೇತ್ರಗಳಿಂದ ವಿಧಾನಪರಿಷತ್ತಿನ 25 ಸ್ಥಾನಗಳಿಗೆ ನಡೆಯುವ ಚುನಾವಣೆಗೆ ಮತದಾರರ ಅಂತಿಮ ಪಟ್ಟಿ ಪ್ರಕಟಿಸಲಾಗಿದ್ದು, ಮಹಿಳಾ ಮತದಾರರೇ ಹೆಚ್ಚಿದ್ದಾರೆ.

ಒಟ್ಟು 99,062 ಮತದಾರರು ಇದ್ದು ಅದರಲ್ಲಿ ಪುರುಷರು 47,205 ಹಾಗೂ ಮಹಿಳಾ ಮತದಾರರು 51,854 ಇದ್ದಾರೆ. ಇತರರು (ತೃತೀಯ ಲಿಂಗಿಗಳು) ಮೂವರು ಇದ್ದಾರೆ. ಮತದಾನಕ್ಕೆ 6,072 ಮತಗಟ್ಟೆಗಳನ್ನು ಗುರುತಿಸಲಾಗಿದೆ.

ಬೆಳಗಾವಿ ಕ್ಷೇತ್ರದಲ್ಲಿ ಅತಿ ಹೆಚ್ಚು 8,875 ಮತ್ತು ಕೊಡಗು ಕ್ಷೇತ್ರದಲ್ಲಿ ಅತಿ ಕಡಿಮೆ 1,334 ಮತದಾರರು ಇದ್ದಾರೆ. ಸಹಜವಾಗಿ ಇವೆರಡು ಕ್ಷೇತ್ರಗಳಲ್ಲೇ ಮಹಿಳಾ ಮತದಾರರ ಸಂಖ್ಯೆ ಕ್ರಮವಾಗಿ ಹೆಚ್ಚು ಮತ್ತು ಕಡಿಮೆ ಇದೆ. ಬಳ್ಳಾರಿ, ಬೆಂಗಳೂರು ಹಾಗೂ ಮೈಸೂರಿನಲ್ಲಿ ತಲಾ ಒಬ್ಬರು ಇತರೆ (ತೃತೀಯ ಲಿಂಗಿ) ಮತದಾರರು ಇದ್ದಾರೆ.

| ಮತದಾರರ ಅಂತಿಮ ಪಟ್ಟಿ | | | |
|---|---|---|---|
| ಕ್ಷೇತ್ರ / ಜಿಲ್ಲೆ | ಪುರುಷರು | ಮಹಿಳೆಯರು | ಒಟ್ಟು |
| ಬೀದರ್ | 1,658 | 1,798 | 3,456 |
| ಗುಲ್ಬರ್ಗಾ (ಕಲಬುರಗಿ–ಯಾದಗಿರಿ) | 3,360 | 3,762 | 7,122 |
| ಬಿಜಾಪುರ (ವಿಜಯಪುರ–ಬಾಗಲಕೊಟೆ) | 343 | 3,844 | 7,387 |
| ಬೆಳಗಾವಿ | 4,229 | 4,646 | 8,875 |
| ಉತ್ತರ ಕನ್ನಡ | 1,396 | 1,533 | 2,929 |
| ಧಾರವಾಡ (ಧಾರವಾಡ, ಹಾವೇರಿ, ಗದಗ) | 3,656 | 3,844 | 7,491 |
| ರಾಯಚೂರು (ರಾಯಚೂರು–ಕೊಪ್ಪಳ) | 2,990 | 3,510 | 6,500 |
| ಬಳ್ಳಾರಿ (ಬಳ್ಳಾರಿ–ವಿಜಯನಗರ) | 2,193 | 2,468 | 4,662 |

| | | | |
|---|---|---|---|
| ಚಿತ್ರದುರ್ಗ (ಚಿತ್ರದುರ್ಗ, ದಾವಣಗೆರೆ ಜಿಲ್ಲೆಯ ಹರಿಹರ, ಜಗಳೂರು, ದಾವಣಗೆರೆ ತಾಲ್ಲೂಕು) | 2,384 | 2,689 | 5,074 |
| ಶಿವಮೊಗ್ಗ (ಶಿವಮೊಗ್ಗ, ದಾವಣಗೆರೆ ಜಿಲ್ಲೆಯ ಚನ್ನಗಿರಿ, ನ್ಯಾಮತಿ, ಹೊನ್ನಾಳಿ ತಾಲ್ಲೂಕು) | 2,018 | 2,162 | 3,580 |
| ದಕ್ಷಿಣ ಕನ್ನಡ (ದಕ್ಷಿಣ ಕನ್ನಡ, ಉಡುಪಿ) | 2,919 | 3121 | 6,060 |
| ಚಿಕ್ಕಮಗಳೂರು | 1,138 | 1,279 | 2,417 |
| ಹಾಸನ | 1,714 | 1,903 | 3,617 |
| ತುಮಕೂರು | 2,623 | 2,936 | 5,559 |
| ಮಂಡ್ಯ | 1,930 | 2,102 | 4,032 |
| ಬೆಂಗಳೂರು ನಗರ | 995 | 1,077 | 2,073 |
| ಬೆಂಗಳೂರು ಗ್ರಾಮಾಂತರ (ಬೆಂಗಳೂರು ಗ್ರಾಮಾಂತರ, ರಾಮನಗರ) | 1,876 | 2,052 | 3,928 |
| ಕೋಲಾರ (ಕೋಲಾರ–ಚಿಕ್ಕಬಳ್ಳಾಪುರ) | 2,675 | 2,923 | 5,600 |
| ಕೊಡಗು | 647 | 687 | 1,334 |
| ಮೈಸೂರು (ಮೈಸೂರು–ಚಾಮರಾಜನಗರ) | 3,270 | 3,513 | 6,787 |

ಆಧಾರ: ಉದಯವಾಣಿ, ದಿನಾಂಕ: 25.11.2021

## 8. ಡಿಸೆಂಬರ್ 27ಕ್ಕೆ ಲೋಕಲ್ ಎಲೆಕ್ಷನ್

ಅವಧಿ ಮುಕ್ತಾಯವಾಗಿರುವ 58 ನಗರ ಸ್ಥಳೀಯ ಸಂಸ್ಥೆಗಳಿಗೆ ಮತ್ತು 57 ಗ್ರಾಮ ಪಂಚಾಯತಿಗಳಿಗೆ ರಾಜ್ಯ ಚುನಾವಣಾ ಆಯೋಗವು ಚುನಾವಣೆ ಘೋಷಣೆ ಮಾಡಿದ್ದು, ಡಿಸೆಂಬರ್ 27 ರಂದು ಮತನಾದ ನಡೆಯಲಿದೆ. ಡಿಸೆಂಬರ್ 30 ರಂದು ಮತ ಎಣಿಕೆ ಪ್ರಕ್ರಿಯೆ ಜರುಗಲಿದೆ.

ನಗರ ಸ್ಥಳೀಯ ಸಂಸ್ಥೆಗಳಿಗೆ ಮತ್ತು ಗ್ರಾಮ ಪಂಚಾಯತಿಗಳಿಗೆ ಡಿಸೆಂಬರ್ 13 ರಂದು ಚುನಾವಣೆಗೆ ಅಧಿಸೂಚನೆ ಹೊರಡಿಸಲಿದ್ದು, ನಾಮಪತ್ರ ಸಲ್ಲಿಕೆ ಪ್ರಕ್ರಿಯೆ ಆರಂಭವಾಗಲಿದೆ. ಡಿಸೆಂಬರ್17ರಂದು ನಾಮಪತ್ರ ಸಲ್ಲಿಕೆಗೆ ಕೊನೆಯ ದಿನವಾಗಿದೆ. ಡಿಸೆಂಬರ್ 18ರಂದು ನಾಮಪತ್ರಗಳನ್ನು ಪರಿಶೀಲನೆ ನಡೆಯಲಿದೆ. ಡಿಸೆಂಬರ್ 20 ರಂದು ನಾಮಪತ್ರ ಹಿಂಪಡೆಯಲು ಕೊನೆಯ ದಿನವಾಗಿದೆ. ಡಿಸೆಂಬರ್ 27ರಂದು ಚುನಾವಣೆ ನಡೆಯಲಿದ್ದು, ಬೆಳಿಗ್ಗೆ 7 ಗಂಟೆಯಿಂದ ಸಂಜೆ 5ರವರೆಗೆ ಮತದಾನ ನಡೆಯಲಿದೆ. ಡಿಸೆಂಬರ್29 ರಂದು ಅಗತ್ಯವಿದ್ದರೆ ಮರು ಮತದಾನ ನಡೆಸಲಾಗುತ್ತದೆ. ಡಿಸೆಂಬರ್ 3 ರಂದು ಮತ ಎಣಿಕೆ ನಡೆಯಲಿದೆ ಎಂದು ಆಯೋಗವು ತಿಳಿಸಿದೆ.

ಚಿಕ್ಕಮಗಳೂರು, ಗದಗ–ಬೆಟಗೇರಿ, ಹೊಸಪೇಟೆ ಮತ್ತು ಶಿರಾ ನಗರಸಭೆ ಹಾಗೂ ಅಥಣಿ, ಅಣ್ಣಿಗೇರಿ, ಬಂಕಾಪುರ ಪುರಸಭೆಗಳಿಗೆ ಸರ್ಕಾರವು ಕ್ಷೇತ್ರ ಪುನರ್ವಿಂಗಡಣೆ ಮಾಡಿ ವಾರ್ಡುವಾರು ಮೀಸಲಾತಿಯನ್ನು 2019ರಲ್ಲಿ ನಿಗದಿಪಡಿಸಿ ರಾಜ್ಯ ಪತ್ರದಲ್ಲಿ ಪ್ರಕಟಿಸಿತ್ತು ಆದರೆ, ಮೀಸಲಾತಿ ಅಧಿಸೂಚನೆ

ಪ್ರಶ್ನಿಸಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಲಾಗಿತ್ತು. ವಿಚಾರಣೆ ನಡೆಸಿದ ನ್ಯಾಯಾಲಯವು ಡಿಸೆಂಬರ್ ತಿಂಗಳೊಳಗೆ ಮುಕ್ತಾಯಗೊಂಡಿರುವ ನಗರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲು ಕ್ರಮ ಕೈಗೊಳ್ಳುವಂತೆ ಸೂಚನೆ ನೀಡಿದೆ. ಈ ಆದೇಶದ ಮೇರೆಗೆ ಸರ್ಕಾರವು ವಾರ್ಡ್‌ವಾರು ಅಂತಿಮ ಮೀಸಲಾತಿಯನ್ನು ನಿಗದಿಗೊಳಿಸಿದೆ. ಈ ಹಿನ್ನೆಲೆಯಲ್ಲಿ ಚುನಾವಣೆಯನ್ನು ಘೋಷಣೆ ಮಾಡಲಾಗಿದೆ. ನಗರಸಭೆ, ಪುರಸಭೆ, ಪಟ್ಟಣ ಪಂಚಾಯಿತಿಗಳಿಗೆ ಸ್ಪರ್ಧಿಸುವ ಅಭ್ಯರ್ಥಿಗಳು ಕ್ರಮವಾಗಿ ಎರಡು ಲಕ್ಷ ರೂಪಾಯಿ, ಒಂದೂವರೆ ಲಕ್ಷ ರೂಪಾಯಿ ಮತ್ತು ಒಂದು ಲಕ್ಷ ರೂಪಾಯಿ ಚುನಾವಣಾ ವೆಚ್ಚ ಮಾಡಲು ಗರಿಷ್ಠ ಮಿತಿ ವಿಧಿಸಲಾಗಿದೆ ಎಂದು ಆಯೋಗ ಹೇಳಿದೆ.

2021ರ ಜೂನ್ ತಿಂಗಳಿನಿಂದ 2022 ತಿಂಗಳವರೆಗೆ ಅವಧಿ ಮುಕ್ತಾಯವಾಗಿರುವ ಮತ್ತು ಮುಕ್ತಾಯವಾಗುವ 44 ಗ್ರಾಮ ಪಂಚಾಯಿತಿಗಳಿಗೆ ಹಾಗೂ ವಿವಿಧ ಕಾರಣಗಳಿಂದಾಗಿ ಚುನಾವಣೆ ನಡೆಯದೆ ಬಾಕಿ ಇದ್ದ 13 ಗ್ರಾಮ ಪಂಚಾಯಿತಿ ಸೇರಿ ಒಟ್ಟು 57 ಗ್ರಾಮ ಪಂಚಾಯಿತಿಗಳಿಗೆ ಸಾರ್ವತ್ರಿಕ ಚುನಾವಣೆ ನಡೆಸಲಾಗುತ್ತದೆ. ವಿವಿಧ ಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ 386 ಸ್ಥಾನಗಳಿಗೆ ಉಪ ಚುನಾವಣೆಯನ್ನು ಸಹ ನಡೆಸಲಾಗುವುದು. ಕೋವಿಡ್ ಸೋಂಕು ಹಿನ್ನೆಲೆಯಲ್ಲಿ ಚುನಾವಣೆಯ ಎಲ್ಲಾ ಹಂತದಲ್ಲಿಯೂ ಸಾಮಾಜಿಕ ಅಂತರವನ್ನು ಕಾಯ್ದುಕೊಂಡು ಕಡ್ಡಾಯವಾಗಿ ಮಾಸ್ಕ್ ಧರಿಸಬೇಕು ಮತ್ತು ಕೋವಿಡ್ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲನೆ ಮಾಡಬೇಕು ಎಂದು ಆಯೋಗವು ಸೂಚನೆ ನೀಡಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ:30.11.2021.

## 9. ಪರಿಷತ್ ಚುನಾವಣೆ : 86 ಮತಗಟ್ಟೆ

ವಿಧಾನ ಪರಿಷತ್ತಿನ ಚುನಾವಣೆಯನ್ನು ಶಾಂತಿಯುತವಾಗಿ ನಡೆಸಲು ಸಕಲ ಸಿದ್ಧತೆ ನಡೆಸಲಾಗಿದ್ದು, 5 ತಾಲ್ಲೂಕುಗಳಲ್ಲಿ 86 ಮತಗಟ್ಟೆಗಳನ್ನು ಸ್ಥಾಪಿಸಲಾಗಿದೆ ಎಂದು ನಗರ ಜಿಲ್ಲಾ ಚುನಾವಣಾಧಿಕಾರಿ ಜೆ.ಮಂಜುನಾಥ್ ತಿಳಿಸಿದರು. 83 ಗ್ರಾಮ ಪಂಚಾಯಿತಿ, 3 ಪುರಸಭೆಗಳಲ್ಲಿ ಮತಗಟ್ಟೆ ತೆರೆಯಲಾಗಿದೆ. ಡಿ.10 ರಂದು ಬೆಳಿಗ್ಗೆ 8 ರಿಂದ ಸಂಜೆ 4 ತನಕ ಮತದಾನ ನಡೆಯಲಿದೆ ಎಂದು ಸುದ್ದಿಗೋಷ್ಠಿಯಲ್ಲಿ ವಿವರಿಸಿದರು.

‘1,077 ಮಹಿಳೆಯರು, 955 ಪುರುಷರು ಸೇರಿ 2,073 ಮತದಾರರಿದ್ದಾರೆ. 38 ಸೂಕ್ಷ್ಮ, 3 ಅತಿ ಸೂಕ್ಷ್ಮ ಮತ್ತು 45 ಸಾಮಾನ್ಯ ಮತಗಟ್ಟೆಗಳಿವೆ. ಬೆಂಗಳೂರು ನಗರ ಪೊಲೀಸ್ ಆಯುಕ್ತರ ವ್ಯಾಪ್ತಿಗೆ 21 ಮತಗಟ್ಟೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ವ್ಯಾಪ್ತಿಗೆ 49 ಮತಗಟ್ಟೆ ಮತ್ತು ರಾಮನಗರ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ವ್ಯಾಪ್ತಿಯಲ್ಲಿ 16 ಮತಗಟ್ಟೆಗಳಿವೆ’ ಎಂದು ಹೇಳಿದರು.

‘5 ತಾಲ್ಲೂಕುಗಳಲ್ಲಿ 15 ಎಂಸಿಸಿ ತಂಡ ರಚಿಸಲಾಗಿದೆ. 14 ಸೆಕ್ಟರಲ್ ಮತ್ತು ಮತಗಟ್ಟೆ ಅಧಿಕಾರಿಗಳನ್ನು ಕರೆದೊಯ್ಯಲು 15 ಬಿಎಂಟಿಸಿ ಬಸ್‌ಗಳನ್ನು ನಿಯೋಜಿಸಲಾಗಿದೆ. ಡಿವೈಎಸ್‌ಪಿ ಇನ್‌ಸ್ಪೆಕ್ಟರ್, ಸಬ್ ಇನ್‌ಸ್ಪೆಕ್ಟರ್ ಸೇರಿ 313 ಪೊಲೀಸ್ ಸಿಬ್ಬಂದಿ ನಿಯೋಜಿಸಲಾಗಿದೆ’ ಎಂದರು.

**ಮದ್ಯ ಮಾರಾಟ ನಿಷೇಧ:** ಬುಧವಾರ ಸಂಜೆ 4 ರಿಂದಲೇ ಮದ್ಯ ಮಾರಾಟ ನಿಷೇಧಿಸಲಾಗಿದ್ದು, ಶುಕ್ರವಾರ ಸಂಜೆ 10 ಗಂಟೆ ತನಕ ಮದ್ಯದ ಅಂಗಡಿಗಳನ್ನು ತೆರೆಯುವಂತೆಇಲ್ಲ. ನಿಯಮ ಉಲ್ಲಂಘಿಸಿದರೆ ಕಠಿಣ ಕ್ರಮ ಜರುಗಿಸಲಾಗುವುದು ಎಂದು ಜಿಲ್ಲಾಧಿಕಾರಿ ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ: 09.12.2021

## 10.ಮೇಲ್ಮನೆ ಚುನಾವಣೆ : ಒಟ್ಟಾರೆ ಶೇ 99.80 ರಷ್ಟು ಮತದಾನ

ರಾಜ್ಯದ 20 ಸ್ಥಳೀಯ ಸಂಸ್ಥೆಗಳಿಂದ ವಿಧಾನಪರಿಷತ್ತಿನ 25 ಕ್ಷೇತ್ರಗಳಿಗೆ ನಡೆದ ಮತದಾನ ಶಾಂತಿಯುತವಾಗಿದ್ದು, ಸುಮಾರು ಶೇ. 99.80 ರಷ್ಟು ಮತ ಚಲಾವಣೆಯಾಗಿದೆ.

ಬೆಳಿಗ್ಗೆ 8ಕ್ಕೆ ಮತದಾನ ಆರಂಭಗೊಂಡಿತು. ಮಧ್ಯಾಹ್ನದವರೆಗೆ ಕೆಲವು ಕ್ಷೇತ್ರಗಳಲ್ಲಿ ಮತದಾನದ ಪ್ರಮಾಣ ತೀರಾ ಕಡಿಮೆ ಇತ್ತು. ಮಧ್ಯಾಹ್ನ 2 ಗಂಟೆ ಬಳಿಕ ಮತದಾನ ಬಿರುಸುಗೊಂಡಿತು. ಚಿತ್ರದುರ್ಗದಲ್ಲಿ ಮಧ್ಯಾಹ್ನ 2 ಗಂಟೆಗೆ ಮತದಾನ ಪ್ರಮಾಣ ಶೇ. 10 ರಷ್ಟು ಮಾತ್ರ ಆಗಿತ್ತು. ಬಳಿಕ ಎರಡೇ ಗಂಟೆಗಳ ಅವಧಿಯಲ್ಲಿ ಶೇ. 88 ರಷ್ಟು ಮತಗಳ ಚಲಾವಣೆ ಆಯಿತು.

ಮತಗಳ ಎಣಿಕೆ ಇದೇ 14 ರಂದು ನಡೆಯಲಿದ್ದು, ಅಂದೇ ಫಲಿತಾಂಶ ಪ್ರಕಟವಾಗಲಿದೆ. ವಿಧಾನಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ ಕಾಗೇರಿ, ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ, ಕೇಂದ್ರ ಸಚಿವರಾದ ಶೋಭಾ ಕರಂದ್ಲಾಜೆ, ಎ.ನಾರಾಯಣ ಸ್ವಾಮಿ, ಬಿಜೆಪಿ ನಾಯಕ ಬಿ.ಎಸ್.ಯಡಿಯೂರಪ್ಪ, ಜೆಡಿಎಸ್‌ನ ನಾಯಕ ಎಚ್.ಡಿ.ಕುಮಾರಸ್ವಾಮಿ ಮತ ಚಲಾವಣೆ ಮಾಡಿದವರಲ್ಲಿ ಪ್ರಮುಖರು.

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ನಾಲೂರು–ಕೊಳಿಗೆ ಗ್ರಾಮ ಪಂಚಾಯಿತಿಗೆ ಮೂರು ವರ್ಷಗಳಿಂದ ಮರಳು ಗಣಿಗಾರಿಕೆಯ ರಾಜಧನ ರೂ. 2.48 ಕೋಟಿ ನೀಡಿಲ್ಲ ಎಂಬ ಕಾರಣಕ್ಕೆ ಪಂಚಾಯ್ತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರು ಸೇರಿ ಎಲ್ಲ 7 ಸದಸ್ಯರು ಮತದಾನ ಬಹಿಷ್ಕರಿಸಿದ್ದರು. ಈ ಪೈಕಿ ಆರು ಸದಸ್ಯರು ಕೊನೆಗಳಿಗೆಯಲ್ಲಿ ಮತ ಚಲಾಯಿಸಿದರು.

ಮತದಾನದ ವೇಳೆ ಸಣ್ಣಪುಟ್ಟ ತಾಂತ್ರಿಕ ಗೊಂದಲ ಬಿಟ್ಟರೆ, ಉಳಿದಂತೆ ಶಾಂತವಾಗಿಯೇ ಮತದಾನ ನಡೆಯಿತು.

ಆಧಾರ: ಪ್ರಜಾವಾಣಿ, ದಿನಾಂಕ: 11.12.2021

## 11. ಲೋಕಲ್‌ನಲ್ಲಿ ಕೈ ಮಿಂಚು

ತೀವ್ರ ಕುತೂಹಲ ಕೆರಳಿಸಿದ್ದ ರಾಜ್ಯದ 58 ನಗರ ಸ್ಥಳೀಯ ಸಂಸ್ಥೆಗಳ ಚುನವಣೆಯಲ್ಲಿ ಆಡಳಿತರೂಢ ಬಿಜೆಪಿ ಹಿನ್ನಡೆ ಅನುಭವಿಸಿದ್ದು, ಪ್ರತಿಪಕ್ಷ ಕಾಂಗ್ರೆಸ್ ಮೇಲುಗೈ ಸಾಧಿಸಿದೆ. ಜೆಡಿಎಸ್ ಕೆಲವೆಡೆ ತನ್ನ ಇರುವಿಕೆ ಪ್ರದರ್ಶಿಸಿದೆ.

ಮುಖ್ಯಮಂತ್ರಿಯವರು, ಸಚಿವರಾದ ಶಶಿಕಲಾ ಜೊಲ್ಲೆ, ಆನಂದಸಿಂಗ್ ಅವರ ಸ್ವ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಅಧಿಕಾರ ಹಿಡಿದಿದ್ದು ಆಡಳಿತರೂಢ ಪಕ್ಷಕ್ಕೆ ಸೋಲುಂಟಾಗಿದೆ. ಕಳೆದ ಬಾರಿಗಿಂತ ಹೆಚ್ಚು ಸ್ಥಾನ ಗೆದ್ದಿದ್ದೇವೆ ಎಂದು ಬಿಜೆಪಿ ಸಮರ್ಥಿಸಿಕೊಂಡಿದೆ.

ಬೆಳಗಾವಿ ಸೇರಿ ಕೆಲವೆಡೆ ಪಟ್ಟಣ ಪಂಚಾಯಿತಿಗಳಲ್ಲಿ ಬಿಜೆಪಿ–ಕಾಂಗ್ರೆಸ್ ಹಿಂದಿಕ್ಕಿ ಪಕ್ಷೇತರರು ಪ್ರಾಬಲ್ಯ ಮೆರೆದಿರುವುದು ಅಚ್ಚರಿ ತಂದಿದೆ. ಎಸ್‌ಡಿಪಿಐ ಹಾಗೂ ಆಫ್ ಖಾತೆ ತೆರೆಯುವಲ್ಲಿ ಯಶಸ್ವಿಯಾಗಿವೆ. ಕರಾವಳಿ ಭಾಗದ ದಕ್ಷಿಣ ಕನ್ನಡದ ವಿಟ್ಲ ಹಾಗೂ ಉಡುಪಿಯ ಕಾಪು ಪುರಸಭೆಯಲ್ಲಿ ಬಿಜೆಪಿ ಅಧಿಕಾರಕ್ಕೆ ಏರಿದೆ.

ಬಸವರಾಜ ಬೊಮ್ಮಾಯಿ ಅವರ ಸ್ವಕ್ಷೇತ್ರದ ಶಿಗ್ಗಾಂವ್‌ನ ಬಂಕಾಪುರ ಪುರಸಭೆ ಹಾಗೂ ಗುತ್ತಲ ಪಟ್ಟಣ ಪಂಚಾಯಿತಿಯಲ್ಲಿ ಕಾಂಗ್ರೆಸ್ ಅಧಿಕಾರ ಹಿಡಿದ್ದು, ಬಂಕಾಪುರ ಪುರಸಭೆ ಹಾಗೂ ಗುತ್ತಲ ಪಟ್ಟಣ

ಪಂಚಾಯಿತಿಯ 18 ವಾರ್ಡ್‌ಗಳಲ್ಲಿ 11 ಕಾಂಗ್ರೆಸ್, 6 ಬಿಜೆಪಿ ಹಾಗೂ 1 ಕಡೆ ಪಕ್ಷೇತರ ಅಭ್ಯರ್ಥಿ ಗೆಲುವು ಸಾಧಿಸಿದ್ದಾರೆ.

ಸಚಿವೆ ಶಶಿಕಲಾ ಜೊಲ್ಲೆಯವರ ನಿಪ್ಪಾಣಿ ಕ್ಷೇತ್ರದ ಬೋರಗಾಂವ ಪಟ್ಟಣ ಪಂಚಾಯಿತಿಯಲ್ಲಿ ಪಕ್ಷೇತರರು 17 ವಾರ್ಡಗಳಲ್ಲಿಯೂ ಪ್ರಾಬಲ್ಯ ಮೆರದ್ದಿದ್ದಾರೆ. ಸಂಸದ ಅಣ್ಣಾ ಸಾಹೇಬ್ ಅವರ ಕ್ಷೇತ್ರದ ವ್ಯಾಪ್ತಿಗೆ ಬರುವ ಯಕ್ಸಾಂಬ ಪಟ್ಟಣ ಪಂಚಾಯಿತಿಯಲ್ಲಿ 17 ವಾರ್ಡ್‌ಗಳ ಪೈಕಿ ಕಾಂಗ್ರೆಸ್ 16 ವಾರ್ಡ್‌ಗಳಲ್ಲಿ ಜಯಗಳಿಸಿದೆ.

ಸಚಿವ ಆನಂದ್ ಸಿಂಗ್ ಅವರ ಹೊಸಪೇಟೆ ನಗರ ಸಭೆಯಲ್ಲಿ ಕಾಂಗ್ರೆಸ್ ಅತಿ ದೊಡ್ಡ ಪಕ್ಷವಾಗಿ ಹೊರಹೊಮ್ಮಿದ್ದರೆ ಮರಿಯಮ್ಮನಹಳ್ಳಿ ಪಟ್ಟಣ ಪಂಚಾಯಿತಿಯಲ್ಲಿ ಕಾಂಗ್ರೆಸ್ 18 ವಾರ್ಡ್‌ಗಳ ಪೈಕಿ, 13 ವಾರ್ಡ್ ಗೆದ್ದು ಅಧಿಕಾರ ಹಿಡಿಯುವಲ್ಲಿ ಯಶಸ್ವಿಯಾಗಿದೆ. ಐದು ನಗರಸಭೆ, 19 ಪುರಸಭೆ, ಹಾಗು 34 ಪಟ್ಟನ ಪಂಚಾಯಿತಿಯ 1184 ವಾರ್ಡ್‌ಗಳಲ್ಲಿ ಕಾಂಗ್ರೆಸ್ 501, ಬಿಜೆಪಿ 433, ಜೆಡಿಎಸ್ 45, ಎಎಪಿ1, ಎಸ್‌ಡಿಪಿಐ 6 ಸ್ಥಾನ ಗೆದ್ದಿದ್ದರೆ ಪಕ್ಷೇತರರು 195 ಕಡೆ ಗೆಲುವು ಸಾಧಿಸಿದ್ದಾರೆ.

ಐದು ನಗರಸಭೆಗಳ ಪೈಕಿ ಚಿಕ್ಕಮಗಳೂರು, ಗದಗ–ಬಟಗೇರಿ, ಹೆಬ್ಬಗೋಡಿಯಲ್ಲಿ ಬಿಜೆಪಿ ಬಹುಮತ ಪಡೆದಿದ್ದು, ಶಿರಾ ಹಾಗೂ ಹೊಸಪೇಟೆಯಲ್ಲಿ ಅತಂತ್ರ ಸ್ಥಿತಿ ನಿರ್ಮಾಣವಾಗಿದೆ. ಆದರೆ, ಎರಡೂ ಕಡೆ ಕಾಂಗ್ರೆಸ್ ಅತಿ ದೊಡ್ಡ ಪಕ್ಷವಾಗಿ ಹೊರಹೊಮ್ಮಿದೆ.

19 ಪುರಸಭೆ ಪೈಕಿ 10 ಕಾಂಗ್ರೆಸ್, 6 ಬಿಜೆಪಿ, 1 ಜೆಡಿಎಸ್ ಹಾಗೂ 2 ಕಡೆ ಪಕ್ಷೇತರರು ಅಧಿಕಾರ ಹಿಡಿದ್ದಿದ್ದಾರೆ. 34 ಪಟ್ಟಣ ಪಂಚಾಯತಿ ಪೈಕಿ 16 ಕಾಂಗ್ರೆಸ್, 6 ಬಿಜೆಇಪಿ, 6 ಪಕ್ಷೇತರರು ಹಾಗೂ ಆರು ಕಡೆ ಅತಂತ್ರ ಸ್ಥಿತಿ ನಿರ್ಮಾಣವಾಗಿದೆ.

**ಜೆಡಿಎಸ್ ಕಿಂಗ ಮೇಕರ್ :** ಬಿಡದಿ ಪುರಸಭೆಯಲ್ಲಿ ಜೆಡಿಎಸ್ ಅಧಿಕಾರಕ್ಕೆ ಬಂದಿದ್ದು, 23 ವಾರ್ಡ್‌ಗಳ ಪೈಕಿ 14 ವಾರ್ಡ್‌ಗಳಲ್ಲಿ ಗೆಲುವು ಸಾಧಿಸಿದೆ. ಕಾಂಗ್ರೆಸ್ 9 ಕಡೆ ಗೆಲುವು ಸಾಧಿಸಿದೆ. ಉಳಿದಂತೆ, ಶಿರಾ ನಗರಸಭೆಯಲ್ಲಿ 7 ವಾರ್ಡ್ ಗೆದ್ದು ಎರಡನೇ ಸ್ಥಾನದಲ್ಲಿದೆ. ಚಿಕ್ಕಮಗಳೂರು ನಗರಸಭೆಯಲ್ಲಿ 2 ವಾರ್ಡ್ ಗೆದ್ದು ನಿರ್ಣಾಯಕ ಪಾತ್ರ ವಹಿಸಲಿದೆ. ದೇವರ ಹಿಪ್ಪರಗಿ ಪಟ್ಟಣ ಪಂಚಾಯಿತಿಯಲ್ಲಿ 4 ವಾರ್ಡ್ ಗೆದ್ದು ಕಿಂಗ್ ಮೇಕರ ಆಗಿದೆ.

**ಉಪ ಚುನಾವಣೆಯಲ್ಲು ಕೈ ಮುನ್ನಡೆ:** 58 ನಗರ ಸ್ಥಳೀಯ ಸಂಸ್ಥೆಗಳಲ್ಲದೆ ನಗರಸಭೆ ಹಾಗೂ ಪುರಸಭೆಗಳ 8 ವಾರ್ಡ್‌ಗಳಿಗೆ ನಡೆದ ಉಪ ಚುನಾವಣೆಯಲ್ಲೂ ಕಾಂಗ್ರೆಸ್ 4 ಸ್ಥಾನ ಗೆದ್ದಿದ್ದು ಬಿಜೆಪಿ 1 ಸ್ಥಾನಕ್ಕೆ ತೃಪ್ತಿ ಪಟ್ಟುಕೊಂಡಿದೆ. ಪಕ್ಷೇತರರು 2, ಎಸ್‌ಡಿಪಿಐ ಇಂದು ಕಡೆ ಗೆಲುವು ಸಾಧಿಸಿವೆ.

| | ಬಿಜೆಪಿ | ಕಾಂಗ್ರೆಸ್ | ಜೆಡಿಎಸ್ | ಇತರೆ |
|---|---|---|---|---|
| **ನಗರ ಸಭೆ ಒಟ್ಟು ವಾರ್ಡ್:166** | **67** | **61** | **12** | **26** |
| **ಪುರಸಭೆ ಒಟ್ಟು ವಾರ್ಡ್:441** | **176** | **201** | **21** | **43** |
| **ಪಟ್ಟಣಪಂಚಾಯಿತಿ ಒಟ್ಟು ವಾರ್ಡ್:577** | **194** | **236** | **11** | **136** |

ಆಧಾರ: ಉದಯವಾಣಿ, ದಿನಾಂಕ:31.12.2021

# ಭಾಗ – 7

# ನ್ಯಾಯಾಲಯ ಸುದ್ದಿಗಳು

## 1. ರಸ್ತೆ ತಡೆದ ರೈತರಿಗೆ ಸುಪ್ರೀಂ ತರಾಟೆ

ಮೂರು ಕೃಷಿ ಕಾಯ್ದೆಗಳ ರದ್ದತಿಗೆ ಒತ್ತಾಯಿಸಿ ಕಳೆದ ಒಂದು ವರ್ಷದಿಂದ ದೆಹಲಿಯ ಸುತ್ತಮುತ್ತಲಿನ ಹೆದ್ದಾರಿ ಬಂದ್ ಮಾಡಿ ಪ್ರತಿಭಟನೆ ನಡೆಸುತ್ತಿರುವ ರೈತ ಸಂಘಟನೆಗಳನ್ನು ಸುಪ್ರೀಂಕೋರ್ಟ್ ತೀವ್ರ ತರಾಟೆಗೆ ತೆಗೆದುಕೊಂಡಿದೆ. ರೈತರಷ್ಟೇ, ಜನಸಾಮಾನ್ಯರಿಗೂ ತಮ್ಮ ಆಸ್ತಿಪಾಸ್ತಿ ರಕ್ಷಿಸಿಕೊಳ್ಳುವ ಮತ್ತು ಮುಕ್ತ ಸಂಚಾರದ ಹಕ್ಕು ಇದೆ ಎನ್ನುವ ಮೂಲಕ ರಸ್ತೆ ತಡೆ ಕ್ರಮವನ್ನು ಕಟುವಾಗಿ ಟೀಕಿಸಿದೆ.

ದೆಹಲಿಯ ಹೊರವಲಯದಲ್ಲಿ ಪ್ರತಿಭಟನೆ ನಡೆಸುತಿತರುವ ತಮಗೆ, ಜಂತರ್ ಮಂತರ್‌ನಲ್ಲೂ ಪ್ರತಿಭಟನೆ ನಡೆಸಲು ಅವಕಾಶ ಕೊಡಬೇಕು. ಇದಕ್ಕೆ ಅಗತ್ಯ ವ್ಯವಸ್ಥೆ ಮಾಡಲು ಸಂಬಂಧಿಸಿದ ಅಧಿಕಾರಿಗಳಿಗೆ ಸೂಚಿಸಬೇಕು ಎಂದು ರೈತ ಸಂಘಟನೆಗಳು ಅರ್ಜಿ ಸಲ್ಲಿಸಿದ್ದವು.

ಈ ಅರ್ಜಿಯ ವಿಚಾರಣೆ ನಡೆಸಿದ ನ್ಯಾ.ಎ.ಎಂ.ಖಾನ್ವಿಲ್ಕರ್ ಮತ್ತು ನ್ಯಾ.ಸಿ.ಟಿ.ರವಿಕುಮಾರ್ ಅವರನ್ನೊಳಗೊಂಡ ನ್ಯಾಯಪೀಠ 'ನೀವು ಈಗಾಗಲೇ ಇಡೀ ನಗರವನ್ನು ಉಸಿರುಗಟ್ಟಿಸಿದ್ದೀರಿ. ಇದೀಗ ನಗರದ ಒಳಗೆ ಪ್ರವೇಶಿಸಿ ಮತ್ತೊಮ್ಮೆ ಪ್ರತಿಭಟನೆ ನಡೆಸಲು ಮುಂದಾಗಿದ್ದೀರಿ ಎಂದು ತೀವ್ರವಾಗಿ ತರಾಟೆಗೆ ತೆಗೆದುಕೊಂಡಿತು.

ಈಗಾಗಲೇ ಕೃಷಿ ಕಾಯ್ದೆ ಪ್ರಶ್ನಿಸಿ ಅರ್ಜಿ ಸಲ್ಲಿಸಿದ್ದೀರಿ. ಅವುಗಳನ್ನು ಪ್ರಶ್ನಿಸಿದ ಮೇಲೆ ಮತ್ತೆ ಹೋರಾಟದ ಅವಶ್ಯಕತೆ ಏನಿದೆ. ಒಮ್ಮೆ ನ್ಯಾಯಾಲಯವನ್ನು ಸಂಪರ್ಕಿಸಿದ ಮೇಲೆ ಪ್ರಕರಣ ಇತ್ಯರ್ಥವಾಗುವವರೆಗೆ ನ್ಯಾಯಾಲಯದ ಮೇಲೆ ವಿಶ್ವಾಸವಿರಿಸಬೇಕು. ನೀವು ನ್ಯಾಯಾಂಗ ವ್ಯವಸ್ಥೆಯ ವಿರುದ್ಧವೇ ಪ್ರತಿಭಟಿಸುತ್ತಿದ್ದೀರಿ. ನೀವು ಅರ್ಜಿಯ ತುರ್ತು ವಿಚಾರಣೆಗೆ ಅಗತ್ಯ ಕ್ರಮ ಕೈಗೊಳ್ಳಬೇಕೇ ಹೊರತೂ ಮತ್ತೆ ಪ್ರತಿಭಟನೆ ಹಾದಿ ಹಿಡಿಯುವುದಲ್ಲ ಎಂದು ಕೋರ್ಟ್ ರೈತ ಸಂಘಟನೆಗಳ ನಡೆ ವಿರುದ್ಧ ಕಿಡಿಕಾರಿತು.

ಆಧಾರ: ಕನ್ನಡಪ್ರಭ, ದಿನಾಂಕ: 02.10.2021

## 2. **Refusing vaccine not a fundamental right**

AMID heated discussion on vaccine hesitancy in the country, a 25 year old judgment of the Kerala High Court may settle the issue in favour of those who argue for compulsory vaccination.

While those who are hesitant for the jab, insistence on inoculation violates their fundamental rights, a judgment pronounced by Justice K Narayana Kurup on May 30, 1996, said, “In an area where infectious diseases are endemic, taking a heavy toll of human lives, the state must be invested with adequate powers to intervene and take effective remedial measures by inoculation, vaccination and the like.”

Justice Kurup told that many are not willing to get vaccinated citing their fundamental rights. "Those who are not inoculated are more vulnerable than those who are vaccinated. Hence, the authorities can use their powers considering the interest of society," he added.

The 1996 judgment had stated, "In an organized society – without which there cannot be any safeguard of individual rights – there cannot be any right which is injurious to the community as a whole."

He had passed the verdict while dismissing a petition filed by parents of a minor son, who was suffering from haemophilia, challenging the order of the then Kottayam district collector. The parents had refused to provide adequate medical treatment to the child. After noticing the incident, the district had directed the police to take custody of the child and admit him to the government hospital immediately.

The Court had held that the fundamental rights claimed by the parents could not take precedence over the "police power to enforce public order, morality and health". The police power is founded on the theory that when there is a conflict between the rights of the individual and the interest of society. "The latter must prevail."

The police power is thus the authority to establish those rules of good conduct and neighbourliness which are calculated to prevent conflict of rights and to ensure that each (individual) has the uninterrupted enjoyment of his own, so far as that is reasonably consistent with a corresponding enjoyment by others.

Courtesy: Indian Express – dt:- 07.10.2021

## 3. ಕರ್ನಾಟಕ ಹೈಕೋರ್ಟ್‌ಗೆ ನ್ಯಾ. ಅವಸ್ಥಿ ಸಿಜೆ

ಕರ್ನಾಟಕವೂ ಸೇರಿದಂತೆ ದೇಶದ ಎಂಟು ಹೈಕೋರ್ಟ್‌ಗಳಿಗೆ ಮುಖ್ಯ ನ್ಯಾಯಮೂರ್ತಿಗಳನ್ನು ನೇಮಕ ಮಾಡಿ ಕೇಂದ್ರ ಸರ್ಕಾರ ಅಧಿಸೂಚನೆ ಹೊರಡಿಸಿದೆ. ರಾಜ್ಯ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಯಾಗಿ ರಿತು ರಾಜ್ ಅವಸ್ಥಿ ಅವರನ್ನು ನೇಮಕ ಮಾಡಿದೆ. ಹಾಗೆಯೇ ಸದ್ಯ ಇಲ್ಲಿ ಹಂಗಾಮಿ ಸಿಜೆ ಆಗಿ ಕಾರ್ಯನಿರ್ವಹಿಸುತ್ತಿರುವ ನ್ಯಾ.ಸತೀಶ್ ಚಂದ್ರ ಶರ್ಮ ಅವರನ್ನು ತೆಲಂಗಾಣ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿದೆ.

ಇದಷ್ಟೇ ಅಲ್ಲ, ಕನ್ನಡಿಗರಾದ ನ್ಯಾ.ಅರವಿಂದ ಕುಮಾರ್ ಅವರನ್ನು ಗುಜರಾತ್ ಹೈಕೋರ್ಟ್ ಸಿಜೆ ಆಗಿ ಮತ್ತು ಆರ್.ವಿ.ಮಳೀಮಠ ಅವರನ್ನು ಮಧ್ಯಪ್ರದೇಶ ಹೈಕೋರ್ಟ್ ಸಿಜೆ ಆಗಿ ನೇಮಿಸಲಾಗಿದೆ.

ಇದರ ಜೊತೆಗೆ ಅಲಹಾಬಾದ್, ಕಲ್ಕತ್ತಾ, ಆಂಧ್ರಪ್ರದೇಶ, ಮೇಘಾಲಯ ಹೈಕೋರ್ಟ್‌ಗಳಿಗೂ ನೂತನ ಮುಖ್ಯ ನ್ಯಾಯಮೂರ್ತಿಗಳನ್ನು ನೇಮಕ ಮಾಡಿ ಕೇಂದ್ರ ಸರ್ಕಾರ ಆದೇಶ ಹೊರಡಿಸಿದೆ.

ಇನ್ನು ಸಿಕ್ಕಿಂ, ರಾಜಸ್ಥಾನ, ಮಧ್ಯಪ್ರದೇಶ, ಆಂಧ್ರಪ್ರದೇಶ ಮತ್ತು ಮೇಘಾಲಯ ಹೈಕೋರ್ಟ್‌ಗಳ ಮುಖ್ಯ ನ್ಯಾಯಮೂರ್ತಿಗಳನ್ನು ವರ್ಗಾವಣೆ ಮಾಡಲಾಗಿದೆ. ಸೆಪ್ಟೆಂಬರ್ 16ರಂದು ಸುಪ್ರೀಂಕೋರ್ಟ್‌ನ ಕೊಲಿಜಿಯಂ ಈ ನೇಮಕ ಮತ್ತು ವರ್ಗಾವಣೆ ನಿರ್ಧಾರ ತೆಗೆದುಕೊಂಡು ಕೇಂದ್ರ ಕಾನೂನು ಸಚಿವಾಲಯಕ್ಕೆ ಕಳುಹಿಸಿಕೊಟ್ಟಿತ್ತು.

ಆಧಾರ: ಉದಯವಾಣಿ, ದಿನಾಂಕ: 10.10.2021

## 4. ಶಿಕ್ಷಣದಲ್ಲಿ ಕನ್ನಡ ಕಡ್ಡಾಯ ಬೇಡ : ಹೈಕೋರ್ಟ್

ರಾಜ್ಯದ ಪದವಿ ಕಾಲೇಜುಗಳಲ್ಲಿ ಕನ್ನಡವನ್ನು ಒಂದು ಭಾಷಾ ವಿಷಯವಾಗಿ ಕಲಿಯುವುದನ್ನು ಕಡ್ಡಾಯಗೊಳಿಸಿ ಹೊರಡಿಸಿದ ಆದೇಶವನ್ನು ಮರುಪರಿಶೀಲಿಸುವಂತೆ ಸರ್ಕಾರಕ್ಕೆ ಹೈಕೋರ್ಟ್ ತಾಕೀತು ಮಾಡಿದೆ.

ಸರ್ಕಾರದ ಆದೇಶ ಪ್ರಶ್ನಿಸಿ ಸಂಸ್ಕೃತ ಭಾರತಿ ಕರ್ನಾಟಕ ಟ್ರಸ್ಟ್ ಸಲ್ಲಿಸಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿ ವಿಚಾರಣೆ ನಡೆಸಿದ ಮುಖ್ಯ ನ್ಯಾಯಮೂರ್ತಿ ರಿತು ರಾಜ್ ಅವಸ್ಥಿ ಅವರ ನೇತೃತ್ವದ ವಿಭಾಗೀಯ ಪೀಠ, ಶಿಕ್ಷಣದಲ್ಲಿ ಕನ್ನಡ ಕಲಿಕೆಯನ್ನು ಹೇರಲಾಗದು. ಸರ್ಕಾರ ತನ್ನ ನಿರ್ಧಾರವನ್ನು ಮರುಪರಿಶೀಲಿಸಬೇಕು. ಇಲ್ಲವಾದರೆ ಸರ್ಕಾರದ ಆದೇಶಕ್ಕೆ ತಡೆ ನೀಡಲಾಗುವುದು ಎಂದು ಎಚ್ಚರಿಕೆ ನೀಡಿ ವಿಚಾರಣೆಯನ್ನು ನವೆಂಬರ್ 10ಕ್ಕೆ ಮುಂದೂಡಿದೆ.

**ಹೊರರಾಜ್ಯದವರ ಮೇಲೇಕೆ ಕನ್ನಡ ಹೇರಿಕೆ:–** ಇದಕ್ಕೂ ಮುನ್ನ ರಾಜ್ಯ ಸರ್ಕಾರದ ಪರ ವಾದ ಮಂಡಿಸಿದ ಅಡ್ವೊಕೇಟ್ ಜನರಲ್ ಪ್ರಭುಲಿಂಗ ನಾವದಗಿ, 'ಸದ್ಯ ತಮಗಿರುವ ಸೂಚನೆಯಂತೆ ಒಂದು ಭಾಷಾ ವಿಷಯವಾಗಿ ಕಲಿಯಲು ಕನ್ನಡವನ್ನು ಪರಿಚಯಿಸಲಾಗುತ್ತಿದೆ. ಆದರೆ, ಶಾಸ್ತ್ರೀಯವಾಗಿ ಕನ್ನಡ ಕಲಿಸುವ ಉದ್ದೇಶವಿಲ್ಲ' ಎಂದು ತಿಳಿಸಿದರು.

ಅದನ್ನು ಒಪ್ಪದ ನ್ಯಾಯಪೀಠ, 'ಹೊರಗಿನಿಂದ ಬಂದ ವಿದ್ಯಾರ್ಥಿಗಳ ಮೇಲೆ ಕನ್ನಡ ಭಾಷೆ ಕಲಿಕೆಯನ್ನು ಏಕೆ ಹೇರುತ್ತೀರಿ?' ಎಂದು ಪ್ರಶ್ನಿಸುತ್ತದೆ, 'ಸರ್ಕಾರ ಈ ನೀತಿಯನ್ನು ಒಪ್ಪಲು ಸಾಧ್ಯವಿಲ್ಲವೆಂದು ಆಕ್ಷೇಪಿಸಿತು.

ಅಡ್ವೋಕೇಟ್ ಜನರಲ್ ಉತ್ತರಿಸಿ, 'ಸರ್ಕಾರದ ನೀತಿಯ ಭಾಗವಾಗಿ ಕನ್ನಡ ಭಾಷೆ ಕಲಿಕೆಯನ್ನು ಕಡ್ಡಾಯ ಮಾಡಲಾಗಿದೆ. ಕನ್ನಡ ಕಲಿಯುವುದರಿಂದ ರಾಜ್ಯದಲ್ಲಿ ಉದ್ಯೋಗ ಪಡೆಯುವುದಕ್ಕೆ ಸಹಕಾರಿಯಾಗುತ್ತದೆ. ರಾಷ್ಟ್ರೀಯ ಶಿಕ್ಷಣ ನೀತಿಯಿಂದ ಸಮಸ್ಯೆಯಾದರೆ ಶಿಕ್ಷಕರು, ವಿದ್ಯಾರ್ಥಿಗಳು ನ್ಯಾಯಾಲಯದ ಮುಂದೆ ಬರಬೇಕು. ಸಾರ್ವಜನಿಕ ಹಿತಾಸಕ್ತಿ ಅರ್ಜಿಯ ರೂಪದಲ್ಲಿ ಪ್ರಶ್ನಿಸಲಾಗುವುದು. ಇದು ಅರ್ಜಿಗೆ ನಮ್ಮ ಪ್ರಾಥಮಿಕ ಆಕ್ಷೇಪಣೆಯಾಗಿದೆ' ಎಂದು ಸರ್ಕಾರದ ಕ್ರಮವನ್ನು ಸಮರ್ಥಿಸಿಕೊಳ್ಳಲು ಮುಂದಾದರು.

ಈ ವಾದವನ್ನು ಒಪ್ಪದ ನ್ಯಾಯಪೀಠ, 'ಹಾಗಾದರೆ ಉದ್ಯೋಗ ಪಡೆಯಲು ಕನ್ನಡ ಕಲಿಯುವಂತೆ ಷರತ್ತು ವಿಧಿಸಿ. ಶಿಕ್ಷಣದಲ್ಲಿ ಕನ್ನಡ ಕಲಿಕೆಯನ್ನು ಹೇರಲಾಗದು. ಸರ್ಕಾರದ ನೀತಿಯಿಂದ ಪದವಿಗೂ ಮೊದಲು ಕನ್ನಡ ಕಲಿಯದ ವಿದ್ಯಾರ್ಥಿಗಳಿಗೆ ತೊಂದರೆಯಾಗಲಿದೆ. ಸರ್ಕಾರ ತನ್ನ ನಿರ್ಧಾರವನ್ನು ಮರು ಪರಿಶೀಲಿಸಬೇಕು. ಇಲ್ಲವಾದರೆ ಅರ್ಜಿದಾರರ ಮಧ್ಯಂತರ ಮನವಿ ಪರಿಗಣಿಸಿ ಸರ್ಕಾರದ ಆದೇಶಕ್ಕೆ ತಡೆಯಾಜ್ಞೆ ನೀಡಲಾಗುವುದು' ಎಂದು ಎಚ್ಚರಿಕೆ ನೀಡಿತು.

ನಂತರ ಅಡ್ವೋಕೇಟ್ ಜನರಲ್, 'ಈ ಕುರಿತು ಸರ್ಕಾರದಿಂದ ಹೆಚ್ಚಿನ ಸೂಚನೆ ಪಡೆದು ನ್ಯಾಯಾಲಯಕ್ಕೆ ತಿಳಿಸಲಾಗುವುದು' ಎಂದು ತಿಳಿಸಿದರು.

'ಸರ್ಕಾರದ ನಿರ್ಧಾರವನ್ನು ಮರುಪರಿಶೀಲಿಸಲಾಗುತ್ತದೆ ಎಂದು ಹೇಳಿದರಷ್ಟೇ ಒಂದು ವಾರ ಕಾಲಾವಕಾಶ ನೀಡಲಾಗುವುದು' ಎಂದು ನುಡಿದ ನ್ಯಾಯಪೀಠ, ನಂತರ ಅರ್ಜಿ ವಿಚಾರಣೆಯನ್ನು ನವೆಂಬರ್ 10ಕ್ಕೆ ಮುಂದೂಡಿತು. ಅಷ್ಟರೊಳಗೆ ಸರ್ಕಾರ ಆದೇಶವನ್ನು ಮರು ಪರಿಶೀಲಿಸಬೇಕೆಂದು ಸಲಹೆ ನೀಡಿತು.

**ಪ್ರಕರಣ ಏನು:–** ರಾಜ್ಯದ ಪದವಿ ಕಾಲೇಜುಗಳಲ್ಲಿ ಕನ್ನಡ ಭಾಷೆಯನ್ನು ಒಂದು ವಿಷಯವಾಗಿ ಕಲಿಯುವುದನ್ನು ಕಡ್ಡಾಯ ಮಾಡಿ 2021 ರ ಆಗಸ್ಟ್ 7 ರಂದು ಸರ್ಕಾರ ಹೊರಡಿಸಿರುವ ಆದೇಶವನ್ನು ಪ್ರಶ್ನಿಸಿರುವ ಅರ್ಜಿದಾರರು, 'ಇದು ಸಂವಿಧಾನ ಬಾಹಿರ ಕ್ರಮ. ರಾಷ್ಟ್ರೀಯ ಶಿಕ್ಷಣ ನೀತಿಯಲ್ಲೂ ಕನ್ನಡ ಕಡ್ಡಾಯ ಎಂದು ಹೇಳಿಲ್ಲ. ಶಾಲಾ ಕಲಿಕೆಯಲ್ಲೂ ಕನ್ನಡ ಕಡ್ಡಾಯವಿಲ್ಲ. ಹೀಗಿದ್ದರೂ ಪದವಿ ಹಂತದಲ್ಲಿ ಕನ್ನಡ ಕಲಿಕೆ ಕಡ್ಡಾಯ ಮಾಡಲಾಗಿದೆ. ಇದರಿಂದ ಹೊರ ರಾಜ್ಯಗಳಿಂದ ಬಂದ ವಿದ್ಯಾರ್ಥಿಗಳಿಗೆ ತೊಂದರೆ ಉಂಟಾಗುತ್ತದೆ ಹಾಗೂ ಪದವಿಯಲ್ಲಿ ಭಾಷೆ ವಿಷಯ ಆಯ್ಕೆಗೂ ಅಡ್ಡಿಯಾಗಿದೆ. ಆದ್ದರಿಂದ, ಸರ್ಕಾರದ ಆದೇಶ ರದ್ದುಗೊಳಿಸಬೇಕು' ಎಂದು ಕೋರಿದ್ದಾರೆ. ಜೊತೆಗೆ, 'ಅರ್ಜಿ ಇತ್ಯರ್ಥವಾಗುವರೆಗೆ ಸರ್ಕಾರದ ಆದೇಶಕ್ಕೆ ತಡೆಯಾಜ್ಞೆ ನೀಡಬೇಕು' ಎಂದು ಮಧ್ಯಂತರ ಮನವಿ ಮಾಡಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ: 27.10.2021

## 5. ಜಾತಿ ಆಧಾರಿತ ನಿಗಮಗಳಿಗೆ ಹಣದ ಹೊಳೆ

ರಾಜ್ಯದಲ್ಲಿ 1975 ರಿಂದ 2021ರವರೆಗೆ ಜಾತಿ ಆಧಾರದ ಮೇಲೆ ರಚನೆ ಮಾಡಿರುವ 16 ನಿಗಮ ಮಂಡಳಿಗಳಿಗೆ ಮಂಜೂರು ಮಾಡಿರುವ ಮತ್ತು ಖರ್ಚು ಮಾಡಿರುವ ಅನುದಾನದ ವಿವರಗಳನ್ನು ಸರ್ಕಾರ ಹೈಕೋರ್ಟ್‌ಗೆ ಸಲ್ಲಿಸಿತು.

ಕರ್ನಾಟಕ ವೀರಶೈವ–ಲಿಂಗಾಯತ ಅಭಿವೃದ್ಧಿ ನಿಗಮ ಸೇರಿ ನಾನಾ ಜಾತಿ ಆಧರಿತ ನಿಗಮ–ಮಂಡಳಿ ರಚನೆ ಪ್ರಶ್ನಿಸಿ ವಕೀಲ ಎಸ್.ಬಸವರಾಜ್ ಹಾಗೂ ರಾಜ್ಯ ಹಿಂದುಳಿದ ಜಾತಿಗಳ ಒಕ್ಕೂಟ ಸೇರಿ ಮತ್ತಿತರರು ಸಲ್ಲಿಸಿರುವ ಪಿಐಎಲ್‌ಗಳು ಸಿಜೆ ರಿತುರಾಜ್ ಅವಸ್ಥಿ ನೇತೃತ್ವದ ವಿಭಾಗೀಯ ಪೀಠದ ಮುಂದೆ ವಿಚಾರಣೆಗೆ ಬಂದಿದ್ದವು.

ಹೈಕೋರ್ಟ್ 2021ರ ಅಕ್ಟೋಬರ್ 21 ರಂದು ನೀಡಿದ ನಿರ್ದೇಶನದಂತೆ ಸರ್ಕಾರಿ ವಕೀಲರು, ಒಟ್ಟು 16 ಜಾತಿ ಆಧಾರಿತ ನಿಗಮ ಮಂಡಳಿಗೆ ಮಂಜೂರು ಮಾಡಿದ, ಪಾವತಿಸಿದ ಒಟ್ಟು ಹಣ ಮತ್ತು ವ್ಯಯ ಮಾಡಿಸಿರುವ ಹಣದ ವಿವರಗಳನ್ನು ನ್ಯಾಯಪೀಠಕ್ಕೆ ಸಲ್ಲಿಸಿದರು.

ರಾಜ್ಯ ಹಿಂದುಳಿದ ಜಾತಿಗಳ ಒಕ್ಕೂಟದ ಪರ ವಕೀಲರು "ಬಿ.ಎಸ್.ಯಡಿಯೂರಪ್ಪ ಸಿಎಂ ಹುದ್ದೆ ರಾಜೀನಾಮೆಗೂ ಮುನ್ನ ರಾಜ್ಯದಲ್ಲಿ ಶೇ. 13 ರಷ್ಟು ಮತ ಪ್ರಮಾಣ ಹೊಂದಿರುವ ಒಕ್ಕಲಿಗ ಸಮುದಾಯದ ಹೆಸರಿನಲ್ಲಿ ಮಂಡಳಿ ರಚಿಸಿ ಆದೇಶಿಸಿದ್ದರು. ಜಾತಿ ಆಧಾರಿತ ನಿಗಮ ಮಂಡಳಿಗಳನ್ನು ರಚಿಸಿ ಅವುಗಳಿಗೆ ಅನುದಾನ ನೀಡುವ ಕ್ರಿಯೆ ನಡೆಯುತ್ತಿದೆ. ಆ ಮಂಡಳಿಗಳ ಅಧ್ಯಕ್ಷ ಸ್ಥಾನ ಮತ್ತು ಸಿಬ್ಬಂದಿಯನ್ನಾಗಿ ತಮ್ಮ (ರಾಜಕಾರಣಿಗಳ) ಸಂಬಂಧಿ ಮತ್ತು ಬೆಂಬಲಿಗರನ್ನು ನೇಮಕ ಮಾಡಲಾಗುತ್ತಿದೆ," ಎಂದು ತಿಳಿಸಿದರು.

| **ನಿಗಮ ಮಂಡಳಿಗಳ ಅನುದಾನ ವಿವರ (ಕೋಟಿಗಳಲ್ಲಿ)** | | | |
|---|---|---|---|
| **ನಿಗಮ – ಮಂಡಳಿ** | **ಹಂಚಿಕೆ** | **ಪಾವತಿ** | **ವ್ಯಯ** |
| ಅಂಬೇಡ್ಕರ್ ನಿಗಮ | 3,372.66 | 3,330.41 | 3,018.05 |
| ವಾಲ್ಮೀಕಿ ಪರಿಶಿಷ್ಟ ಪಂಗಡ ಅಭಿವೃದ್ಧಿ | 1,430 | 1,430 | 1,430 |
| ಡಿ.ದೇವರಾಜು ಅರಸು ನಿಗಮ | 2,940 | 2,660 | 2,846 |
| ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ | 1,661.97 | 1,512.91 | 1,517.67 |

| ನಿಗಮ ಮಂಡಳಿಗಳ ಅನುದಾನ ವಿವರ (ಕೋಟಿಗಳಲ್ಲಿ) | | | |
|---|---|---|---|
| **ನಿಗಮ – ಮಂಡಳಿ** | **ಹಂಚಿಕೆ** | **ಪಾವತಿ** | **ವ್ಯಯ** |
| ತಾಂಡಾ ಅಭಿವೃದ್ಧಿ ನಿಗಮ | 862.67 | 808.35 | 808.08 |
| ವಿಶ್ವಕರ್ಮ ಅಭಿವೃದ್ಧಿ ನಿಗಮ | 139 | 119 | 103.45 |
| ಉಪ್ಪಾರ ಅಭಿವೃದ್ಧಿ ನಿಗಮ | 22.79 | 22.79 | 16.54 |
| ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ | 42.5 | 32 | 28.80 |
| ಮಡಿವಾಳ ಮಾಚಿದೇವ ನಿಗಮ | 30 | 26.25 | 23.94 |
| ಸವಿತಾ ಸಮಾಜ ಅಭಿವೃದ್ಧಿ ನಿಗಮ | 7 | 3.25 | 1.98 |
| ವೀರಶೈವ ಲಿಂಗಾಯುತ ಅಭಿವೃದ್ಧಿ ನಿಗಮ | 500 | 100 | 0.72 |
| ಭೋವಿ ಅಭಿವೃದ್ಧಿ ನಿಗಮ | 339.150 | 260.650 | 227 |
| ಆದಿಜಾಂಬವ ಅಭಿವೃದ್ಧಿ ನಿಗಮ | 213.05 | 175.55 | 138.14 |
| ಅಲೆಮಾರಿ ಅಭಿವೃದ್ಧಿ ನಿಗಮ | 30.58 | 25.29 | 18.19 |
| ಬ್ರಾಹ್ಮಣ ಅಭಿವೃದ್ಧಿ ಮಂಡಳಿ | 36.29 | 28 | 3.31 |
| ಆರ್ಯ ವೈಶ್ಯ ಅಭಿವೃದ್ಧಿ ನಿಗಮ | 16 | 16 | 15.91 |

ಆಧಾರ: ವಿಜಯಕರ್ನಾಟಕ, ದಿನಾಂಕ: 29.10.2021

## 6. ಕರ್ನಾಟಕ ಹೈಕೋರ್ಟ್‌ಗೆ 3 ಹೆಚ್ಚುವರಿ ಜಡ್ಜ್‌ಗಳ ನೇಮಕ

ಹಿರಿಯ ವಕೀಲರಾದ ಅನಂತ ರಾಮನಾಥ ಹೆಗಡೆ, ಸಿದ್ದಯ್ಯ ರಾಚಯ್ಯ ಮತ್ತು ಕೆ.ಎಸ್.ಹೇಮಲೇಖ ಅವರನ್ನು ಕರ್ನಾಟಕ ಹೈಕೋರ್ಟ್‌ನ ಹೆಚ್ಚುವರಿ ನ್ಯಾಯಮೂರ್ತಿಗಳಾಗಿ ನೇಮಕ ಮಾಡಿ ಕೇಂದ್ರ ಸರ್ಕಾರ ಆದೇಶ ಹೊರಡಿಸಿದೆ. ಈ ಕುರಿತು ರಾಷ್ಟ್ರಪತಿ ಅವರ ಆದೇಶದ ಮೇರೆಗೆ ಕೇಂದ್ರ ಕಾನೂನು ಮತ್ತು ನ್ಯಾಯ ಸಚಿವಾಲಯದ ಕಾರ್ಯದರ್ಶಿ ರಜಿಂದರ್ ಕಶ್ಯಪ್ ಆದೇಶ ಮಾಡಿದ್ದಾರೆ. ಈ ಮೂವರು ವಕೀಲರನ್ನು 2 ವರ್ಷದ ಅವಧಿಗೆ ಹೆಚ್ಚುವರಿ ನ್ಯಾಯಮೂರ್ತಿಗಳನ್ನಾಗಿ ನೇಮಕ ಮಾಡಲಾಗಿದೆ ಎಂದು ಆದೇಶದಲ್ಲಿ ತಿಳಿಸಲಾಗಿದೆ. ಈ ಮೂವರನ್ನು ಹೈಕೋರ್ಟ್‌ಗೆ ನೇಮಕ ಮಾಡುವ ಸಂಬಂಧ 2021ರ ಅಕ್ಟೋಬರ್ 6 ರಂದು ಸುಪ್ರೀಂಕೋರ್ಟ್‌ನ ಕೊಲಿಜಿಯಂ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿತ್ತು.

ಹೈಕೋರ್ಟ್‌ನ ಬೆಂಗಳೂರು ಪ್ರಧಾನ ನ್ಯಾಯಪೀಠ, ಧಾರವಾಡ ಮತ್ತು ಕಲಬುರಗಿ ನ್ಯಾಯಪೀಠಕ್ಕೆ ಒಟ್ಟು 62 ಹುದ್ದೆಗಳು ಮಂಜೂರಾಗಿವೆ. ಸದ್ಯ ಮುಖ್ಯ ನ್ಯಾಯಮೂರ್ತಿಗಳು ಸೇರಿ 43 ನ್ಯಾಯಮೂರ್ತಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಇದೀಗ ಮತ್ತೆ ಮೂವರ ನೇಮಕದಿಂದ ಹೈಕೋರ್ಟ್ ನ್ಯಾಯಮೂರ್ತಿಗಳ ಸಂಖ್ಯೆ 46ಕ್ಕೆ ಏರಿಕೆಯಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ: 04.11.2021

## 7. ಹೈಕೋರ್ಟ್‌ಗೆ ಅಧಿಕಾರಿಗಳ ಹಾಜರಿ ಕಡ್ಡಾಯ

ಹೈಕೋರ್ಟ್‌ನಲ್ಲಿನ ಪ್ರಕರಣಗಳ ವಿಚಾರಣೆಗೆ ಅಧಿಕಾರಿಗಳ ಉಪಸ್ಥಿತಿ ಅಥವಾ ಖುದ್ದು ಹಾಜರಾತಿಗೆ ನ್ಯಾಯಾಲಯ ನೀಡುವ ನಿರ್ದೇಶನಗಳನ್ನು ಕಡ್ಡಾಯವಾಗಿ ಪಾಲಿಸಬೇಕೆಂದು ಸೂಚಿಸಿ ಸುತ್ತೋಲೆ ಹೊರಡಿಸಲಾಗಿದೆ ಎಂದು ಸರ್ಕಾರ ಹೈಕೋರ್ಟ್‌ಗೆ ಮಾಹಿತಿ ನೀಡಿದೆ.

ಧಾರವಾಡ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಗೆ (ಡಿಮ್ಹಾನ್ಸ್)ಗೆ ಮೂಲ ಸೌಕರ್ಯ ಒದಗಿಸುವ ಹಾಗೂ ಪ್ರಧಾನಮಂತ್ರಿ ಆವಾಸ್ ಯೋಜನೆಯಡಿ ಗ್ರಾಮೀಣ ಮತ್ತು ನಗರ ಭಾಗದ ವಸತಿರಹಿತರಿಗೆ ವಸತಿ ಸೌಲಭ್ಯ ಕಲ್ಪಿಸಲು ಕೋರಿ ಸಲ್ಲಿಕೆಯಾಗಿರುವ ಪಿಐಎಲ್‌ಗಳ ವಿಚಾರಣೆಗೆ ವೈದ್ಯಕೀಯ ಇಲಾಖೆ ಪ್ರಧಾನ ಕಾರ್ಯದರ್ಶಿ ಹಾಗೂ ವಸತಿ ಇಲಾಖೆ ಪ್ರಧಾನ ಕಾರ್ಯದರ್ಶಿ ಗೈರು ಹಾಜರಾಗಿದ್ದನ್ನು ಗಂಭೀರವಾಗಿ ಪರಿಗಣಿಸಿದ್ದ ಹೈಕೋರ್ಟ್, ಅಧಿಕಾರಿಗಳ ಕಾರ್ಯವೈಖರಿಯನ್ನು ತೀವ್ರವಾಗಿ ಖಂಡಿಸಿತ್ತು. ಜೊತೆಗೆ, ಖುದ್ದು ಹಾಜರಿಗೆ ನಿರ್ದೇಶನವಿರುವ ಪ್ರಕರಣಗಲ್ಲಿ ಅಧಿಕಾರಿಗಳು ಕಡ್ಡಾಯವಾಗಿ ಹಾಜರಾಗುವಂತೆ ಸೂಚಿಸಿ ಸುತ್ತೋಲೆ ಹೊರಡಿಸುವಂತೆ ಸರ್ಕಾರಕ್ಕೆ ತಾಕೀತು ಮಾಡಿತ್ತು.

ಸಿಜೆ ರಿತುರಾಜ್ ಅವಸ್ಥಿ ನೇತೃತ್ವದ ವಿಭಾಗೀಯ ಪೀಠದ ಮುಂದೆ ಹಾಜರಾದ ಹೆಚ್ಚುವರಿ ಅಡ್ವೋಕೇಟ್ ಜನರಲ್ ಧ್ಯಾನ್ ಚಿನ್ನಪ್ಪ, "ಪ್ರಕರಣದ ವಿಚಾರಣೆಗೆ ಹಾಜರಾಗುವಂತೆ ನ್ಯಾಯಾಲಯದ ನಿರ್ದೇಶನವಿದ್ದಾಗ ಅಧಿಕಾರಿಗಳು ತಪ್ಪದೆ ಹಾಜರಾಗಬೇಕು. ಇಲ್ಲದಿದಲ್ಲಿ ಅಧಿಕಾರಿಗಳ ನಡವಳಿಕೆಯನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಲಿದೆ' ಎಂದು ಎಲ್ಲ ಅಪರ ಮುಖ್ಯ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ, ಕಾರ್ಯದರ್ಶಿ ಹಾಗೂ ಎಲ್ಲ ಇಲಾಖಾ ಮುಖ್ಯಸ್ಥರಿಗೆ ಸೂಚಿಸಿ, ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್ ನವೆಂಬರ್ 9 ರಂದು ಸುತ್ತೋಲೆ ಹೊರಡಿಸಿದ್ದಾರೆ ಎಂದು ತಿಳಿಸಿದರಲ್ಲದೆ, ಕೋರ್ಟ್ ವಿಚಾರದಲ್ಲಿ ಅಧಿಕಾರಿಗಳು ಗಂಭೀರವಾಗಿ ನಡೆದುಕೊಳ್ಳುವಂತೆ ನೋಡಿಕೊಳ್ಳಲಾಗುವುದು ಎಂದು ಭರವಸೆ ನೀಡಿದರು.

ಆಧಾರ: ವಿಜಯವಾಣಿ, ದಿನಾಂಕ: 11.11.2021

## 8. ಕನ್ನಡ ಕಡ್ಡಾಯ : ಕೇಂದ್ರದ ನಿಲುವು ಕೇಳಿದ ಹೈಕೋರ್ಟ್

'ಪದವಿ ಕಾಲೇಜುಗಳಲ್ಲಿ ಕನ್ನಡ ಭಾಷೆ ಕಲಿಕೆ ಕಡ್ಡಾಯಗೊಳಿಸಿ ರಾಜ್ಯ ಸರ್ಕಾರ ಹೊರಡಿಸಿರುವ ಅಧಿಸೂಚನೆಗೆ ಸಂಬಂಧಿಸಿದಂತೆ ಯಾವ ನಿಲುವು ತಳೆದಿದ್ದೀರಿ ಎಂಬುದನ್ನು ತಿಳಿಸಿ' ಎಂದು ಕೇಂದ್ರ ಸರ್ಕಾರಕ್ಕೆ ಹೈಕೋರ್ಟ್ ಸೂಚಿಸಿದೆ.

ಪದವಿ ಕಾಲೇಜುಗಳಲ್ಲಿ ಕನ್ನಡ ಭಾಷೆ ಕಲಿಕೆ ಕಡ್ಡಾಯ ಮಾಡಿರುವ ರಾಜ್ಯ ಸರ್ಕಾರದ ಆದೇಶ ಪ್ರಶ್ನಿಸಿ, 'ಸಂಸ್ಕೃತ ಭಾರತಿ ಟ್ರಸ್ಟ್', 'ಹಯಗ್ರೀವ ಟ್ರಸ್ಟ್', 'ವ್ಯೋಮಾ ಲಿಂಗ್ವಿಸ್ಟಿಕ್ ಲ್ಯಾಬ್ ಫೌಂಡೇಷನ್' ಹಾಗೂ 'ಸಂಸ್ಕೃತ ಪ್ರಾಧ್ಯಾಪಕ ಸಂಘ'ಗಳು ಸಲ್ಲಿಸಿರುವ ಅರ್ಜಿಯನ್ನು ಮುಖ್ಯ ನ್ಯಾಯಮೂರ್ತಿ ಋತುರಾಜ್ ಅವಸ್ಥಿ ನೇತೃತ್ವದ ವಿಭಾಗೀಯ ನ್ಯಾಯಪೀಠ ವಿಚಾರಣೆ ನಡೆಸಿತು. ಅರ್ಜಿದಾರರ ಪರ ಹಿರಿಯ ವಕೀಲ ಎಸ್.ಎಸ್.ನಾಗಾನಂದ ಅವರು, 'ಕನ್ನಡ ಭಾಷೆ ಕಲಿಕೆಯನ್ನು ಕಡ್ಡಾಯ ಮಾಡಿರುವ ರಾಜ್ಯ ಸರ್ಕಾರದ ಕ್ರಮ ಸುಪ್ರೀಂ ಕೋರ್ಟ್‌ನ ಪೂರ್ವ ನಿರ್ದೇಶನಗಳಿಗೆ ಮತ್ತು ಸಂವಿಧಾನಕ್ಕೆ ವಿರುದ್ಧವಾಗಿದೆ' ಎಂದು ಪುನರುಚ್ಚರಿಸಿದರು.

'ಹೊರ ರಾಜ್ಯಗಳ ವಿದ್ಯಾರ್ಥಿಗಳಿಗೆ ಕನ್ನಡ ಕಡ್ಡಾಯ ಮಾಡಿರುವುದರಿಂದ ಸಾಕಷ್ಟು ತೊಂದರೆಯಾಗುತ್ತಿದೆ. ಯಾವ ಭಾಷೆ ಕಲಿಯಬೇಕು ಎಂಬುದು ವಿದ್ಯಾರ್ಥಿಯ ಇಚ್ಛೆಗೆ ಬಿಟ್ಟ ವಿಚಾರ. ಈ ಕುರಿತು ವಿದ್ಯಾರ್ಥಿಗಳು ಪ್ರಾಂಶುಪಾಲರಿಗೆ ಪತ್ರ ಬರೆದಿದ್ದಾರೆ' ಎಂದು ವಿವರಿಸಿದರು.

'ಭಾಷೆಯನ್ನು ಬಲವಂತವಾಗಿ ಕಲಿಸಬಾರದು. ನಾನು ಕನ್ನಡಿಗ, ಕನ್ನಡವನ್ನು ಪ್ರೀತಿಸುತ್ತೇನೆ. ಅಂದಮಾತ್ರಕ್ಕೆ ಹೊರಗಿನಿಂದ ಬಂದವರಿಗೂ ಕನ್ನಡ ಕಲಿಯುವಂತೆ ಒತ್ತಾಯಿಸುವುದು ಸರಿ ಎನ್ನಿಸುವುದಿಲ್ಲ. ಅಂತೆಯೇ, ಉನ್ನತ ಶಿಕ್ಷಣದಲ್ಲಿ ಕನ್ನಡ ಕಲಿಸುವುದು ಅಷ್ಟು ಸೂಕ್ತವೂ ಅಲ್ಲ. ಆದ್ದರಿಂದ, ಸರ್ಕಾರದ ಆದೇಶಕ್ಕೆ ತಡೆ ನೀಡಬೇಕು' ಎಂದು ಕೋರಿದರು.

ಅಡ್ವೊಕೇಟ್ ಜನರಲ್ ಪ್ರಭುಲಿಂಗ ಕೆ. ನಾವದಗಿ, 'ಸರ್ಕಾರದ ಈ ಆದೇಶ ರಾಷ್ಟ್ರೀಯ ಶಿಕ್ಷಣ ನೀತಿಗೆ ವಿರುದ್ಧವಾಗಿಲ್ಲ. ವಿದ್ಯಾರ್ಥಿಗಳಿಗೆ ಕನ್ನಡವನ್ನು ಒಂದು ಭಾಷೆಯಾಗಿ ಆಯ್ಕೆ ಮಾಡಿಕೊಳ್ಳುವಂತೆ ಸೂಚಿಸಲಾಗಿದೆ. ಕನ್ನಡ ಗೊತ್ತಿಲ್ಲದವರಿಗೆ ಸರಳವಾಗಿ ಕನ್ನಡ ಕಲಿಸಲು ಪ್ರತ್ಯೇಕ ಪಠ್ಯವನ್ನೂ ರೂಪಿಸಲಾಗಿದೆ. ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆ ಕಲಿಸುವ ವಿಚಾರದಲ್ಲಿ ಸುಪ್ರೀಂಕೋರ್ಟ್ ಮಧ್ಯ ಪ್ರವೇಶಿಸಲು ನಿರಾಕರಿಸಿದೆ' ಎಂಬ ಅಂಶವನ್ನು ನ್ಯಾಯಪೀಠದ ಗಮನಕ್ಕೆ ತಂದರು.

'ಕನ್ನಡ ಕಲಿಕೆ ಪ್ರಶ್ನಿಸಿ ಯಾವುದೇ ವಿದ್ಯಾರ್ಥಿ ಈ ಅರ್ಜಿ ಸಲ್ಲಿಸಿಲ್ಲ. ಇದು ಸಾರ್ವಜನಿಕ ಹಿತಾಸಕ್ತಿ ಅರ್ಜಿಯಲ್ಲ. ಬದಲಿಗೆ, ವೈಯಕ್ತಿಕ ಹಿತಾಸಕ್ತಿ ಅರ್ಜಿ. ಆದ್ದರಿಂದ ಇದನ್ನು ವಜಾಗೊಳಿಸಬೇಕು' ಎಂದು ಪ್ರತಿಪಾದಿಸಿದರು.ಉಭಯ ಬಣಗಳ ವಾದ–ಪ್ರತಿವಾದ ಆಲಿಸಿದ ಪೀಠ, 'ಕನ್ನಡ ಕಲಿಕೆ ಪ್ರೋತ್ಸಾಹಿಸುವುದೇನೋ ಸರಿ. ಆದರೆ, ಕಡ್ಡಾಯ ಮಾಡುವುದು ಎಷ್ಟು ಸರಿ' ಎಂದು ಪ್ರಶ್ನಿಸಿತಲ್ಲದೆ, ಈ ಅರ್ಜಿಗೆ ಸಂಬಂಧಿಸಿದಂತೆ ಕೇಂದ್ರವು ತನ್ನ ನಿಲುವು ಸ್ಪಷ್ಟಪಡಿಸುವಂತೆ ಸೂಚಿಸಿ ವಿಚಾರಣೆಯನ್ನು ಇದೇ 30ಕ್ಕೆ ಮುಂದೂಡಿತು.

ಆಧಾರ: ಪ್ರಜಾವಾಣಿ, ದಿನಾಂಕ: 16.11.2021

## 9. ಜನರ ಹಸಿವು ನೀಗಿಸಿ : ಸುಪ್ರೀಂಕೋರ್ಟ್

ಜನರ ಹಸಿವು ಮತ್ತು ಅಪೌಷ್ಟಿಕತೆ ಭೋಜನಾಲಯಗಳನ್ನು (ಕ್ಯಾಂಟೀನ್) ಆರಂಭಿಸುವ ಯೋಜನೆ ಸಿದ್ಧಪಡಿಸಲು ವಿಫಲವಾದ ಕೇಂದ್ರ ಸರ್ಕಾರವನ್ನು ಸುಪ್ರೀಂಕೋರ್ಟ್ ತರಾಟೆಗೆ ತೆದುಕೊಂಡಿದೆ. ಜನರು ಹಸಿವಿನಿಂದ ಸಾಯದಂತೆ ನೋಡಿಕೊಳ್ಳುವುದು ಪ್ರಜಾಪ್ರಭುತ್ವ ವ್ಯವಸ್ಥೆಯ ಯಾವುದೇ ಸರ್ಕಾರದ ಮೊದಲ ಹೊಣೆಗಾರಿಕೆ ಎಂದು ಕೋರ್ಟ್ ಹೇಳಿದೆ.

ಸಮುದಾಯ ಭೋಜನಾಲಯಗಳ ಸ್ಥಾಪನೆಯ ಯೋಜನೆ ರೂಪಿಸಲು ಮೂರು ವಾರಗಳ ಗಡುವನ್ನು ಕೇಂದ್ರಕ್ಕೆ ನೀಡಲಾಗಿದೆ. ಯೋಜನೆ ರೂಪಿಸುವಿಕೆ ಪ್ರಕ್ರಿಯೆಯಲ್ಲಿ ರಾಜ್ಯಗಳ ಜೋತೆ ಸಮಾಲೋಚನೆ ನಡೆಸುವಂತೆಯೂ ಕೋರ್ಟ್ ಸೂಚನೆ ನೀಡಿದೆ.

ಕೇಂದ್ರವು ಸಲ್ಲಿಸಿದ ಪ್ರಮಾಣ ಪತ್ರಗಳು ಮತ್ತು ಹೇಳಿಕೆಗಳನ್ನು ಗಮನಿಸದರೆ, ಸಲಹೆಗಳನ್ನು ಕಲೆ ಹಾಕುವ ಪ್ರಕ್ರಿಯೆಯೇ ಇನ್ನೂ ನಡೆಯುತ್ತಿರುವಂತೆ ಕಾಣಿಸುತ್ತಿದೆ. ಯೋಜನೆಯನ್ನು ಜಾರಿಗೊಳಿಸುವ ಯೋಚನೆಯೇ ಸರ್ಕಾರಕ್ಕೆ ಇದ್ದಂತಿಲ್ಲ ಎಂದು ಮುಖ್ಯ ನ್ಯಾಯಮೂರ್ತಿ ಎನ್.ವಿ.ರಮಣ ನೇತೃತ್ವದ ಪೀಠವು ಅತೃಪ್ತಿ ವ್ಯಕ್ತಪಡಿಸಿದೆ.

ಕೋವಿಡ್ ಸಾಂಕ್ರಾಮಿಕವು ಜನರನ್ನು ಸಂಕಷ್ಟಕ್ಕೆ ತಳ್ಳಿದೆ. ಇಂತಹ ಸಂದರ್ಭದಲ್ಲಿ ಜನರ ಆಹಾರ ಭದ್ರತೆಯನ್ನು ಖಾತರಿಪಡಿಸಬೇಕು. ಎಲ್ಲ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಕ್ಯಾಂಟೀನ್‌ಗಳನ್ನು ಸ್ಥಾಪಿಸಿ, ಜನರಿಗೆ ಸಬ್ಸಿಡಿ ದರದಲ್ಲಿ ಆಹಾರ ದೊರೆಯುವಂತೆ ಮಾಡಲು ಸರ್ಕಾರಕ್ಕೆ ಸೂಚಿಸಬೇಕು ಎಂದು ಸಾಮಾಜಿಕ ಕಾರ್ಯಕರ್ತರಾದ ಅನುನ್ ಧವನ್, ಇಶಾನ್ ಧವನ್ ಮತ್ತು ಕುಂಜನಾ ಸಿಂಗ್ ಅವರು ಸಲ್ಲಿಸಿದ್ದ ಅರ್ಜಿಯ ವಿಚಾರಣೆಯನ್ನು ಕೋರ್ಟ್ ನಡೆಸಿತು.

ಹಲವು ರಾಜ್ಯಗಳಲ್ಲಿ ಜಾರಿಯಲ್ಲಿರುವ ಸಮುದಾಯ ಭೋಜನಾಲಗಳ ಮಾದರಿಯಲ್ಲಿ ದೇಶದಾದ್ಯಂತ ಸಮುದಾಯ ಭೋಜನಾಲಯ ಸ್ಥಾಪನೆಗೆ ಯೋಜನೆ ರೂಪಿಸಿ ಎಂದು ಕೇಂದ್ರಕ್ಕೆ ಸುಪ್ರೀಂ ಕೋರ್ಟ್ ಅಕ್ಟೋಬರ್ 27 ರಂದು ಸೂಚಿಸಿತ್ತು.

'ಹಸಿವು ತಡೆಗೆ ನೀವು ಮುಂದಾದರೆ ಯಾವುದೇ ಸಂವಿಧಾನ, ಯಾವುದೇ ಕಾನೂನು ಅಥವಾ ಯಾವುದೇ ನ್ಯಾಯಾಲಯ ಬೇಡ ಎನ್ನುವುದಿಲ್ಲ. ಈಗಾಗಲೇ ವಿಳಂಬವಾಗಿದೆ. ವಿಚಾರಣೆಯನ್ನು ಪದೇ ಪದೇ ಮುಂದೂಡುವುದರಿಂದ ಉಪಯೋಗ ಇಲ್ಲ. ರಾಜ್ಯ ಸರ್ಕಾರಗಳ ಜೊತೆಗೆ ದಯವಿಟ್ಟು ಚರ್ಚಿಸಿ, ಯೋಜನೆ ಅಭಿವೃದ್ಧಿಪಡಿಸಿ' ಎಂದು ಕೋರ್ಟ್ ಹೇಳಿದೆ.

ಆಧಾರ: ಪ್ರಜಾವಾಣಿ, ದಿನಾಂಕ: 17.11.2021

## 10. ಶಾಸಕರು, ಸಂಸದರ ವಿರುದ್ಧದ ಕ್ರಿಮಿನಲ್ ಪ್ರಕರಣಗಳ ಮಾಹಿತಿ ಕೇಳಿದ ಹೈಕೋರ್ಟ್

ಶಾಸಕರು ಮತ್ತು ಸಂಸದರ ವಿರುದ್ಧ ವಿಲೇವಾರಿ ಮಾಡಿರುವ ಅಥವಾ ಬಾಕಿ ಇರುವ ಕ್ರಿಮಿನಲ್ ಪ್ರಕರಣಗಳ ಪಟ್ಟಿಯನ್ನು ರಿಜಿಸ್ಟ್ರಾರ್ ಜನರಲ್ ಅವರು ವಿಶೇಷ ಸೆಷನ್ಸ್ ಮತ್ತು ಮ್ಯಾಜಿಸ್ಟ್ರೇಟ್ ನ್ಯಾಯಾಲಯದಿಂದ ಪಡೆಯಬೇಕು ಎಂದು ಹೈಕೋರ್ಟ್ ಆದೇಶಿಸಿದೆ.

ಸಂಸದರು ಮತ್ತು ಶಾಸಕರ ವಿರುದ್ಧದ ಕ್ರಿಮಿನಲ್ ಪ್ರಕರಣಗಳ ವಿಚಾರಣೆಗೆ ವಿಶೇಷ ನ್ಯಾಯಾಲಯ ಆರಂಭಿಸಬೇಕು ಮತ್ತು ಅವುಗಳ ಮೇಲ್ವಿಚಾರಣೆ ನಡೆಸಬೇಕು ಎಂದು ಸುಪ್ರೀಂ ಕೋರ್ಟ್ ಆದೇಶಿಸಿರುವ ಹಿನ್ನೆಲೆಯಲ್ಲಿ ಸ್ವಯಂ ಪ್ರೇರಿತವಾಗಿ ಪ್ರಕರಣ ದಾಖಲಿಸಿಕೊಂಡಿರುವ ಮುಖ್ಯ ನ್ಯಾಯಮೂರ್ತಿ ರಿತುರಾಜ್ ಅವಸ್ಥಿ ನೇತೃತ್ವದ ವಿಭಾಗೀಯ ಪೀಠ ವಿಚಾರಣೆ ನಡೆಸಿತು. ಸಂಸದರು ಮತ್ತು ಶಾಸಕರ ವಿರುದ್ಧದ ಕ್ರಿಮಿನಲ್ ಪ್ರಕರಣಗಳಿಗೆ ಸಂಬಂಧಿಸಿದ ಪ್ರಕರಣವು ನವೆಂಬರ್ 24 ರಂದು ವಿಚಾರಣೆಗೆ ನಿಗದಿಯಾಗಿದೆ. ಈ ಹಿನ್ನೆಲೆಯಲ್ಲಿ ಪ್ರಕರಣವನ್ನು ಜನವರಿ 17ಕ್ಕೆ ವಿಚಾರಣೆಗೆ ನಿಗದಿಪಡಿಸುವಂತೆ ಪೀಠವು ಆದೇಶದಲ್ಲಿ ಹೇಳಿದೆ.

ಆಧಾರ: ವಿಶ್ವವಾಣಿ, ದಿನಾಂಕ: 18.11.2021

## 11. 56 ನಗರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಿ : ಹೈಕೋರ್ಟ್

ಅವಧಿ ಮುಗಿದು ಚುನಾವಣೆ ಬಾಕಿ ಇರುವ ರಾಜ್ಯದ 56 ನಗರ ಸ್ಥಳೀಯ ಸಂಸ್ಥೆಗಳಿಗೆ ಇದೇ ಡಿಸೆಂಬರ್ 30 ರೊಳಗೆ ಚುನಾವಣೆ ನಡೆಸುವಂತೆ ಹೈಕೋರ್ಟ್ ಆದೇಶಿಸಿದೆ.

ಈ ಸಂಬಂಧ ಹೈಕೋರ್ಟ್ ಸ್ವಯಂಪ್ರೇರಿತವಾಗಿ ದಾಖಲಿಸಿಕೊಂಡಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಮುಖ್ಯ ನ್ಯಾಯಮೂರ್ತಿ ರಿತುರಾಜ್ ಅವಸ್ಥಿ ನೇತೃತ್ವದ ವಿಭಾಗೀಯ ನ್ಯಾಯಪೀಠ ವಿಚಾರಣೆ ನಡೆಸಿತು.

ವಿಚಾರಣೆ ವೇಳೆ ರಾಜ್ಯ ಸರ್ಕಾರ ಮತ್ತು ಚುನಾವಣಾ ಆಯೋಗದ ವಾದ ಆಲಿಸಿದ ನ್ಯಾಯಪೀಠ, 'ಇದೇ 26ರೊಳಗೆ ರಾಜ್ಯ ಸರ್ಕಾರ ಸ್ಥಳೀಯ ಸಂಸ್ಥೆಗಳ ವಾರ್ಡ್ ಮೀಸಲಾತಿ ಅಧಿಸೂಚನೆ ಹೊರಡಿಸಬೇಕು. ನಂತರ ಚುನಾವಣಾ ಆಯೋಗ ವೇಳಾಪಟ್ಟಿ ಪ್ರಕಟಿಸಬೇಕು. ಡಿಸೆಂಬರ್ 30ರೊಳಗೆ ಚುನಾವಣೆ ನಡೆಸಬೇಕು' ಎಂದು ಆದೇಶಿಸಿದೆ.

ಇದೇ ವೇಳೆ ಹೆಚ್ಚುವರಿ ಅಡ್ವೋಕೇಟ್ ಜನರಲ್ ಧ್ಯಾನ್ ಚಿನ್ನಪ್ಪ ಅವರು ಈ ಸಂಬಂಧ ನಗರಾಭಿವೃದ್ಧಿ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿಯವರ ಪ್ರಮಾಣ ಪತ್ರವನ್ನು ನ್ಯಾಯಪೀಠಕ್ಕೆ ಸಲ್ಲಿಸಿದರು.

2021ರ ಸೆಪ್ಟೆಂಬರ್ 16 ರಂದು ಹೈಕೋರ್ಟ್ ನೀಡಿದ ಆದೇಶದಂತೆ ಮೀಸಲಾತಿ ನಿಗದಿಪಡಿಸುವ ಪ್ರಕ್ರಿಯೆ ನಡೆಸಲಾಗಿದೆ. 56 ನಗರ ಸ್ಥಳೀಯ ಸಂಸ್ಥೆಗಳ ಪೈಕಿ 10 ನಗರ ಸ್ಥಳೀಯ ಸಂಸ್ಥೆಗಳ ಅಂತಿಮ ಮೀಸಲಾತಿ ಅಧಿಸೂಚನೆ ಪ್ರಕಟಿಸಲಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ: 18.11.2021

## 12. ಜಾತಿ ಗಣತಿ: ಏಕಕಾಲಕ್ಕೆ ಹೈಕೋರ್ಟ್ ವಿಚಾರಣೆ

'ಮಾಜಿ ಮುಖ್ಯಮಂತ್ರಿಯನ್ನು ಅನುಷ್ಠಾನಗೊಳಿಸಲು ನಿರ್ದೇಶಿಸಬೇಕು' ಎಂದು ಕೋರಲಾದ ಮತ್ತು 'ಈ ಜಾತಿಗಣತಿ ವರದಿ ಅಸಾಂವಿಧಾನಿಕ' ಎಂದು ಆಕ್ಷೇಪಿಸಲಾದ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲ ಮಧ್ಯಂತರ ಅರ್ಜಿಗಳನ್ನು, ಹೈಕೋರ್ಟ್ ಏಕಕಾಲಕ್ಕೆ ವಿಚಾರಣೆಗೆ ನಿಗದಿಪಡಿಸಿದೆ.

'ವರದಿ ಅನುಷ್ಠಾನ ಕೋರಿ ಮುಖ್ಯಮಂತ್ರಿ ಚಂದ್ರು ಸಲ್ಲಿಸಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿಯಲ್ಲಿ ನಮ್ಮನ್ನೂ ಪ್ರತಿವಾದಿಗಳನ್ನಾಗಿ ಸೇರ್ಪಡೆ ಮಾಡಿಕೊಳ್ಳಬೇಕು' ಎಂದು ಅಖಿಲ ಭಾರತ ವೀರಶೈವ ಮಹಾಸಭಾದ ಕೇಂದ್ರ ಕಾರ್ಯಕಾರಿ ಸಮಿತಿ ಸದಸ್ಯ ಬಿ.ಎಸ್.ನಟರಾಜ್ ಹಾಗೂ ಒಕ್ಕಲಿಗರ ಮುಖಂಡ ಹಾಸನದ ಉದ್ಯಮಿ ಕೃಷ್ಣೇಗೌಡ ಸಲ್ಲಿಸರುವ ಮಧ್ಯಂತರ ಅರ್ಜಿಗಳ ವಿಚಾರಣೆ ಮುಖ್ಯ ನ್ಯಾಯಮೂರ್ತಿ ರಿತುರಾಜ್ ಅವಸ್ಥಿ ನೇತೃತ್ವದ ವಿಭಾಗೀಯ ಪೀಠದ ಮುಂದೆ ನಿಗದಿಯಾಗಿತ್ತು.

ಏತನ್ಮಧ್ಯೆ, 2015 ರಲ್ಲಿ ಜಾತಿ ಗಣತಿಯನ್ನು ಪ್ರಶ್ನಿಸಿ ಬೀದರ್‌ನ ಶಿವರಾಜ ಕಣಶೆಟ್ಟಿ ಹಾಗೂ ಇತರರು ಸಲ್ಲಿಸಿದ್ದ ಸಾರ್ವಜನಿಕ ಹಿತಾಸಕ್ತಿ ಅರ್ಜಿಯೂ ಇದೇ ಪ್ರಕರಣಕ್ಕೆ ಸಂಬಂಧಿಸಿದ್ದಾಗಿದೆ ಎಂಬ ಕಾರಣದಿಂದ ಎಲ್ಲ ಅರ್ಜಿಗಳನ್ನೂ ಒಟ್ಟಿಗೇ ವಿಚಾರಣೆ ನಡೆಸುವುದಾಗಿ ನ್ಯಾಯಪೀಠ ತಿಳಿಸಿತು.

ಮಧ್ಯಂತರ ಅರ್ಜಿದಾರರ ಪರ ಹಾಜರಾಗಿದ್ದ ಹಿರಿಯ ವಕೀಲ ಗಂಗಾಧರ ಗುರುಮಠ ಹಾಗೂ ಅಭಿಷೇಕ ಕುಮಾರ್ ಅವರನ್ನು ನ್ಯಾಯಪೀಠ, 'ಆಯೋಗದ ಪರ ಯಾರು ಹಾಜರಾಗುತ್ತಿದ್ದಾರೆ' ಎಂದು ಪ್ರಶ್ನಿಸಿತು. ಇದಕ್ಕೆ ಉತ್ತರಿಸಿದ ವಕೀಲರು, 'ವಿಜಯಸಿಂಹ ರೆಡ್ಡಿ ಹಾಜರಾಗುತ್ತಿದ್ದಾರೆ' ಎಂದರು.

**ಆಕ್ಷೇಪಗಳೇನು:** 'ಸಂವಿಧಾನದ 7ನೇ ಪರಿಚ್ಛೇದದ ಸೂಚಿತಪಟ್ಟಿ 1ರ 69ನೇ ಪ್ರವೇಶದ ಅನುಸಾರ ರಾಜ್ಯ ಸರ್ಕಾರಕ್ಕೆ ಜಾತಿ ಗಣತಿ ನಡೆಸುವ ಅಧಿಕಾರವಿಲ್ಲ. ಇದರ ಅಧಿಕಾರ ಏನಿದ್ದರೂ ಕೇಂದ್ರ ವ್ಯಾಪ್ತಿಗೆ ಒಳಪಟ್ಟಿದೆ' ಎಂಬುದು ಮಧ್ಯಂತರ ಅರ್ಜಿದಾರರ ಪ್ರಮುಖ ಆಕ್ಷೇಪ.

**ಕೇಂದ್ರದ ಪ್ರಮಾಣ ಪತ್ರದಲ್ಲೇನಿದೆ** 'ಜಾತಿಗಣತಿಯ ಸಂವಿಧಾನ ಬದ್ಧತೆ ಪ್ರಶ್ನಿಸಿ ಶಿವರಾಜ ಕಣಶೆಟ್ಟಿ ಸಲ್ಲಿಸಿರುವ ಅರ್ಜಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು 2016ರ ಆಗಸ್ಟ್‌ನಲ್ಲಿ ಹೈಕೋರ್ಟ್‌ಗೆ ಪ್ರಮಾಣ ಪತ್ರ ಸಲ್ಲಿಸಿದೆ.

'ರಾಜ್ಯ ಸರ್ಕಾರವು ಜಾತಿ ಜನಗಣತಿ ನಡೆಸಿದರೆ ಅದು ಸಂವಿಧಾನದ 245 ಮತ್ತು 246ನೇ ಪರಿಚ್ಛೇಧ ಸ್ಪಷ್ಟ ಉಲ್ಲಂಘನೆಯಾಗುತ್ತದೆ ಮತ್ತು ಅಧಿಕಾರ ದುರುಪಯೋಗ ಮಾಡಿದಂತೆಯೂ ಆಗುತ್ತದೆ. ಈ ಕುರಿತು ಅರ್ಜಿದಾರರ ವಾದ ಸರಿಯಿದೆ. ಹೀಗಾಗಿ ಅರ್ಜಿಯನ್ನು ಪುರಸ್ಕರಿಸಬಹುದು' ಎಂದು ವಿವರಿಸಿದೆ.

ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವು 2015ರ ಏಪ್ರಿಲ್ 11 ರಿಂದ ಜಾತಿಗಣತಿ ಆರಂಭಿಸಿತ್ತು. 'ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗ ನಡೆಸಿರುವುದು ಜಾತಿಗಣತಿ ಅಲ್ಲ. ಬದಲಾಗಿ, ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ ಮತ್ತು ಸಾಮಾಜಿಕ ಸಮೀಕ್ಷೆ' ಎಂದು ಕೋರ್ಟ್‌ಗೆ ತಿಳಿಸಿತ್ತು.

ಆಧಾರ: ಪ್ರಜಾವಾಣಿ, ದಿನಾಂಕ: 19.11.2021

## 13.12 ಬಿಜೆಪಿ ಶಾಸಕರ ಅಮಾನತ್ತು ವಿಚಾರಣೆಗೆ ಸುಪ್ರೀಂ ಸಮ್ಮತಿ

ಸಭಾಧ್ಯಕ್ಷರೊಂದಿಗೆ ಅನುಚಿತವಾಗಿ ವರ್ತಿಸಿದ ಆರೋಪದ ಮೇಲೆ ಬಿಜೆಪಿಯ 12 ಶಾಸಕರನ್ನು ಮಹಾರಾಷ್ಟ್ರ ವಿಧಾನಸಭೆ ಸ್ಪೀಕರ್ 1 ವರ್ಷ ಅಮಾನತ್ತುಗೊಳಿಸಿರುವುದನ್ನು ಪ್ರಶ್ನಿಸಿ ಸಲ್ಲಿಸಿರುವ ಅರ್ಜಿಯ ವಿಚಾರಣೆ ನಡೆಸಲು ಸುಪ್ರೀಂ ಕೋರ್ಟ್ ಸಮ್ಮತಿಸಿದೆ.

"ರಾಜ್ಯ ವಿಧಾನಸಭೆಯ ಚಳಿಗಾಲದ ಅಧಿವೇಶನ ಪ್ರಾರಂಭವಾಗುವ ಸಾಧ್ಯತೆಯಿದೆ ಮತ್ತು ಶಾಸಕರ ಅಮಾನತ್ತು ವಿರುದ್ಧದ ಅರ್ಜಿಯನ್ನು ತುರ್ತು ವಿಚಾರಣೆ ನಡೆಸುವ ಅಗತ್ಯವಿದೆ," ಎಂದು ಮುಖ್ಯ ನ್ಯಾಯಮೂರ್ತಿ ಎನ್.ವಿ.ರಮಣ ನೇತೃತ್ವದ ನ್ಯಾಯಪೀಠಕ್ಕೆ ಶಾಸಕರ ಪರ ವಕೀಲ ಸಿದ್ಧಾರ್ಥ್ ಧರ್ಮಾಧಿಕಾರಿ ಮನವಿ ಮಾಡಿದರು. ಇದಕ್ಕೆ ಪ್ರತಿಕ್ರಿಯಿಸಿದ ಪೀಠವು, "ನಾವು ವಿಚಾರಣೆಗೆ ದಿನಾಂಕವನ್ನು ನಿಗದಿಪಡಿಸುತ್ತೇವೆ," ಎಂದು ತಿಳಿಸಿತು.

ಸಭಾಧ್ಯಕ್ಷರ ಕೊಠಡಿಯಲ್ಲಿ ಸಭಾಧ್ಯಕ್ಷರಾದ ಭಾಸ್ಕರ್ ಜಾಧವ್ ಅವರೊಂದಿಗೆ ಬಿಜೆಪಿ ಶಾಸಕರು ಅನುಚಿತವಾಗಿ ವರ್ತಿಸಿದ್ದಾರೆ ಎಂದು ರಾಜ್ಯ ಸರ್ಕಾರ ಆರೋಪಿಸಿದ ನಂತರ ಜುಲೈ 5ರಂದು ಅವರನ್ನು ವಿಧಾನ ಸಭೆಯಿಂದ ಅಮಾನತ್ತುಗೊಳಿಸಲಾಗಿತ್ತು. ಅಮಾನತ್ತುಗೊಂಡಿರುವ ಬಿಜೆಪಿ ಶಾಸಕರು ಸ್ಪೀಕರ್ ನಿರ್ಣಯವನ್ನು ಪ್ರಶ್ನಿಸಿ ಜುಲೈ 22 ರಂದು ಸುಪ್ರೀಂ ಕೋರ್ಟ್‌ಗೆ ಅರ್ಜಿ ಸಲ್ಲಿಸಿದ್ದರು. ಮುಖ್ಯಮಂತ್ರಿ ಉದ್ಧವ್ ಠಾಕ್ರೆ ನೇತೃತ್ವದ ಮಹಾರಾಷ್ಟ್ರ ವಿಕಾಸ ಅಘಾಡಿ ಸರ್ಕಾರವು ಡಿಸೆಂಬರ್ 22 ಮತ್ತು 28ರ ನಡುವೆ ರಾಜ್ಯ ವಿಧಾನಸಭೆಯ ಚಳಿಗಾಲದ ಅಧಿವೇಶನ ನಡೆಸಲು ನಿರ್ಧರಿಸಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 07.12.2021

# ಭಾಗ – 8

# ಹೊರ ರಾಜ್ಯಗಳ ಸುದ್ದಿಗಳು

## 1. GOA STAKES CLAIM OVER 12 ISLANDS CLOSE TO KARWAR

Even as China has staked claim to Senkaku Islands much to Japan's annoyance, escalating the strategic manoeuvres, clouser home. Goa has appealed to the Union Government seeking possession of 12 islands that are closer to Karwar and within the jurisdiction of Karnataka.

The Union Home Ministry forwarded Goa's demand to the Karnataka government following which the Inspector General of Police, Internal Security sent a letter, dated 21st September 2021, a copy of which is available with the New Indian Express to the Uttara Kannada district administration seeking details as to which taluks these islands belong to.

Goa has staked claim over Anjidiva, now in possession of the Indian Navy, Kurmagad, devagad- which has a light house Shimsigudda and other Islands. Apart from these major islands it also wants possession of a few minor islands like Sese Gunji, Janigudda and Madli Gadda.

These islands are within 12 to 15 nautical miles of Karnataka coast and fall legally within the limits of the state. But surprisingly no effort has been made to document them within the state's boundary.

Karwar, Deputy Commissioner Mullai Muhilan has sent the details pertaining to the islands by marking their Latitude and Longitude.

The Union Home department has sought details pertaining to these islands. Goa has claimed some islands. We have replied to their demands. Let's see what action the Union Government will take he said.

After the liberation of Goa from the Portuguese in 1961, the islands that were under its jurisdiction were not transferred to Karnataka and have remained still as part of Goa. Taking advantage of the anomaly the neighbourising state is now demanding that the islands be handed over to it immediately.

Courtesy:- Indian Express, Dated: 18.10.2021

## 2. SP rebel MLA Nitin Agarwal elected Deputy Speaker in U.P

Nitin Agarwal a rebel MLA of the Samajwadi Party backed by the ruling BJP was elected Deputy Speaker of the Uttar Pradesh Assembly.

With 304 votes Mr.Agarwal, a former Minister of State in the Akhilesh Yadav government and a three time MLA from Hardoi, defeated Narendra Singh Verma of the SP.

Mr.Agarwal had quit the SP along with his father Naresh Agarwal, a former Minister and joined the BJP ahead of the 2019 Lok Sabha election. However, the MLA is technically still regarded as an SP legislator and the party's petition seeking his disqualification had reportedly been rejected. This technicality allowed Chief Minister justify the decision to field Mr.Agarwal, a Vaishya community member, for the post traditionally reserved in recent years for the largest opposition party, which is currently the SP.

Mr.Verma a six time MLA from Sitapur belonging to the Kurmi (OBC) caste, received only 60 votes, which was however more than the number of MLAs currently with the SP. The Opposition BSP and the Congress boycotted the election which wes held using ballot paper during a special session of the Assembly.

**Yogis Charge**: Speaking in the Assembly following Mr.Agarwal's election Mr.Adityanath accused the SP of being anti youth for fielding a senior MLA Mr.Verma, 57 against the 40 years old Mr.Agarwal, Mr.Adityanath mocked the SP and said the party had drowned in its internal contradictions. It cannot even keep its own members Mr.Adityanath said accusing it of betrying Mr.Verma.

Mr.Adityanath said the Deputy Speaker's election was a signal that a similar result was expected in the Upcoming Assembly polls. The picture of 2022 polls has come out before us.

Courtesy:- The Hindu, Dated: 19.10.2021

## 3. UP includes married daughters in dependents list for govt jobs

In a significant development the Uttar Pradesh cabinet headed by CM has green flagged the proposal to include married daughters in the category of dependents of deceased government officials to be given a government job on compassionate grounds.

Until now only the wife a married/unmarried son and unmarried daughter were bracketed as dependents of a deceased government official. The cabinet broadened the definition of dependent daughters to include the married ones also officials said. A senior official however said that the married daughter will be lower the order after the deceased's wife married/unmarried son and unmarried daughter. She may also get the job if other family members refuse to take up a government job an official said.

The proposal was moved as the 12$^{th}$ amendment to the Deceased Government Servants Rule 2021. Earlier this year the Allahabad high court had maintained that excluding married daughters from the definition of family in the rules for appointment on compassionate grounds was unconstitutional and in violation of Articles 14 and 15 of the Constitution. While hearing a petition in January the high court held that a married daughter was no less eligible for government jobs on compassionate grounds than her married brother or unmarried sister.

The court was hearing a petition by one Manjula Srivastava who had challenged a June 2020 order of Prayagraj's district basic education officer, rejecting her claim to the appointment on compassionate grounds following her father's death during his service to the state government. The Centre has also included married daughters in the definition of family.

In another important decision the cabinet gave its nod to a proposal of rehabilitating 63 Hindu Bengal families who got displaced after the formation of East Pakistan (now Bangladesh) in 1970. The families will be settled in village Bhaisaya in Kanpur (rural) over 121.41 hectares of land. Each family will be given 2 acres of land for agricultural purposes and 200 sq.mt (over 2100 sq.ft) of land for housing on lease rent of Re.1 for a period of 30 years renewable up to 90 years. They will also be provided a grant of Rs1.2 lakh each for the construction of their houses.

Courtesy:- Times News, Dated: 12.11.2021

## 4. Jagan drops law on three capitals

Faced with from Amaravati farmers, disapproval of the entire Opposition and the Andhra Pradesh High Court's review, the Jaganmohan Reddy government withdrew the contentious three-capital legislation on shifting the executive seat from Amaravati to Visakhapatnam.

Farmers in Amaravati have been agitating for about two years now asking chief minister to withdraw the legislation.

Reddy's decision closely follows the Narendra Modi government's move to revoke the farm laws, after a year of protests by farmers.

However, making a statement in the Assembly after a repeal bill was introduced, Reddy said he backed down only to bring in more comprehensive infallible bills as the present decentralisation laws are challenged legally and otherwise.

I have nothing against Amaravati region. I have built my home here. But to raise a mega, greenfield capital expenditure on basic infrastructure like roads, power, drainage itself required about Rs.l lakh crore. Where do we raise such a sum, Reddy questioned while revisting the calculations he presented last year.

Alternatively Reddy said Visakhapatnam has the required infrastructure already and with some value addition the port city could have competed with Hyderabad in five ten years.

Reddy said that his three-capital decentralisation plan was with good intentions to avoid a super capital like Hyderabad. The mega-city with heavy concentration of industries and institutions finally went to Telangana in the 2014 bifurcation.

The YSR CP dominated state Assembly later passed the bill repealing the Andhra Pradesh. Decentralisation and Inclusive Development of all Regions Act 2020 and the Andhra Pradesh Capital Region Development Authority Repeal Act 2020 Act.

We would bring in a new decentralisation bill, strengthening the existing provisions and effectively addressing legal questions, public concerns while also widening the scope to benefit a larger section of the society. Reddy said while not stating a timeline for the reworked legislation.

For now Amaravati from where the state secretariat legislature and high court are operating is officially back as Andhra Pradesh's sole capital.

Within months of coming to power in May 2019, Reddy dismantled the grand plan of his predecessor Chandrababu Naidu to raise a world-class greenfield mega capital at Amaravati near Vijayawada in Guntur district.

YSRCP government notified the two acts-one stripping Amaravati of its sole capital status and other to establish the executive capital at Visakhapatnam judiciary in Kurnool with Amaravati remaining only as the legislative capital.

The acts were soon challenged in the courts by Amaravati farmers who parted with lands for the capital construction and others. Reddys capital shift has been on hold since last year following the Andhra Pradesh High Court orders. The government submitted its decision to revoke the legislation.

Courtesy:- Deccan Herald, Dated: 23.11.2021

## 5. Ruckus in Assam assembly as Cong plea for discussion on land Scam rejected

The winter session of Assam assembly began with chaotic scense after the Speaker rejected an adjournment motion moved by the Congress to discuss the alleged land scam by a company confunded by the wife of Himanta Biswa Sarma.

The unruly scene inside the house forced Speaker Biswajit Daimary to adjourn the session for 10 minutes. Later the entire opposition comprisisng the Congress AIUDF the CPM and one independent MLA, staged a walkout as the matter was not allowed to be discussed.

Leader of the opposition Debabrata Saikia and other Congress MLAs served a notice for an adjournment motion to discuss alleged violation of laws while acquiring 29 bighas and 9 lecha (around 19 acres) of government land by RBS Realtors Pvt. Ltd.

Daimary initially said he received an adjournment motion on violation of land policies by a private company and the motion was disallowed. He did not mention what the notice was all about. On this Independent MLA, Akhil Gogoi said, Cannot we talk about the CM's family land scandal?

Reacting to Gogoi's question all the BJP members stood up and started shouting at him. The speaker said there was no need to take anyone's name. Justifying his stand to reject

the motion, Daimary said. I have not got any data on the topic; there are only some newspaper clippings.

When Gogoi insisted on reading out the topic of the notice he said that there was no need to read it out in the house. Saikia then said that it would be wrong if the opposition party was not allowed to even talk on the admissibility of the notice. A decision to reject it can be pronounced thereafter.

Other senior Congress MLA's such as Bharat Chandra Narah and Kamalakhya Dey Purkaysstha too questioned the Speaker for not reading out the notice. The rule allows the Speaker to decide on the admissibility of a notice. I have checked it and found that it is not admissible. Daimary said, Gogoi then again raised the issue mentioning the alleged land scam by the Wife of the Chief minister. The BJP members too reacted sharply to this leading to adjournment of the house for 10 minutes. When the house reasembled Saikia raised the topic again and urged the Speaker to discuss the matter.

Courtesy:- Times of India, Dated: 21.12.2021

## 6. ಕೊರೋನಾ ಕೇಸು ಹೆಚ್ಚಳ ದೆಹಲಿಯಲ್ಲಿ ಕಟ್ಟುನಿಟ್ಟು

ದೇಶದಲ್ಲಿ ಒಮಿಕ್ರಾನ್ ಆತಂಕ ಹೆಚ್ಚಾಗಿರುವಂತೆಯೇ ದೆಹಲಿ ಸರ್ಕಾರ ನಿಯಂತ್ರಣಕ್ಕಾಗಿ ಯೆಲ್ಲೋ ಅಲರ್ಟ್ ಘೋಷಣೆ ಮಾಡಿದೆ. ಕಳೆದ ಮೂರ್ನಾಲ್ಕು ದಿನಗಳಿಂದ ಕೊರೋನಾ ಕೇಸುಗಳ ಸಂಖ್ಯೆಯೂ ಹೆಚ್ಚಾಗಿದ್ದು ಇದರಿಂದಾಗಿ ಸಿನಿಮಾ ಮಂದಿರ, ಬ್ಯಾಂಕ್ವೆಟ್ ಹಾಲ್, ಆಡಿಟೋರಿಯಂ, ಸ್ಪಾಗಳು, ಜಿಮ್‌ಗಳನ್ನು ಮುಚ್ಚಲು ಆದೇಶಿಸಿದೆ. ರಾತ್ರಿ ಕರ್ಫ್ಯೂ ಕೂಡ ಹೇರಲಾಗಿದೆ.

ದೆಹಲಿ ಸಿಎಂ ಸರ್ಕಾರ ಈ ಆದೇಶ ಹೊರಡಿಸಿದ್ದು ಹೋಟೆಲ್‌ಗಳು ಮತ್ತು ರೆಸ್ಟೋರೆಂಟರ್‌ಗಳು ಶೇ.50 ರಷ್ಟು ಗ್ರಾಹಕರೊಂದಿಗೆ ವಹಿವಾಟು ನಡೆಸಬಹುದಾಗಿದೆ. ಇದು ರಾತ್ರಿ 10ರ ವರೆಗೆ ಮಾತ್ರ ಅನ್ವಯವಾಗಲಿದ್ದು, ಬಳಿಕ ಸಂಪೂರ್ಣ ಬಂದ್ ಮಾಡುವಂತೆ ಸೂಚನೆ ನೀಡಲಾಗಿದೆ. ದೆಹಲಿ ಮತ್ತು ಮಹಾರಾಷ್ಟ್ರದಲ್ಲಿ ಧೈನಂದಿನ ಕೊರೋನಾ ಕೇಸುಗಳು ಸಂಖ್ಯೆಯಲ್ಲಿ ಗಣನೀಯವಾಗಿ ಹೆಚ್ಚಳವಾಗುತ್ತಿದೆ. ಈಗಾಗಲೇ ಕೇರಳದಲ್ಲೂ ಕೇಸುಗಳ ಸಂಖ್ಯೆ ಹೆಚ್ಚೇ ಇದೆ.

**ವೈದ್ಯಕೀಯ ಪ್ರಮಾಣ ಪತ್ರ ಬೇಕಾಗಿಲ್ಲ**: 60 ವರ್ಷ ದಾಟಿದ ಇತರೆ ಕಾಯಿಲೆಗಳು ಇರುವ ವೃದ್ಧರಿಗೆ ಬೂಸ್ಟರ್ ಡೋಸ್ ನೀಡಲಾಗುತ್ತಿದೆ. ಈ ಮೊದಲು ಇಂಥ ಕಾಯಿಲೆಗಳು ಇರುವವರು ವೈದ್ಯರಿಂದ ವೈದ್ಯಕೀಯ ಪ್ರಮಾಣ ಪತ್ರ ತರುವಂತೆ ಸೂಚಿಸಲಾಗಿತ್ತು. ಈಗ ಈ ಆದೇಶ ಪರಿಷ್ಕರಿಸಲಾಗಿದ್ದು 60 ವರ್ಷ ಮೇಲ್ಪಟ್ಟ ಇತರೆ ರೋಗಗಳು ಇರುವವರು ತಮ್ಮ ವೈದ್ಯರ ಸಲಹೆ ಮೇರೆಗೆ ಬೂಸ್ಟರ್ ಡೋಸ್ ಪಡೆಯಬಹುದಾಗಿದೆ.

**ಚುನಾವಣಾ ಸಿಬ್ಬಂದಿ ಮುಂಚೂಣಿ ಕಾರ್ಯಕರ್ತರು**: ಮುಂಬರುವ ಪಂಚ ರಾಜ್ಯ ಚುನಾವಣೆಯಲ್ಲಿ ಕಾರ್ಯನಿರ್ವಹಿಸಿರುವ ಸಿಬ್ಬಂದಿಯನ್ನೂ ಮುಂಚೂಣಿ ಕಾರ್ಯಕರ್ತರು ಎಂದು ಪರಿಗಣಿಸಿ ಅವರಿಗೆ ಬೂಸ್ಟರ್ ಲಸಿಕೆ ನೀಡಲಾಗುವುದು ಎಂದು ಆರೋಗ್ಯ ಸಚಿವಾಲಯ ಹೇಳಿದೆ.

ಆಧಾರ:ಉದಯವಾಣಿ, ದಿನಾಂಕ:29.12.2021

# ಭಾಗ – 9

# ಅಂತರರಾಷ್ಟ್ರೀಯ ಸುದ್ದಿಗಳು

## 1. Fumio Kishida elected as new PM of Japan

Japan's parliament elected Fumio Kishida, a former moderate turned hawk, as Prime Minister. He'll face an economy battered by the pandemic, security threats from China and North Korea and leadership of a political party whose popularity is sagging ahead of a fast approaching crucial national election.

With his party and its coalition partner holding a majority in both houses, Mr.Kishida won by a comfortable margin against Yukio Edano, head of the largest opposition Constitutional Democratic Party of Japan.

He replaces Yoshihide Suga, who resigned after only one year in office as his support plunged over his government's handling of the pandemic and insistence on holding the Tokoy Olympics as the virus spread.

Courtesy:- The Hindu, Dated: 05.10.2021

## 2. UK declares MP's killing terror attack

The fatal stabbing of British lawmaker David Amess was terrorist incident with possible links to Islamist extremism, police said as the government ordered a review of safety measures to protect MPs Veteran Conservative MP David Amess, 69 was talking with voters at a chruch in the small town of Leigh-on-Sea east of London when he was stabbled to death.

Police said they arrested a 25 years-old suspect and were investigating a potential motivation linked to Islamist extremism. The fatal stabbing has been declared as a terrorist incident, with the invesigation being led by Counter Terrorism Policing the police said in a statement Multiple UK media outlets, citing sources, reported that the suspect was believed to be a British national with Somali heritage. The Sun tabloid reported that the attackes stabbed Amess multiple times in the presence of two women staff, before sitting down and waiting for police to arrive. Police said they believed the attacker acted alone and they carried out searches at two addresses in the London area.

PM Bories Johnson visited the crime scene to pay his respects laying floral wreaths outside the church with the leader of the opposition. Labour leader Keir Starmer in a rare show of unity. Local residents including members of the Muslim community also came heaping bouquets next to the police tape.

UK politicians were stunned by the highly public attack, which recalled the murder of a pro-EU lawmaker ahead of the Brexit refrendumm. 2$^{nd}$ June 2016, Labour MP Jo Cox was killed by a far-right extremist prompting demand for action against what lawmakers said was a rising tide of public abuse and threats against elected representatives.

Home secretary Priti Patel ordered police across the country to review security arrangments for all 650 MPs. We will carry on... We live in an open society a democracy. We cannot be cowed by any individual.

Courtesy:- Times of India, Dated: 17.10.2021

## 3. Germany’s Parliament elects new Speaker

Germany’s newly elected Parliament held its first meeting and elected a lawmaker from the centre-left Social Democratic Party as Speaker of the 736- member Lower House, or Bundestag.

German Chancellor Angela Merkel attended the session although she is no longer a lawmaker. She sat in the visitor stands of Parliament Ms Merkel’s Union bloc finished behind the Social Democrats in Germany’s federal election last month.

The citizens are looking to us, and their expections of Parliament are rightly high. Wolfgang Schaeuble the previous Speaker said we all should continue to do everything we can to meet their expections.

Mr.Schaeuble, 79 a conservative veteran and former Finance and Interior Minister is the longest-serving Member of Parliament. He has been a lawmaker since 1972. The new Speaker Baerble Bas has been a member of the Bundestag since 2009.

**Women’s representation**: She told fellow lawmakers that she would work for fairer representation of women in Parliament. Ms.Bas is only the third woman to head the Boundestag since its creation in 1949. The responsibility has by far not been spread fairly on all shoulders she said.

While the Bundesag has more women members following last month’s election, women are still a long way from reaching parity in the national legislature. More than a third of the new lawmakers are women compared with the 31.4% n the previous Parliament according to German news agency dpa.

Ms.Bas emphasised that even though Parliament does not yet reflect the full diversity of German society, the new Bundestag has become more diverse with more immigrant lawmakers and younger members too.

Courtesy:- The Hindu, Dated: 27.10.2021

## 4. No babies in parliament: UK MPs outraged by infant ban

A British MP called for reforms after a parliamentary official rebuked her for bringer her sleeping baby to a debates. Stella Creasy an opposition lawmaker, who has campaigned for MPs to be offered maternity leave, received a warning after speaking at a debate on holding her three-month-old son Pip.

The Labour MP tweeted an email from an official at the House of Commons citing a rule that you should not take your seat in the Chamber when accopmained by a child. Creasy and other MPs questioned the rulling which appeared to stand at odds with previous directives on the practice. Alex Davies-Jones a Labour Mp tweeted that when elected in 2019 she was breastfeeding and the Speaker of the House of Commons Linsay Hoyle assured her she would be able feed her baby in the main chamber of Westminister Hall, a historiv building used for some MPs sessions.

Mothers in the mother of all parliaments are not to be seen or heard it seems, Creasy compalined. The MP has regularly brought her baby son, who is still being breastfed to debates as she previously did with her daughter. He’s bey tiny and perhaps some of my collegues are noisier than him, she told Sky News calling for a more flexible approach from parlimentary authorities. It’s a part of modern lige isn’t it, that sometimes you might need to have your kids with you. Despite the formal rule against this, MPs have previously brought babies to debates without reprimind. Former Liberal Demicrat leader Jo Swinson was reportedly the first to do so in 2018.

Creasy has campaigned unsuccessfully for MPs to get full rights to maternity leave. When you’re a mum you can’t win, she told Sky News. Other MPs backed her. I ha’ve got quite a lot of sympathy with Stella. Justice secretary Dominic Raab told Sky News. We need to make sure we’re in the $21^{st}$ Century he said while adding it was up to the parliamentary authorities to work out what the right balance is. The British government in February announced it would introduce six-month paid maternity leave for senior ministers, but BPs are not entitled to this.

Courtesy:- Times of India, Dated: 25.11.2021

## 5. South Africa detects new Covid-19 variant

Scientists in South Africa said they had detected a new Covid-19 variant with multiple mutations blaming it for a surge in infection numbers.

Unfortunately we have detected a new variant which is a reason for concern in South Africa virologist Tulio de Oliveria told a hastily called news conference.

The variant, which goes by the scientific lineage number B.11,529 has a very high number of mutations he said. It’s unfortunately causing a resurgence of infections he said.

Health Minister Joe Phaahla said the variant was of serious concern and behind an exponential increase in reported cases making it a major threat. Daily infections shot to more than 1,200 up from around 100 earlier this month.

Before the detections of the new variant authorities had predicted a fourth wave to hit South Africa starting around the middle of December, buoyed by travel ahead of the festive season. The government-run National Institute for Communicable Diseases said 22 positive cases of the B.11,529 variant have been recorded in the country following genomic

sequencing. It said in a statement that detected cases and the % age testing positive are increasing quickly in three of the country's provinces including Gauteng which includes Johannesburg and Pretoria.

A cluster outbreak was recently identified concerntrated at a higher education institute in Pretoria the NICD added.

Last year South Africa also detected the Beta variant of the virus although until now its infection numbers have been driven by the Delta variant which was originally detected in India. The country has the highest pandemic numbers in Africa with around 2.95 million cases of which 89,657 have been fatal.

Scientists said the new B.11,529 variant has at least 10 mutations, compared to two for Delta or three Beta.

Courtesy:- Times of India, Dated: 25.11.2021

## 6. Omicron was in Europe a week before SA reported it

Dutch health authorities said that the Omicron variant was presents in the Netherlands earlier than previously thought, before South Africa had first reported the new strain of Covid-19.

The variant was found in two test samples from November 19 and 23 with one having no travel history suggesting that the variant is already circulating in the Netherlands, the RIVM public health institute said.

The first Omicron cases in the Netherlands were previously believed to have been the cluster of 14 among passengers on two flights from South Africa that arrived on Amsterdam.

The Netherlands now joins other European countries including Belgium and Germany that have reported cases of the new strain before it was officially notified by South Africa to the World Health Organisation.

We found two additional cases of Omicron variant which have been sampled RIVM infections diseases, Chief Aura Timen said.

So that points at the presence already of this variant in the Netherlands.

Dutch authorities had informed the two new cases and carried out contact tracing the RIVM said. One of those two people had no travel history the other had recently been to the South Africa, an RIVM spokesman said.

With 16 confirmed cases the Netherlands has one of the highest numbers in Europe of the new strain.

But the Dutch situation was likely to be repeated in other countries when they retest samples for Omicrn cases, the public health institute's Timen said.

Courtesy:- Deccan Herald, Dated: 01.12.2021

## 7. Lankan president suspends house in surprise move

In an unusual move, Sri Lankan President Gotabaya Rajapaksha has prorogued Parliament for one week and left for Singapore on an unscheuled visit.

There was no immediate comment from the government on Rajapaksa's decision to suspend Parliament for a week. Parliament which ended its sessions was originally set to convene on January 11. It will now convene President Rajapaksha through an extraordinary gazettee notification dated December 12, suspended the assembly.

"I do by this proclamation prorogue Parliament with effect from midnight of the Twelfth day of December. Two Thousand and Twenty One and hereby fix the Eighteenth day of January Two at 10 am for the commencement of the next session and summon parliament to meet the gazette notification read.

Hours after proroguing Parliament Gotabaya, 72 left for Singapore on an unshceuled visit. Presidential officials said that he was on a private visit believed to be for medical purposes.

Two key issues billed for discussions during Cabinet meeting would not be taken up energy minister Udaya Gammanpila told reporters.

The weekly Cabinet meeting was to discuss the possibility of Sri Lankn going for a bailout package from the International Monetary Fund (IMF) in view of the severe foreign currency crisis.

Sri Lanka's foreign reserves have slipped to the lower level to suffie only a month's imports. The Cabinet was also scheduled to discuss a controversial power deal with US Power Company for which the government allies had expressed vehement opposition.

The President's action means all standing committees in the Parliament would have to be reconstituted and reconvened.

Two oversight committees on public enterprises and public accounts have been pointing to many irregularities in running state institutions. The assembly session dates and timings are set by political party leaders represented in Parliament in concurrence with the House Speaker.

Courtesy:- Deccan Herald, Dated: 14.12.2021

## 8. US Covid deaths crosses 8-lakh mark

The US death toll from Covid-19 topped 8,00,000 a once unimaginable figure seen as doubly tragic given that more than 2,00,000 of those lives were lost after the vaccine became available practically for the asking last spring.

The number of deaths, as complied by Johns Hopkins University is about equal to the population of Atlanta and St.Louis combined or Minneapolis and Cleveland put together. It is roughly equivalent to how many Americans die each year from hear disease or stroke.

The United States has the highest reported toll of any country. The US accounts for approximately 4% of the world's population but about 15% of the 5.3 million known deaths from the coronavirus since the outbreak began in China two years ago.

The true death toll in the US and around the world is believed to significantly higher because of cases that were overlooked or concealed.

A closely watched forecasting model from the University of Washington projects a total of over 8,80,000 reported deaths in the US.

Health experts lament that many of the deaths in the United States were especially heartbreaking because they were preventable by way of the vaccine, which became available in mid-December a year ago and was thrown open to all adults by mid-April of this year. About 200 million Americans are fully vaccinated or just over 60% of the population. That is well short of what scientists say is needed to keep the virus in check.

Almost all the people dying are now dying preventable deaths, said Dr.Chris Beyrer an epidemiologist at the Johns Hopkins Bloomberg School of Public Health.

Courtesy:- Deccan Herald, Dated: 16.12.2021

# ಭಾಗ – 10

# ಶ್ರದ್ಧಾಂಜಲಿ

## 1. ಪ್ರೊ.ಜಿ.ಕೆ. ಗೋವಿಂದರಾವ್, ನಟ, ಚಿಂತಕರು

ಹಿರಿಯ ನಟ, ಚಿಂತಕ ಬರಹಗಾರ, ಹೋರಾಟಗಾರ ಹಾಗೂ ನಿವೃತ್ತ ಪ್ರಾಧ್ಯಾಪಕ ಪ್ರೊ:ಜಿ.ಕೆ. ಗೋವಿಂದರಾವ್ ನಿಧನ ಹೊಂದಿರುತ್ತಾರೆ. ಅವರಿಗೆ 84 ವರ್ಷ ವಯಸ್ಸಾಗಿತ್ತು. ಅವರ ಅಪೇಕ್ಷೆಯಂತೆ ಅವರ ನೇತ್ರಗಳನ್ನು ದಾನ ಮಾಡಲಾಗಿದೆ.. 1937ರ ಏಪ್ರಿಲ್ 27ರಂದು ಬೆಂಗಳೂರಿನಲ್ಲಿ ಜನಿಸಿದ್ದ ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಅಧ್ಯಯನ ಮಾಡಿ ವೃತ್ತಿಯಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ಸಾಮಾಜಿಕ ಪ್ರಗತಿ, ರಾಜಕೀಯ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಅವರು ರಾಜಕೀಯ ಪಕ್ಷಗಳ ವಿರುದ್ಧ ನೇರ ವಾಗ್ದಾಳಿ ನಡೆಸುತ್ತಿದ್ದರು. ಮಡೆ ಸ್ನಾನವನ್ನು ತೀವ್ರವಾಗಿ ವಿರೋಧಿಸಿದ್ದರು.

ರಂಗಕರ್ಮಿಯಾಗಿ ಹಲವು ನಾಟಕಗಳಲ್ಲಿ ಅಭಿನಯಿಸಿದ್ದರಲ್ಲದೇ ಧಾರಾವಾಣಿ ಚಲನಚಿತ್ರಗಳಲ್ಲಿ ನಟಿಸಿದ್ದರು. ಮಾಲ್ಗುಡಿಡೇಸ್, ಮಹಾಪರ್ವ ಸೇರಿದಂತೆ ಹಲವು ಧಾರವಾಣಿಗಳಲ್ಲಿ ನಟಿಸಿದ್ದ ಅವರು ಅನೇಕ ಚಿತ್ರಗಳಲ್ಲಿ ಪ್ರಮುಖ ಹಾಗೂ ಪೋಷಕ ಪಾತ್ರದಲ್ಲಿ ಅಭಿನಯಿಸಿದ್ದರು.

ಎಲ್ಲೇ ಅನ್ಯಾಯಗಳಾದರೂ ಪತ್ರಿಕೆಗಳಿಗೆ ಮೊದಲು ಬರೆಯುತ್ತಿದ್ದ ಪ್ರೊ: ಗೋವಿಂದರಾವ್ ಸಾಹಿತ್ಯ ಲೋಕಕ್ಕೆ ಗಮನಾರ್ಹ ಕೊಡುಗೆಯನ್ನು ನೀಡಿದ್ದಾರೆ. ಈಶ್ವರ ಅಲ್ಲಾ (ಕಿರುಕಾದಂಬರಿ) ಶೇಕ್ಸ್‌ಪೀಯರ್–2 ನಾಟಕಗಳ ಅಧ್ಯಯನ, ಶೇಕ್ಸ್‌ಪೀಯರ್ ಸಂವಾದ (ವಿಮರ್ಶಾ ಲೇಖನಗಳು) ನಡೆನುಡಿ ನಾಗರಿಕತೆ ಮತ್ತು ಅರಾಜಕತೆ, ಬಿಂಬ ಪ್ರತಿಬಿಂಬ, ಕ್ರಿಯೆ ಪ್ರತಿಕ್ರಿಯೆ, ಮನು ವರ್ಸಸ್ ಅಂಬೇಡ್ಕರ್, ತಮ್ಮ ಆಯ್ಕೆ ಯಾವುದು (ಸಂಕೀರ್ಣ ಬರಹಗಳು) ಇವರ ಪ್ರಮುಖ ಕೃತಿಗಳು.

ಆಧಾರ : ವಿಜಯ ಕರ್ನಾಟಕ, ದಿನಾಂಕ:16.10.2021

## 2. ಪಾಟೀಲ್ ದೊಡ್ಡನಗೌಡ, ಏಕೀಕರಣ ಹೋರಾಟಗಾರರು

ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಚೆಳ್ಳಗುರ್ಕಿ ಗ್ರಾಮದ ಮುಖಂಡ ಪಾಟೀಲ್ ದೊಡ್ಡನಗೌಡ ನಿಧನರಾಗಿದ್ದಾರೆ. ಅವರಿಗೆ 93 ವರ್ಷ ವಯಸ್ಸಾಗಿತ್ತು. ಅವರು ಬಳ್ಳಾರಿಯನ್ನು ಕರ್ನಾಟಕಕ್ಕೆ ಸೇರಿಸಲು ನಡೆದ ಹೋರಾಟದಲ್ಲಿ ಭಾಗವಹಿಸಿದ್ದರು ಮತ್ತು ಜೈಲು ವಾಸ ಅನುಭವಿಸಿದ್ದರು. ಇವರ ನಿಧನದಿಂದ ಏಕೀಕರಣ ಹೋರಾಟದ ಮತ್ತೊಂದು ಕೊಂಡಿ ಕಳಚಿದಂತಾಗಿದೆ.

ಆಧಾರ : ಪ್ರಜಾವಾಣಿ, ದಿನಾಂಕ:18.10.2021

## 3. ನಾರಾಯಣರಾವ್ ಮಾನೆ, ಸಂಗೀತ ವಿದ್ವಾಂಸ

ಹಿಂದೂಸ್ತಾನಿ ಸಂಗೀತ ವಿದ್ವಾಂಸ ನಾರಾಯಣರಾವ್ ಮಾನೆ ನಿಧನರಾಗಿದ್ದಾರೆ. ಅವರಿಗೆ 92 ವರ್ಷ ವಯಸ್ಸಾಗಿತ್ತು. ಅವರು ರೇಡಿಯೊ ಹಾಗೂ ದೂರದರ್ಶನದಲ್ಲಿ ಹಲವು ಕಾರ್ಯಕ್ರಮಗಳನ್ನು ನೀಡಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲೂ ಭಾಗವಹಿಸಿದ್ದರು. ಅವರಿಗೆ ಕರ್ನಾಟಕ ರಾಜ್ಯೋತ್ಸವ, ಸಂತ ಶಿಶುನಾಳ ಷರೀಫ ಸೇರಿದಂತೆ ಹಲವು ಪ್ರಶಸ್ತಿಗಳು ಒಲಿದಿದ್ದವು. ಡಾಕ್ಟರೇಟ್ ಗೌರವವು ಸಂದಿತ್ತು.

ಆಧಾರ : ಪ್ರಜಾವಾಣಿ, ದಿನಾಂಕ:19.10.2021

## 4. ಡಾ:ಎಂ.ಪಿ. ಕರ್ಕಿ, ಮಾಜಿ ಶಾಸಕ

ಕುಮಟಾ ಹೊನ್ನಾವರ ವಿಧಾನಸಭಾ ಕ್ಷೇತ್ರದ ಮಾಜಿ ಶಾಸಕ ಡಾ: ಎಂ. ಪಿ. ಕರ್ಕಿ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 86 ವರ್ಷ ವಯಸ್ಸಾಗಿತ್ತು. ಅವರು 1983 ಹಾಗೂ 1994ರಲ್ಲಿ ಎರಡು ಬಾರಿ ಶಾಸಕರಾಗಿದ್ದರು. ಒಂದು ಬಾರಿ ಉತ್ತರ ಕನ್ನಡ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿದ್ದರು ಬಿ.ಜೆ.ಪಿ. ಜಿಲ್ಲಾ ಘಟಕದ ಅಧ್ಯಕ್ಷರಾಗಿ, ಹೊನ್ನಾವರದ ಎಜುಕೇಷನ್ ಸೊಸೈಟಿ ಅಧ್ಯಕ್ಷ ಸೇರಿದಂತೆ ವಿವಿಧ ಸಂಘ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿದ್ದರು. ಉತ್ತರ ಕನ್ನಡದಲ್ಲಿ ಬಿ.ಜೆ.ಪಿ ಸಂಘಟನೆಗೆ ಅವರು ಶ್ರಮಿಸಿದ್ದರು.

ಆಧಾರ : ಪ್ರಜಾವಾಣಿ, ದಿನಾಂಕ:19.10.2021

## 5. ಡಾ: ರಂಗಾರೆಡ್ಡಿ ಕೋಡಿರಾಂಪುರ, ಸಾಹಿತಿ ಮತ್ತು ಜಾನಪದ ವಿದ್ವಾಂಸರು

ಸಾಹಿತಿ ಮತ್ತು ಜಾನಪದ ವಿದ್ವಾಂಸ ಡಾ: ರಂಗಾರೆಡ್ಡಿ ಕೋಡಿರಾಂಪುರ ನಿಧನ ಹೊಂದಿರುತ್ತಾರೆ. ಇವರು ಗೌರಿಬಿದನೂರು ನ್ಯಾಷನಲ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಜಾನಪದ ಸಂಸ್ಕೃತಿ ಸಾಲು ಹೊಂಗೆಯ ತಂಪು, ಬಂಡಾಯ ಜನಪದ, ನನ್ನೂರು ಹಾಡು ಸೇರಿ ಹಲವು ಕೃತಿಗಳನ್ನು ರಚಿಸಿದ್ದರು. 2015ರಲ್ಲಿ ಚಿಕ್ಕಬಳ್ಳಾಪುರ ಜಿಲ್ಲಾ 5ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಯಕ್ಷಗಾನ ಅಕಾಡೆಮಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಜಾನಪದ ಅಕಾಡೆಮಿ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದರು.

ಆಧಾರ : ವಿಜಯವಾಣಿ, ದಿನಾಂಕ:25.10.2021

## 6. ಎಸ್. ಎಸ್. ಸುಬ್ಬರಾವ್, ಗಾಂಧಿವಾದಿ

ಗಾಂಧಿವಾದಿ ಚಿಂತಕ ಎಸ್.ಎಸ್. ಸುಬ್ಬರಾವ್ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 92 ವರ್ಷ ವಯಸ್ಸಾಗಿತ್ತು. ಸುಬ್ಬರಾವ್ ಅವರು ಕನ್ನಡಿಗರು, ಹುಟ್ಟಿದ್ದು, ಬೆಳೆದದ್ದು ಓದಿದ್ದು ಕರ್ನಾಟಕದಲ್ಲಿ ಅವರು ಪರಿಚಿತ ವಲಯಕ್ಕೆ ಭಾಯಿಜಿ ಆಗಿದ್ದರು. ಅವರು ಜೋಧಪುರದಲ್ಲಿ ನಡೆಸುತ್ತಿದ್ದ ಹಲವಾರು ಶಿಬಿರಗಳು ಹಾಗೂ ರಚನಾತ್ಮಕ ಕಾರ್ಯಕ್ರಮಗಳ ಮೂಲಕ ದೇಶದ ಪೀಳಿಗೆಗೆ ಸ್ಫೂರ್ತಿಯಾಗಿದ್ದರು.

ಆಧಾರ :ಪ್ರಜಾವಾಣಿ, ದಿನಾಂಕ:28.10.2021

## 7. ಪುನೀತ್‌ರಾಜಕುಮಾರ್, ಖ್ಯಾತ ಕನ್ನಡ ಚಲನಚಿತ್ರ ಯುವನಟರು

ಖ್ಯಾತ ಕನ್ನಡ ಚಲನಚಿತ್ರದ ಮೇರು ಯುವ ನಟ, ಗಾಯಕ ಪುನೀತ್ ರಾಜಕುಮಾರ್ ನಿಧನ ಹೊಂದಿರುತ್ತಾರೆ. ಅವರಿಗೆ 46 ವರ್ಷ ವಯಸ್ಸಾಗಿತ್ತು. ಪುನೀತ್ ಅವರು ಆರು ತಿಂಗಳ ಮಗುವಿನಿಂದಲೂ ನಟನೆಯಲ್ಲಿ ತೊಡಗಿದ್ದರು. 4ನೇ ವಯಸ್ಸಿಗೆ ಬಾಲನಟನಾಗಿ ರಾಷ್ಟ್ರ ಪ್ರಶಸ್ತಿ ಗಳಿಸಿದ್ದರು. ನಂತರ 27ನೇ ವಯಸ್ಸಿಗೆ ನಾಯಕ ನಟನಾಗಿ ಪ್ರವೇಶ ಪಡೆದು ಅಲ್ಲಿಂದ 19 ವರ್ಷಗಳ ಕಾಲ ಕನ್ನಡ ನಾಡಿನ ಕಣ್ಮಣಿಯಾಗಿ ಬೆಳೆದರು.

ಡಾ: ರಾಜ್ ಕುಮಾರ್ ಅವರ ಮಗನಾಗಿ ಹುಟ್ಟಿ ಅವರು ಪ್ರತಿಪಾದಿಸಿದ ಮೌಲ್ಯಗಳನ್ನೇ ಸಿನಿಮಾಗಳಲ್ಲಿ ಮತ್ತು ಬದುಕಿನಲ್ಲಿ ಪ್ರತಿನಿಧಿಸಿದ್ದು ವಿಶೇಷವಾಗಿತ್ತು. ಎಲ್ಲರ ಮನೆ ಮಗನೇ ಆಗಿದ್ದರು. ಯುವಜನರ ಕಣ್ಮಣಿಯಾಗಿದ್ದರು ಮತ್ತು ವಿನಯದ ಸಾಕಾರಮೂತಿಯಾಗಿದ್ದರು. ಪುನೀತ್ ಅವರಿಗೆ ಮರಣನಂತರ ಕರ್ನಾಟಕ ರತ್ನ ಪ್ರಶಸ್ತಿಯನ್ನು ನೀಡಲಾಗಿದೆ.

ಆಧಾರ :ವಿಜಯ ಕರ್ನಾಟಕ, ದಿನಾಂಕ:30.10.2021

## 8. ಪ್ರೊ. ಜ್ಯೋತಿ ಹೊಸೂರ, ಖ್ಯಾತ ಸಾಹಿತಿ

ಕನ್ನಡ ವಿದ್ವಾಂಸ, ಖ್ಯಾತ ಹಿರಿಯ ಸಾಹಿತಿ, ಪ್ರೊ. ಜ್ಯೋತಿ ಹೊಸೂರ ಇವರು ನಿಧನ ಹೊಂದಿರುತ್ತಾರೆ. ಇವರಿಗೆ 85 ವರ್ಷ ವಯಸ್ಸಾಗಿತ್ತು. ಮೂಡಲಗಿ ಕಾಲೇಜ್‌ನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಮತ್ತು ಪ್ರಾಚಾರ್ಯರಾಗಿ ಮೂರು ದಶಕಗಳ ಕಾಲ ಕಾರ್ಯನಿರ್ವಹಿಸಿದ್ದರು. ಅವರು ಅನೇಕ ಸಂಶೋಧನಾತ್ಮಕ ಪುಸ್ತಕಗಳನ್ನು ಹೊರತಂದಿದ್ದಾರೆ. ಕನ್ನಡ ಸಾಹಿತ್ಯ, ಸಮಾಜ ಸಂಸ್ಕೃತಿ ಹಾಲುಮತ ಸಮುದಾಯ ಮತ್ತು ಜಾನಪದ ಕ್ಷೇತ್ರಗಳಿಗೆ ಸಂಬಂಧಿಸಿದ ಮಹತ್ವದ ಗ್ರಂಥಗಳನ್ನು ರಚಿಸಿದ್ದಾರೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕನಕಶ್ರೀ ಪ್ರಶಸ್ತಿ, ಬೆಟಗೇರಿ ಕೃಷ್ಣ ಶರ್ಮ ಸಂಶೋಧಕ ಪ್ರಶಸ್ತಿ ಮತ್ತು ಜನಪದ ತಜ್ಞ ಪ್ರಶಸ್ತಿ ಸೇರಿ ಹಲವು ಪ್ರಶಸ್ತಿಗಳಿಗೆ ಭಾಜನರಾಗಿದ್ದರು.

ಆಧಾರ :ಉದಯವಾಣಿ, ದಿನಾಂಕ:02.11.2021

## 9. ಡಾ:ಹೆಚ್. ಕೆ. ರಾಮನಾಥ್, ರಂಗ ಕಲಾವಿದ

ರಂಗ ಕಲಾವಿದ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಡಾ:ಹೆಚ್.ಕೆ. ರಾಮನಾಥ್ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 83 ವರ್ಷ ವಯಸ್ಸಾಗಿತ್ತು. ಅಧ್ಯಾಪಕ ವೃತ್ತಿಯ ಜೊತೆಗೆ ಮಿತ್ರ ಕಲಾವಿದರು ತಂಡವನ್ನು ಕಟ್ಟಿಕೊಂಡು ಅನೇಕ ನಾಟಕಗಳಲ್ಲಿ ಅಭಿನಯಿಸಿದ್ದರು. ಮಕ್ಕಳಿಗಾಗಿ "ಬೇನೆಯ ಬೋನಿ"ನಲ್ಲಿ ಸೇರಿದಂತೆ ಹಲವು ನಾಟಕಗಳನ್ನು ರಚಿಸಿದ್ದರು. ಅಂಗುಲಿಮಾಲ ಪಂಜರಶಾಲೆ, ಗಗ್ಗಯ್ಯನ ಗಡಿಬಿಡಿ, ಕೈಗೆ ಬಂದ ತುತ್ತು, ಜಾತ್ರೆ ಸೇರಿದಂತೆ ಮಕ್ಕಳ ನಾಟಕಗಳನ್ನು ನಿರ್ದೇಶಿಸಿದ್ದರು.

ಕನ್ನಡ ರಂಗಭೂಮಿಯ ವಿಕಾಸ ಮಹಾಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾಲಯ ಪಿಎಚ್‌ಡಿ ಪದವಿ ನೀಡಿತ್ತು. ಬಸವಣ್ಣನವರು ಕರ್ನಾಟಕ ರಂಗಭೂಮಿಯ ನೆನ್ನೆ, ಇಂದು, ನಾಳೆ, ಮಕ್ಕಳೇ ಅಡಬನ್ನಿ ಮಕ್ಕಳಿಗಾಗಿ ಪದಕೋಶ ಕೃತಿಗಳನ್ನು ರಚಿಸಿದ್ದರು. ಇಲ್ಲಿನ ಸುರುಚಿ ರಂಗಮನೆಯಲ್ಲಿ "ಕಥೆ ಕೇಳೋಣ ಬನ್ನಿ" ಕಾರ್ಯಕ್ರಮವನ್ನು ಮಕ್ಕಳಿಗಾಗಿ ವಿದ್ಯಾಶಂಕರ್ ಅವರೊಂದಿಗೆ ಪ್ರತಿವಾರವು ಕೆಲವು ವರ್ಷಗಳ ಕಾಲ ನಡೆಸಿದ್ದರು. ಅವರಿಗೆ ಕನ್ನಡ ರಾಜ್ಯೋತ್ಸವ ರಾಜ್ಯ ಪ್ರಶಸ್ತಿ ಹಾಗೂ ಕರ್ನಾಟಕ ನಾಟಕ ಅಕಾಡೆಮಿ ಪುರಸ್ಕಾರಗಳು ಸಂದಿದೆ.

ಆಧಾರ :ಪ್ರಜಾವಾಣಿ, ದಿನಾಂಕ:04.11.2021

## 10.ಮಾಧವ ಪೈ, ಕೊಂಕಣಿ, ಸಾಹಿತಿ

ಖ್ಯಾತ ಕೊಂಕಣಿ ಸಾಹಿತಿ ಮತ್ತು ಕನ್ನಡ ಪಂಡಿತ ಮಂದರ್ಕೆ ಮಾಧವ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 92 ವರ್ಷ ವಯಸ್ಸಾಗಿತ್ತು. 1950ರಲ್ಲಿ ಮದ್ರಾಸ್ ವಿವಿಯಿಂದ ಕನ್ನಡ ಎಂ.ಎ. ಪದವಿ ಪಡೆದ ಇವರು ಮೈಸೂರು ವಿವಿಯಿಂದ ಮತ್ತು ಅಲಹಾಬಾದ್ ಹಿಂದಿ ವಿದ್ಯಾಲಯದಿಂದ ಹಿಂದಿ ಸಾಹಿತ್ಯ ರತ್ನ ಮತ್ತು ಭಾಷಾ ಪ್ರವೀಣ ಪ್ರಶಸ್ತಿ ಪಡೆದಿದ್ದಾರೆ.

ಕನ್ನಡ ಮತ್ತು ಕೊಂಕಣಿ ಭಾಷೆಯ ನಿಘಂಟನ್ನು ರಚಿಸಿದ ಮಾಧವ ಪೈ ಅವರು ಅನೇಕ ಸಂಶೋಧನ ಲೇಖನ ಪ್ರಕಟಿಸಿದ್ದಾರೆ. ಕನ್ನಡ ಹಿಂದಿ ಕೊಂಕಣಿ ಭಾಷೆಯ ಸಾಹಿತ್ಯ ಭಾಷಾಂತರಿಸಿದ್ದಾರೆ. ಕೊಡಿಯಾಳೆ ಕಬರ್ ಎಂಬ ಕೊಂಕಣಿ ಪತ್ರಿಕೆಯಲ್ಲಿ ನಿರಂತರವಾಗಿ ಲೇಖನ ಬರಯುತ್ತಿದ್ದ ಇವರು ಬೇರೆ ಭಾಷೆಯ ಅನೇಕ ಕೃತಿ ಕೊಂಕಣಿಗೆ ತರ್ಜುಮೆ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ ಪ್ರಶಸ್ತಿ ಸೇರಿದಂತೆ ಹಲವಾರು ಪ್ರಶಸ್ತಿಗೆ ಭಾಜನರಾಗಿದ್ದಾರೆ.

ಹಲವು ವಿವಿಗಳ ಗೌರವಕ್ಕೆ ಪಾತ್ರರಾಗಿದ್ದಾರೆ. ಕೊಂಕಣಿ ಶಬ್ಧ ರತ್ನಾಕರ ಎಂದೇ ಹೆಸರು ಪಡೆದ ಇವರು ಅಖಿಲ ಭಾರತ ಮತ್ತು ರಾಜ್ಯ ಮಟ್ಟದ ಕೊಂಕಣಿ ಸಾಹಿತ್ಯ ಸಮ್ಮೇಳನದಲ್ಲಿ ಗೌರವಕ್ಕೆ ಪಾತ್ರರಾಗಿದ್ದರು.

ಆಧಾರ :ಸಂಯುಕ್ತ ಕರ್ನಾಟಕ, ದಿನಾಂಕ:08.11.2021

## 11. ಭೋಜರಾಜ ಹೆಗ್ಡೆ, ಸ್ವಾತಂತ್ರ್ಯ ಹೋರಾಟಗಾರ

ಸ್ವಾತಂತ್ರ್ಯ ಹೋರಾಟಗಾರ ಪಡಂಗಡಿ ಗ್ರಾಮದ ಭೋಜರಾಜ ಹೆಗಡೆ ನಿಧನ ಹೊಂದಿರುತ್ತಾರೆ. ಇವರಿಗೆ 98 ವರ್ಷ ವಯಸ್ಸಾಗಿತ್ತು. ಅವರು ಅಪ್ಪಟ ಗಾಂಧಿವಾದಿಯಾಗಿ ಸರಳ ಜೀವನ ನಡೆಸುತ್ತಿದ್ದರು. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದ್ದರು. ಮಂಗಳೂರಿನ ಗಾಂಧಿ ಪಾರ್ಕ್‌ನಲ್ಲಿ ನಡೆದಿದ್ದ ಚಳುವಳಿಗೆ ಪರಂಗಡಿಯಿಂದ ತನ್ನ ಶಿಕ್ಷಕ ಕುಂಞಣ್ಣ ಅವರ ಸೈಕಲ್ ಏರಿ ಮಂಗಳೂರಿಗೆ ಆಗಮಿಸಿ ಧರಣಿ ಕುಳಿತಿದ್ದರು. ಪೊಲೀಸರು ಲಾಠಿ ಬೀಸಿದಾಗ ಅಂಜದೆ ಬ್ರಿಟಿಷರ ವಿರುದ್ಧ ಘೋಷಣೆ ಕೂಗಿದ್ದರು. ಅಹ್ಮದಾಬಾದ್‌ನಲ್ಲಿ ಮೊರಾರ್ಜಿ ದೇಸಾಯಿ ಅವರು ಭೋಜರಾಜರ ಸೇವೆ ಗುರುತಿಸಿ ಗ್ರಾಮೋದ್ಧಾರಕ ಪ್ರಶಸ್ತಿ ನೀಡಿದ್ದರು. ಮೂಡುಬಿದಿರೆ ಜೈನಮಠದ ವತಿಯಿಂದ "ತ್ಯಾಗಿ ಸೇವಾರತ್ನ" ಬಿರುದು ಪ್ರದಾನ ಮಾಡಿ ಗೌರವಿಸಲಾಗಿತ್ತು.

ಆಧಾರ :ವಿಜಯವಾಣಿ, ದಿನಾಂಕ:10.11.2021

## 12. ಬಾಬಾ ಸಾಹೇಬ್ ಪುರಂದರೆ, ಖ್ಯಾತ ಇತಿಹಾಸ ತಜ್ಞ

ಖ್ಯಾತ ಇತಿಹಾಸ ತಜ್ಞ ಮತ್ತು ಪದ್ಮ ವಿಭೂಷಣ ಪುರಸ್ಕೃತ ಬಾಬಾ ಸಾಹೇಬ್ ಪುರಂದರೆ ನಿಧನ ಹೊಂದಿರುತ್ತಾರೆ. ಅವರಿಗೆ 99 ವರ್ಷ ವಯಸ್ಸಾಗಿತ್ತು. ಇವರು ಛತ್ರಪತಿ ಶಿವಾಜಿ ಅವರ ಇತಿಹಾಸದ ಬಗ್ಗೆ ಖಚಿತವಾಗಿ ಮಾತನಾಡುವ ಸಾಮರ್ಥ್ಯ ಮತ್ತು ಪಾಂಡಿತ್ಯ ಹೊಂದಿದ್ದರು.

ಮರಾಠಿಯಲ್ಲಿ ಶಿವಾಜಿ ಮಹಾರಾಜರ ಬಗ್ಗೆ ಅವರು ರಚಿಸಿದ 900 ಪುಟಗಳ ಬೃಹತ್ ಸಂಪುಟ ಭಾರಿ ಜನಪ್ರಿಯತೆ ಪಡೆದಿತ್ತು. ಅದನ್ನು ಎರಡು ಭಾಗಗಳಲ್ಲಿ ಮುದ್ರಿಸಲಾಗಿದೆ. 1950ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಕೃತಿ ಹಲವು ಬಾರಿ ಪುನರ್ ಮುದ್ರಣಗಳನ್ನು ಕಂಡಿದೆ ಮತ್ತು ಮಹಾರಾಷ್ಟ್ರ ಜನರ ಮನೆಗಳಲ್ಲಿ ಅದ್ಯತೆ ಪಡೆದಿದೆ.

ಆಧಾರ :ಉದಯವಾಣಿ, ದಿನಾಂಕ:16.11.2021

## 13. ಡಾ: ಸಂಗನಬಸವ ಸ್ವಾಮೀಜಿ, ಅನ್ನದಾನೀಶ್ವರ ಮಠದ ಪೀಠಾಧಿಪತಿ

ತ್ರಿವಿಧದಾಸೋಹಿ, ಕೊಟ್ಟೂರುಸ್ವಾಮಿ ಸಂಸ್ಥಾನಮಠ, ಹಾಲಕೆರೆ ಅನ್ನದಾನೀಶ್ವರ ಮಠದ ಪೀಠಾಧಿಪತಿ, ಹಂಪಿ ಶೂನ್ಯ ಸಿಂಹಾಸನಾಧೀಶ್ವರ ಡಾ: ಸಂಗನಬಸವ ಸ್ವಾಮೀಜಿ ನಿಧನ ಹೊಂದಿರುತ್ತಾರೆ. ಅವರಿಗೆ 83 ವರ್ಷ ವಯಸ್ಸಾಗಿತ್ತು.

1972ರಲ್ಲಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನಮಠದ 19ನೇ ಪೀಠಾಧಿಪತಿಗಳಾಗಿ ಅಧಿಕಾರ ವಹಿಸಿಕೊಂಡು ಅವನತಿ ಹಾದಿಯಲ್ಲಿದ್ದ ಶ್ರೀಮಠವನ್ನು ಆರ್ಥಿಕವಾಗಿ ಸದೃಢಗೊಳಿಸಿದ್ದರು. ಆಧ್ಯಾತ್ಮಿಕ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಜ್ಞಾನ ದಾಸೋಹಗಳ ಮೂಲಕ ಕ್ರಾಂತಿಯನ್ನೇ ಮಾಡಿದ್ದರು ಸರ್ವಧರ್ಮೀಯ ಮದುವೆ ಆಯೋಜಿಸುವ ಮೂಲಕ ಭಾವೈಕ್ಯ ಪರಂಪರೆ ಬೆಳೆಸಿದ್ದರು. ಕಳೆದ ನಾಲ್ಕು ವರ್ಷಗಳಿಂದ ಶ್ರೀಮಠದಿಂದ ಸರ್ವಧರ್ಮ ಸಮನ್ವಯ ರಥ

ಎಳೆಯಲಾಗುತ್ತಿದೆ. ಹಂಪಿ ಪಾವಿತ್ರ್ಯತೆ ಸಂರಕ್ಷಣೆಯ ಕುರಿತು 101 ಮಹಾಸ್ವಾಮಿಗಳೊಂದಿಗೆ ಪಾದಯಾತ್ರೆ ನಡೆಸಿದ್ದರು. ನ್ಯಾಯಾಲಯದ ಮೊರೆ ಹೋಗಿ ಹಂಪಿಯಲ್ಲಿನ ಅಕ್ರಮ ಒತ್ತುವರಿ ತೆರವುಗೊಳಿಸಿದ್ದರು.

ಆಧಾರ ಉದಯವಾಣಿ, ದಿನಾಂಕ:23.11.2021

## 14.ನಾರಾಯಣಾಚಾರ್ಯ, ಖ್ಯಾತ ವಿದ್ವಾಂಸರು

ನಾಡು–ನುಡಿ, ಸಂಸ್ಕೃತಿ ಸಂಪ್ರದಾಯ ಮತ್ತು ಸಂಸ್ಕಾರಗಳ ಬಗ್ಗೆ ಅಧಿಕಾರಯುತವಾಗಿ ಮಾತನಾಡುತ್ತಿದ್ದ ವಿದ್ವತ್ ಪೂರ್ಣ ಬರವಣಿಗೆಯ ಮೂಲಕ ಭಾರತೀಯ ಸಾಹಿತ್ಯ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದ ಬಹು ಭಾಷಾ ವಿದ್ವಾಂಸ ಕೆ. ಎಸ್. ನಾರಾಯಣಾಚಾರ್ಯ ಅವರು ನಿಧನ ಹೊಂದಿರುತ್ತಾರೆ. ಅವರಿಗೆ 89 ವರ್ಷ ವಯಸ್ಸಾಗಿತ್ತು.

ಕನ್ನಡ, ಇಂಗ್ಲಿಷ್, ಸಂಸ್ಕೃತ ಹಾಗೂ ತಮಿಳು ಭಾಷೆಯಲ್ಲಿ ರಾಮಾಯಣದ ಬಗ್ಗೆ ಉಪನ್ಯಾಸ ನೀಡುತ್ತಿದ್ದ ಅವರು ರಾಮಾಯಣಾಚಾರ್ಯರು ಎಂದೇ ಜನಜನಿತರಾಗಿದ್ದರು. ಮಹಾಭಾರತ ರಾಮಾಯಣ ವೇದ, ಸಂಸ್ಕೃತಿ ಮತ್ತು ಸನಾತನ ಪರಂಪರೆಯನ್ನು ತಮ್ಮ ಬರಹಗಳ ಮೂಲಕ ಹೊಸ ತಲೆಮಾರಿಗೆ ಪರಿಚಯಿಸಿದ್ದರು. ಬಿ.ಎಸ್ಸಿ ಪದವಿ ಪಡೆದಿದ್ದರು. ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೊತ್ತರ ಪದವಿ ಡಬ್ಲ್ಯು.ಬಿಯೇಟ್ಸ್ ಮತ್ತು ಟಿ.ಎಸ್. ಎಲಿಯೇಟ್ ಅವರ ಕಾವ್ಯದ ಮೇಲೆ ಭಾರತೀಯ ತತ್ವಶಾಸ್ತ್ರದ ಪ್ರಭಾವ ಎಂಬ ವಿಷಯದ ಮೇಲೆ ಡಾಕ್ಟರೇಟ್ ಪಡೆದಿದ್ದರು.

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಅವರು ಪ್ರಾಂಶುಪಾಲರಾಗಿ ನಿವೃತ್ತರಾಗಿದ್ದರು. ವೇದ ಸಂಸ್ಕೃತಿಯ ಪರಿಚಯ, ರಾಮಾಯಣ ಸಹಶ್ರೀ ಗೀತಾರತ್ನನಿಧಿ, ರಾಮಾಯಣ ಪಾತ್ರ ಪ್ರಪಂಚ, ಅಗಸ್ತ್ಯ, ಆಚಾರ್ಯ ಚಾಣಕ್ಯ ತಿರುಪ್ಪಾವೈ , ತಿರುಮಲ್ಯೆ ಸ್ತೋತ್ರರತ್ನಂ, ವಿಶಿಷ್ಟಾದ್ವೈತ ಮೂಲ ಪರಿಕಲ್ಪನೆಗಳು, ವಾಲ್ಮೀಕಿ ಯಾರು, ಮಹಾಮಾತೆ ಕುಂತಿ ಕಣ್ಣೆರೆದಾಗ, ದೇವಕಿಯ ಚಿಂತನೆಗಳು, ಮಹಾಪ್ರಸ್ಥಾನ, ಶ್ರೀರಾಮಾಯಣ ಮಹಾ ಪ್ರಸಂಗಗಳು, ಶ್ರೀ ಕೃಷ್ಣ ಮತ್ತು ಮಹಾಭಾರತ ಯುದ್ಧ ಸೇರಿದಂತೆ 180ಕ್ಕೂ ಅಧಿಕ ಕೃತಿ ರಚಿಸಿದ್ದಾರೆ.

ವಿಶ್ವ ರಾಮಾಯಣ ಸಮ್ಮೇಳನದಲ್ಲಿ ಅವರಿಗೆ "ವಾಲ್ಮೀಕಿ ಪ್ರಶಸ್ತಿ" ನೀಡಲಾಗಿತ್ತು. ಕರ್ನಾಟಕ ಮುಕ್ತ ವಿಶ್ವವಿದ್ಯಾಲಯವು ಡಿ.ಲಿಟ್, ರಾಜ್ಯ ಸರ್ಕಾರವು "ರಾಜ್ಯೋತ್ಸವ ಪ್ರಶಸ್ತಿ" ನೀಡಿದೆ. ವಿದ್ವನ್ಮಣಿ , ವೇದಭೂಷಣ, ಗಮಕ ರತ್ನಾಕರ, ಕರ್ನಾಟಕ ಕಲಾಶ್ರೀ, ಉಪನ್ಯಾಸ ಕೇಸರಿ, ಎಂಬ ಬಿರುದುಗಳು ಸಂದಿವೆ.

ಆಧಾರ :ಪ್ರಜಾವಾಣಿ, ದಿನಾಂಕ:27.11.2021

## 15.ರಾಜೇಂದ್ರ ಗೋಖಲೆ, ಬಿಜೆಪಿ ಹಿರಿಯ ಮುಖಂಡ

ಸಮಾಜ ಚಿಂತಕ, ಹಿರಿಯ ಮುಖಂಡ ಧಾರವಾಡದ ರಾಮನಗರ ನಿವಾಸಿ ರಾಜೇಂದ್ರ ಕಿಶನ್ ರಾವ್ ಗೋಖಲೆ ನಿಧನ ಹೊಂದಿರುತ್ತಾರೆ. ಅವರಿಗೆ 61 ವರ್ಷ ವಯಸ್ಸಾಗಿತ್ತು.

ಎಬಿವಿಪಿ ಮೂಲಕ ಸಾಮಾಜಿಕ ಬದುಕಿನಲ್ಲಿ ಗುರುತಿಸಿಕೊಂಡಿದ್ದ ಗೋಖಲೆ, ತುರ್ತು ಪರಿಸ್ಥಿತಿಯಲ್ಲಿ, ಕೆಲವು ದಿನ ಜೈಲುವಾಸ ಅನುಭವಿಸಿದ್ದರು. ತಾವು ನಂಬಿದ ತತ್ವ–ಸಿದ್ಧಾಂತಗಳ ಜೊತೆ ಜೀವಿಸಿದ್ದರು. ಸಮಾಜ ಸೇವೆಯನ್ನು ಎಂದೂ ಸ್ವಾರ್ಥಕ್ಕೆ ಬಳಸಿಕೊಳ್ಳದ ವ್ಯಕ್ತಿತ್ವ ಹೊಂದಿದ್ದರು. ಸರಳ ಸ್ವಭಾವದ ಅವರು ಮೃದು ಭಾಷಿ ಮತ್ತು ಸ್ನೇಹ ಜೀವಿಯಾಗಿದ್ದರು.

ಧಾರವಾಡದ ಕೆ. ಹೆಚ್. ಕಬ್ಬೂರ ಡಿಪ್ಲೋಮಾ ಕಾಲೇಜಿನಲ್ಲಿ ಫ್ಯಾಕಲ್ಟಿಯಾಗಿ ಹಲವು ವರ್ಷ ಕಾರ್ಯನಿರ್ವಹಿಸಿದ್ದರು. ಆರ್ಎಸ್ಎಸ್ ಒಡನಾಟದೊಂದಿಗೆ ಅನೇಕರಿಗೆ ನಾಯಕತ್ವ ಗುಣ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಆಧಾರ :ವಿಜಯ ಕರ್ನಾಟಕ, ದಿನಾಂಕ:29.11.2021

## 16.ನಾಡೋಜ ಹರಿಜನ ಪದ್ಮಮ್ಮ, ರಂಗಭೂಮಿ ಕಲಾವಿದೆ

ರಂಗಭೂಮಿ ಹಿರಿಯ ಬಯಲಾಟ ಕಲಾವಿದೆ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತೆ ನಾಡೋಜ ಹರಿಜನ ಪದ್ಮಮ್ಮ ನಿಧನ ಹೊಂದಿರುತ್ತಾರೆ. ಅವರಿಗೆ 66 ವರ್ಷ ವಯಸ್ಸಾಗಿತ್ತು. ಕಳೆದ ಹಲವು ದಿನಗಳಿಂದ ವಯೋಸಹಜ ಕಾಯಿಲೆಯಿಂದ ಬಳಲುತ್ತಿದ್ದ ಅವರು ಮಕ್ಕಳು ಮತ್ತು ಅಪಾರ ಬಂಧು – ಬಳಗ ಆಗಲಿದ್ದಾರೆ.

ಆಧಾರ :ಉದಯವಾಣಿ, ದಿನಾಂಕ:30.11.2021

## 17.ವಿರೂಪಾಕ್ಷಪ್ಪ ಅಗಡಿ, ಮಾಜಿ ಸಚಿವರು

ಹಿರಿಯ ರಾಜಕಾರಣಿ ಹಾಗೂ ಮಾಜಿ ಸಚಿವ ವಿರೂಪಾಕ್ಷಪ್ಪ ಸಂಗಣ್ಣ ಅಗಡಿ ಅವರು ದಿನಾಂಕ:13.10.2021ರಂದು ನಿಧನ ಹೊಂದಿರುತ್ತಾರೆ. ಅವರಿಗೆ 81 ವರ್ಷ ವಯಸ್ಸಾಗಿತ್ತು. ಮೃತರ ನೇತ್ರದಾನ ಮಾಡಿ ಕುಟುಂಬ ವರ್ಗ ಸಾಮಾಜಿಕ ಕಳಕಳಿ ಮೆರೆದಿದ್ದಾರೆ. 1989ರಲ್ಲಿ ಜನತಾ ಪಕ್ಷದಿಂದ ಕೊಪ್ಪಳ ವಿಧಾನ ಸಭಾ ಕ್ಷೇತ್ರದ ಶಾಸಕರಾಗಿದ್ದರು. ಎಸ್.ಆರ್.ಬೊಮ್ಮಾಯಿ ಸರ್ಕಾರದಲ್ಲಿ ವೈದ್ಯಕೀಯ ಶಿಕ್ಷಣ ಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿದ್ದರು.

ಆಧಾರ : ಕನ್ನಡಪ್ರಭ, ದಿನಾಂಕ:04.12.2021

## 18.ಎಸ್. ಶಿವರಾಂ, ಕನ್ನಡ ಚಿತ್ರ ರಂಗದ ಹಿರಿಯ ನಟ

ರಾಷ್ಟ್ರ ಪ್ರಶಸ್ತಿ ಪುರಸ್ಕೃತ, ಕನ್ನಡ ಚಿತ್ರರಂಗದ ಹಿರಿಯ ನಟ ಎಸ್. ಶಿವರಾಂ ನಿಧನ ಹೊಂದಿರುತ್ತಾರೆ. ಅವರಿಗೆ 84 ವರ್ಷ ವಯಸ್ಸಾಗಿತ್ತು. ಅವರು 1000 ನಾಟಕದಲ್ಲಿ ಅಭಿನಯಿಸಿದ್ದರು. ಬಳಿಕ 1958ರಲ್ಲಿ ಚಿತ್ರರಂಗ ಪ್ರವೇಶಿಸಿ ಸಹಾಯಕ ನಿರ್ದೇಶಕರಾಗಿ ನಂತರ ನಟರಾಗಿ ಸಿನಿಮಾ ಜೀವನ ನಡೆಸಿದ್ದರು.

ವಿಶೇಷ ಚೇತನ ಮಕ್ಕಳ ಸಮರ್ಥನಂ ಸಂಸ್ಥೆಯ ಭಾಗದಂತಿದ್ದು ಸಮಾಜ ಸೇವೆಯನ್ನು ಶಿವರಾಂ ಮಾಡಿದ್ದರು. ಪೋಟೋಗ್ರಫಿ ಕಲಿತು ವನ್ಯಜೀವಿ ಛಾಯಾಗ್ರಹಣದಲ್ಲಿ ಆಸಕ್ತಿ ಹೊಂದಿದ್ದರು.

ಆಧಾರ :ಕನ್ನಡ ಪ್ರಭ, ದಿನಾಂಕ:05.12.2021

## 19.ಕೆ. ರೋಸಯ್ಯ , ಕಾಂಗ್ರೆಸ್ ಹಿರಿಯ ನಾಯಕ

ಅವಿಭಜಿತ ಆಂಧ್ರಪ್ರದೇಶದ ಮುಖ್ಯಮಂತ್ರಿಯಾಗಿದ್ದ ಹಾಗೂ 2011ರಲ್ಲಿ ತಮಿಳುನಾಡಿನ ರಾಜ್ಯಪಾಲರಾಗಿದ್ದ ಹಿರಿಯ ಕಾಂಗ್ರೆಸ್ ನಾಯಕ ಕೆ. ರೋಸಯ್ಯ ಅನಾರೋಗ್ಯದಿಂದಾಗಿ ನಿಧನ ಹೊಂದಿರುತ್ತಾರೆ. 1968 ರಿಂದ 2004ರವರೆಗೂ ಸಕ್ರಿಯ ರಾಜಕಾರಣದಲ್ಲಿದ್ದ ಅವರು2009ರಲ್ಲಿ ಡಾ: ರಾಜಶೇಖರರೆಡ್ಡಿ ಹಠಾತ್ ಸಾವಿನಿಂದಾಗಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಪಟ್ಟಕ್ಕೇರಿದರು. ಎರಡು ವರ್ಷಗಳ ನಂತರ ತಮಿಳುನಾಡು ರಾಜ್ಯಪಾಲರಾಗಿ ಸೇವೆ ಸಲ್ಲಿಸಿದ್ದರು.

ಆಧಾರ :ಸಂಯುಕ್ತ ಕರ್ನಾಟಕ, ದಿನಾಂಕ:05.12.2021

## 20. ಕೆ. ರಾಮಭಟ್, ಮಾಜಿ ಶಾಸಕ

ಅವಿಭಜಿತ ಜಿಲ್ಲೆಯ ಬಿಜೆಪಿಯ ಭೀಷ್ಮ ಎಂದೇ ಕರೆಯಲಾಗುತ್ತಿದ್ದ ಪುತ್ತೂರಿನ ಮಾಜಿ ಶಾಸಕ ಉರಿಮಜಲು ಕೆ. ರಾಮ ಭಟ್ ನಿಧನ ಹೊಂದಿರುತ್ತಾರೆ. ಅವರಿಗೆ 92 ವರ್ಷ ವಯಸ್ಸಾಗಿತ್ತು.

ಪುತ್ತೂರು ವಿಧಾನಸಭಾ ಕ್ಷೇತ್ರದಿಂದ 7 ಬಾರಿ ಸ್ಪರ್ಧಿಸಿದ್ದ ಅವರು 1977, 1983ರಲ್ಲಿ ಗೆಲುವು ಸಾಧಿಸಿದ್ದರು. 1957ರಲ್ಲಿ ಮೊದಲ ಬಾರಿಗೆ ಜನಸಂಘದ ಅಭ್ಯರ್ಥಿಯಾಗಿ 1985ರಲ್ಲಿ ಕೊನೆಯ ಬಾರಿಗೆ ಬಿಜೆಪಿ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಜನಸಂಘ ಬಳಿಕ ಬಿಜೆಪಿಯ ಸಂಘಟನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಪ್ರೌಢಶಿಕ್ಷಣ ಹಂತದಲ್ಲಿಯೇ ರಾಷ್ಟ್ರೀಯ ಸ್ವಯಂಸೇವಕ ಸಂಘದ ಸ್ವಯಂಸೇವಕರಾಗಿದ್ದರು. ಅಟಲ್ ಬಿಹಾರಿ ವಾಜಪೇಯಿ, ಲಾಲ್ ಕೃಷ್ಣ ಅಡ್ವಾಣಿ ಸೇರಿ ರಾಷ್ಟ್ರ ಮಟ್ಟದ ನಾಯಕರೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು.

ಆಧಾರ :ಪ್ರಜಾವಾಣಿ, ದಿನಾಂಕ:06.12.2021

## 21. ಬಿಪಿನ್ ರಾವತ್, ಸಶಸ್ತ್ರ ಪಡೆಗಳ ವೀರ ಸೇನಾನಿ

ತಮಿಳುನಾಡು ಗಿರಿಕಣಿವೆಗಳ ರಮ್ಯ ಪ್ರದೇಶವಾದ ಊಟಿ ವ್ಯಾಪ್ತಿಯಲ್ಲಿ ಕೂನೂರು ಕಾನನದಲ್ಲಿ ಸೇನಾ ಹೆಲಿಕಾಪ್ಟರ್ ದುರಂತದಲ್ಲಿ ಸಶಸ್ತ್ರ ಪಡೆಗಳ ವೀರ ಸೇನಾನಿ ಬಿಪಿನ್ ರಾವತ್ ನಿಧನ ಹೊಂದಿರುತ್ತಾರೆ. ಅವರಿಗೆ 63 ವರ್ಷ ವಯಸ್ಸಾಗಿತ್ತು.

ಅವರು ಸಹ ಸೈನಿಕ ಸಮವಸ್ತ್ರಧರಿಸಿ 1978 ರಿಂದ ಇದುವರೆಗೆ ಅವರು ದೇಶಕ್ಕೆ ಸಲ್ಲಿಸಿದ ಸೇವೆಯು ಅಮೂಲ್ಯವಾಗಿದೆ. ಗೋರ್ಖಾ ರೈಫಲ್ಸ್ ಸೇರಿ ಒಂದೊಂದೇ ಹಂತ ಮೇಲೇರುತ್ತ ದೇಶದ ಮೊದಲ ಸಶಸ್ತ್ರ ಪಡೆಗಳ ಮುಖ್ಯಸ್ಥನ ಹುದ್ದೆ ಅಲಂಕರಿಸಿದ್ದರು.

**ಪಾಕಿಸ್ತಾನಕ್ಕೆ ಅದರದ್ದೇ ಭಾಷೆಯಲ್ಲಿ ಉತ್ತರ**: ಗಡಿಯಲ್ಲಿ ಸೈನಿಕರು ಹಾಗೂ ಉಗ್ರರನ್ನು ಛೂಬಿಟ್ಟು ಉಪಟಳ ಮಾಡುವ ಪಾಕಿಸ್ತಾನಕ್ಕೆ ಅದರದ್ದೇ ಭಾಷೆಯಲ್ಲಿ ಉತ್ತರ ನೀಡುವಲ್ಲಿ ರಾವತ್ ಅವರು ಪ್ರಮುಖ ಪಾತ್ರ ನಿರ್ವಹಿಸಿದ್ದರು. ಉರಿಯಲ್ಲಿ 2016ರಲ್ಲಿ ಪಾಕ್ ಉಗ್ರರು ದಾಳಿ ಮಾಡಿದ ಬಳಿಕ ಭಾರತ ಪಿಒಕೆಗೆ ನುಗ್ಗಿ ಕೈಗೊಂಡ ಸರ್ಜಿಕಲ್ ಸ್ಟ್ರೈಕ್ ಯಶಸ್ಸಿನ ಹಿಂದೆ ರಾವತ್ ಅವರ ಪಾತ್ರವು ಇದೆ. ಇವರು ಇಡೀ ಯೋಜನೆಯ ಭಾಗವಾಗಿದ್ದಾರೆ. 2019ರಲ್ಲಿ ಪುಲ್ವಾಮದಲ್ಲಿ ನಡೆದ ಅತ್ಮಾಹುತಿ ದಾಳಿ ಬಳಿಕ ಭಾರತ ಬಾಲಾಕೋಟ್ ವಾಯುದಾಳಿ ಕೈಗೊಂಡಾಗ ಅವರು ಸೇನೆಯ ಮುಖ್ಯಸ್ಥರಾಗಿದ್ದರು.

**ಮ್ಯಾನ್ಮಾರ್‌ಗೆ ನುಗ್ಗಿ ತಕ್ಕ ಪಾಠ**: ಮಣಿಪುರದ ಚಂದೇಲ್ ಪ್ರದೇಶದಲ್ಲಿ 2015ರ ಜೂನ್ 4 ರಂದು ನಾಗಾ ಬಂಡುಕೋರರು ಮಾಡಿದ ದಾಳಿಯಲ್ಲಿ 18 ಯೋಧರು ಹುತಾತ್ಮರಾಗಿದ್ದರು. ಆದರೆ ಇದಾದ ಮೂರೇ ದಿನದಲ್ಲಿ ಮ್ಯಾನ್ಮಾರ್ ನುಗ್ಗಿದ ನಮ್ಮ ಯೋಧರು ಸೇಡು ತೀರಿಸಿಕೊಂಡಿದ್ದರು. ಇಂತಹ ಕಾರ್ಯಾಚರಣೆಯ ಮೇಲುಸ್ತುವಾರಿ ವಹಿಸಿದ್ದು ಬಿಪಿನ್ ರಾವತ್ ಅವರೇ ಜೂನ್ 7 ರಂದು ಮ್ಯಾನ್ಮರ್ ಪ್ರವೇಶಿಸಿದ ನಮ್ಮ ಯೋಧರು ಕೇವಲ 40 ನಿಮಿಷದಲ್ಲಿ 38 ನಾಗಾ ಬಂಡುಕೋರರನ್ನು ಹೊಡೆದುರುಳಿಸಿ ಬಂದಿದ್ದರು. ಇದರ ಯಶಸ್ಸಿನ ಶ್ರೇಯಸ್ಸು ರಾವತ್ ಅವರಿಗೆ ಸಲ್ಲಬೇಕು.

**ಚೀನಾ ಬಿಕ್ಕಟ್ಟು ಶಮನಕ್ಕೆ ಕಾರ್ಯತಂತ್ರ**: ಭಾರತದ ಗಡಿಯಲ್ಲಿ 2017ರಿಂದಲೂ ಚೀನಾ ಸೃಷ್ಟಿಸುತ್ತಿರುವ ಬಿಕ್ಕಟ್ಟು ಶಮನಗೊಳಿಸುವಲ್ಲಿ ಸಹ ರಾವತ್ ಪಾತ್ರವಿದೆ. ಅದರಲ್ಲೂ 2017ರಲ್ಲಿ ಡೋಕ್ಲಾಂ ಗಡಿಯಲ್ಲಿ ಚೀನಾ 73 ದಿನ ಬಿಕ್ಕಟ್ಟು ಸೃಷ್ಟಿಸಿದಾಗ, ಚೀನಾ ಸೇನಾ ವಕ್ತಾರರ ಜೊತೆ ನಿರಂತರವಾಗಿ ಮಾತುಕತೆ ಸಂಧಾನ, ತಂತ್ರಕೌಶಲ್ಯಗಳನ್ನು ಬಳಸಿ ಕಮ್ಯುನಿಸ್ಟ್ ರಾಷ್ಟ್ರವನ್ನು ಹಿಂದೆ ಸರಿಯುವಂತೆ ಮಾಡಿದ್ದರು.

ಆಧಾರ :ವಿಜಯ ಕರ್ನಾಟಕ, ದಿನಾಂಕ:09.12.2021

## 22. ಎಸ್. ಆರ್. ಮೋರೆ, ಮಾಜಿ ಸಚಿವ

ಹಿರಿಯ ಕಾಂಗ್ರೆಸ್ ಮುತ್ಸದ್ದಿ, ಮಾಜಿ ಸಚಿವ ಹಾಗೂ ಮರಾಠ ಸಮಾಜದ ಮುಖಂಡ ಎಸ್. ಆರ್. ಮೋರೆ ನಿಧನ ಹೊಂದಿರುತ್ತಾರೆ. ಅವರಿಗೆ 82 ವರ್ಷ ವಯಸ್ಸಾಗಿತ್ತು. ಹುಬ್ಬಳ್ಳಿ–ಧಾರವಾಡ ಪಶ್ಚಿಮ ವಿಧಾನಸಭೆ ಕ್ಷೇತ್ರದಿಂದ 4 ಬಾರಿ ಶಾಸಕರಾಗಿದ್ದ ಹೆಗ್ಗಳಿಕೆ ಅವರದು. ಅಪಾರ ಕಾರ್ಯಕರ್ತರ ಪಡೆ ಹೊಂದಿದ್ದ ಅವರು ಜಿಲ್ಲೆಯಲ್ಲಿ ಕಾಂಗ್ರೆಸ್ ಪಕ್ಷ ಸಂಘಟನೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡಿದ್ದರು.

ಸರಳ ಸಜ್ಜನಿಕೆಯೊಂದಿಗೆ ಜನ ಸಾಮಾನ್ಯರಿಗೆ ಸುಲಭವಾಗಿ ಲಭ್ಯವಾಗುತ್ತಿದ್ದರು. ಜನರ ಸಮಸ್ಯೆಗಳಿಗೆ ಸ್ಪಂದಿಸುವ ಗುಣ ನಡವಳಿಕೆಯಿಂದ ಜನಾನುರಾಗಿಯಾಗಿದ್ದರು. ಅವರು ಎಸ್. ಬಂಗಾರಪ್ಪ ಹಾಗೂ ಧರಂಸಿಂಗ್ ಮುಖ್ಯಮಂತ್ರಿಗಳಾಗಿದ್ದಾಗ ಸಹಕಾರ ಹಾಗೂ ಪೌರಾಡಳಿತ ಸಚಿವರಾಗಿ ಕಾರ್ಯನಿರ್ವಹಿಸಿದ್ದರು. ಬಡವರ ಪರ ಕಳಕಳಿ ಹೊಂದಿದ್ದ ಮೋರೆ ಅವರು ಧಾರಾವಾಡದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಶ್ರಯ ಮನೆಗಳನ್ನು ನಿರ್ಮಾಣ ಮಾಡಿ ವಿತರಿಸಿದ್ದರು. ಈ ಹಿಂದೆ ಅವಳಿ ನಗರದಲ್ಲಿ ಕುಡಿಯುವ ನೀರಿನ ಸಮಸ್ಯೆ ತಲೆದೋರಿದಾಗ, ಮಲಪ್ರಭಾ ನದಿ ಜೋಡಣೆಯ 2ನೇ ಹಂತದ ಯೋಜನೆಗೆ ಸರ್ಕಾರದಿಂದ ವಿಶೇಷ ಅನುದಾನ ತಂದು 7 ದಿನಕ್ಕೆ ಸರಬರಾಜಾಗುತ್ತಿದ್ದ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಧಾರಿಸಿ 3 ದಿನಕ್ಕೊಮ್ಮೆ ಮಾಡಿಸಿದ್ದು ಸ್ಮರಣೀಯ.

ಆಧಾರ :ವಿಜಯವಾಣಿ, ದಿನಾಂಕ:10.12.2021

## 23. ವರುಣ್ ಸಿಂಗ್, ಗ್ರೂಪ್ ಕ್ಯಾಪ್ಟನ್

ತಮಿಳುನಾಡಿನ ಕೂನೂರಿನಲ್ಲಿ ಸೇನಾ ಹೆಲಿಕಾಪ್ಟರ್ ಪತನದಿಂದ ಬದುಕುಳಿದಿದ್ದ ಏಕೈಕ ಸೇನಾ ಸಿಬ್ಬಂದಿ ಭಾರತೀಯ ವಾಯು ಪಡೆಯ ಗ್ರೂಪ್ ಕ್ಯಾಪ್ಟನ್ ವರುಣ್ ಸಿಂಗ್ ನಿಧನ ಹೊಂದಿರುತ್ತಾರೆ. ಅವರಿಗೆ 39 ವರ್ಷ ವಯಸ್ಸಾಗಿತ್ತು. ವೆಲ್ಲಿಂಗ್‌ಟನ್‌ನ ಸೇನಾ ಸಿಬ್ಬಂದಿ ತರಬೇತಿ ಕಾಲೇಜಿನಲ್ಲಿ ಅವರು ಬೋಧಕರಾಗಿದ್ದರು. ವೆಲ್ಲೊಂಗ್‌ಟನ್ ಕಾಲೇಜಿಗೆ ಆಗಮಿಸುತ್ತಿದ್ದ ಸೇನಾಪಡೆಗಳ ಮುಖ್ಯಸ್ಥ ಜನರಲ್ ಬಿಪಿನ್ ರಾವತ್ ಅವರನ್ನು ಬರಮಾಡಿಕೊಳ್ಳಲು ಅವರು ಸೊಲೂರು ವಾಯುನೆಲೆಗೆ ತೆರಳಿದ್ದರು. ಮಾರ್ಗಮಧ್ಯೆ ಹೆಲಿಕಾಪ್ಟರ್ ಪತನವಾಗಿ ಜನರಲ್ ರಾವತ್ ಅವರ ಪತ್ನಿ ಮತ್ತು 11 ಸೇನಾ ಸಿಬ್ಬಂದಿ ಮರಣ ಹೊಂದಿದ್ದರು.

ಆಧಾರ :ಪ್ರಜಾವಾಣಿ, ದಿನಾಂಕ:16.12.2021

## 24. ಆರ್. ಎಲ್. ಜಾಲಪ್ಪ, ಕೇಂದ್ರ ಮಾಜಿ ಸಚಿವ

ಕಾಂಗ್ರೆಸ್‌ನ ಹಿರಿಯ ಮುಖಂಡ ಕೇಂದ್ರದ ಮಾಜಿ ಸಚಿವ ಆರ್.ಎಲ್.ಜಾಲಪ್ಪ ನಿಧನ ಹೊಂದಿರುತ್ತಾರೆ. ಅವರಿಗೆ 97 ವರ್ಷ ವಯಸ್ಸಾಗಿತ್ತು.

ಸಾವಿನಲ್ಲೂ ಸಾರ್ಥಕತೆ ಮೆರೆದಿರುವ ಜಾಲಪ್ಪನವರು ಕಣ್ಣುಗಳನ್ನು ದಾನ ಮಾಡಿದ್ದಾರೆ. 1925ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತೂಬುಗೆರೆಯಲ್ಲಿ ಜನಿಸಿದ ಜಾಲಪ್ಪ ಕಾಂಗ್ರೆಸ್‌ನಿಂದ ರಾಜಕೀಯ ಜೀವನ ಶುರು ಮಾಡಿ ಜನತಾದಳ ಸೇರಿದ್ದರು ನಾಲ್ಕು ಬಾರಿ ಚಿಕ್ಕಬಳ್ಳಾಪುರ ಕ್ಷೇತ್ರದಿಂದ ಗೆದ್ದಿದ್ದರು, ಒಂದು ಬಾರಿ ಕೇಂದ್ರ ಸಚಿವರೂ ಆಗಿದ್ದರು.

ರಾಮಕೃಷ್ಣಹೆಗಡೆ ಮತ್ತು ದೇವೇಗೌಡರ ಸಚಿವ ಸಂಪುಟದಲ್ಲಿ ಸಹಕಾರ, ಕಂದಾಯ ಮತ್ತು ಗೃಹ ಸಚಿವರಾಗಿದ್ದ ಅವರು ದೇವೇಗೌಡರು ಪ್ರಧಾನಿಯಾಗಿದ್ದ ವೇಳೆ ಜವಳಿ ಖಾತೆಯನ್ನು ಕೇಂದ್ರ ಸರ್ಕಾರದಲ್ಲಿ ನಿರ್ವಹಿಸಿದ್ದರು. ಜನತಾ ಪರಿವಾರದ ಪ್ರಮುಖ ನಾಯಕರಾಗಿದ್ದ ಜಾಲಪ್ಪ ದೇವೇಗೌಡರ

ವಿರುದ್ಧ ಮುನಿಸಿ ಕೊಂಡು ಕಾಂಗ್ರೆಸ್ ಸೇರಿದ್ದರು. 1985ರಲ್ಲಿ ಕೋಲಾರದಲ್ಲಿ ದೇವರಾಜ ಅರಸು ಶಿಕ್ಷಣ ಟ್ರಸ್ಟ್ ಮೂಲಕ ವೈದ್ಯಕೀಯ ಕಾಲೇಜು ಆರಂಭಿಸಿದ್ದರು.

ಆಧಾರ ಸಂಯುಕ್ತ ಕರ್ನಾಟಕ, ದಿನಾಂಕ:18.12.2021

## 25. ಕೆ.ವಿ. ರಾಜು, ಖ್ಯಾತ ನಿರ್ದೇಶಕ

ಚಂದನವನದ ಖ್ಯಾತ ನಿರ್ದೇಶಕ ಕೆ.ವಿ.ರಾಜು ಅವರು ನಿಧನ ಹೊಂದಿರುತ್ತಾರೆ. ಅವರಿಗೆ 67 ವರ್ಷ ವಯಸ್ಸಾಗಿತ್ತು.

ಚಂದನವನದ ಖ್ಯಾತ ನಿರ್ದೇಶಕರಾಗಿದ್ದ ಇವರು ಬೆಳ್ಳಿ ಕಾಲುಂಗುರ, ಯುದ್ಧಕಾಂಡ, ಮುಂತಾದ ಹಿಟ್ ಸಿನಿಮಾಗಳನ್ನು ನಿರ್ಮಾಣ ಮಾಡಿದ್ದರು. ಖ್ಯಾತ ನಿರ್ದೇಶಕರಾಗಿದ್ದ ಕೆ.ವಿ. ಜಯರಾಂ ಅವರ ಸಹೋದರರಾಗಿದ್ದ ಅವರ ಸಿನಿಮಾಗಳ ಮೂಲಕವೇ ಚಿತ್ರರಂಗ ಪ್ರವೇಶಿಸಿದರು. 50 ಕ್ಕೂ ಹೆಚ್ಚು ಚಿತ್ರಗಳಿಗೆ ಚಿತ್ರಕಥೆ ಮತ್ತು ಸಂಭಾಷಣೆ ರಚಿಸಿದ್ದಾರೆ.

ಆಧಾರ ಪ್ರಜಾವಾಣಿ ದಿನಾಂಕ:25.12.2021

# ಭಾಗ – 11

# ಪ್ರಮುಖ ಲೇಖನಗಳು

## 1. ಗಾಂಧೀಜಿ ಚಿಂತನೆಯಿಂದ ದೂರ, ಬಲುದೂರ

ಭಾರತದ ಸುದೀರ್ಘ ಇತಿಹಾಸದತ್ತ ಕಣ್ಣಾಡಿಸಿದರೆ ಅಲ್ಲಿ ದಾಳಿಕೋರರು ಇಲ್ಲವೇ ಆಕ್ರಮಣಕಾರಿಗಳ ಅಧ್ಯಾಯವೇ ಹೆಚ್ಚು ದಾಳಿಕೋರರು ನಮ್ಮ ದೇಶದ ಮೇಲೆ ಎರಗಿ ಬಂದಾಗಲೆಲ್ಲಾ ಸಮಾಜದಲ್ಲಿನ ಕೆಲವು ಗುಂಪುಗಳು ಪ್ರತಿರೋಧ ವ್ಯಕ್ತಪಡಿಸಿವೆ. ಒಂದಿಷ್ಟು ರಾಜರು ಅವರ ವಿರುದ್ಧ ಯುದ್ಧ ನಡೆಸಿ ಹಿಮ್ಮೆಟ್ಟಿಸಿದ್ದಾರೆ. ಒಟ್ಟಾರೆ 1857ರಲ್ಲಿ ನಿರ್ದಿಷ್ಟವಾಗಿ ರೂಪುಗೊಂಡ ಮೊದಲ ಸ್ವಾತಂತ್ರ್ಯ ಸಂಗ್ರಾಮಕ್ಕೂ ಮುನ್ನ ಶ್ರೀಸಾಮಾನ್ಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಉದಾಹರಣೆಗಳು ಕಡಿಮೆ, ಸಮಾಜದ ಕಟ್ಟಕಡೆಯ ವ್ಯಕ್ತಿಯನ್ನು ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಳ್ಳುವಂತೆ ಮಾಡಬೇಕೆಂಬ ಪ್ರಯತ್ನಗಳು ಅಲ್ಲಲ್ಲಿ ನಡೆದಿದ್ದವಾದರೂ ನಿರೀಕ್ಷಿತ ಫಲ ಸಿಕ್ಕಿರಲಿಲ್ಲ. ಮನೆಯಲ್ಲಿ ಪೂಜೆಗೆ ಸೀಮಿತವಾಗಿದ್ದ ಗಣೇಶ ಉತ್ಸವವನ್ನು ಸಾರ್ವಜನಿಕಗೊಳಿಸುವ ಮೂಲಕ ಜನ ಸಾಮಾನ್ಯರನ್ನು ಸ್ವಾತಂತ್ರ್ಯ ಹೋರಾಟದ ಮುಖ್ಯವಾಹಿನಿಗೆ ಸೇರಿಸುವ ಬಹುದೊಡ್ಡ ಕಾರ್ಯವನ್ನು ಬಾಲಗಂಗಾಧರ ತಿಲಕರು ಮುಂಬಯಿನಲ್ಲಿ ಯಶಸ್ವಿಯಾಗಿ ನಡೆಸಿದರು. ಅವರ ಬಳಿಕ 1920ರಲ್ಲಿ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದ ಮೋಹನದಾಸ ಕರಮಚಂದಗಾಂಧಿ ಈ ಜನಾಂದೋಲನವನ್ನು ದೇಶದ ಪ್ರತಿ ಹಳ್ಳಿಗೂ, ಪ್ರತಿ ಮನೆಗೂ ಕೊಂಡೊಯ್ದರು. 33 ಕೋಟಿ ಭಾರತೀಯರನ್ನು ಸ್ವಾತಂತ್ರ್ಯದ ಹೆಸರಿನಲ್ಲಿ ಒಗ್ಗೂಡಿಸುವ ಮಹಾನ್ ಕೆಲಸವನ್ನು ಗಾಂಧಿ ಮಾಡಿದರು.

ಇದೆಲ್ಲವೂ ಸಾಧ್ಯವಾಗಿದ್ದು ಗಾಂಧಿ ಎಂಬ ಒಬ್ಬ ವ್ಯಕ್ತಿಯಿಂದ ಮಾತ್ರವಲ್ಲ ಗಾಂಧಿ ಎಂಬ ಚಿಂತನೆಯಿಂದ ಇದು ಅಬಾಲವೃದ್ದರನ್ನು ಆಕರ್ಷಿಸಿತು. ಈ ಹೊತ್ತು ಆತ್ಮ ನಿರ್ಭರತೆ ಸೇರಿದಂತೆ ಹೊಸ ಹೊಸ ಪದಪುಂಜದಲ್ಲಿ ಪ್ರತಿಪಾದನೆ ಆಗುತ್ತಿರುವ ಅಭಿವೃದ್ಧಿಪರ ಆಲೋಚನೆಗಳನ್ನು ಗಾಂಧೀಜಿ ಏಳೂವರೆ ದಶಕದ ಹಿಂದೆಯೇ ಗ್ರಾಮ ಸ್ವರಾಜ್ಯ, ಸ್ವಾವಲಂಬನೆ ಮತ್ತು ಆಡಳಿತ ವಿಕೇಂದ್ರೀಕರಣ ಎಂಬ ಸರಳ ಸೂತ್ರಗಳ ಮೂಲಕ ಹರಿಬಿಟ್ಟಿದ್ದರು. ಈ ಎಲ್ಲವೂ ಅಕರ್ಷಣೆಯ ಮಾತುಗಳಾಗಿರಲಿಲ್ಲ. ಕಾರ್ಯಸಾಧ್ಯ ರಚನಾತ್ಮಕ ಕೃತಿಗಳೇ ಆಗಿದ್ದವು.

ಇಂದು ಮಹಾತ್ಮ ಗಾಂಧೀಜಿ ಜನ್ಮದಿನ. ಈ ಬಾರಿ 151ನೇ ವರ್ಷಾಚರಣೆಯ ಗಾಂಧಿ ಜಯಂತಿ. ಕೇಂದ್ರ ಹಾಗೂ ಎಲ್ಲ ರಾಜ್ಯ ಸರ್ಕಾರಗಳು ವರ್ಷ ಪೂರ್ತಿ ಗಾಂಧಿಯನ್ನು ಸ್ಮರಿಸುತ್ತಿವೆ. ಇಂಥ ಹೊತ್ತಲ್ಲಿ ದೇಶದ ಆಳುವ ಸರ್ಕಾರಗಳು ಕೈಗೊಳ್ಳುತ್ತಿರುವ ನಿರ್ಧಾರಗಳು, ಅವುಗಳ ರೀತಿ ನೀತಿ, ಸರ್ಕಾರದ ಯೋಜನೆಗಳ ಹಿಂದಿನ ಆಲೋಚನೆಗಳನ್ನು ಗಾಂಧಿ ಚಿಂತನೆಯ ಮೂಸೆಯಲ್ಲಿ ಅವಲೋಕಿಸೋಣ.

**ತತ್ವ ರಹಿತ ರಾಜಕಾರಣದ ಮೇಲುಗೈ:** ಭಾರತದ ಸಮಸ್ಯೆಗಳಿಗೆ ಮೂಲ ಕಾರಣವನ್ನು ಗಾಂಧೀಜಿ ಗುರುತಿಸಿದ್ದರು. ಅವುಗಳನ್ನು ಪರಿಹರಿಸಬೇಕೆಂದರೆ ಸಪ್ತ ಪಾತಕಗಳಿಂದ ದೂರವಿದ್ದರಷ್ಟೆ ಸಾಧ್ಯ ಎಂದು ತಿಳಿಸಿದ್ದರು. ಅವುಗಳೆಂದರೆ. 1) ತತ್ವರಹಿತ ರಾಜಕಾರಣ, 2) ದುಡಿಮೆ ಇಲ್ಲದ ಸಂಪತ್ತು, 3) ಆತ್ಮಸಾಕ್ಷಿ ಇಲ್ಲದ ಸಂತೋಷ, 4) ಚಾರಿತ್ರ್ಯವಿಲ್ಲದ ಶಿಕ್ಷಣ, 5) ನೀತಿ ಇಲ್ಲದ ವ್ಯಾಪಾರ, 6) ಮಾನವೀಯತೆ ಇಲ್ಲದ ಜ್ಞಾನ ಹಾಗೂ 7) ತ್ಯಾಗವಿಲ್ಲದ ಪೂಜೆ.

ಇವುಗಳಲ್ಲಿ ಮೊದಲನೆಯ ಅಂಶದಿಂದಲೇ ಇಡೀ ರಾಜಕಾರಣ ಬಹಳಷ್ಟು ದೂರ ಸಾಗಿದೆ. ಅದು ಎಷ್ಟರಮಟ್ಟಿಗೆ ಎಂದರೆ, ಬೆರಳುಮಾಡಿ ತೋರಿಸಬಾರದೆಂಬ ಕಾರಣಕ್ಕಾಗಿ, ರಾಜಕಾರಣಿಗಳು ಸಮಾಜದ ಎಲ್ಲಾ ಕ್ಷೇತ್ರಗಳನ್ನೂ ಭ್ರಷ್ಟಗೊಳಿಸುತ್ತಲೇ ಇದ್ದಾರೆ. ಜಾತಿ ಜಾತಿಗಳ ನಡುವೆ ಪೈಪೋಟಿ ತಂದಿಡುವುದು,

ಯಾವುದೇ ಕ್ಷೇತ್ರದಲ್ಲಿ ಸಮಸ್ಯೆ ಎದುರಾದ ಕೂಡಲೇ ಶಕ್ತಿ ರಾಜಕಾರಣ ಎಂಬುದು ಅದರಲ್ಲಿ ಮೂಗು ತೂರಿಸಿ, ಅದನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳುತ್ತದೆ. ಸಮಾಜದಲ್ಲಿ ತಾನು ಮಾತ್ರ ಕೆಟ್ಟವನಲ್ಲ. ಎಲ್ಲರೂ ಹಾಗೆಯೇ ಇದ್ದಾರೆ ಎಂದು ಸಮರ್ಥನೆಯ ಬೀಜವನ್ನೇ ಭಿತ್ತಿ–ಬೆಳೆದಿದೆ। ಗಾಂಧೀಜಿ ಹೇಳಿದ ಸಪ್ತಪಾತಕಗಳಿಂದ ದೂರವಿರುವ ಬದಲಿಗೆ ಈ ಅಂಶಗಳನ್ನೇ ಮತ್ತಷ್ಟು ಗಟ್ಟಿಯಾಗಿ ಅಪ್ಪಿಕೊಳ್ಳುವ ಲಕ್ಷಣಗಳು ಕಾಣುತ್ತಿವೆ. ಇದು ದೇಶದ ಏಳಿಗೆ ದೃಷ್ಟಿಯಿಂದ ಆತಂಕಕಾರಿಯೂ ಹೌದು.

**ವ್ಯಾಪಾರಿ ನೀತಿ ಮರೆತ ಸರ್ಕಾರ:** ಸಪ್ತ ಪಾತಕಗಳಲ್ಲಿ 5ನೇ ಅಂಶವಾದ ನೀತಿ ಇಲ್ಲದ ವ್ಯಾಪಾರ ಎನ್ನುವುದು ವ್ಯವಹಾರವನ್ನು ಕಸುಬಾಗಿಸಿಕೊಂಡಿರುವ ಶ್ರೀಸಾಮಾನ್ಯರಿಗೆ ಮಾತ್ರ ಸಂಬಂಧಿಸಿದ್ದಲ್ಲ. ಆಳುವ ಸರ್ಕಾರಗಳಿಗೂ ಅನ್ವಯಿಸುತ್ತದೆ. ಏಕೆಂದರೆ ಸ್ವಾತಂತ್ರ್ಯದಿಂದಲೂ ಸರ್ಕಾರಗಳು ಉದ್ದಿಮೆ ನಡೆಸುತ್ತಿವೆ. ಇಂಥ ಉದ್ದಿಮೆಗಳಲ್ಲಿ ಲಕ್ಷಾಂತರ ಕಾರ್ಮಿಕರು ದುಡಿಯುತ್ತಾರೆ. ಕೆಲವು ಕೈಗಾರಿಕೆಗಳು, ಉದ್ಯಮಗಳು ಸ್ಪರ್ಧಾತ್ಮಕವಾಗಿ ನಡೆಯುತ್ತಿದ್ದರೆ ಬಹುತೇಕ ಸಂಸ್ಥೆಗಳು ಅಧಿಕಾರಿಗಳ ಸೋಮಾರಿತನ. ಆಳುವ ರಾಜಕಾರಿಣಿಗಳ ದೂರದರ್ಶಿತ್ವದ ಕೊರತೆ, ಖಾಸಗಿಯವರಿಂದ ಲಂಚ ಪಡೆದ ಪರಿಣಾಮವಾಗಿ ಬಿಳಿ ಆನೆಗಳಾಗಿ ಪರಿಣಮಿಸಿವೆ. ಇನ್ನು ಸರ್ಕಾರಕ್ಕೆ ವಿವಿಧ ಮೂಲಗಳಿಂದ ಆದಾಯ ಲಭಿಸುತ್ತದೆ. ಅದರಲ್ಲಿ ಆದಾಯ ತೆರಿಗೆಯಂತಹ ನೇರ ತೆರಿಗೆ ಒಂದೆಡೆಯಾದರೆ ಜಿಎಸ್ಟಿ ಅಬಕಾರಿ, ವಿವಿಧ ಸೆಸ್‌ಗಳು ಇಂಧನ ಮೇಲಿನ ಸುಂಕ ಎಂಬ ಮಾತು ಸಾರ್ವಜನಿಕ ವಲಯದಲ್ಲಿ ಪ್ರಸಿದ್ದವಾಗಿತ್ತು ಹಾಗೂ ಇದು ಸತ್ಯವೂ ಆಗಿತ್ತು. ಮದ್ಯಸೇವನೆಯನ್ನು ಗಾಂಧೀಜಿ ವಿರೋಧಿಸಿದ್ದರು. ಸಂಪೂರ್ಣ ಪಾನನಿರೋಧವನ್ನು ಪ್ರತಿಪಾದಿಸಿದ್ದರು. ಅವರ ಒತ್ತಾಸೆಯ ಮೇಲೆಯೇ ಗೋವಧೆ ನಿಷೇಧ, ಪಾನನಿರೋಧದಂತಹ ವಿಷಯಗಳನ್ನು ಸಂವಿಧಾನದ ನಿರ್ದೇಶಕ ತತ್ವಗಳಲ್ಲಿ ಸೇರಿಸಲಾಯಿತು.

ಆದರೆ ಇಂದು ಸರ್ಕಾರಗಳು ಮದ್ಯದ ಆದಾಯದಿಂದ ದೂರ ಸರಿಯುವ ಯೋಜನೆಯನ್ನು ಕನಸಿನಲ್ಲೂ ಮಾಡುವುದಿಲ್ಲ. ಸರ್ಕಾರಕ್ಕೆ ಯಾವುದೇ ಶ್ರಮವಿಲ್ಲದೆ ಬಂದು ಬೀಳುವ ಈ ಹಣವನ್ನು ಕಳೆದುಕೊಳ್ಳಲು ಯಾರೂ ಸಿದ್ದರಿಲ್ಲ. ಗುಜರಾತ್‌ನಲ್ಲಿ ಪಾನನಿಷೇಧ ಈ ಹಿಂದಿನಿಂದಲೇ ಜಾರಿಯಲ್ಲಿದೆ. ನಂತರದಲ್ಲಿ ಕೆಲವು ರಾಜ್ಯಗಳು ಇಂತಹ ನಿರ್ಧಾರವನ್ನು ಕೈಗೊಂಡಿವೆ. ಮದ್ಯ ಸೇವನೆಯಿಂದ ಸಾರ್ವಜನಿಕರ ಆರೋಗ್ಯ ಕೆಡುತ್ತದೆ ಎಂಬ ಪ್ರಾಥಮಿಕ ಅಂಶವಿದ್ದರೂ ಸರ್ಕಾರಗಳು ಅದರ ನಿಷೇಧಕ್ಕೆ ಮನಸ್ಸು ಮಾಡುತ್ತಿಲ್ಲ.

ಮದ್ಯದ ಜೊತೆಗೆ ಸರ್ಕಾರಕ್ಕೆ ಯಾವುದೇ ಶ್ರಮವಿಲ್ಲದೆ ಆದಾಯ ತಂದುಕೊಡುವುದು ಇಂಧನದ ಮೇಲಿನ ತೆರಿಗೆ, ಪೆಟ್ರೋಲ್ ಹಾಗೂ ಡೀಸೆಲ್ ಬಿಟ್ಟರೆ ಬಹುಶಃ ದೇಶದಲ್ಲಿ ತನ್ನ ಮೂಲ ಬೆಲೆಗಿಂತಲೂ ಹೆಚ್ಚಿನ ಬಹುತೇಕ ದುಪ್ಪಟ್ಟು ತೆರಿಗೆಯನ್ನು ವಿಧಿಸಲಾಗುವ ಮತ್ತಾವ ಉತ್ಪನ್ನವೂ ಇಲ್ಲ. ಜನಸಾಮಾನ್ಯರ ಜೀವನದ ಅವಿಭಾಜ್ಯ ಅಂಗವಾಗಿರುವ ವಾಹನಗಳಿಗೆ ಇಂಧನ ಭರ್ತಿ ಮಾಡುವುದನ್ನೇ ಸರ್ಕಾರಗಳು ಆದಾಯದ ಮೂಲವಾಗಿಸಿಕೊಂಡಿವೆ. ತೆರಿಗೆ ವಿಧಿಸುವ ಕುರಿತು ಚಾಣುಕ್ಯನಿಗೆ ಸ್ಪಷ್ಟತೆ ಇತ್ತು. ಸರ್ಕಾರದ ಆಡಳಿತ ಹಾಗೂ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಳ್ಳಲು ಅವಶ್ಯಕವಾದಷ್ಟು ತೆರಿಗೆಯನ್ನು ವಿಧಿಸಬೇಕು. ಆದರೆ ನಾಗರಿಕರ ಸಾಮರ್ಥ್ಯಕ್ಕಿಂತಲೂ ಭಾರವಾದ ತೆರಿಗೆಗಳನ್ನು ವಿಧಿಸಿ ಸಾರ್ವಜನಿಕರನ್ನು ಶೋಷಣೆ ಮಾಡಬಾರದು. ದುಂಬಿಯ ಹೂವಿಗೆ ತೊಂದರೆ ಆಗದಂತೆ ಸೂಕ್ತ ಪ್ರಮಾಣದ ಮಧುವನ್ನು ಹೀರುವಂತೆ ಸರ್ಕಾರ ತೆರಿಗೆ ಸಂಗ್ರಹಿಸಬೇಕು ಎಂದು ತಿಳಿಸುತ್ತಾನೆ. ಇಂದು ದೇಶದ ಬಹುತೇಕ ರಾಜ್ಯಗಳು ಇಂಧನದ ಮೇಲಿನ ಆದಾಯವನ್ನು ಬಿಟ್ಟುಕೊಡಲು ತಯಾರಿಲ್ಲ. ಹಾಗಾಗಿಯೇ ಜಿಎಸ್ಟಿ ವ್ಯಾಪ್ತಿಗೆ ಸೇರ್ಪಡೆ ಮಾಡುವ ಹಾಗೂ ಮಾಡದಿರುವ ಒತ್ತಡ ಗುಂಪುಗಳು ಸಕ್ರಿಯವಾಗಿ ಜನಜೀವನ ದುರ್ಬಲವಾಗುತ್ತಿದೆ.

ಮದ್ಯ ಹಾಗೂ ಇಂಧನದ ಮೇಲಿನ ಅದಾಯವನ್ನು ಸರ್ಕಾರಗಳು ಪ್ರಮುಖ ಆದಾಯದ ಮೂಲವಾಗಿಸಿಕೊಂಡಿರುವುದು ದೌರ್ಭಾಗ್ಯ. ಇದು ಖಂಡಿತವಾಗಿಯೂ ಉತ್ತಮ ಆರ್ಥಿಕತೆಯ ಮಾದರಿ

ಆಗಲು ಸಾಧ್ಯವಿಲ್ಲ. ನೀತಿ ಇಲ್ಲದ ವ್ಯಾಪಾರ ಎಂಬುದನ್ನು ಸರ್ಕಾರಗಳು ತಮಗೇ ಅನ್ವಯಿಸಿಕೊಂಡರೆ ಈ ಸಮಸ್ಯೆ ಬಗೆಹರಿಯುತ್ತದೆ. ಈ ದೃಷ್ಟಿಯಿಂದಲೂ ಗಾಂಧೀಜಿ ಚಿಂತನೆಯಿಂದ ಬಹುದೂರ ಬಂದಿದ್ದೇವೆ.

**ಕೇಂದ್ರೀಕರಣದತ್ತ ಹೆಜ್ಜೆ:** ಇನ್ನು ಗ್ರಾಮೀಣ ಜೀವನದ ಬೆನ್ನೆಲುಬು ಎಂದು ಸಹಕಾರ ಕ್ಷೇತ್ರವನ್ನು ಪರಿಗಣಿಸಬಹುದು. ಅದರಲ್ಲೂ ಸಹಕಾರ ಕ್ಷೇತ್ರ ಸಾಕಷ್ಟು ಬೆಳವಣಿಗೆ ಕಂಡಿರುವ ಕರ್ನಾಟಕ, ಮಹಾರಾಷ್ಟ್ರ, ಗುಜರಾತ್‌ನಂತಹ ರಾಜ್ಯಗಳಲ್ಲಿ ಸಣ್ಣ ರೈತರ ಅವಶ್ಯಕತೆಗಳನ್ನು ಪೂರೈಸುವತ್ತ ಸಹಕಾರ ಸಂಘಗಳು, ಬ್ಯಾಂಕುಗಳು ಪ್ರಮುಖ ಪಾತ್ರ ವಹಿಸಿವೆ.

ಸಹಕಾರ ಸಂಘಗಳು ಇಂದು ಸಂಕಷ್ಟದಲ್ಲಿ ಸಿಲುಕಿಕೊಂಡಿವೆ. ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇರುವಂತೆ ಸಹಕಾರ ಸಂಘಗಳಿಗೆ ಸಂಕಷ್ಟದಲ್ಲಿ ನೆರವು ದೊರಕುವುದಿಲ್ಲ. ಆಡಳಿತ ಮಂಡಳಿಯಲ್ಲಿರುವವರು ಅವ್ಯವಹಾರ ನಡೆಸಿದರೆ, ಅದರ ಪರಿಣಾಮವನ್ನು ಹೂಡಿಕೆದಾರರು ಅನುಭವಿಸಬೇಕಾಗಿದೆ. ಬೆಂಗಳೂರಿನದ್ದೇ ಒಂದು ಬ್ಯಾಂಕಿನ ಉದಾಹರಣೆ ತೆಗೆದುಕೊಂಡರೆ, ತಮ್ಮ ನಿವೃತ್ತಿಯ ಹಣವನ್ನು ಜೀವನ ಪೂರ್ತಿ ಕೂಡಿಟ್ಟಿದ್ದ ಹಣವನ್ನು ಹಿಂಪಡೆಯಲು ಆಗದೆ ವರ್ಷದಿಂದ ಸಂಕಷ್ಟ ಅನುಭವಿಸುತ್ತಿದ್ದಾರೆ. ಯಾವುದೇ ರಾಷ್ಟ್ರೀಕೃತ ಅಥವಾ ವಾಣಿಜ್ಯ ಬ್ಯಾಂಕುಗಳು ನಷ್ಟ ಅನುಭವಿಸಿದರೆ ಆರ್‌ಬಿಐ ಸೇರಿ ಎಲ್ಲ ಸಂಸ್ಥೆಗಳೂ ಕೂಡಲೇ ನೆರವಿಗೆ ಬಂದು ಮತ್ತೊಂದು ಬ್ಯಾಂಕ್ ಜೊತೆಗೆ ವಿಲೀನ ಮಾಡುವ ಹಾಗೂ ಹೂಡಿಕೆದಾರರ ಆತಂಕ ನಿವಾರಿಸುವ ಕಾರ್ಯ ನಡೆಯುತ್ತದೆ. ಆದರೆ ಸಹಕಾರ ಬ್ಯಾಂಕುಗಳಿಗೆ ಈ ಅವಕಾಶವಿಲ್ಲ.

ಸಹಕಾರ ಸಂಘ ಎನ್ನುವ ಅಂಶ ಭಾರತೀಯ ಸಂವಿಧಾನದಲ್ಲೆ ಒತ್ತು ಪಡೆದಿದೆ. ರಾಜ್ಯನೀತಿಯ ನಿರ್ದೇಶಕ ತತ್ವಗಳ 43(ಬಿ) ಉಪಬಂಧದಲ್ಲಿ ತಿಳಿಸಿರುವಂತೆ, ಸಹಕಾರ ಸಂಘಗಳು ಸ್ವಯಂ ಆಗಿ ರಚನೆಯಾಗುವುದನ್ನು ಸ್ವಾಯತ್ತತೆಯಿಂದ ಕಾರ್ಯನಿರ್ವಹಿಸುವುದನ್ನು ಅವುಗಳಲ್ಲಿ ಪ್ರಜಾಸತ್ತಾತ್ಮಕವಾದ ನಿಯಂತ್ರಣ ಮತ್ತು ವೃತ್ತಿಯ ನಿರ್ವಹಣೆ ಹೊಂದಿರುವುದನ್ನು ಉತ್ತೇಜಿಸುವುದಕ್ಕೆ ರಾಜ್ಯ ಪ್ರಯತ್ನಿಸತಕ್ಕದ್ದು ಎಂದು ತಿಳಿಸಲಾಗಿದೆ. ಅಂದರೆ ಸಹಕಾರ ಕ್ಷೇತ್ರದ ಮೇಲೆ ರಾಜ್ಯಗಳಿಗೆ ಅಧಿಕಾರ ನೀಡಲಾಗಿದೆ. ಸಂವಿಧಾನದ ಭಾಗ 19ಬಿ 243 ಜಡ್‌ಟಿ ವರೆಗೆ ಸಹಕಾರ ಸಂಘಗಳ ಸ್ಥಾಪನೆ, ನಿರ್ವಹಣೆ ನಿಯಮ ರಚನೆಗಳಿಗಾಗಿಯೇ ಮೀಸಲಿಡಲಾಗಿದೆ.

ಸಹಕಾರ ಸಂಘಗಳ ಮೇಲಿನ ಅಧಿಕಾರವನ್ನು ರಾಜ್ಯಗಳ ವಿಧಾನಮಂಡಲಗಳಿಗೆ ಸ್ಪಷ್ಟವಾಗಿ ನೀಡಲಾಗಿದೆ. ವಿಕೇಂದ್ರಿಕೃತವಾಗಿಯೇ ಈ ಸಂಸ್ಥೆಗಳನ್ನು ಬಲಪಡಿಸುವ ಕಾರ್ಯ ನಡೆಯಬೇಕಿತ್ತು. ಆದರೆ ಇದೀಗ ಸಹಕಾರ ಕ್ಷೇತ್ರವನ್ನು ಕೇಂದ್ರಿಕರಿಸುವ ಕಾರ್ಯ ನಡೆಯುತ್ತಿದೆ. ಕೇಂದ್ರದಲ್ಲಿ ಪ್ರತ್ಯೇಕವಾದ ಸಹಕಾರ ಸಚಿವಾಲಯವನ್ನು ರೂಪಿಸಲಾಗಿದೆ. ಈಗಾಗಲೇ ತಿಳಿಸಿದಂತೆ, ಸಹಕಾರ ಬ್ಯಾಂಕುಗಳು ಸಂಕಷ್ಟಕ್ಕೆ ಸಿಲುಕಿದಾಗ ಬ್ಯಾಂಕನ್ನು ಹಾಗೂ ಹೂಡಿಕೆದಾರರನ್ನು ಸಂರಕ್ಷಿಸಲು ಈ ಸಚಿವಾಲಯ ಬಳಕೆಯಾದರೆ ಸ್ವಾಗತಾರ್ಹ. ಆದರೆ ಕ್ಷೇತ್ರದ ಆಡಳಿತ ನಿರ್ವಹಣೆಯನ್ನು ಕೇಂದ್ರೀಕರಿಸುವ ಪ್ರಯತ್ನಗಳಿವೆ ಎಂಬ ಅನುಮಾನಗಳು ಅನೇಕ ಕಡೆಗಳಿಂದ ಕೇಳಿಬರುತ್ತಿವೆ. ಈ ರೀತಿ ಆದರೆ ಒಟ್ಟಾರೆ ವಿಕೇಂದ್ರೀಕರಣದ ಆಶಯ ನೆಲಕಚ್ಚುತ್ತದೆ.

ಈಗಾಗಲೇ ವಿದೇಶದ ಮಾದರಿಗಳನ್ನು ಅನುಸರಿಸಿ ಬ್ಯಾಂಕುಗಳ ವಿಲೀನ ಪ್ರಕ್ರಿಯೆ ಜಾರಿಯಲ್ಲಿದೆ. ದೇಶದ ಅನೇಕ ರಾಜ್ಯಗಳಲ್ಲಿ ಹಂಚಿಹೋಗಿದ್ದ ಈ ಬ್ಯಾಂಕುಗಳ ಲಾಭವೇನು ಎಂದು ಅರಿಯಲು 2008ರ ಜಾಗತಿಕ ಆರ್ಥಿಕ ಸಂಕಷ್ಟ ಪರಿಸ್ಥಿತಿಯನ್ನು ಒಮ್ಮೆ ಅವಲೋಕಿಸಬೇಕು. ಆರ್ಥಿಕ ಹೊಡೆತಕ್ಕೆ ಸಿಲುಕಿದ ಬೃಹತ್ ಬ್ಯಾಂಕುಗಳು ಅಮೇರಿಕದಂತಹ ದೇಶಗಳಲ್ಲೂ ಕದ್ದು ಮುಚ್ಚಿ ಹೇಳ ಹೆಸರಿಲ್ಲದಂತೆ ನಶಿಸಿ ಹೋದವು. ಆದರೆ ಭಾರತದಲ್ಲಿ ಒಂದೇ ವಾಣಿಜ್ಯ ಬ್ಯಾಂಕ್ ಸಹ ಆರ್ಥಿಕ ಕುಸಿತಕ್ಕೆ ಕದ ಮುಚ್ಚಲಿಲ್ಲ. ಸಂಪೂರ್ಣ ವಿಕೇಂದ್ರೀಕೃತ ವ್ಯವಸ್ಥೆಯಿಂದ ಹೆಚ್ಚು ಹೊಡೆತ ತಿನ್ನುವ ಶಕ್ತಿ ಬರುತ್ತದೆ

ಎಂಬುದು ಆರ್ಥಿಕ ಕ್ಷೇತ್ರದ ಮೂಲಪಾಠ. ಆದರೆ ಈ ಬ್ಯಾಂಕುಗಳನ್ನು ವಿಲೀನ ಮಾಡುವ ನಿರ್ಧಾರ ಮಾಡಲಾಯಿತು. ಇದಕ್ಕೆ ಆರ್ಥಿಕ ತಜ್ಞರೆನಿಸಿಕೊಂಡವರು ನೀಡಿದ ಕಾರಣ ಏನು ಗೊತ್ತೇ. ದೇಶದಲ್ಲಿ ದೊಡ್ಡ ಸಾಲಗಳನ್ನು ನೀಡುವ ಮೂರ್ನಾಲ್ಕು ಬ್ಯಾಂಕುಗಳಿರಬೇಕು ಎಂದು। ಆದರೆ ದೊಡ್ಡ ಸಾಲವನ್ನು ಪಡೆಯಲು ಯಾರಿಂದ ಸಾಧ್ಯ. ಬೃಹತ್ ಕಾರ್ಪೊರೇಟ್ ಸಂಸ್ಥೆಗಳಿಂದ ಅಲ್ಲವೇ. ಈಗಾಗಲೇ ದೊಡ್ಡ ಸಾಲ ಪಡೆದ ವಿಜಯ್ ಮಲ್ಯ ಮಾಡಿದ ಅನಾಹುತದಿಂದ ದೊಡ್ಡ ಬ್ಯಾಂಕುಗಳ ಒಕ್ಕೂಟ ಅನುಭವಿಸುತ್ತಿರುವ ಸಂಕಷ್ಟ ಕಣ್ಣೆದುರಿಗೇ ಇದೆ. ದೊಡ್ಡ ಸಾಲಗಳನ್ನು ನೀಡಿ ಕೆಲವರಿಗೆ ಮಾತ್ರ ಸಹಕಾರ ನೀಡಬೇಕು ಎಂಬುದೇ ಕೆಟ್ಟ ಅರ್ಥಿಕತೆಯ ಮೂಲಾಧಾರ. ಇನ್ನು ಕರ್ನಾಟಕ ನೆಲದಲ್ಲಿ ಆರಂಭವಾಗಿ ಸದ್ಯ ಬೇರೆ ಬ್ಯಾಂಕ್‌ಗಳ ಜೊತೆ ವಿಲೀನವಾಗಿರುವ ಅನೇಕ ಬ್ಯಾಂಕ್‌ಗಳು ಅರ್ಥಿಕ ಸಂಸ್ಥೆಗಳು ತಮ್ಮದೇ ವಿಶಿಷ್ಟ ಕಾರ್ಯ ಸಂಸ್ಕೃತಿಯನ್ನು ಹೊಂದಿದ್ದವು. ಪ್ರತಿ ಬ್ಯಾಂಕ್ ಸಹ ಸಮಾಜದ ಪ್ರತ್ಯೇಕ ವರ್ಗದ ಆರ್ಥಿಕ ಅವಶ್ಯಕತೆಗಳನ್ನು ಪೂರೈಸುತ್ತಿದ್ದವು. ಬ್ಯಾಂಕುಗಳ ವಿಲೀನದ ಮೂಲಕ ಈ ವೈವಿಧ್ಯತೆಯನ್ನು ಅಳಿಸಿಹಾಕಿ ಎಂಬ ಗಾಂಧೀಜಿಯ ಮತ್ತೊಂದು ಚಿಂತನೆಯಿಂದಲೂ ನಾವು ಬಹುದೂರ ಬಂದಿದ್ದಾಗಿದೆ.

ಕೊರೋನಾ ಸಮಯದಲ್ಲಿ ಲಕ್ಷಾಂತರ ಸಣ್ಣ ಉದ್ದಿಮೆಗಳು ಬಂದ್ ಆದವು. ದೊಡ್ಡ ಉದ್ದಿಮೆಗಳಿಗೆ ಸರ್ಕಾರದ ಕೃಪಾಕಟಾಕ್ಷದ ನಂತರವೂ ಸಣ್ಣ ಉದ್ದಿಮೆಗಳೇ ದೇಶದ ಶೇ.35–40 ಜನ ಸಂಖ್ಯೆಯನ್ನು ಈಗಲೂ ಸಲಹುತ್ತಿವೆ. ಭಾರತೀಯರಲ್ಲಿ ಹಾಸು ಹೊಕ್ಕಾಗಿದ್ದ ಸ್ವಾವಲಂಬಿ ಜೀವನ ವಿಧಾನವನ್ನು ದೊಡ್ಡ ಕೈಗಾರಿಕೆಗಳು ಇಲ್ಲವಾಗಿಸುತ್ತವೆ. ಗುಡಿ ಕೈಗಾರಿಕೆ, ಸಣ್ಣ ಕೈಗಾರಿಕೆಗಳ ಮೂಲಕ ತಮ್ಮದೇ ಉತ್ಪನ್ನವನ್ನು ದೊಡ್ಡ ಕಂಪನಿಗಳಿಗೆ ಸರಬರಾಜು ಮಾಡುತ್ತ ಹಾಗೂ ಮಾರುಕಟ್ಟೆಯಲ್ಲಿ ನೇರವಾಗಿ ಮಾರಾಟ ನಡೆಸುತ್ತ ಸ್ವಾಭಿಮಾನದ ಜೀವನ ಕಂಡುಕೊಳ್ಳುತ್ತಿರುವ ಉದ್ಯಮವನ್ನು ಸರ್ಕಾರಗಳು ಪ್ರೋತ್ಸಾಹಿಸಬೇಕು.

**ಉಳ್ಳವರಿಗಾಗಿ ಕೃಷಿ:** ಕೃಷಿ ಕ್ಷೇತ್ರವೂ ಗಾಂಧೀಜಿ ಚಿಂತನೆಯಿಂದ ವಿಮುಖವಾಗಿ ಸೊರಗುತ್ತಿದೆ ಎಂದು ಹೇಳದೇ ವಿಧಿಯಿಲ್ಲ. ಸರ್ಕಾರದ ನೆರವು ನೀತಿ ಎಲ್ಲವೂ ದೊಡ್ಡ ಹಿಡುವಳಿ ಗುತ್ತಿಗೆ ಪಡೆದು, ಗುತ್ತಿಗೆ ಕೃಷಿ ಮಾಡುವ ದೊಡ್ಡ ಕಂಪನಿಗಳಿಗೆ ಅನುಕೂಲವಾಗುವಂತೆ ರೂಪುಗೊಳ್ಳುತ್ತಿದೆ. ಇದರಿಂದ ದೊಡ್ಡ ಹಿಡುವಳಿ ಇರುವ ಶೇ.20ರಷ್ಟು ಕೃಷಿಕರಿಗೆ ಅಥವಾ ಕೃಷಿ ಗುತ್ತಿಗೆ ಪಡೆಯುವ ಕಂಪನಿಗಳಿಗೆ ಅನುಕೂಲವಾಗಿ ಶೇ.80ರಷ್ಟು ಸಣ್ಣ ಹಿಡುವಳಿ ಕೃಷಿಕರಿಗೆ ಕಂಟಕಪ್ರಾಯವಾಗುತ್ತಿದೆ. ಇದರಿಂದ ಕೃಷಿ, ಕೃಷಿಯಿಂದ ಉದ್ಯಮ ಆರ್ಥಿಕತೆ ಭವಿಷ್ಯದಲ್ಲಿ ಸಂಕಷ್ಟಕ್ಕೆ ಸಿಲುಕುವುದನ್ನು ತಪ್ಪಿಸಲು ಸಾಧ್ಯವಿಲ್ಲ.

ಒಟ್ಟಾರೆ ಹೇಳುವುದಾದರೆ ದೇಶದ ಕಟ್ಟಕಡೆಯ ವ್ಯಕ್ತಿಯ ಏಳಿಗೆ ಆಗಬೇಕು ಎನ್ನುವುದು ಗಾಂಧೀಜಿಯವರ ಅಂತ್ಯೋದಯ ಪರಿಕಲ್ಪನೆಯ ಸಾರಾಂಶ. ಅಂದರೆ ದೇಶದ ಅಭಿವೃದ್ಧಿ ಕಾರ್ಯಗಳಿಗೆ ದೊಡ್ಡ ಉದ್ದಿಮೆಗಳು, ಉದ್ಯಮಪತಿಗಳು, ಶಿಕ್ಷಿತರು, ಹಣವಂತರು ಕೇಂದ್ರವಾಗಿರಬಾರದು. ಸಮಾಜದ ಕಟ್ಟಕಡೆಯ ವ್ಯಕ್ತಿಗೆ ಲಾಭವಾಗುತ್ತದೆಯೇ ಎಂಬುದನ್ನು ಮನಸ್ಸಿನಲ್ಲಿರಿಸಿಕೊಂಡು ಯೋಜನೆಗಳನ್ನು ರೂಪಿಸಿದ್ದೇ ಆದರೆ ಭಾರತವು ಸಮಗ್ರ ಅಭಿವೃದ್ಧಿ ಹೊಂದುವುದರಲ್ಲಿ ಅನುಮಾನವಿಲ್ಲ. ಇಲ್ಲಿನ ಎಲ್ಲ ದುಡಿಯುವ ಕೈಗಳಿಗೆ ಸುಭದ್ರ ಕೆಲಸ, ದುಡಿದು ಸುಸ್ತಾದ ಕೈಗಳಿಗೆ ಜೀವನ ಸುರಕ್ಷತೆಯಂತಹ ಮಾರ್ಗವನ್ನು ಅನುಸರಿಸಬೇಕು. ಮದ್ಯ, ಇಂಧನದಂತಹ ಮಾರ್ಗಗಳಿಂದ ಆದಾಯಗಳಿಸುವ ಬದಲಿಗೆ ಜನರ ಬೆವರಿನ ಹನಿಯಿಂದ ದೊರೆತ ತೆರಿಗೆ ಹಣದಿಂದ ಅಭಿವೃದ್ಧಿ ಕಾರ್ಯಕೈಗೊಂಡರೆ ನೈತಿಕ ಆರ್ಥಿಕ ವ್ಯವಸ್ಥೆ ರೂಪುಗೊಳ್ಳುತ್ತದೆ ಎಂಬುದನ್ನು ಅರ್ಥಶಾಸ್ತ್ರಜ್ಞರು, ಜನಪ್ರತಿನಿಧಿಗಳು ಅರಿತಾಗ ಮಾತ್ರ ನಾವು ಗಾಂಧೀಜಿಯವರಿಗೆ ನಿಜವಾದ ನಮನ ಸಲ್ಲಿಸಿದಂದಾಗುತ್ತದೆ. ಈಗಾಗಲೇ ಗಾಂಧೀಜಿ ಚಿಂತನೆಗಳಿಂದ ದೂರ, ಬಹುದೂರ ಬಂದಿದ್ದೇವೆ, ಮತ್ತೆ ಹತ್ತಿರವಾಗಲು ಪ್ರಯತ್ನಿಸೋಣ.

**ಕಡೆ ಮಾತು**: 1931ರಲ್ಲಿ ತಮ್ಮ ಯಂಗ್ ಇಂಡಿಯಾದಲ್ಲಿ ಗಾಂಧಿ ಭಾರತದ ಆರ್ಥಿಕ ವ್ಯವಸ್ಥೆ ಕುರಿತು ಹೀಗೆ ಬರೆದಿದ್ದಾರೆ.

ತೀರಾ ಬಡವನಾದವನು ಕೂಡ ಇದು ತನ್ನ ದೇಶ ಇದರ ಏಳಿಗೆಯಲ್ಲಿ ತನ್ನದೂ ಒಂದು ಮುಖ್ಯವಾದ ಪಾಲಿದೆ ಎಂದು ತಿಳಿಯುವಂಥ ಭಾರತಕ್ಕಾಗಿ ನಾನು ದುಡಿಯುವೆ. ನನ್ನ ಕನಸಿನ ಸ್ವರಾಜ್ಯ ಬಡತನ ಸ್ವರಾಜ್ಯವೇ ಆಗಿರುತ್ತದೆ. ಉಳ್ಳವರೊಡನೆ, ಸ್ಥಿತಿವಂತರೊಡನೆ ಸರಿಸಮವಾಗಿ ಜೀವನದ ಅವಶ್ಯಕತೆಗಳನ್ನು ಬಡವನೂ ಹೊಂದಿರಬೇಕು.

ಲೇಖಕರು:– ಹರಿಪ್ರಕಾಶ್ ಕೋಣೆಮನೆ

ಆಧಾರ:ವಿಜಯ ಕರ್ನಾಟಕ, ದಿನಾಂಕ:02.10.2021

## 2. ನಮ್ಮ ಕಾಲದ ಕನ್ನಡಿಯಲ್ಲಿ ಗಾಂಧಿ ಸಂದೇಶ

ಮಹಾತ್ಮನ ಜೀವನ ಮತ್ತವರ ಜೀವನಸಂದೇಶಗಳು ಎಂದೆಂದಿಗೂ ಪ್ರಸ್ತುತವೆನ್ನುವುದು ನಿರ್ವಿವಾದ. ಆದರೆ, ಮಾಹಿತಿಯುಗದ ನಾಗರಿಕರಾದ ನಾವು ಮಹಾತ್ಮ ಗಾಂಧಿ ಕೊಟ್ಟ ಸಂದೇಶಗಳನ್ನು ಒಂದು ದೇಶ ಮತ್ತು ಸಮಾಜವಾಗಿ ಎಷ್ಟರ ಮಟ್ಟಿಗೆ ಪಾಲಿಸುತ್ತಿದ್ದೇವೆ ಎನ್ನುವುದನ್ನು ಆತ್ಮವಿಮರ್ಶೆ ಮಾಡಿಕೊಳ್ಳಲು ಅವರ ಜನ್ಮದಿನದ ನೆಪಸಾಕು. ಅವರ ಕೆಲವು ಅಮರವಾಕ್ಯಗಳನ್ನು ಇಂದು ಅವುಗಳ ಪ್ರಸ್ತುತತೆಯನ್ನು ನೇಪಥ್ಯದಲ್ಲಿ ಕುಳಿತು ನೋಡುವ ಪ್ರಯತ್ನವಿದು.

**"ನೀವು ಜಗತ್ತಿನಲ್ಲಿ ಕಾಣಬಯಸುವ ಬದಲಾವಣೆ, ಮೊದಲು ನಿಮ್ಮಲ್ಲಿ ಬರಲಿ"**: ಮಾಹಿತಿಯುಗದಲ್ಲಿ Armchair activities/ ಆರಾಮ ಕುರ್ಚಿಯಲ್ಲಿ ಕುಳಿತೇ ಚಳುವಳಿಕಾರರಾಗುವ ಅವಕಾಶ ಎಲ್ಲರಿಗೂ ಇದೆ. ನಿಜ ಹೇಳಬೇಕೆಂದರೆ ಅಂಥ ಚಳುವಳಿಗಳಿಂದ ಪ್ರಯೋಜನವೂ ಆಗಿದೆ. ಆದರೆ, ನಮ್ಮನ್ನು ಹೆಚ್ಚು ಬದಲಾಯಿಸಿಕೊಳ್ಳದೆ, ಜಗತ್ತಿನಲ್ಲಿ ಮಾತ್ರ ಬದಲಾವಣೆ ಬಯಸುವ self-righteousness/ತಾನೇ ಸರಿಯೆಂಬ ಪ್ರವೃತ್ತಿ ಹೆಚ್ಚುತ್ತಿದೆಯೇ ಎನ್ನುವುದರ ಬಗ್ಗೆ ವಿಮರ್ಶೆಯ ಅಗತ್ಯವಿದೆ.

**"ಅಶಕ್ತರು ಎಂದಿಗೂ ಯಾರನ್ನೂ ಕ್ಷಮಿಸಲಾರರು, ಏಕೆಂದರೆ ಕ್ಷಮೆ ಎನ್ನುವುದು ಸಶಕ್ತರ ಸಹಜದರ್ಮ"**: ಕ್ಷಮೆಗೆ ಪೂರ್ವಗಾಮಿಯಾದದು ಮರೆವು. ಮಾಹಿತಿಯುಗದಲ್ಲಿ ಎಲ್ಲವೂ ಶಾಶ್ವತವಾಗಿ ದಾಖಲಾಗುವುದರಿಂದ ಮತ್ತು ದಾಖಲಾದುದನ್ನು ಮತ್ತೆ ಮತ್ತೆ ಹೊರತೆಗೆದು ಬಿತ್ತರಿಸುವುದು ಸುಲಭವಾಗಿರುವುದರಿಂದ ಮರೆವಿಗೆ ಅವಕಾಶವಿಲ್ಲ. ಮಾಹಿತಿಯುಗದ ಕೃತಕ ಜ್ಞಾಪಕಶಕ್ತಿ ಸಾಧನೆಗಳು ನಮ್ಮನ್ನು ಕ್ಷಮಿಸಲಾರದ ಅಶಕ್ತರನ್ನಾಗಿಸಿವೆಯೆ.

**"ನಾಳೆ ಸಾಯುತ್ತೀರಿ ಎಂಬಂತೆ ಇಂದು ಬದುಕಿರಿ, ಆದರೆ, ಚಿರಾಯುವಾಗಿರುತ್ತೇವೆ ಎಂಬಂತೆ ಕಲಿಯಿರಿ"**: ಮಾಹಿತಿ ಹೆಚ್ಚಾದಷ್ಟೂ ಕಲಿಕೆಯೂ ಹೆಚ್ಚಾಗಬೇಕಾದ್ದು ತರ್ಕ ಬದ್ದವಲ್ಲವೇ. ಇಲ್ಲ ಏಕೆಂದರೆ, ಮಾಹಿತಿಗೂ ಜ್ಞಾನಕ್ಕೂ ಅಗಾಧವಾದ ವ್ಯತ್ಯಾಸವಿದೆ. ನಾಳೆಯೇ ಸಾಯಬಹುದೆಂಬಷ್ಟು ಆತುರದಲ್ಲಿ ಇಂದು ನಾವು ಸೇವಿಸುವ ಮಾಹಿತಿಯ ಪ್ರಮಾಣದಲ್ಲಿ ಎಷ್ಟೋ ಪಟ್ಟು ಹೆಚ್ಚಳವಾಗಿದೆಯಾದರೂ, ಆ ಮಾಹಿತಿಯನ್ನು ಅರಗಿಸಿಕೊಂಡು ನಮ್ಮೊಳಗೆ ಸಂಸ್ಕರಿಸಿ, ವಿಶ್ಲೇಷಿಸಿ, ವಿಮರ್ಶಿಸಿ, ವಿವೇಚಿಸಿ ಜ್ಞಾನವಾಗಿ ಪರಿವರ್ತಿಸಿಕೊಳ್ಳುವ ಸಾಮರ್ಥ್ಯ ಕಡಿಮೆಯಾಗುತ್ತಿದೆಯೇ ಎನ್ನುವುದು ನಿಜವಾದ ಪ್ರಶ್ನೆ.

**"ನೀವು ಸಂತೋಷವಾಗಿರಬೇಕಾದರೆ, ನಿಮ್ಮ ಆಲೋಚನೆಗಳು ನಿಮ್ಮ ನುಡಿ ಮತ್ತು ನಿಮ್ಮ ಕಾರ್ಯಗಳು ಸಾಮರಸ್ಯದಲ್ಲಿರಬೇಕು"**: ಎಲ್ಲದಕ್ಕೂ ಕ್ಷಣಗಳಲ್ಲಿ ಪ್ರತಿಕ್ರಿಯಿಸಬೇಕಾದ ಮಾಹಿತಿಯುಗದಲ್ಲಿ ನಮಗೆ ಆಲೋಚಿಸದೆ ನುಡಿಯಬೇಕಾದ ಒತ್ತಡವಿದೆ, ಅಥವಾ ಅಂತಹ ಒತ್ತಡವನ್ನು ನಾವೇ ಆಹ್ವಾನಿಸಿಕೊಳ್ಳುತ್ತಿರುತ್ತೇವೆ. ಆನಂತರದಲ್ಲಿ ನುಡಿಗೆ ತಕ್ಕಂತೆ ನಮ್ಮ ಆಲೋಚನೆಗಳನ್ನೂ ಕಾರ್ಯಗಳನ್ನು

ಹೊಂದಿಸಿಕೊಳ್ಳಬೇಕಾದ ಅನಿವಾರ್ಯ. ಹಾಗಾಗಿ, ಆಲೋಚನೆ-ನುಡಿ-ಕಾರ್ಯಗಳ ತರ್ಕಬದ್ಧ ಕ್ರಮ ಸ್ಥಾನಪಲ್ಲಗೊಂಡಿದೆ. ನಮ್ಮ ಸಂತೋಷಕ್ಕೂ ದಕ್ಕೆಯಾಗಿದೆ.

**"ಘನೋದ್ದೇಶವನ್ನು ಹುಡುಕಿರಿ, ಅದನ್ನು ಕಾರ್ಯಗತಗೊಳಿಸುವ ದಾರಿ ತಾನಾಗಿಯೇ ಕಾಣಿಸತೊಡಗುತ್ತದೆ"**: ಮಾಹಿತಿಯುಗದಲ್ಲಿ ಅಲ್ಪಾವಧಿಯ ಯಶಸ್ವಿಗೇ ಹೆಚ್ಚು ಮಹತ್ವ ವ್ಯಕ್ತಿಗಳ, ಉದ್ಯಮಗಳು, ಮಾಧ್ಯಮಗಳು, ಸರ್ಕಾರಗಳಾದಿಯಾಗಿ ಎಲ್ಲರಿಗೂ ಸಮಯದ ಒತ್ತಡವಿರುವುದರಿಂದ, ಎಲ್ಲರೂ ಗೆಲ್ಲಲು ಹತ್ತಿರದ ದಾರಿಗಳನ್ನು ಹುಡುಕುತ್ತಿದ್ದೇವೆ. ಲಾರ್ಜರ್ ಪರ್ಪಸ್/ಘನೋದ್ದೇಶಗಳನ್ನು ಹುಡುಕುವ ವ್ಯವಧಾನ, ಹೆಚ್ಚಿನ ಜನರಿಗೆ ಇಲ್ಲವೇನೋ ಎನಿಸುತ್ತದೆ.

**"ಮನುಷ್ಯ ತನ್ನ ಆಲೋಚನೆಗಳಿಂದ ತಯಾರಾದವ। ಆತ ಏನು ಯೋಚಿಸುತ್ತಾನೋ ಅದಾಗುತ್ತಾನೆ"**: ಆಲೋಚನೆ ಎಂದರೆ ಮಾಹಿತಿಯನ್ನು ಸಂಸ್ಕರಿಸಿ, ಸಮಯೋಚಿತವಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಶಕ್ತಿ. ಮಾಹಿತಿಯ ಅತಿವೃಷ್ಟಿಯಿರುವ ಇಂದಿನ ಕಾಲದಲ್ಲಿ ನಮ್ಮ ಆಲೋಚನೆಗಳನ್ನು ದಿಕ್ಕೆಡಿಸುವ ನೂರು ದಾರಿಗಳಿವೆ. ವಿಪರ್ಯಾಸವೆಂದರೆ, ಮಾಹಿತಿಯುಗದಲ್ಲಿ ಮಾಹಿತಿಯ ಭಾರವೇ ಆಲೋಚನೆಗೆ ಮಾರಕವಾಗಿದೆ. ಗೊಂದಲಕ್ಕೆ ಕಾರಣವಾಗಿದೆ.

**"ನಮ್ಮನ್ನು ನಾವು ಹುಡುಕಿಕೊಳ್ಳುವ ಅತ್ಯುತ್ತಮ ಮಾರ್ಗವೆಂದರೆ ಮತ್ತೊಬ್ಬರ ಸೇವೆಯಲ್ಲಿ ನಮ್ಮನ್ನು ಕಳೆದುಕೊಂಡುಬಿಡುವುದು"**: ಸೆಲ್ಫಿ ತೆಗೆದುಕೊಳ್ಳುತ್ತಾ ಲೈಕ್‌ಗಳಿಗಾಗಿ ಬದುಕುವ ನಾವು ನಮ್ಮ ಸಹಜತೆಯನ್ನು ಬದಿಗಿಟ್ಟು ಅದರ ಬದಲಿಗೆ social endorsement ಒಪ್ಪಿಕೊಂಡಿದ್ದೇವೆ. ಪರಿಣಾಮವಾಗಿ ನಾವು ನಿಜಕ್ಕೂ ಯಾರು ಎನ್ನುವುದು ಗೊತ್ತಾಗದೇ ಒದ್ದಾಡುತ್ತಿದ್ದೇವೆ. ಮತ್ತೊಬ್ಬರ ಸೇವೆ ಮಾಡಿ ನಮ್ಮನ್ನು ನಾವು ಹುಡುಕಿಕೊಳ್ಳಲು ಮೊದಲು ನಾವು ಲೈಕ್ ಸೆಲ್ಫಿಗಳ ಸಂಕೋಲೆಗಳಿಂದ ಬಿಡುಗಡೆಗೊಳ್ಳಬೇಕಿದೆ.

**"ಶಕ್ತಿ ಎನ್ನುವುದು ದೈಹಿಕ ಸಾಮರ್ಥ್ಯದಿಂದ ಬರುವಂತಹದಲ್ಲ, ಅದು ಹತ್ತಿಕ್ಕಲಾಗದ ಇಚ್ಛಾಶಕ್ತಿಯಿಂದ ಬರುತ್ತದೆ"**: ಮಾಹಿತಿಯುಗದ ನಾಗರಿಕರಿಗೆ ಇಚ್ಛಾಶಕ್ತಿಯ ಕೊರತೆಯೇ, ಯೋಚಿಸಿ ನೋಡಿ. ನಮಗೆ ಬೇಕಾದೆಲ್ಲ ಈಗಲೇ ಸಿಗಬೇಕೆಂಬ ಹಂಬಲಮಯ ಪ್ರಪಂಚದಲ್ಲಿ ಇಚ್ಛಾಶಕ್ತಿಯ ವಿಷಯದಲ್ಲಿ ಎರಡು ಪ್ರಮುಖ ಬದಲಾವಣೆಗಳಾಗಿವೆ. ಮೊದಲನೆಯದು, ವ್ಯಕ್ತಿಗಳು ಅಂದುಕೊಂಡದ್ದು ಈಡೇರದಿದ್ದಾಗ, ಹಲವಾರು escape routes/ ಹೊರಮಾರ್ಗಗಳಿರುವುದು, ಎರಡನೆಯದು, ಸಾಮಾಜಿಕ ಗುರಿಗಳನ್ನು ಈಡೇರಿಸಿಕೊಳ್ಳಲು ಜನಬಲವನ್ನು ಕ್ರೋಡೀಕರಿಸುವುದು ಸುಲಭವಾಗಿರುವುದರಿಂದ, ವೈಯಕ್ತಿಕ ಇಚ್ಛಾಶಕ್ತಿಯ ಅವಶ್ಯಕತೆ ಮತ್ತು ಬಳಕೆ ಸಹಜವಾಗಿಯೇ ಕಡಿಮೆಯಾಗುತ್ತಿದೆ. ಇವರೆಡರಿಂದ, ಇಚ್ಛಾಶಕ್ತಿಯೂ ತತ್ಪರಿಣಾಮವಾದ ಮೂಲ ಶಕ್ತಿಯೂ ಕಡಿಮೆಯಾಗುತ್ತಿದೆ ಎನಿಸುತ್ತಿದೆ.

**"ಈ ಭೂಮಿಗೆ ನಮ್ಮ ಎಲ್ಲ ಅವಶ್ಯಕತೆಗಳನ್ನು ಪೂರೈಸುವ ಶಕ್ತಿಯಿದೆ. ಆದರೆ, ಓರ್ವ ವ್ಯಕ್ತಿಯ ದುರಾಸೆಯನ್ನು ಅದು ಪೂರೈಸಲಾರದು/ಓರ್ವ ಒಳ್ಳೆಯ ಮನುಷ್ಯ ಎಲ್ಲ ಸಜೀವ ವಸ್ತುಗಳ ಸ್ನೇಹಿತನಾಗಿರಬೇಕು"**: ಪ್ರಕೃತಿಯ ಎಲ್ಲ ವಸ್ತುಗಳು ನಮಗೆ ಸೇರಿದ್ದಲ್ಲ ಹಾಗೂ ನಮಗೆ ಸೇರಿದ ವಸ್ತುಗಳ ಬಳಕೆಯು ಮಿತವ್ಯಯಿಯಾಗಿರಬೇಕು ಎನ್ನುವುದರ ಬಗ್ಗೆ ಚರ್ಚೆಯೇನೋ ಜೋರಾಗಿದೆ. ಆದರೆ, ನಾವು ನುಡಿದಂತೆ ನಡೆಯುತ್ತಿದ್ದೇವೆಯೇ ಎನ್ನುವುದನ್ನು ಅವಲೋಕಿಸಿದರೆ ಸಾಕಷ್ಟು ವೈದೃಶ್ಯಗಳನ್ನು ಕಾಣಬಹುದು. ಪ್ರಕೃತಿದತ್ತವಾದುದೆಲ್ಲವನ್ನೂ ಇತರ ಸಜೀವ ವಸ್ತುಗಳಾದ ಪ್ರಾಣಿ, ಪಕ್ಷಿ, ಗಿಡ, ಮರಗಳೊಂದಿಗೆ ಹಂಚಿಕೊಂಡು ಬದುಕುವ ಸ್ನೇಹಪರತೆ ಗ್ರಾಹಕ ಸಂಸ್ಕೃತಿಯಿಂದಾಗಿ ಕಡಿಮೆಯಾಗುತ್ತಿದೆ.

**"ಆರೋಗ್ಯವೇ ನಿಜವಾದ ಭಾಗ್ಯ-ಚಿನ್ನ-ಬೆಳ್ಳಿಯ ತುಣುಕುಗಳಲ್ಲ"**: ಮಾಹಿತಿಯುಗ ನಮ್ಮೆಲ್ಲರನ್ನೂ ತೋರಿಕೆಯ ಜನರನ್ನಾಗಿಸುತ್ತಿದೆ. ಚಿನ್ನ-ಬೆಳ್ಳಿಗಳಲ್ಲದಿದ್ದರೂ ಒಳ್ಳೆಯ ಬದುಕನ್ನೂ ನಾವು

ಸ್ಥಿತಿವಂತರೆನ್ನುವುದನ್ನು ಜಗತ್ತಿಗೆ ಬಿತ್ತರಿಸುವ ಹಂಬಲ ಹೆಚ್ಚುತ್ತಿದೆ. ನಮ್ಮ ಜೀವನಗಳಲ್ಲಿ ಆರೋಗ್ಯದ ಬಗ್ಗೆ ಮಾಹಿತಿ ಹಾಗೂ ಚರ್ಚೆ ಹೆಚ್ಚುತ್ತಿದ್ದರೂ, ಜೀವನಶೈಲಿ ಆಧಾರಿತ ಸಮಸ್ಯೆಗಳಿಂದಾಗಿ ಆರೋಗ್ಯ ಕ್ಷೀಣಿಸುತ್ತಿದೆ. ಹಣಕ್ಕಾಗಿ ಸ್ವಾಸ್ಥ್ಯವನ್ನು ಬಲಿ ಕೊಡುವ ಪ್ರವೃತ್ತಿ ಹೆಚ್ಚುತ್ತಲೇ ಇದೆ.

**"ಪಾಪವನ್ನುದ್ವೇಷಿಸಿ, ಪಾಪಿಯನ್ನಲ್ಲ"**: ರಾಜಕೀಯ ದೇಶಕ್ಕಾಗಿ ಪ್ರತಿಭಟನೆಯ ಹೆಸರಿನಲ್ಲಿ ಬದುಕಿರುವ ನಾಯಕರ ಶವಸಂಸ್ಕಾರ ಮಾಡುತ್ತಾರೆ. ಟಿವಿ ಕ್ಯಾಮೆರಾಗಳ ಮುಂದೆ ಅವರ ಛಾಯಾಚಿತ್ರಕ್ಕೆ ಚಪ್ಪಲಿಯಲ್ಲಿ ಹೊಡೆಯುತ್ತಾರೆ. ನಮಗಾಗದ ವ್ಯಕ್ತಿಗಳು ಸತ್ತಾಗಲೂ ಸಾಮಾಜಿಕ ಮಾಧ್ಯಮಗಳಲ್ಲಿ ಸಂಭ್ರಮಿಸುವುದನ್ನು ನೋಡಿದ್ದೇವೆ. ಪಾಪ ಗೌಣವಾಗಿ ಪಾಪಿಯೇ ಮುಖ್ಯನಾಗುತ್ತಿದ್ದಾರೆ.

**"ಸಂಸ್ಕೃತಿ ಉಳಿಯಬೇಕಾದರೆ, ಅದು ಎಲ್ಲರನ್ನೂ ಒಳಗೊಳ್ಳಬೇಕು/ವೈವಿಧ್ಯತೆಯನ್ನು ಪ್ರೋತ್ಸಾಹಿಸುವುದೇ ನಿಜವಾದ ನಾಗರಿಕತೆ/ಪ್ರಾಮಾಣಿಕತೆ ವ್ಯತ್ಯಾಸಗಳು ಪ್ರಗತಿಯ ಆರೋಗ್ಯದ ಚಿನ್ಹೆಗಳು"**: ಮಾಹಿತಿಯುಗದಲ್ಲಿ ವಿವಿಧ ನಂಬುಗೆಗಳುಳ್ಳ ಜನರ ನಡುವೆ ಚರ್ಚೆ ಏರ್ಪಡುವುದರಿಂದ ಬಣಗಳು ಸೃಷ್ಟಿಯಾಗುತ್ತವೆ. ಸಾಮಾಜಿಕ ಮಾಧ್ಯಮಗಳಲ್ಲಿ ಚರ್ಚೆಗಳೆಲ್ಲವೂ ಸಾರ್ವಜನಿಕವಾದ್ದರಿಂದ, ನಾವು ಒಮ್ಮೆ ವ್ಯಕ್ತಪಡಿಸಿದ ಅಭಿಪ್ರಾಯದಿಂದ ಹಿಮ್ಮೆಟ್ಟುವುದು ಸೋಲಿಗೆ ಸಮನಾಗುತ್ತದೆ. ಇದರಿಂದ ಬಿರುಕುಗಳು ಸೃಷ್ಟಿಯಾಗುತ್ತವೆ. ಈ ಪರಿಸ್ಥಿತಿ ಉಂಟಾಗದಂತೆ ನೋಡಿಕೊಳ್ಳಲು ನಾವು ನಮ್ಮಂತಹ ವ್ಯಕ್ತಿಗಳನ್ನೇ ಆರಿಸಿ ಗುಂಪಾಗಿಸಿಕೊಳ್ಳುತ್ತೇವೆ. ವೈವಿಧ್ಯತೆ ಏಕರೂಪತೆಗೆ ತಿರುಗುತ್ತದೆ। **"ನಮ್ಮ ಆದ್ಯತೆಗಳು ನಮ್ಮ ನಡೆಗಳಲ್ಲಿ ವ್ಯಕ್ತವಾಗುತ್ತವೆ"**– ಮೊದಲೇ ಹೇಳಿದಂತೆ ಮಾಹಿತಿಯುಗದಲ್ಲಿ ಪ್ರಪಂಚ ನಮ್ಮನ್ನು ಹೇಗೆ ನೋಡುತ್ತದೆ ಎನ್ನುವುದಕ್ಕೆ ಆದ್ಯತೆ. ಹಾಗಾಗಿ ಆದ್ಯತೆಗಳು ಸಹಜವಾಗಿಯೇ ಅದಲುಬದಲಾಗುತ್ತವೆ. ನಮ್ಮ ನಡೆಗಳು ಬೇರೇನನ್ನೋ ಬಿಂಬಿಸುತ್ತವೆ.

**"ದೇವರು ಯಾವ ಧರ್ಮಕ್ಕೂ ಸೇರಿದವನಲ್ಲ"**: ಮಾಹಿತಿಯುಗದಲ್ಲಿ ದೇವರಿಗಿಂತಲೂ ಧರ್ಮ ದೊಡ್ಡದಾಗಿದೆ. ಅವರವರ ಧರ್ಮದ ಬಗೆಗಿನ ಪೂರ್ವಾಗ್ರಹಪೀಡಿತ ಅಭಿಪ್ರಾಯಗಳು ಮಾಹಿತಿಯುಗದ ಸಲಕರಣೆಗಳನ್ನು ಆವರಿಸಿಕೊಂಡುಬಿಟ್ಟಿವೆ. ಆ ದೃಷ್ಟಿಯಿಂದ ಗಾಂಧೀಜಿಯ ಮಾತುಗಳನ್ನು ಅವಲೋಕಿಸಿದರೆ, ಯಾವ ಧರ್ಮಕ್ಕೂ ಸೇರದ ಸರ್ವಾಂತರ್ಯಾಮಿ ದೇವರು ಅಂತರ್ಧಾನನಾಗಿದ್ದಾನೆ.

**"ನನ್ನ ಅಪ್ಪಣೆಯಿಲ್ಲದೆ ಯಾರೂ ನನ್ನನ್ನು (ಮಾನಸಿಕವಾಗಿ) ಹಿಂಸಿಸಲಾರರು"**: ನಮ್ಮ ಸಾಮಾಜಿಕ ಮಾಧ್ಯಮಗಳ ಬೆಳಕಿಂಡಿಗಳಿಂದ ಇಣುಕಿ ಬರುವ ಜನರು ನಮ್ಮನ್ನು ಹಿಂಸಿಸುತ್ತಾರೆ. ಅವರಿಗೆ ಅಪ್ಪಣೆ ಕೊಟ್ಟಿದ್ದು ಮಾತ್ರವಲ್ಲ, ಹಿಂಸಿಸಲು ಆಹ್ವಾನವಿತ್ತದ್ದೂ ನಾವೇ. ಮಾಹಿತಿಯುಗದಲ್ಲಿ ನಾವು ಇತರರಿಗೆ ನೀಡಿರುವ ಹಿಂಸಿಸುವ ಪರವಾನಿಗಿಯನ್ನು ಹಿಂಪಡೆಯಬೇಕಿದೆ.

**"ನೀವು ಒಬ್ಬರೇ ಉಳಿದಿರುವ ಮಟ್ಟಕ್ಕೆ ಅಲ್ಪಸಂಖ್ಯಾತರಾದರೂ, ಸತ್ಯ ಸತ್ಯವೇ!"**: ಮಾಹಿತಿಯುಗದಲ್ಲಿ brute-majority ಶಕ್ತಿಶಾಲಿ ಬಹುಸಂಖ್ಯಾತರು ಹೇಳಿದ್ದೇ ಸತ್ಯವೆಂದು ಬಿಂಬಿಸಲಾಗುತ್ತದೆ. ಸತ್ಯ ಅದಕ್ಕೆ ಭಿನ್ನವಾದುದೆಂದು ಗೊತ್ತಿದ್ದರೂ ಟ್ರೋಲ್‌ಗಳಿಗೆ ಹೆದರಿ ಅಲ್ಪಸಂಖ್ಯಾತರೂ ಒಬ್ಬೊಂಟಿಗರೂ ನುಂಗಿಕೊಂಡು ಸುಮ್ಮನಾಗುತ್ತಿದ್ದಾರೆ.

**"ತಾಳ್ಮೆ ಕಳೆದುಕೊಂಡವರು ಯುದ್ದವನ್ನು ಸೋಲುತ್ತಾರೆ"**: ಮಾಹಿತಿಯುಗವೆಂದರೆ instant gratification/ ತಕ್ಷಣದ ತೃಪ್ತಿಯ ಯುಗ! ಯುದ್ದದಲ್ಲೂ ಪ್ರೀತಿಯಲ್ಲೂ ತಕ್ಷಣದ ತೃಪ್ತಿಗೇ ಆದ್ಯತೆ, ಅದಕ್ಕೆ ಸೋಲುಗಳು ಹಲವಾದರೆ, ಗೆಲವುಗಳು ಕೆಲವು ಮಾತ್ರ!

ತನ್ನ ಆತ್ಮಸಾಕ್ಷಿಗೆ ವಿರುದ್ದವಾಗಿ ನಡೆದುಕೊಂಡ ತಕ್ಷಣ ನಾಯಕನಾದವನು ನಿಷ್ಪ್ರಯೋಜಕನಾಗುತ್ತಾನೆ. ಬಿಂಬಿಸಿದ ಚಿತ್ರಕ್ಕೂ ಸತ್ಯಕ್ಕೂ ವ್ಯತ್ಯಾಸ ಹೆಚ್ಚಾದಾಗ ನಾಯಕನ ವಿಶ್ವಾಸಾರ್ಹತೆ

ಕುಂದುತ್ತದೆ. ನಾಯಕ ಆತ್ಮಸಾಕ್ಷಿಗೆ ತಕ್ಕಂತೆ ಮಾತ್ರವಲ್ಲ ತಾನು ಪ್ರವರ್ತಿಸಿಕೊಂಡ ಚಿತ್ರಕ್ಕೆ ಪೂರಕವಾಗಿಯೂ ನಡೆದುಕೊಳ್ಳಬೇಕಾದ್ದು ಈಗಿನ ಅನಿವಾರ್ಯಗಳಲ್ಲೊಂದು.

**"ನೀವು ನನ್ನನ್ನು ಸಂಕೋಲೆಗಳಲ್ಲಿ ಬಂಧಿಸಬಹುದು, ನನ್ನನ್ನು ಹಿಂಸಿಸಬಹುದು, ನನ್ನ ದೇಹವನ್ನು ನಾಶ ಮಾಡಬಹುದು, ಆದರೆ ನನ್ನ ಮನಸ್ಸನ್ನು ಎಂದೆಂದಿಗೂ ಬಂಧನದಲ್ಲಿಡಲಾರಿರಿ"**: ಮಾಹಿತಿಯುಗದಲ್ಲಿ ನಡೆಯುವ ಹಲ್ಲೆಗಳೆಲ್ಲವೂ ಮಾನಸಿಕವಾದವು. ಇಲ್ಲಿನ ನಿಯಂತ್ರಕರ ಪ್ರಮುಖ ಯತ್ನಗಳೆಲ್ಲ ಗ್ರಾಹಕರ ಮನಸ್ಸನ್ನು ಹತೋಟಿಗೆ ತೆಗೆದುಕೊಳ್ಳುವ ಕಡೆಗೇ ಇವೆ.

**"ನಾವು ನಮ್ಮ ನಂಬಿಕೆಗಳನ್ನು ರೂಪಿಸಿಕೊಳ್ಳುವ ಕೆಲಸವನ್ನು ನಿಧಾನವಾಗಿ ಮಾಡಬೇಕು. ಆದರೆ ಅವು ರೂಪುಗೊಂಡ ಮೇಲೆ ಎಂಥ ಪರಿಸ್ಥಿಯಲ್ಲೂ ಅದಕ್ಕೆ ಬದ್ಧವಾಗಿರಬೇಕು"**: ಮೊದಲೇ ಹೇಳಿದಂತೆ, ಸಾಮಾಜಿಕ ಮಾಧ್ಯಮಗಳಲ್ಲಿ ತಕ್ಷಣ ಪ್ರತಿಕ್ರಿಯೆ ಕೊಟ್ಟವರೇ ಶ್ರೇಷ್ಠರು. ಆ ಪ್ರತಿಕ್ರಿಯೆಯೇ ನಮ್ಮ ನಂಬಿಕೆಯೂ ಪೂರ್ವಾಗ್ರಹವು ಆಗಿಬಿಡುವ ಭಯವಿದೆ. ನಂಬಿಕೆ ರೂಪಿಸಿಕೊಳ್ಳುವ ವಿಷಯದಲ್ಲಿ ವ್ಯವಧಾನ ತೀರಾ ಕಡಿಮೆಯಾಗಿರುವುದು ಸರ್ವೇವೇದ್ಯ.

**"ನನ್ನ ಜೀವನವೇ ನನ್ನ ಸಂದೇಶ"**; ದುರದೃಷ್ಟವಶಾತ್ ಇಂದು ನಮ್ಮ ಸಂದೇಶವೇ ನಮ್ಮ ಜೀವನವಾಗುತ್ತಿದೆ. ಸಾಮಾಜಿಕ ಮಾಧ್ಯಮಗಳ ದೆಸೆಯಿಂದ ಚೆನ್ನಾಗಿ ಬದುಕದಿದ್ದರೂ ಪರವಾಗಿಲ್ಲ. ಒಳ್ಳೆಯ ಬದುಕನ್ನು ಜಗತ್ತಿಗೆ ಬಿಂಬಿಸಿದರೆ ಸಾಕೆಂಬ ಢಂಬತನ ನಮ್ಮ ಜೀವನಗಳನ್ನು ಆವರಿಸಿಕೊಂಡಿದೆ. ಸೆಲ್ಫಿಗಾಗಿ ಬದುಕುವ ಜನರಿಗೆ, ತಮ್ಮ ಜೀವನದ ಅತ್ಯುತ್ತಮ ಅಂಶಗಳನ್ನು ಮಾತ್ರ ಸೃಷ್ಟಿಸಿ ಜಗತ್ತಿಗೆ ಬಿಂಬಿಸುವ ಒತ್ತಡವಿದೆ. ಇದು ಗಾಂಧೀಜಿಯವರ ಜೀವನಧ್ಯೇಯಕ್ಕೆ ತದ್ವಿರುದ್ಧವಾದ ನಡವಳಿಕೆ.

ಮಹಾತ್ಮಾಗಾಂಧಿ ನೀಡಿದ ಇಂಥ ಇನ್ನೂ ನೂರಾರು ಸಂದೇಶಗಳು ಇಂದು ಪರಿಪಾಲನೆಯಾಗುತ್ತಿವೆಯೋ ಇಲ್ಲವೋ ಎಂದು ಒರೆಗೆ ಹಚ್ಚಿ ನೋಡಬಹುದು. ಸತ್ಯಕ್ಕೂ ಸರಳತೆಗೂ ಆಗಿದ್ದಷ್ಟೇ ಸ್ವಾತಂತ್ರ್ಯ ಚಿಂತನೆಗೂ ಹೋರಾಟಕ್ಕೂ ಅನ್ವರ್ಥವಾಗಿದ್ದ ಮಹಾತ್ಮರಂತೆ ಬದುಕಲು ನಮ್ಮ ನಿಮ್ಮಂಥವರಿಗೆ ಸಾಧ್ಯವಾಗದಿರಬಹುದು. ಆ ದೃಷ್ಟಿಯಿಂದ ನೋಡಿದರೆ, ಈ ಲೇಖನದಲ್ಲಿನ ಆತ್ಮವಿಮರ್ಶೆ ಕಠೋರವೆನಿಸಬಹುದು. ಆದರೆ, ಆದರ್ಶಗಳನ್ನು ಅನುಸರಿಸುವ ಸಾಮರ್ಥ್ಯಕ್ಕೆ ಬುನಾದಿಯೆಂದರೆ ಕಠೋರವಾದ ಆತ್ಮವಿಮರ್ಶೆ. ಮುಂದಿನದ್ದು ಅವರವರ ಭಾವಕ್ಕೆ ಅವರವರ ಭಕ್ತಿಗೆ ಅವರವರ ಶಕ್ತಿಗೆ ಬಿಟ್ಟಿದ್ದು. ಏಕೆಂದರೆ, ನನ್ನ ಜೀವನವೇ ನನ್ನ ಸಂದೇಶ ಎಂದು ತಮ್ಮ ಇಡೀ ಜೀವನವನ್ನು ಜಗತ್ತಿನ ವಿಮರ್ಶೆಗೆ ತೆರೆದಿಟ್ಟ ಮಹಾತ್ಮ ನಮಗೆ ದಕ್ಕುವುದು ಮೊಗೆದಷ್ಟು ಮಾತ್ರ.

ಲೇಖಕರು:– ಎನ್.ರವಿಂಕರ್

ಆಧಾರ:ವಿಜಯ ಕರ್ನಾಟಕ, ದಿನಾಂಕ:03.10.2021

## 3. ಪದ್ಮ ಪ್ರಶಸ್ತಿಗಳಿಗೆ ಬಂತು ಬೆಲೆಯೀಗ

ಕೆಲವು ವರ್ಷಗಳಿಂದ ಪದ್ಮ ಪ್ರಶಸ್ತಿ ಪಟ್ಟಿಯಲ್ಲಿ ನೋಡುತ್ತಿದ್ದರೆ, ಆಹಾ, ಕೊನೆಗೂ ಇಂತಹ ಘನವಾದ ಪ್ರಶಸ್ತಿಯು ಯೋಗ್ಯರನ್ನು ತಲುಪಿದೆ ಎಂದು ಬಹಳ ಸಂತೋಷವಾಗುತ್ತಿದೆ. ಎಲ್ಲೋ ಮರಳುಗಾಡಿನಲ್ಲೋ, ಕಾಡುಮೇಡುಗಳಲ್ಲೋ, ಕುಗ್ರಾಮಗಳಲ್ಲೋ, ಯಾವುದೋ ಊರಿನ ಅಡ್ಡಾಡುತ್ತ, ಸಮಾಜಕ್ಕೋ, ನೊಂದವರಿಗೋ, ಪಶುಪಕ್ಷಿಗಳಿಗೋ, ಪರಿಸರಕ್ಕೋ, ಕಲೆಗೋ, ಸಾಹಿತ್ಯಕ್ಕೋ, ಶಿಕ್ಷಣಕ್ಕೋ, ಧರ್ಮಕ್ಕೋ, ಸದ್ದಿಲ್ಲದೆ ಸಲ್ಲಿಸುತ್ತಿರುವ ಈ ಎಲೆ ಮರೆಯ ಕಾಯಿಗಳನ್ನು ಪ್ರಶಸ್ತಿಯು ತಾನಾಗಿಯೇ ಹುಡುಕಿಕೊಂಡು ಹೋಗಿರುವುದು, ಪದ್ಮ ಪ್ರಶಸ್ತಿಯ ಉದ್ದೇಶವನ್ನು ನಿಜಕ್ಕೂ ಸಾರ್ಥಕಗೊಳಿಸಿದೆ. ಪುರಸ್ಕೃತರಾದವರ ಪೈಕಿ ಕೆಲವು ಮುಗ್ದರಿಗೆ ಪದ್ಮಶ್ರೀ ಪ್ರಶಸ್ತಿ ಎಂದರೇನೆಂದೇ ಗೊತ್ತಿರಲಿಲ್ಲವಂತೆ! ಪ್ರಶಸ್ತಿ ಸಮಾರಂಭಕ್ಕೂ ಸಾಮಾನ್ಯ ಉಡುಗೆ ತೊಡುಗೆಯಲ್ಲೂ ಕೆಲವರಂತೂ ಬರಿಗಾಲಲ್ಲೂ ಅದೇ ಮುಗ್ದ–

ನಿಗರ್ವ ಭಾವದಿಂದ ಹೋಗಿ ಬರುವಂತಹ ಈ ಉದಾತ್ತವರಿತೆಯ ಸರಳಜೀವನದ ಮಹಾತ್ಮರು ನಿಜಕ್ಕೂ ಧನ್ಯರು ವಸ್ತುಶಃ ಪ್ರಶಸ್ತಿಯು ಸಲ್ಲಬೇಕಾದದ್ದೂ ಬರಬೇಕೇ ಹೊರತು, ಜನರು ಪ್ರಶಸ್ತಿಯನ್ನರಸಿ ಹೋಗಬಾರದು.

ಜನರನ್ನು ಜಾತಿ ಮತಗಳಲ್ಲಿ ಗಣಿಸಿ, ಹಣ–ಭಕ್ಷೀಸು–ಹೊಗಳಿಕೆಗಳ ಮೂಲಕ ಲಾಬಿ ಮಾಡಿ, ಅಧಿಕಾರಕ್ಕೆ ಬರುವಂತಹ ಕೆಲವು ಸರ್ಕಾರಗಳು, ಪ್ರಶಸ್ತಿ ಪ್ರದಾನಕ್ಕೂ ಇದೇ ಜಾತಿ–ಮತ–ಹಣ–ಹೊಗಳಿಕೆ–ಫ್ಯಾಷನ್–ಲಾಬಿಗಳನ್ನೇ ಹಿಡಿದು ನಡೆದದ್ದೂ ಆಯಿತು. ತಮಗೆ ವೈಯಕ್ತಿಕವಾಗಿ ಇಷ್ಟವಾದ ಬಿಚ್ಚಪ್ಪ ಬಿಚ್ಚಮ್ಮಗಳಿಗೂ, ತಮ್ಮ ಪಾರ್ಟಿಗೆ ಅನುಕೂಲವನ್ನೊದಗಿಸುವ ನುಡಿಮಲ್ಲರಿಗೋ, ಪಾರ್ಟಿಗೆ ಹಣವೊದಗಿಸುವವರಿಗೋ, ದೇಶದ್ರೋಹಿಗಳಾದರೂ ತಮಗೆ ಅನುಕೂಲಿಸುವವರೆಂಬ ಕಾರಣಕ್ಕಾಗಿಯೋ, ಸಮ್ಮಾನವನ್ನೊದಗಿಸುವಂತಹ ಸುಸಂಸ್ಕೃತಿಯು ಬಲಿಯಲಾರಂಭಿಸಿದ್ದ ಕಾಲದಲ್ಲಿ ತಿಳಿನೀರಿನಿಂದ ಆ ರಂಗವನ್ನು ಸ್ವಚ್ಛಗೊಳಿಸಲೋ ಎಂಬಂತೆ ಲಾಬಿ ಮಾಡುವವರನ್ನು ಬದಿಗೊತ್ತಿ ಸರ್ಕಾರವು ಯೋಗ್ಯರಿಗೆ ಪ್ರಶಸ್ತಿಯನ್ನು ಸಲ್ಲಿಸುತ್ತಿರುವುದು ಅತ್ಯಂತ ಶ್ಲಾಘನೀಯ.

ಈ ಸಾಧಕರು ತಮಗೆ ಪ್ರಶಸ್ತಿ ಸಂದೀತೆನ್ನುವ ಕಲ್ಪನೆಯೇ ಇರಲಿಲ್ಲ. ತಮ್ಮ ಸೇವಾದೀಕ್ಷೆಯನ್ನು ಜನರು ಗುರುತಿಸುವರೆಂದಾಗಲಿ ಗುರುತಿಸಬೇಕೆಂದಾಗಲಿ ಆಲೋಚಿಸಿದವರೂ ಅಲ್ಲ. ನಿಜ ಹೇಳಬೇಕೆಂದರೆ, ಇಂತಹ ಮಹಾನುಭಾವರು ಇದ್ದಾರೆಂದಾಗಲಿ, ಇಂತಿಂತಹ ಸಾಧನೆಗಳನ್ನು ದಶಕಗಳಿಂದಲೂ ಮಾಡುತ್ತಿದ್ದಾರೆಂದಾಗಲಿ ಹೆಚ್ಚಿನವರಿಗೆ ತಿಳಿದೇ ಇರಲಿಲ್ಲ. ಹಗಲಿರಳೂ ಬಿಚ್ಚಮ್ಮ ಬಿಚ್ಚಪ್ಪಗಳ ಗ್ಲಾಮರ್, ಜಾತಿ ಕಲಹ, ರಾಜಕೀಯ ನಾಟಕ, ಮೋಸ ಮುಂತಾದವನ್ನೇ ಬಿತ್ತರಿಸುವುದನ್ನು ನೋಡುತ್ತ ನಾವು ಮೈಮರೆತೆವು. ಮನೆಮನೆಯಲ್ಲೂ ಸಮಾಜದಲ್ಲೂ ಕಪಟಿಗಳೇ ತುಂಬಿದ್ದಾರೆ. ನಿಸ್ವಾರ್ಥಿಗಳೂ, ನಿಗರ್ವಿಗಳೂ ಪ್ರಾಮಾಣಿಕ ಸಮಾಜಸೇವಕರೂ ಇಲ್ಲವೇ ಇಲ್ಲ ಎನ್ನುವ ಭ್ರಾಂತಿ ನಮ್ಮಲ್ಲಿ ಬಲಿತಿದೆ. ಆದರೆ, ಈ ಪುರಸ್ಕೃತ ಮಹಾತ್ಮರ ಜೀವನ–ಸಾಧನೆಗಳನ್ನು ನೋಡುತ್ತಿದ್ದರೆ, ಜಗತ್ತಿನಲ್ಲಿ ತುಂಬ ಮಂದಿ ಸಜ್ಜನರೂ ನಿಸ್ವಾರ್ಥಿಗಳೂ ಉದಾರಚರಿತರೂ ಇದ್ದೇ ಇದ್ದಾರೆ ಎನ್ನುವ ಭರವಸೆ, ಸಮಾಧಾನಗಳು ಹೆಚ್ಚಿವೆ. ವೇದಋಷಿಗಳ ಲೋಕಹಿತದ ದೀಕ್ಷೆಯೂ, ನೊಂದವರಿಗಾಗಿ ಮರುಗುವ ಕರುಣಾಭಾವವೂ ಇಂದಿಗೂ ನಮ್ಮ ಭಾರತೀಯರ ಧಮನಿಗಳಲ್ಲಿ ರಕ್ತವಾಗಿ ಹರಿಯುತ್ತಲೇ ಇದೆ ಎನ್ನುವ ಸ್ವಾಮಿ ವಿವೇಕಾನಂದರ ಮಾತಿನ ಸತ್ಯತೆ ಮನವರಿಕೆಯಾಗುತ್ತಿದೆ.

ಕೆಲವು ವರ್ಷಗಳಲ್ಲಿ ಪದ್ಮ ಪುರಸ್ಕೃತರಾದ ಮಹಾತ್ಮರ ಪೈಕಿ ಹಲವು ಕನ್ನಡಿಗರಿರುವುದು ಹೆಮ್ಮೆಯ ವಿಷಯ. ಲಕ್ಷಗಟ್ಟಲೆ ಬೀಜಗಳನ್ನು ಸಂರಕ್ಷಿಸಿ, ಸಾವಿರಾರು ವೃಕ್ಷಗಳನ್ನು ಬೆಳೆಸಿ, ಅಪರಿಮಿತ ಪರಿಸರ ವಿಜ್ಞಾನವನ್ನು ಬೆಳೆಸಿಕೊಂಡಿರುವ ವನದೇವಿ ಬೀಜಮಾತೆಯೆಂಬ ಬಿರುದಿಗೆ ಪಾತ್ರಳಾದ ಹೊನ್ನಾಳಿಯ ತುಳಸೀಗೌಡ, ಸಾವಿರಾರು ಸಾಲುಮರಗಳನ್ನು ನೆಟ್ಟ ವೃಕ್ಷಮಾತೆ ಸಾಲುಮರದ ತಿಮ್ಮಕ್ಕ ತನಗೆ ವಿದ್ಯೆ ಸಿಗದಿದ್ದರೂ, ಊರ ಮಕ್ಕಳಿಗೆ ಸಿಗಲೆಂಬ ನಿಸ್ವಾರ್ಥ ಬಯಕೆಯಿಂದ ಕಿತ್ತಳೆ ಮಾರಿ ಶಾಲೆಯನ್ನು ಕಟ್ಟಿ ನಡೆಸಿದ ಹಾಜಬ್ಬ ನಿಂದೆ, ಅಪಮಾನ, ಬಡತನ ಸಂಕಷ್ಟಗಳ ನಡುವೆ ಈಜಿ ಜಯಿಸಿ ಕಲೆಗೂ ಜೋಗತಿ ಸಂಪ್ರದಾಯಕ್ಕೂ ಸಮಾಜಕ್ಕೂ ತನ್ನ ತನುಮನಗಳಿಂದ ಸೇವೆ ಸಲ್ಲಿಸುತ್ತಿರುವ ಜೋಗತಿ ಮಂಜಮ್ಮ ನೂರಾರು ತೂಗುಸೇತುವೆಗಳನ್ನು ಉಚಿತವಾಗಿ ಕಟ್ಟಿಸಿಕೊಟ್ಟು ಸಾವಿರಾರು ಕುಗ್ರಾಮಗಳ ಜನರಿಗೆ ಉದಾರ ಸಹಾಯವನ್ನಿತ್ತ ಗಿರೀಶ್ ಭಾರದ್ವಾಜರು ಮುಂತಾದ ಉದಾರಚರಿತೆಯ ಕನ್ನಡಿಗರ ಈ ಕೆಲವು ವರ್ಷಗಳಲ್ಲಿ ಸಮ್ಮಾನಿತರಾಗಿದ್ದಾರೆ. ಅಂತೆಯೇ ಬಡವರಿಗಾಗಿ 2 ರೂಪಾಯಿಗಳಿಗೆ ಇಡ್ಲಿಗಳನ್ನು ಮಾಡಿಕೊಡುವ ಕೇರಳದ ಮಹಾತಾಯಿ, ಸಾವಿರಾರು ಬೀಜಗಳನ್ನು ಸಂಗ್ರಹಿಸಿ ವನ್ಯಪರಿಸರಕ್ಕೆ ಪೋಷಣೆಯಿತ್ತ ಆಂಧ್ರದ ಅಜ್ಜನು ಸಾವಿರಾರು ಹೆರಿಗೆಗಳನ್ನು ಉಚಿತವಾಗಿ ಮಾಡಿಸಿದ ಸೂಲಗಿತ್ತಿ ಮಹಾತಾಯಿ, ಸ್ವತಃ ನಿರ್ಗತಿಕಳಾದರೂ ನೂರಾರು ಅನಾಥ ಮಕ್ಕಳಿಗಾಗಿ ಆಶ್ರಯವನ್ನು ಕಲ್ಪಿಸಿದ

ಸರೋಜಿನೀ ಮಿಸ್ತ್ರೀ ಮುಂತಾದವರನ್ನು ಪ್ರಶಸ್ತಿಯು ತಲುಪಿ ಧನ್ಯವೆನಿಸಿದೆ. ಸಿಎನ್ಆರ್ ರಾವ್ ಮುಂತಾದ ವಿಜ್ಞಾನಿಗಳಿಗೂ ತಮ್ಮ ಅನುಪಮ ಗಾನ ಮಾಧುರ್ಯದಿಂದ ಜಗವನ್ನೇ ಗೆದ್ದ ಸಂಗೀತ ಸರಸ್ವತಿಯರಾದ ಎಂಎಸ್ ಸುಬ್ಬಲಕ್ಷ್ಮಿ ಹಾಗೂ ಲತಾ ಮಂಗೇಶ್ಕರರೂ ಮುಂತಾದ ಕಲಾಸರಸ್ವತಿಯರಿಗೆ ಭಾರತರತ್ನವು ಸಂದಿದೆ.

ಹಣ ಅನುದಾನ ಸಹಕಾರ ಪದವಿ ಮನ್ನಣೆಗಳು ಬಾರದೆ ನಿರ್ಲಕ್ಷಿಸಿದರೂ ತಮ್ಮ ಬಡಗುಡಿಸಲುಗಳಲ್ಲಿರುತ್ತ, ಅಲ್ಲಿಂದಲೇ ಭಾರತದ ಹೃದಯಭಾಷೆಯಾದ ಹೆಗ್ಗಳಿಕೆಯಾದ ಜಗತ್ತಿನ ಪ್ರಾಚೀನ ಭಾಷೆಯಾದ ಸಂಸ್ಕೃತವನ್ನು ಅಭ್ಯಾಸ ಮಾಡಿ ಉಳಿಸಿ ಬೆಳೆಸಿ ನಡೆಸಿರುವ ಎಲೆಮರೆಯ ಕಾಯಿಯಂತಹ ಪಂಡಿತರನ್ನೂ ಅನೇಕ ಪ್ರತಿಕೂಲಗಳ ನಡುವೆಯೂ ಧೃತಿಗೆಡದೆ, ಜಗತ್ತಿನ ಮೊಟ್ಟಮೊದಲ ಸಂಸ್ಕೃತ ವೃತ್ತಪತ್ರಿಕೆಯಾದ ಸುಧರ್ಮಾ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿರುವ ಜಯಲಕ್ಷ್ಮಿ–ಸಂಪತ್ ಕುಮಾರ್ ದಂಪತಿಗಳಂಥ ಕಾನನದ ಮಲ್ಲಿಗೆಗಳಿಗೂ ಈ ಪ್ರಶಸ್ತಿ ತಲುಪಿರುವುದು ನಿಜಕ್ಕೂ ಅರ್ಥಪೂರ್ಣ. ಇದಲ್ಲದೆ ಕಲೆ, ಕ್ರೀಡೆ, ಉದ್ಯಮ, ಜಾನಪದ, ಸಾಹಿತ್ಯ, ವೈದ್ಯಕೀಯ ಸಮಾಜ ಸೇವೆ, ಮುಂತಾದ ಹತ್ತು ಹಲವು ರಂಗಗಳ ಪ್ರಾಮಾಣಿಕ ಸಾಧಕರಿಗೆ ಸನ್ಮಾನವು ಸಂದಿದೆ. ಅದೆಷ್ಟೋ ಜನರಿಗೆ ಸನ್ಮಾನವು ಬಹಳ ಹಿಂದೆಯೇ ಸಲ್ಲಬೇಕಿತ್ತು. ಕೆಲವು ಕನಿಷ್ಠ ಪಕ್ಷ ವೀಲ್ ಚೇರ್‌ನಲ್ಲಾದರೂ ಬಂದು ಸ್ವೀಕರಿಸಲು ಸಾಧ್ಯವಾಯಿತಲ್ಲ ಎನ್ನುವುದೇ ಸಮಾಧಾನ.

ಸಜ್ಜನರನ್ನೂ ಅವರ ನಿಸ್ವಾರ್ಥ ಸೇವೆಯನ್ನೂ ಗುರುತಿಸಿ ಸನ್ಮಾನಿಸುವುದು ಭಾರತದ ನೆಲಕ್ಕೆ ಹೊಸದೇನೂ ಅಲ್ಲ. ಮರೆಯಲ್ಲಿ ನಿಂತು ಲೋಕಹಿತಕ್ಕಾಗಿ ದುಡಿದವರು ಹಲವರಾದರೇ, ಅಂತಹವರನ್ನು ಗುರುತಿಸಿ ಬೆಳಕಿಗೆ ತಂದು ಸನ್ಮಾನಿಸಿದಂತಹವರೂ ಹಲವರು.

ತನ್ನ ಮುಗ್ಧ ಭಕ್ತಿಯಿಂದ ಬೊಗಸೆ ಹಾಲಿನಿಂದ ಭಗವಾನ್ ಬಾಹುಬಲಿಯ ಅದ್ದೂರಿಯ ಮಹಾಮಸ್ತಾಭಿಷೇಕಕ್ಕೆ ಪರಿಪೂರ್ಣತೆಯನ್ನೊದಗಿಸಿದ ಗುಳಿಕಾಯಿ ಅಜ್ಜಿಗೆ ಬಾಹುಬಲಿಯ ಎದುರೇ ಪುಟ್ಟ ಗುಡಿಯನ್ನು ಕಟ್ಟಿ ಮೂರ್ತಿಯನ್ನಿಟ್ಟು ಮಹಾರಾಜನೇ ಸನ್ಮಾನಿಸಿದ್ದನ್ನು ನೆನೆಯಬಹುದು. ತಂಜಾವೂರಿನ ಅತ್ಯಂತ ವೈಭವದ ಬೃಹದೀಶ್ವರ ದೇವಾಲಯದ ನಿರ್ಮಾಣ ಮುಗಿದು ಪ್ರತಿಷ್ಠಾಪನೋತ್ಸವವು ಜರುಗುತ್ತಿದ್ದಾಗ, ಸಾಕ್ಷಾತ್ ಮಹಾರಾಜನೇ, ಅನಿರೀಕ್ಷಿತವಾಗಿ ಒಬ್ಬ ಬಡಮುದುಕಿಗೆ ನಮಸ್ಕರಿಸಿ ಭಾರಿ ಸನ್ಮಾನ ಮಾಡಿದನಂತೆ. ದಶಕಗಳ ಆ ಬೃಹದ್ದೇವಾಲಯ ನಿರ್ಮಾಣ ಕಾರ್ಯದಲ್ಲಿ ಆಕೆಯ ಯೋಗದಾನವೇ ಸರ್ವಶ್ರೇಷ್ಠವೆಂದು ಘೋಷಿಸಿದನಂತೆ. ಆಕೆ ಮಾಡಿದ್ದಾದರೂ ಏನು. ನಿರ್ಮಾಣ ಕಾರ್ಯಕ್ಕಾಗಿ ಸೇವಕರನ್ನೂ ಶಿಲ್ಪಿಗಳನ್ನೂ ಕಲ್ಲು ಮರಳು–ಉಪಕರಣಾದಿಗಳನ್ನು ಒಯ್ಯುತ್ತಿದ್ದ ಬಂಡಿಗಳ ಎತ್ತುಗಳ ಬಾಯಾರಿಕೆಯನ್ನು ನಿವಾರಿಸಲು ಆಕೆ ನಿತ್ಯವೂ ಅಂದರೆ 25 ವರ್ಷಗಳ ಕಾಲವೂ ತಪ್ಪದೇ ಕಲ್ಲು ತೊಟ್ಟಿಯನ್ನಿಟ್ಟು ಅದರಲ್ಲಿ ಸತತ ನೀರು ತುಂಬುತ್ತಿದ್ದಳಂತೆ.

ಸೇತುವೆ ನಿರ್ಮಾಣದಲ್ಲಿ ತಾನು ಕೈಜೋಡಿಸಬೇಕೆಂದು ಮರಳ ಕಣಗಳನ್ನು ಹೊತ್ತು ತಂದ ಪುಟ್ಟ ಅಳಿಲನ್ನೂ ಮೆಚ್ಚಿ ಮೈದಡವಿ, ಧಾನ್ಯವನ್ನಿತ್ತ ಶ್ರೀರಾಮನನ್ನು ಸ್ಮರಿಸಬಹುದು. ಬಡವಿಯಾದರೂ ಅಂಗವಿಕಲಳಾದರೂ ನಿತ್ಯವೂ ಪುರಜನರಿಗೆ ಸುಗಂಧ ದ್ರವ್ಯಗಳನ್ನು ಹಂಚಿದ ತ್ರಿವಕ್ರಾ ಎಂಬುವಳಿಗೆ ಕೃಷ್ಣನು ವಿಶೇಷಾನುಗ್ರಹದಿಂದ ವೈಕಲ್ಯವನ್ನು ಕಳೆದು ಸನ್ಮಾನ ಪುರಸ್ಕಾರಗಳನ್ನಿತ್ತ ಪ್ರಸಂಗ ಭಾಗವತದಲ್ಲಿದೆ. ಜೀವಭೀತಿಯನ್ನು ಪಕ್ಕಕ್ಕಿಟ್ಟು ಕಡಲನ್ನು ದಾಟಿ ಲಂಕೆಯಲ್ಲಿ ಸೀತೆಯನ್ನು ಹುಡುಕಿ ಬಂದ ಆಂಜನೇಯನಿಗೆ ರಾಮನು ತನ್ನ ಆಲಿಂಗನವನ್ನೇ ಕೊಟ್ಟು ಸನ್ಮಾನಿಸುತ್ತಾನೆ.

ದೇಶಾದ್ಯಂತ ಉಚಿತ ಧರ್ಮಛತ್ರಗಳನ್ನು ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನವಸತಿಗಳನ್ನು ಕಲ್ಪಿಸಿಕೊಟ್ಟ ಮಹೋದಾರಗುಣದ ಗುಬ್ಬಿ ತೋಂಟದಪ್ಪನವರಿಗೆ ಮೈಸೂರು ದೊರೆಗಳು, ಧರ್ಮಪ್ರವರ್ತ ಎಂಬ ಬಿರುದನ್ನಿತ್ತು ಸನ್ಮಾನಿಸಿದ್ದರು. ಹರಿದ್ವಾರದಲ್ಲಿ ಸಾಧು ಸನ್ಯಾಸಿಗಳಿಗೂ ಯಾತ್ರಿಕರಿಗೂ ಸುಮಾರು

ನೂರು ವರ್ಷಗಳಿಂದೂ ಉಚಿತ ವೈದ್ಯಕೀಯ ಚಿಕಿತ್ಸೆ–ಔಷಧಗಳನ್ನು ನೀಡುತ್ತ ಬಂದಿರುವ ರಾಮಕೃಷ್ಣಮಠದ ಸಾಧುಗಳಿಗೆ ಸನ್ಮಾನದ ಸಂಕೇತವಾಗಿ, ಆ ಊರಿನ ಎಲ್ಲ ಸಾಧುಸಂತರು ಪುರಜನರು ವಂತಿಕೆಯೆತ್ತಿ, ಜೀವಂತಗಾತ್ರದ ವಿವೇಕಾನಂದರ ವಿಗ್ರಹವನ್ನು ನಿರ್ಮಿಸಿ ಸನ್ಮಾನವನ್ನು ಸಲ್ಲಿಸಿದ್ದನ್ನು ನೋಡಬಹುದು.

ಸ್ವಾಮಿ ವಿವೇಕಾನಂದರು ವಿಶ್ವವಿಖ್ಯಾತರಾಗಿ ದೇಶಕ್ಕೆ ಹಿಂದಿರುಗಿದಾಗ ಒಂದು ಕಡೆ ಜನಸಂದಣಿಯ ಮಧ್ಯೆ ನಿಂತಿದ್ದ ಬಡವನೋರ್ವನನ್ನು ಗುರುತಿಸಿ, ಹಿಂದೆ ನಾನು ಹಸಿವೆಯಿಂದ ಸಾಯುತ್ತಿದ್ದಾಗ ಸೌತೇಕಾಯಿ ತಿನ್ನಿಸಿದ ವನೀತ ಎಂದು ಪರಿಚಯಿಸಿ ಅವನಿಗೆ ಬಾರಿ ಸನ್ಮಾನವನ್ನೇ ಮಾಡಿದರು. ದಾಸೋತ್ತಮರಾದ ಕನಕದಾಸರು ಉಡುಪಿಗೆ ಭೇಟಿಯಿತ್ತಾಗ ರಾತ್ರಿ ತಂಗಿದ ಕಲ್ಲುಮಂಟಪವನ್ನು ಕನಕಮಂಟಪವೆಂದು ಅವರು ಕೃಷ್ಣದರ್ಶನಗೈದ ಕಿಟಕಿಯನ್ನು ಕನಕನಕಿಂಡಿ ಎಂದೇ ಬಿರುದಿತ್ತು ಉಡುಪಿಯ ಕೃಷ್ಣಮಠವು ಅಮರಗೊಳಿಸಿದ್ದಾರೆ.

ಹೀಗೆ ಹಳ್ಳಿ–ನಗರ–ರಾಜ್ಯ–ದೇಶಮಟ್ಟಗಳಲ್ಲಿ ಶೌರ್ಯ, ಔದಾರ್ಯ, ಪ್ರತಿಭೆ, ತ್ಯಾಗ, ಪಾಂಡಿತ್ಯ ಮುಂತಾದುವನ್ನು ಮೆರೆದು ನಾಡಿಗೆ ಕೀರ್ತಿ ತಂದವರಿಗೆ ಸನ್ಮಾನ ಮಾಡುವ ಪ್ರಶಸ್ತಿ ಬಿರುದುಗಳನ್ನು ಸಲ್ಲಿಸುವ ಪದ್ಧತಿ ಭಾರತದಲ್ಲಿ ಅನಾದಿಯಿಂದ ನಡೆದುಬಂದಿದೆ.

ಲಕ್ಷಗಟ್ಟಲೆ ಶಾಸನಗಳು, ಗ್ರಂಥಗಳು, ದಾಖಲೆಗಳು, ದೇಗುಲಗಳು, ಕಟ್ಟಡಗಳು, ಬಹುಮಟ್ಟಿಗೆ ಯಾರೋ ಉದಾರಚರಿತರ ಸನ್ಮಾನಕ್ಕೆಂದು ಸ್ಮರಣೆಗೆಂದು ಔದಾರ್ಯವನ್ನು ಮೆಚ್ಚಲೆಂದೇ ನಿರ್ಮಾಣವಾದಂತಹವು. ಬೀದಿ–ಕೇರಿ–ತೋಟಗಳಿಗೆಲ್ಲ ಇಟ್ಟಿರುವ ಮಹಾತ್ಮರ ಸಾಧಕರ ಹೆಸರನ್ನು ಗಮನಿಸಿದರೇ ಸಾಕು. ನಾವು ನಮ್ಮ ನಾಡಿನ ಹಿರಿಯ ಸಾಧಕರನ್ನು ಎಷ್ಟು ಅಭಿಮಾನದಿಂದ ಆದರಿಸಿದ್ದೇವೆನ್ನುವುದು ಸ್ವತಃ ಸಿದ್ಧವಾಗುತ್ತದೆ.

ವಿಷ್ಣು ಸಹಸ್ರನಾಮದಲ್ಲಿ ದೇವರಿಗೂ ಕೃತಜ್ಞಃ ಕೃತಿರಾತ್ಮವಾನ್ ಎಂದೇ ಬಿರುದು. ಉಪಕಾರವನ್ನು ಮರೆಯದೆ ಮೆಚ್ಚುವವನು ಎಂದು. ನಾಡು ನುಡಿ ಗುಡಿ ಪರಿಸರ ಸಮಾಜಗಳಿಗೆ ಯಾವುದೇ ಸಣ್ಣದಾಗಲಿ ದೊಡ್ಡದಾಗಲಿ, ಯಾವುದೇ ಬಗೆಯ ಸೇವೆಯನ್ನು ಸಲ್ಲಿಸಿದವರನ್ನು ಮನಸಾ ಮೆಚ್ಚೋಣ, ವಚನಾ ಹೊಗಳೋಣ ಶಿರಸಾ ವಂದಿಸೋಣ.

ಆಧಾರ:ವಿಜಯ ಕರ್ನಾಟಕ, ದಿನಾಂಕ:11.10.2021

## 4. **ಸಾಧನೆಯಿಂದಲೇ ಸಂಕಷ್ಟಕ್ಕೆ ಸ್ಪಂದಿಸಿದ ಟೀಮ್ ಇಂಡಿಯಾ**

ಭಾರತವು ಲಸಿಕೆ ಹಾಕಲು ಆರಂಭಿಸಿದ ಸುಮಾರು 9 ತಿಂಗಳಲ್ಲಿ 21 ಆಕ್ಟೋಬರ್ 2021ರಂದು 100 ಕೋಟಿ ಡೋಸ್‌ಗಳ ಲಸಿಕೆ ನೀಡಿಕೆಯನ್ನು ಪೂರ್ಣಗೊಳಿಸಿದೆ. ಕೋವಿಡ್–19 ನಿಗ್ರಹದಲ್ಲಿ ವಿಶೇಷವಾಗಿ 2020ರ ಆರಂಭದಲ್ಲಿದ್ದ ಪರಿಸ್ಥಿತಿಯನ್ನು ನಾವು ನೆನಪಿಸಿಕೊಂಡರೆ ಇದೊಂದು ಅದ್ಭುತವಾದ ಪ್ರಯಾಣವಾಗಿದೆ. ಮನುಕುಲವು 100 ವರ್ಷಗಳ ನಂತರ ಇಂತಹ ಸಾಂಕ್ರಾಮಿಕ ರೋಗವನ್ನು ಎದುರಿಸುತ್ತಿದೆ ಮತ್ತು ಈ ವೈರಾಣುವಿನ ಬಗ್ಗೆ ಯಾರಿಗೂ ಹೆಚ್ಚು ತಿಳಿದಿರಲಿಲ್ಲ. ಅಪರಿಚಿತ ಮತ್ತು ಅದೃಶ್ಯ ಶತ್ರು ವೇಗವಾಗಿ ಪರಿವರ್ತಿತವಾಗುತ್ತಿದ್ದಂತೆ ಪರಿಸ್ಥಿತಿ ಎಷ್ಟು ಅನಿರೀಕ್ಷಿತವಾಗಿತ್ತು ಎಂಬುದನ್ನು ನಾವು ಮರೆತಿಲ್ಲ.

ಆತಂಕದಿಂದ ಭರವಸೆಯವರೆಗಿನ ಪ್ರಯಾಣವು ಸಂಭವಿಸಿದೆ ಮತ್ತು ನಮ್ಮ ರಾಷ್ಟ್ರವು ಶಕ್ತಿಯುತವಾಗಿ ಹೊರಹೊಮ್ಮಿದೆ. ವಿಶ್ವದ ಅತಿದೊಡ್ಡ ಲಸಿಕಾ ಅಭಿಯಾನಕ್ಕೆ ಧನ್ಯವಾದಗಳು.

ಇದು ಸಮಾಜದ ಬಹು ವರ್ಗಗಳನ್ನು ಒಳಗೊಂಡ ನಿಜವಾದ ಭಗೀರಥ ಪ್ರಯತ್ನವಾಗಿದೆ ಇದರ ಬೃಹತ್ ಪ್ರಮಾಣವನ್ನು ತಿಳಿಯಬೇಕಾದರೆ, ಪ್ರತಿ ಲಸಿಕೆ ನೀಡಲು ಅರೋಗ್ಯ ಕಾರ್ಯಕರ್ತರಿಗೆ ಕೇವಲ 2 ನಿಮಿಷಗಳು ಬೇಕಾಗುತ್ತದೆ ಎಂದು ಊಹಿಸಿಕೊಳ್ಳಿ. ಈ ದರದಲ್ಲಿ ಈ ಹೆಗ್ಗುರುತನ್ನು ತಲುಪಲು ಸುಮಾರು 41 ಲಕ್ಷ ಮಾನವ ದಿನಗಳು ಅಥವಾ ಸರಿಸುಮಾರು 11 ಸಾವಿರ ಮಾನವ ವರ್ಷಗಳ ಶ್ರಮ ಬೇಕಾಗುತ್ತದೆ.

ಯಾವುದೇ ಪ್ರಯತ್ನದಲ್ಲಿ ವೇಗ ಮತ್ತು ಪ್ರಮಾಣವನ್ನು ಸಾಧಿಸಲು ಮತ್ತು ಅದನ್ನು ಉಳಿಸಿಕೊಳ್ಳಲು ಎಲ್ಲಾ ಪಾಲುದಾರರ ವಿಶ್ವಾಸವು ನಿರ್ಣಯಕವಾಗಿದೆ. ಈ ಅಭಿಯಾನದ ಯಶಸ್ವಿಗೆ ಒಂದು ಪ್ರಮುಖ ಕಾರಣವೆಂದರೆ, ಅಪನಂಬಿಕೆ ಮತ್ತು ಭಯವನ್ನು ಸೃಷ್ಟಿಸುವ ಹಲವಾರು ಪ್ರಯತ್ನಗಳ ನಡುವೆಯೂ ಜನರು ಲಸಿಕೆಯ ಬಗ್ಗೆ ತೋರಿಸಿದ ವಿಶ್ವಾಸ ಮತ್ತು ಲಸಿಕೆ ನೀಡಿಕೆಯಲ್ಲಿ ಅನುಸರಿಸಲಾದ ಪ್ರಕ್ರಿಯೆ.

ನಮ್ಮಲ್ಲಿ ಕೆಲವರು ದೈನಂದಿನ ಅಗತ್ಯಗಳಿಗೂ ಸಹ ವಿದೇಶಿ ಬ್ರ್ಯಾಂಡ್‌ಗಳನ್ನು ಮಾತ್ರ ನಂಬುತ್ತಾರೆ. ಆದಾಗ್ಯೂ, ಕೋವಿಡ್-19 ಲಸಿಕೆಯಂತಹ ನಿರ್ಣಯಕವಾದ ವಿಷಯ ಬಂದಾಗ, ಭಾರತದ ಜನರು ಸರ್ವಾನುಮತದಿಂದ ಮೇಡ್ ಇನ್ ಇಂಡಿಯಾ ಲಸಿಕೆಗಳ ಮೇಲೆ ವಿಶ್ವಾಸವಿಟ್ಟರು. ಇದೊಂದು ಮಹತ್ವದ ಮಾದರಿ ಬದಲಾವಣೆಯಾಗಿದೆ.

ಜನರ ಭಾಗವಹಿಸುವಿಕೆಯ ಉತ್ಸಾಹದಲ್ಲಿ ನಾಗರಿಕರು ಮತ್ತು ಸರ್ಕಾರವು ಒಂದು ಸಾಮಾನ್ಯ ಗುರಿಯೊಂದಿಗೆ ಒಗ್ಗೂಡಿದರೆ ಭಾರತವು ಏನನ್ನಾದರೂ ಸಾಧಿಸಬಹುದು ಎಂಬುದಕ್ಕೆ ಭಾರತದ ಲಸಿಕೆ ಅಭಿಯಾನ ಒಂದು ಉದಾಹರಣೆಯಾಗಿದೆ. ಭಾರತವು ತನ್ನ ಲಸಿಕೆ ಕಾರ್ಯಕ್ರಮವನ್ನು ಪ್ರಾರಂಭಿಸಿದಾಗ, ಅನೇಕರು 130 ಕೋಟಿ ಭಾರತೀಯರ ಸಾಮರ್ಥ್ಯವನ್ನು ಅನುಮಾನಿಸಿದರು. ಭಾರತವು ಲಸಿಕೆ ನೀಡಲು 3-4 ವರ್ಷಗಳನ್ನು ತೆಗೆದುಕೊಳ್ಳುತ್ತದೆ ಎಂದು ಕೆಲವರು ಹೇಳಿದರು. ಇನ್ನೂ ಕೆಲವರು ಲಸಿಕೆ ಹಾಕಿಸಿಕೊಳ್ಳಲು ಜನರು ಮುಂದೆ ಬರುವುದಿಲ್ಲ ಎಂದರು. ಲಸಿಕೆ ನೀಡಿಕೆ ಪ್ರಕ್ರಿಯೆಯಲ್ಲಿ ಸಂಪೂರ್ಣ ತಪ್ಪು ನಿರ್ವಹಣೆ ಮತ್ತು ಅವ್ಯವಸ್ಥೆ ಇರುತ್ತದೆ ಎಂದು ಹೇಳಿದವರು ಇದ್ದರು. ಕೆಲವರು ಭಾರತವು ಪೂರೈಕೆ ಸರಪಳಿಗಳನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ ಎಂದರು. ಆದರೆ ಜನತಾ ಕರ್ಫ್ಯೂ ಮತ್ತು ನಂತರದ ಲಾಕ್‌ಡೌನ್‌ಗಳಂತೆಯೇ ಭಾರತದ ಜನರು ತಮ್ಮನ್ನು ವಿಶ್ವಾಸಾರ್ಹ ಪಾಲುದಾರರನ್ನಾಗಿಸಿದರೆ ಫಲಿತಾಂಶಗಳು ಎಷ್ಟು ಅದ್ಭುತವಾಗಿರುತ್ತವೆ ಎಂಬುದನ್ನು ತೋರಿಸಿಕೊಟ್ಟರು.

ಪ್ರತಿಯೊಬ್ಬರಿಗೂ ಮಾಲೀಕತ್ವದ ಮನೋಭಾವ ಬಂದರೆ ಯಾವುದೂ ಅಸಾಧ್ಯವಲ್ಲ ನಮ್ಮ ಆರೋಗ್ಯ ಕಾರ್ಯಕರ್ತರು ಬೆಟ್ಟಗಳನ್ನು ಹತ್ತಿ, ನದಿಗಳನ್ನು ದಾಟಿ ಕಷ್ಟಕರವಾದ ಭೌಗೋಳಿಕ ಪ್ರದೇಶಗಳನ್ನು ತಲುಪಿ ಜನರಿಗೆ ಲಸಿಕೆ ಹಾಕಿದರು. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಹೋಲಿಸಿದರೆ ಲಸಿಕೆಯ ಬಗ್ಗೆ ಭಾರತದಲ್ಲಿರುವ ಕನಿಷ್ಠ ಹಿಂಜರಿಕೆಯ ಶ್ರೇಯ ನಮ್ಮ ಯುವಕರು, ಸಾಮಾಜಿಕ ಕಾರ್ಯಕರ್ತರು, ಆರೋಗ್ಯ ಕಾರ್ಯಕರ್ತರು,  ಆರೋಗ್ಯ ಕಾರ್ಯಕರ್ತರು, ಸಾಮಾಜಿಕ ಮತ್ತು ಧಾರ್ಮಿಕ ಮುಖಂಡರಿಗೆ ಸಲ್ಲಬೇಕು.

ಲಸಿಕೆ ನೀಡಿಕೆಯಲ್ಲಿ ತಮಗೆ ಆದ್ಯತೆ ನೀಡಬೇಕು ಎಂದು ವಿವಿಧ ಹಿತಾಸಕ್ತಿ ಗುಂಪುಗಳಿಂದ ಸಾಕಷ್ಟು ಒತ್ತಡವಿತ್ತು. ಆದರೆ ನಮ್ಮ ಜೊತೆ ಯೋಜನೆಗಳಂತೆ ಲಸಿಕೆ ಹಾಕುವಿಕೆಯಲ್ಲೂ ಯಾವುದೇ ವಿಐಪಿ ಸಂಸ್ಕೃತಿಯಿಲ್ಲ ಎಂದು ಸರ್ಕಾರ ಖಚಿತಪಡಿಸಿತ್ತು.

2020ರ ಆರಂಭದಲ್ಲಿ ಕೋವಿಡ್-19 ಪ್ರಪಂಚದಾದ್ಯಂತ ರುದ್ರನರ್ತನ ಮಾಡುತ್ತಿದ್ದಾಗ ಈ ಸಾಂಕ್ರಾಮಿಕ ರೋಗವನ್ನು ಅಂತಿಮವಾಗಿ ಲಸಿಕೆಗಳ ಸಹಾಯದಿಂದಲೇ ಜಯಿಸಬೇಕಾಗುತ್ತದೆ ಎಂಬುದು

ನಮಗೆ ಸ್ಪಷ್ಟವಾಗಿತ್ತು. ನಾವು ಬೇಗನೆ ಸಿದ್ಧತೆ ಆರಂಭಿಸಿದೆವು. ನಾವು ತಜ್ಞರ ಗುಂಪುಗಳನ್ನು ರಚಿಸಿದೆವು ಮತ್ತು ಏಪ್ರಿಲ್ 2020ರಿಂದಲೇ ಮಾರ್ಗಸೂಚಿಯನ್ನು ತಯಾರಿಸಲು ಪ್ರಾರಂಭಿಸಿದೆವು.

ಇದುವರೆಗೆ, ಬೆರಳೆಣಿಕೆಯ ದೇಶಗಳು ಮಾತ್ರ ತಮ್ಮದೇ ಸ್ವಂತ ಲಸಿಕೆಗಳನ್ನು ಅಭಿವೃದ್ಧಿಪಡಿಸಿವೆ. ಭಾರತವು 100 ಕೋಟಿ ಡೋಸ್ ದಾಟಿದ್ದರೂ 180ಕ್ಕೂ ಹೆಚ್ಚು ದೇಶಗಳು ಒಂದು ಸೀಮಿತ ಲಸಿಕೆ ತಯಾರಿಕಾ ಗುಂಪಿನ ಮೇಲೆ ಅವಲಂಬಿತವಾಗಿದೆ ಮತ್ತು ಡಜನ್ ಗಟ್ಟಲೆ ರಾಷ್ಟ್ರಗಳು ಇನ್ನೂ ಲಸಿಕೆಗಳ ಪೂರೈಕೆಗಾಗಿ ಕಾಯುತ್ತಿವೆ. ಭಾರತಕ್ಕೆ ಸ್ವಂತ ಲಸಿಕೆ ಇಲ್ಲದಿದ್ದರೆ ಪರಿಸ್ಥಿತಿ ಏನಾಗುತ್ತಿತ್ತು ಎಂಬುದನ್ನು ಊಹಿಸಿಕೊಳ್ಳಿ. ಇಷ್ಟು ದೊಡ್ಡ ಜನಸಂಖ್ಯೆಗೆ ಭಾರತವು ಸಾಕಷ್ಟು ಲಸಿಕೆಗಳನ್ನು ಹೇಗೆ ಪಡೆಯುತ್ತಿತ್ತು ಮತ್ತು ಅದಕ್ಕೆ ಎಷ್ಟು ವರ್ಷಗಳು ಬೇಕಾಗುತ್ತಿದ್ದವು ಭಾರತೀಯ ವಿಜ್ಞಾನಿಗಳು ಮತ್ತು ಉದ್ಯಮಿಗಳಿಗೆ ಇದರ ಶ್ರೇಯ ಸಲ್ಲಬೇಕು. ಅವರ ಪ್ರತಿಭೆ ಮತ್ತು ಕಠಿಣ ಪರಿಶ್ರಮದಿಂದಾಗಿ ಲಸಿಕೆಗಳ ವಿಚಾರದಲ್ಲಿ ಭಾರತವು ನಿಜವಾಗಿಯೂ ಆತ್ಮನಿರ್ಭರವಾಗಿದೆ. ನಮ್ಮ ಲಸಿಕೆ ತಯಾರಕರು, ಎಷ್ಟು ಬೃಹತ್ ಜನಸಂಖ್ಯೆಯ ಬೇಡಿಕೆಗಳನ್ನು ಪೂರೈಸಲು ಸಮರ್ಥರಾಗುವ ಮೂಲಕ ನಾವು ಯಾರಿಗೂ ಕಡಿಮೆ ಇಲ್ಲ ಎಂದು ತೋರಿಸಿದ್ದಾರೆ.

ಸರ್ಕಾರಗಳೆಂದರೆ ಮುಂದುವರಿಕೆಗೆ ಅಡ್ಡಿಯಾಗುವ ರಸ್ತೆ ತಡೆಗಳು ಎಂದು ಕರೆಯಲಾಗುವ ರಾಷ್ಟ್ರದಲ್ಲಿ ನಮ್ಮ ಸರ್ಕಾರವು ವೇಗವರ್ಧಕ ಮತ್ತು ಪ್ರಗತಿಯನ್ನು ಸಕ್ರಿಯಗೊಳಿಸುವ ಸಾಧನವಾಗಿದೆ. ಸರ್ಕಾರವು ಮೊದಲ ದಿನದಿಂದಲೇ ಲಸಿಕೆ ತಯಾರಿಕರೊಂದಿಗೆ ಸಹಭಾಗಿತ್ವ ಹೊಂದಿತ್ತು. ಅವರಿಗೆ ಸಾಂಸ್ಥಿಕ ನೆರವು ವೈಜ್ಞಾನಿಕ ಸಂಶೋಧನೆ, ಧನ ಸಹಾಯ ಹಾಗೂ ನಿಯಂತ್ರಣ ಪ್ರಕ್ರಿಯೆಗಳ ವೇಗವರ್ಧನೆಯ ರೂಪದಲ್ಲಿ ಬೆಂಬಲವನ್ನು ನೀಡಿತು. ನಮ್ಮ "ಇಡೀ ಸರ್ಕಾರ" ವಿಧಾನದ ಪರಿಣಾಮವಾಗಿ ಸರ್ಕಾರದ ಎಲ್ಲ ಸಚಿವಾಲಯಗಳು ಲಸಿಕೆ ತಯಾರಕರಿಗೆ ನೆರವಾಗಲು ಮತ್ತು ಎಲ್ಲ ಅಡೆತಡೆಗಳನ್ನು ನಿವಾರಿಸಲು ಒಗ್ಗೂಡಿದವು.

ಭಾರತದಂತಹ ಬೃಹತ್ ದೇಶದಲ್ಲಿ ಕೇವಲ ಉತ್ಪಾದನೆ ಮಾಡಿದರೆ ಸಾಕಾಗುವುದಿಲ್ಲ, ಕಟ್ಟಕಡೆಯ ವ್ಯಕ್ತಿಗೆ ವಿತರಣೆ ಮತ್ತು ತಡೆರಹಿತ ಲಾಜಿಸ್ಟಿಕ್ಸ್ ಮೇಲೆ ಗಮನಹರಿಸಬೇಕು. ಸವಾಲುಗಳನ್ನು ಅರ್ಥಮಾಡಿಕೊಳ್ಳಲು ಲಸಿಕೆಯ ಒಂದು ಬಾಟಲಿಯ ಪ್ರಯಾಣವನ್ನು ಕಲ್ಪಿಸಿಕೊಳ್ಳಿ ಪುಣೆ ಅಥವಾ ಹೈದರಾಬಾದಿನ ಒಂದು ಘಟಕದಿಂದ ಯಾವುದೇ ರಾಜ್ಯಗಳಲ್ಲಿನ ಹಬ್‌ಗೆ ಬಾಟಲಿಯನ್ನು ಕಳುಹಿಸಲಾಗುತ್ತದೆ. ಅಲ್ಲಿಂದ ಅದನ್ನು ಜಿಲ್ಲಾ ಕೇಂದ್ರಕ್ಕೆ ಸಾಗಿಸಲಾಗುತ್ತದೆ. ಅಲ್ಲಿಂದ ಅದು ಲಸಿಕೆ ಕೇಂದ್ರವನ್ನು ತಲುಪುತ್ತದೆ. ಇದರಲ್ಲಿ ವಿಮಾನಗಳು ಮತ್ತು ರೈಲುಗಳ ಅನೇಕ ಪ್ರಯಾಣಗಳು ಸೇರಿರುತ್ತವೆ. ಈ ಸಂಪೂರ್ಣ ಪ್ರಯಾಣದ ಸಮಯದಲ್ಲಿ ತಾಪಮಾನವನ್ನು ಕೇಂದ್ರಿಯ ಮೇಲ್ವಿಚಾರಣೆ ಮೂಲಕ ಒಂದು ನಿರ್ದಿಷ್ಟ ವ್ಯಾಪ್ತಿಯಲ್ಲಿ ನಿರ್ವಹಿಸಬೇಕು. ಇದಕ್ಕಾಗಿ 1 ಲಕ್ಷಕ್ಕೂ ಹೆಚ್ಚು ಶೀತ–ಸರಪಳಿ ಸಾಧನಗಳನ್ನು ಬಳಸಲಾಗಿದೆ. ಲಸಿಕೆಗಳ ವಿತರಣಾ ವೇಳಾಪಟ್ಟಿಯ ಬಗ್ಗೆ ರಾಜ್ಯಗಳಿಗೆ ಮುಂಚಿತವಾಗಿ ಸೂಚನೆ ನೀಡಲಾಯಿತು. ಇದರಿಂದ ಅವರು ತಮ್ಮ ಅಭಿಯಾನಗಳನ್ನು ಉತ್ತಮವಾಗಿ ಯೋಜಿಸಿದವು ಮತ್ತು ಪೂರ್ವ ನಿರ್ಧಾರಿತ ದಿನಗಳಲ್ಲಿ ಲಸಿಕೆಗಳು ರಾಜ್ಯಗಳಿಗೆ ತಲುಪಿದವು. ಸ್ವತಂತ್ರ್ಯ ಭಾರತದ ಇತಿಹಾಸದಲ್ಲಿಯೇ ಇದೊಂದು ಅಭೂತಪೂರ್ವ ಪ್ರಯತ್ನವಾಗಿದೆ.

ಈ ಎಲ್ಲಾ ಪ್ರಯತ್ನಗಳಿಗೆ ಕೋವಿಡ್ ತಂತ್ರಜ್ಞಾನ ಪ್ಲಾಟ್ ಫಾರ್ಮ್ ಒಂದು ದೃಢವಾದ ಬೆಂಬಲ ನೀಡಿತು. ಲಸಿಕೆ ಅಭಿಯಾನವು ನ್ಯಾಯಯತ ಮತ್ತು ಪಾರದರ್ಶಕವಾಗಿರುವುದನ್ನು ಅದು ಖಾತ್ರಿಪಡಿಸಿತು. ಇದು ಯಾವುದೇ ಪಕ್ಷಪಾತ ಅಥವಾ ಸರದಿ ತಪ್ಪಿಸಲು ಅವಕಾಶವಿಲ್ಲದಿರುವುದನ್ನು ಖಚಿತಪಡಿಸಿತು. ಒಬ್ಬ ಬಡ ಕಾರ್ಮಿಕನು ತನ್ನ ಹಳ್ಳಿಯಲ್ಲಿ ಮೊದಲ ಡೋಸ್ ತೆಗೆದುಕೊಳ್ಳಬಹುದು ಮತ್ತು ಅದೇ ಲಸಿಕೆಯ ಎರಡನೇ ಡೋಸ್ ಅನ್ನು ಅವನು ಕೆಲಸ ಮಾಡುವ ನಗರದಲ್ಲಿ ಅಗತ್ಯ ಸಮಯದ ಮಧ್ಯಂತರ ನಂತರ

ತೆಗೆದುಕೊಳ್ಳಬಹುದು ಎಂದು ಕೋವಿಡ್ ಖಚಿತಪಡಿಸಿತು. ಪಾರದರ್ಶಕತೆಯನ್ನು ಹೆಚ್ಚಿಸಲು ನೈಜ-ಸಮಯದ ಡ್ಯಾಶ್‌ಬೋರ್ಡ್ ಜೊತೆಗೆ ಕ್ಯೂ ಆರ್ ಕೋಡ್ ಇರುವ ಪ್ರಮಾಣ ಪತ್ರಗಳನ್ನು ಮಾನ್ಯತೆಯನ್ನು ಖಾತ್ರಿಪಡಿಸುತ್ತವೆ. ಭಾರತದಲ್ಲಿ ಮಾತ್ರವಲ್ಲ. ಪ್ರಪಂಚದಲ್ಲಿಯೂ ಇಂತಹ ಪ್ರಯತ್ನಗಳ ನಡೆದ ಉದಾಹರಣೆಗಳಿಲ್ಲ.

2015ರಲ್ಲಿ ನನ್ನ ಸ್ವಾತಂತ್ರ್ಯ ದಿನದ ಭಾಷಣದಲ್ಲಿ ಟೀಮ್ ಇಂಡಿಯಾದ ಕಾರಣದಿಂದ ನಮ್ಮ ದೇಶ ಮುಂದುವರಿಯುತ್ತಿದೆ ಮತ್ತು ಈ ಟೀಮ್ ಇಂಡಿಯಾ ನಮ್ಮ 130 ಕೋಟಿ ಜನರ ದೊಡ್ಡ ತಂಡವಾಗಿದೆ ಎಂದು ಹೇಳಿದ್ದೆ. ಜನರ ಭಾಗವಹಿಸುವಿಕೆ ಪ್ರಜಾಪ್ರಭುತ್ವದ ದೊಡ್ಡ ಶಕ್ತಿ. 130 ಕೋಟಿ ಭಾರತೀಯರ ಪಾಲ್ಗೊಳ್ಳುವಿಕೆಯ ಮೂಲಕ ನಾವು ದೇಶವನ್ನು ಮುನ್ನಡೆಸಿದರೆ ನಮ್ಮ ದೇಶವು ಪ್ರತಿ ಕ್ಷಣವು 130 ಕೋಟಿ ಹೆಜ್ಜೆ ಮುಂದೆ ಹೋಗುತ್ತದೆ. ನಮ್ಮ ಲಸಿಕೆ ಅಭಿಯಾನವು ಮತ್ತೊಮ್ಮೆ ಈ ಟೀಮ್ ಇಂಡಿಯದ ಶಕ್ತಿಯನ್ನು ತೋರಿಸಿದೆ. ಭಾರತವು ತನ್ನ ಲಸಿಕೆ ಯಶಸ್ಸಿನ ಮೂಲಕ ಇಡೀ ಜಗತ್ತಿಗೆ ಪ್ರಜಾಪ್ರಭುತ್ವವು ಸಾಧಿಸಬಲ್ಲುದು ಎಂಬುದನ್ನು ತೋರಿಸಿಕೊಟ್ಟಿದೆ.

ವಿಶ್ವದ ಅತಿದೊಡ್ಡ ಲಸಿಕಾ ಅಭಿಯಾನದಲ್ಲಿ ಸಾಧಿಸಿರುವ ಯಶಸ್ಸು ನಮ್ಮ ಯುವಕರು, ನಮ್ಮ ಆವಿಷ್ಕಾರಕರು ಮತ್ತು ಸರ್ಕಾರದ ಎಲ್ಲಾ ಹಂತಗಳು ಸಾರ್ವಜನಿಕ ಸೇವೆ ವಿತರಣೆಯಲ್ಲಿ ಹೊಸ ಮಾನದಂಡಗಳನ್ನು ಸೃಷ್ಟಿಸಲು ನಮ್ಮ ದೇಶಕ್ಕೆ ಮಾತ್ರವಲ್ಲ ಇಡೀ ವಿಶ್ವಕ್ಕೆ ಮಾದರಿಯಾಗಲಿವೆ ಎಂಬ ಭರವಸೆ ನನಗಿದೆ.

ಲೇಖಕರು: ನರೇಂದ್ರ ಮೋದಿ,

ಭಾರತದ ಪ್ರಧಾನ ಮಂತ್ರಿಗಳು

ಆಧಾರ:ವಿಶ್ವವಾಣಿ, ದಿನಾಂಕ:22.10.2021.

## 5. ಕ್ರಿಪ್ಟೋ ಕಿರಿಕ್

## ಅಕ್ರಮಗಳಿಗೆ ಕಳ್ಳದಾರಿ ತೆರಿಗೆ ವಂಚನೆಗೆ ರಹದಾರಿ

ಭಾರತದಲ್ಲಿ ಕ್ರಿಪ್ಟೋ ಕರೆನ್ಸಿಗಳ ಬಳಕೆ ಹೆಚ್ಚುತ್ತಿರುವಂತೆ ಇದರ ಬಗ್ಗೆ ಆರ್‌ಬಿಐ ಹಾಗೂ ಕ್ರಿಪ್ಟೊ ಕರೆನ್ಸಿ ವಹಿವಾಟುದಾರರ ನಡುವೆ ಮೊದಲ ಸಭೆ ನಡೆದಿದೆ. ನವೆಂಬರ್ 2 ರಂದು ನಡೆದ ಈ ಸಭೆಯಲ್ಲಿ ಕ್ರಿಪ್ಟೊ ಕರೆನ್ಸಿಗಳ ಬಗ್ಗೆ ಹಲವು ಆಯಾಮಗಳಲ್ಲಿ ಚರ್ಚಿಸಲಾಗಿದೆ. ಕ್ರಿಪ್ಟೋ ಕರೆನ್ಸಿಗಳನ್ನು ಪೂರೈಸುತ್ತಿರುವವರು ಯಾರು. ಭಾರತದಲ್ಲಿ ಇದರ ಮೈನಿಂಗ್ ನಡೆಯುತ್ತಿದೆಯೇ. ಭಾರತದಲ್ಲಿ ಎಷ್ಟು ಕ್ರಿಪ್ಟೋ ಕರೆನ್ಸಿಗಳು ಇವೆ, ಅವುಗಳಲ್ಲಿ ಯಾವುದಕ್ಕೆ ಮಾನ್ಯತೆ ನೀಡಬಹುದು ಹೂಡಿಕೆದಾರರ ರಕ್ಷಣೆಗೆ ಏನು ಕ್ರಮಗಳಿವೆ ಇತ್ಯಾದಿ ಪ್ರಶ್ನೆಗಳನ್ನು ಕೇಳಲಾಯಿತು. ಒಂದು ವೇಳೆ ಕ್ರಿಪ್ಟೋ ಕರೆನ್ಸಿಗಳನ್ನು ನಿಯಂತ್ರಕ ವ್ಯವಸ್ಥೆಗೆ ತಂದರೆ ಏನು ಮಾಡಬೇಕು ಎಂಬುದರ ಬಗ್ಗೆ ಚರ್ಚಿಸಲಾಯಿತು. ಆರ್‌ಬಿಐ ವಕ್ತಾರರು ಈ ಬಗ್ಗೆ ಪ್ರತಿಕ್ರಿಯಿಸಿಲ್ಲ.

**ಭಾರತಕ್ಕೆ ಪ್ರವೇಶಿಸಿದ್ದು ಹೇಗೆ:** ಕ್ರಿಪ್ಟೊ ಕರೆನ್ಸಿಗಳು ಭಾರತಕ್ಕೆ ಪ್ರವೇಶಿಸಿದ್ದು ಹೇಗೆ ಎಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ಇವುಗಳಿಗೆ ಯಾವುದೇ ವಿವರಗಳ ಅಧಿಕೃತ ಘೋಷಣೆಯ ಅಗತ್ಯ ಮತ್ತು ಕಾನೂನು ಚೌಕಟ್ಟು ಸದ್ಯಕ್ಕೆ ಇಲ್ಲದಿರುವುದರಿಂದ ಇವುಗಳ ಪ್ರವೇಶ ಹೇಗಾಯಿತು ಎಂಬುದು ಅಸ್ಪಷ್ಟ ಹೂಡಿಕೆದಾರರ ಇ-ವ್ಯಾಲೆಟ್‌ಗಳಲ್ಲಿ ಎಷ್ಟು ಕ್ರಿಪ್ಟೊ ಕರೆನ್ಸಿಗಳು ಇವೆ ಎಂಬ ಅಂದಾಜು ಲೆಕ್ಕವು ಸಿಗುವುದಿಲ್ಲ. ಕ್ರಿಪ್ಟೊ ಕರೆನ್ಸಿಗಳ ವಿನಿಮಯ ಕೇಂದ್ರಗಳು ತಮ್ಮನ್ನು ಖರೀದಿದಾರರ ಮತ್ತು ಮಾರಾಟಗಾರರ ನಡುವಣ ವಿನಿಮಯ ವೇದಿಕೆ ತಂದು ಮಾತ್ರ ಗುರುತಿಸಿಕೊಳ್ಳುತ್ತಿವೆ. ಸದ್ಯದ ಪರಿಸ್ಥಿತಿಯಲ್ಲಿ ಯಾರಾದರೂ

ವಿದೇಶದಲ್ಲಿ ಕ್ರಿಪ್ಟೊ ಕರೆನ್ಸಿಯನ್ನು ಖರೀದಿಸಿ ಭಾರತದಲ್ಲಿರುವ ಸ್ಥಳೀಯ ವಿನಿಮಯ ಕೇಂದ್ರದಲ್ಲಿ ಮಾರಾಟ ಮಾಡಿದರೂ ಗೊತ್ತಾಗುವುದಿಲ್ಲ ಅಮೆರಿಕದಲ್ಲಿ ಬಿಡುಡೆಯಾಗುವ ಕ್ರಿಪ್ಟೊ ಕರೆನ್ಸಿ ಭಾರತದಲ್ಲಿ ಕೆಲವೇ ದಿನಗಳಲ್ಲಿ ಕೊಡು–ಕೊಳ್ಳುವಿಕೆಯಾಗುತ್ತದೆ.

**ಬಿಟ್ ಕಾಯಿನ್ ಒಂದೇ ಅಲ್ಲ:** ಕೇವಲ ಬಿಟ್ ಕಾಯಿನ್ ಮಾತ್ರವಲ್ಲದೆ ಸಾವಿರಾರು ಕ್ರಿಪ್ಟೊ ಕರೆನ್ಸಿಗಳು ಚಲಾವಣೆಯಲ್ಲಿವೆ. ಆದ್ದರಿಂದ ಕ್ರಿಪ್ಟೊ ಕರೆನ್ಸಿಯನ್ನು ಒಂದು ಆಸ್ತಿ ಎಂದು ಪರಿಗಣಿಸಬೇಕು ಎನ್ನುತ್ತಾರೆ ತಜ್ಞರು. ಒಂದು ಬಿಟ್ ಕಾಯಿನ್‌ನ ಮೌಲ್ಯ ಈಗ ಸುಮಾರು ರೂ.48,67 ಲಕ್ಷ, 2015ರಲ್ಲಿ ಇದರ ಬೆಲೆ ರೂ.23 ಸಾವಿರರ ಆಸುಪಾಸಿನಲ್ಲಿತ್ತು. ಇದೇ ರೀತಿ ಇಥಿರಿಯಮ್ ಎಂಬ ಇನ್ನೊಂದು ಕ್ರಿಪ್ಟೊ ಕರೆನ್ಸಿಯಿದ್ದು, ಇದರ ಮೌಲ್ಯ ಸುಮಾರು ರೂ.3.5 ಲಕ್ಷ.

**ನಿರ್ಬಂಧಿತ ಬಳಕೆಗೆ ಅನುಮತಿ ಸಾಧ್ಯತೆ:** ಚೀನಾದಲ್ಲಿ ಕ್ರಿಪ್ಟೊ ಕರೆನ್ಸಿಗಳಿಗೆ ನಿಷೇಧ ವಿಧಿಸಲಾಗಿದೆ. ಆದರೆ ಆ ರೀತಿ ನಿಷೇಧ ವಿಧಿಸುವುದಕ್ಕಿಂತಲೂ ಕೆಲವು ನಿಯಂತ್ರಕ ಕ್ರಮಗಳೊಂದಿಗೆ ಭಾರತದಲ್ಲಿ ಅನುಮತಿ ನೀಡಬಹುದು ಎಂಬ ಸಲಹೆಗಳು ಇವೆ. ಮೂಲವನ್ನು ಪತ್ತೆ ಹಚ್ಚಲು ಸಾಧ್ಯವಾಗುವ ಸ್ವರೂಪಗಳು ಇರುವಂಥ ಕ್ರಿಪ್ಟೊ ಕರೆನ್ಸಿಗಳಿಗೆ ಅನುಮತಿ ನೀಡಬಹುದು ಎಂಬ ಅಭಿಪ್ರಾಯ ಇದೆ. ಅಕ್ರಮ ವರ್ಗಾಣೆ ತಡೆಯಲು ಕ್ರಿಪ್ಟೊ ಕರೆನ್ಸಿಗಳಿಗೆ ಕೆವೈಸಿ ಪ್ರಕ್ರಿಯೆಯನ್ನು ಅಳವಡಿಸಲು ತಜ್ಞರು ಸಲಹೆ ನೀಡಿದ್ದಾರೆ. ವಿದೇಶಿಯರು ಸ್ಥಳೀಯ ವಿನಿಯಮ ಕೇಂದ್ರಗಳಲ್ಲಿ ವ್ಯವಹರಿಸುವಂತೆ ನಿರ್ಬಂಧಿಸಬಹುದು. ಕ್ರಿಪ್ಟೊ ಕರೆನ್ಸಿಗಳು ಯಾವುದೇ ನಿಯಂತ್ರಕ ವ್ಯವಸ್ಥೆ ಇಲ್ಲದೆ ವ್ಯಾಪಕ ಚಲಾವಣೆಗೀಡಾದರೆ ಹಣಕಾಸು ಅಸ್ಥಿರತೆ ಉಂಟಾಗಬಹುದು ಎಂಬ ಆತಂಕ ಆರ್‌ಬಿಐಗೆ ಇದೆ. ಭಾರತದಲ್ಲಿ ಅಂದಾಜು ರೂ.2 ಕೋಟಿ ಹೂಡಿಕೆದಾರರು 4–5 ಶತಕೋಟಿ ಡಾಲರ್ ಮೌಲ್ಯದ ಕ್ರಿಪ್ಟೊ ಕರೆನ್ಸಿಗಳನ್ನು (ಅಂದಾಜು ರೂ. 29,600–37,000 ಕೋಟಿ) ಹೊಂದಿದ್ದಾರೆ ಎನ್ನಲಾಗಿದೆ.

**ಹೇಗೆ ನಡೆಯಲಿದೆ ಅಕ್ರಮ:**ಕಪ್ಪುಹಣ ಹೊಂದಿದ ವ್ಯಕ್ತಿಯೊಬ್ಬ ಹವಾಲ ದಂಧೆ ಸ್ವರೂಪದಲ್ಲಿ ವಿದೇಶಿ ಬೇನಾಮಿಗಳ ಮೂಲಕ ನಾನಾ ಖಾತೆಗಳ ಮೂಲಕ ಬಿಟ್ ಕಾಯಿನ್ ಖರೀದಿಸಿ, ತನ್ನ ಬಿಟಿಸಿ ವ್ಯಾಲೆಟ್‌ನಲ್ಲಿ ಸಂಗ್ರಹಿಸಿಕೊಳ್ಳಬಹುದು. ಈ ವ್ಯಾಲೆಟ್ ಕುರಿತು ಕೇಂದ್ರ ಸರ್ಕಾರಕ್ಕಾಗಲಿ, ಯಾವುದೇ ಸರ್ಕಾರಿ ಇಲಾಖೆಗಳ ತಂತ್ರಾಂಶಗಳಿಗಾಗಲಿ ಮಾಹಿತಿ ಲಭಿಸಲು ಅಸಾಧ್ಯ. ಈ ಬಿಟ್ ಕಾಯಿನ್‌ಗಳನ್ನು ಯಾವ ಕೆಲಸಕ್ಕೆ ಯಾರ ಖಾತೆಗೆ ವರ್ಗಾವಣೆ ಮಾಡಲಾಗಿದೆ ಎನ್ನುವ ಟ್ರಾಕಿಂಗ್ ಮಾಹಿತಿ ಸಿಗುವುದಿಲ್ಲ. ಕೆಲ ದೇಶಗಳಲ್ಲಿ ಕ್ರಿಪ್ಟೊ ಕರೆನ್ಸಿ ಬಳಕೆಗೆ ಅವಕಾಶವಿದ್ದು, ಅಲ್ಲಿ ಡ್ರಗ್ಸ್ ಖರೀದಿ, ಉಗ್ರವಾದಕ್ಕೆ ಶಸ್ತ್ರಾಸ್ತ್ರ ವಿನಿಮಯ ನಡೆದು ದೇಶಕ್ಕೆ ಮಾರಕವಾಗಬಹುದು.

**ಬ್ಯಾಂಕಿಂಗ್ ವ್ಯವಸ್ಥೆ ಸದೃಢ:** ಜನ್‌ಧನ್ ಖಾತೆಗಳನ್ನು ಹ್ಯಾಕ್ ಮಾಡಲಾಗಿದ್ದು, ಪ್ರತಿಯೊಂದು ಖಾತೆಯಿಂದ ರೂ.2 ಕಳುವಾಗಿದೆ ಎಂದೆಲ್ಲಾ ತಪ್ಪು ಮಾಹಿತಿಗಳನ್ನು ಕೆಲವರು ಹಬ್ಬಿಸುತ್ತಿದ್ದಾರೆ. ದೇಶದ ಬ್ಯಾಂಕಿಂಗ್ ವ್ಯವಸ್ಥೆ ಸದೃಢವಾಗಿದ್ದು, ರಾಜಕಾರಣಿಗಳು ಈ ವ್ಯವಸ್ಥೆಯ ಬಗ್ಗೆ ಸಂದೇಹಗಳನ್ನು ಮೂಡಿಸಬಾರದು. ಗ್ರಾಮೀಣರಲ್ಲಿ ಅನೇಕರು ಇತ್ತೀಚೆಗೆ ಖಾತೆಗಳನ್ನು ತೆರೆಯುತ್ತಿದ್ದು, ಅವರ ನಂಬಿಕೆ ಕುಸಿಯುವಂತಾಗಬಾರದು. ದೇಶದ ಬ್ಯಾಂಕಿಂಗ್ ಸರ್ವರ್ ಸದೃಢವಾಗಿದೆ ಎಂದು ಇಂಡಿಯಾ ಮನಿ ಉದ್ಯಮ ಸಲಹೆಗಾರ ಸುಧೀರ್ ತಿಳಿಸಿದ್ದಾರೆ.

**ಸೈಬರ್ ದಾಳಿ ಸಂಭವ:** ಕ್ರಿಪ್ಟೊ ಕರೆನ್ಸಿಗಳ ದರಗಳು ಗಗನಕ್ಕೇರಿರುವುದರಿಂದ ಸೈಬರ್ ದಾಳಿಗೆ ಗುರಿಯಾಗುವ ಅಪಾಯಗಳು ಹೆಚ್ಚು ಝೆಬ್ ಪೇ ಎಂಬುದು ಹಳೆಯ ಮತ್ತು ದೊಡ್ಡ ಕ್ರಿಸ್ಟೊ ಕರೆನ್ಸಿ ವಿನಿಮಯ ಕೇಂದ್ರಗಳಲ್ಲೊಂದು ಆಗಿಂದಾಗ್ಗೆ ಸೈಬರ್ ದಾಳಿಗೆ ಗುರಿಯಾಗುತ್ತದೆ. ಇದರಿಂದ ಹೂಡಿಕೆದಾರರಿಗೆ ಅಪಾರ ನಷ್ಟವಾಗುವ ಸಾಧ್ಯತೆ ಇರುತ್ತದೆ. ಆದ್ದರಿಂದ ಸೈಬರ್ ದಾಳಿಗಳನ್ನು ಪತ್ತೆ ಹಚ್ಚುವ ಮತ್ತು ತೆರೆಯುವ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಬೇಕು ಎನ್ನುತ್ತಾರೆ ತಜ್ಞರು. ಪ್ರಮುಖ ಕ್ರಿಪ್ಟೊ

ಕರೆನ್ಸಿ ವಿನಿಮಯ ಕೇಂದ್ರಗಳು ಇತ್ತೀಚಿನ ತಿಂಗಳುಗಳಲ್ಲಿ ತಿಂಗಳಿಗೆ 2–3 ಸಲ ಸೈಬರ್ ದಾಳಿಗೆ ಗುರಿಯಾಗಿವೆ. ಆದ್ದರಿಂದ ಇಂಥ ಕೇಂದ್ರಗಳು ಸೈಬರ್ ದಾಳಿ ತಡೆಗೆ ಕ್ರಮಗಳನ್ನು ಕೈಗೊಳ್ಳುತ್ತಿವೆ.

**ಮಾನ್ಯತೆಯಿಲ್ಲ ನಿರ್ಬಂಧವೂ ಇಲ್ಲ:** ಈ ಹಿಂದೆ ಕೇಂದ್ರ ಸರ್ಕಾರ ಕ್ರಿಪ್ಟೋ ಕರೆನ್ಸಿ ಬಳಕೆ ಕಾನೂನು ಬಾಹಿರವೆಂದಿತ್ತು. ನ್ಯಾಯಾಲಯ ಬಿಟ್ ಕಾಯಿನ್ ಬಳಕೆ ಕಾನೂನು ಬಾಹಿರ ಎನ್ನುವುದು ಸರಿಯಲ್ಲ ಎಂದು ಆದೇಶ ನೀಡಿದ ಬಳಿಕ ಕ್ರಿಪ್ಟೋ ಬಳಕೆಗೆ ಅವಕಾಶ ಲಭಿಸಿತ್ತು. ಕಳೆದೊಂದು ವರ್ಷದಲ್ಲಿ ಕೋಟ್ಯಾಂತರ ಮಂದಿ ಆನ್‌ಲೈನ್‌ನಲ್ಲಿ ಬಿಟ್ ಕಾಯಿನ್‌ಗೆ ಹೂಡಿಕೆ ಮಾಡಿದ್ದು, ಅನೇಕ ಆತಂಕಗಳಿಗೆ ಕಾರಣವಾಗಿದೆ. ಕಪ್ಪು ಹಣವನ್ನು ಬೇನಾಮಿಯಾಗಿ ವಿದೇಶಿ ಖಾತೆಗಳಿಗೆ ಕಳಿಸಿ, ಅಲ್ಲಿಂದ ಬಿಟ್ ಕಾಯಿನ್ ಖರೀದಿಸಲಾಗುತ್ತಿದೆ. ಇದರ ಮೇಲೆ ಆರ್‌ಬಿಐ ಹಿಡಿತ ಇಲ್ಲವಾದ್ದರಿಂದ ದೇಶಕ್ಕೆ ತೆರಿಗೆ ನಷ್ಟವಾಗುತ್ತಿದೆ. ಉಗ್ರವಾದಕ್ಕೆ ಸಂಪನ್ಮೂಲ ಸೇರಿದಂತ ಇತರೆ ಆತಂಕ ಸೃಷ್ಟಿಗೂ ಅವಕಾಶಗಳಿವೆ. ಕೇಂದ್ರ ಸರ್ಕಾರ ಅವ್ಯವಹಾರಗಳಿಗೆ ಮೂಗುದಾರ ಹಾಕುವ ಚಿಂತನೆಯಲ್ಲಿದ್ದು, ಶೀಘ್ರ ಕ್ರಿಪ್ಟೋ ಕರೆನ್ಸಿಯನ್ನು ಕಾನೂನು ವ್ಯಾಪ್ತಿಗೆ ತಂದು ಸ್ಪಷ್ಟ ರೂಪರೇಷೆಗಳನ್ನು ರಚಿಸಬೇಕಾದ ಅನಿವಾರ್ಯತೆಯಿದೆ. ಕಾಯಿನ್ ಸ್ವಿಚ್ ಕೂಬರ್ ಮೂಲಗಳ ಪ್ರಕಾರ ಜಗತ್ತಿನಲ್ಲಿ 10 ಕೋಟಿಗೂ ಹೆಚ್ಚು ಭಾರತೀಯರು ಬಿಟ್ ಕಾಯಿನ್‌ಗೆ ಸಂಬಂಧಿಸಿದ ಹೂಡಿಕೆ ಪ್ರಕ್ರಿಯೆಗಳಲ್ಲಿ ತೊಡಗಿದ್ದಾರೆ. ಕಳೆದ ಕೆಲ ದಿನಗಳ ಬೆಳವಣಿಗೆಗಳಿಂದಾಗಿ ಈ ಪ್ರಮಾಣ ಮತ್ತಷ್ಟು ಏರಿಕೆಯಾಗುತ್ತಿದೆ. ಇಲ್ಲಿ ಬರುವ ಲಾಭಕ್ಕೂ ಆಗುವ ನಷ್ಟಕ್ಕೂ ಭಾರತೀಯ ಮಾರುಕಟ್ಟೆಯ ಉತ್ತರದಾಯಿತ್ವದೇ ಇಲ್ಲ.

ಕ್ರಿಪ್ಟೋ ಕರೆನ್ಸಿಯ ಮೂಲ ಉದ್ದೇಶವೇ ಯಾರ ನಿಯಂತ್ರಣಕೊಳಪಡದ ವ್ಯವಹಾರ ಸ್ವಾತಂತ್ರ್ಯದಿಂದ ಆನೇಕ ಅಕ್ರಮಗಳಿಗೆ ಹಾದಿಯಾಗುತ್ತದೆ. ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ದೇಶದಲ್ಲಿ ಈ ತಂತ್ರಜ್ಞಾನಕ್ಕೆ ಕನಿಷ್ಠ ನಿಯಂತ್ರಣವನ್ನಾದರೂ ಕೇಂದ್ರ ಸರ್ಕಾರ ಹೇರಬೇಕಾದ ಅನಿವಾರ್ಯತೆಯಿದೆ.

ಲೇಖಕರು:ಶ್ರೀಹರ್ಷ ಪೆರ್ಲ,

ತಂತ್ರಜ್ಞಾನ ಸಲಹೆಗಾರ,

ಆಧಾರ:ವಿಜಯ ಕರ್ನಾಟಕ, ದಿನಾಂಕ:16.11.2021.

## 6. 27 districts in Karnataka see 'large excess' rainfall

As many as 27 districts in Karnataka have recorded “large excess” rains so far between November 1 and 21. Data by the Karnataka State Natural Disaster Management Centre (KSNDMC) shows that it was “excess” in three districts and “normal” in one.

If there was a 27% deficit in 62 taluks in October, it dropped to 3% in November, with a shortfall noticed in only seven taluks.

In October, 13 districts and 77 taluks recorded “large excess” rains with a departure of 73% from normal. However, the departure was 97% from normal from November 1 to 21. “Large excess” denotes departure from normal rainfall by 60% and above, while “excess” mean rainfall between 20% and 59% above normal.

The untimely rains in this period has caused extensive destruction across the State with crops in about 3,79,501 hectares destroyed and 658 houses completely damaged. However, the exact quantum of loss is still being estimated.

Tumakuru bore the brunt of rain fury, recording maximum damage to crops on 1,05,119 hectares, followed by Chickballapur (56,128 hectares), Hassan (47,029 hectares), Kolar (48,333 hectares), and Ramanagaram (47,430 hectares). Horticulture crops on 30,114 hectares were destroyed with the maximum damage reported in Kolar (6,966 hectares), followed by Chikkamagaluru (6,492 hectares), Ballari (4,802 hectares), and Chickballapur (4,351 hectares).

School buildings too have suffered damages in rain-affected districts with about 1,225 buildings destroyed. As many as 950 school buildings in Tumakuru district alone were destroyed, according to information from the KSNDMC.

In total, 658 houses were fully damaged and 8,495 partially damaged between November 1 and 21. About 227 were completely damaged in Bengaluru Urban followed by Haveri where 126 were fully damaged. The highest number of houses partially damaged was 1,942 in Haveri. Heavy rains caused damage to 2,203 km of road network in this period. The destruction of roads was widespread in Gadag where 889 km were destroyed while 295 km were wrecked in Davangere.

Courtesy: The Hindu – dt:-23.11.2021

## 7. Karnataka sees rise in extreme weather events in the last few decades

Climate change is impacting the water cycle and the rainfall patterns, resulting in intense rainfall and associated flooding in some areas and drought in other regions of Karnataka. Extreme weather events have increased both in terms of frequency and intensity across Karnataka in the last decades.

The State’s normal annual rainfall is 1,153 mm, 74% of which is received during the south-west monsoon, 16% during the north-east monsoon, and 10% during the pre-monsoon.

Variability of the south-west monsoon rainfall has increased significantly since 1960. Several districts are seeing an increase in long dry periods with low or no rainfall, or intermittent with short, intense spells of rainfall. The large-scale secular changes in monsoon rainfall are attributed to the increase in global emissions of greenhouse gases and air pollutants. At the same time, urbanisation, land-use changes, and deforestation at local levels have brought in a non-uniform response in these rainfall trends.

A long-term climate change scenario study for Karnataka, which deciphers variations in climate factors in the past, found that a significant shift in climatic factors has been observed around the year 1990. The long-term climate data series for the 58 years (1960 to 2017) was considered for the study. Thus by taking 1990 as the major change point, the data series has been divided into two sub-series: Period 1 (1960-1990) and Period 2 (1991 to 2017), for further parametric analysis.

The quantum, intensity, and distribution of rainfall has varied across the regions in the State from Period 1 to Period 2. While the number of rainy days and amount of annual rainfall has increased in south-interior Karnataka and the Malnad region, there is a reduction in the

amount of annual rainfall and marginal increase in the number of rainy days observed in north-interior Karnataka and the coastal region from Period 1 to Period 2.

**Severe drought**

Hydro-meteorological disasters in the State such as flood, drought, cyclone, hailstorm, lightening, heatwave, and thunderstorm events have become more frequent in recent years**.**

Between 2001 and 2020, the State has experienced a drought of varying severity for 15 years. Some talukas have been drought-affected consecutively for more than five years. A majority of districts in the north-interior Karnataka region were subjected to severe drought conditions.

Karnataka also experienced severe floods in 2005, 2009, 2018, 2019, 2020 and 2021. For the fourth consecutive year since 2018, it has been affected by flooding and landslips.

The recurrence of droughts and floods because of changing rainfall patterns caused by climate change would be detrimental to the surface and groundwater recharge and also pose a great challenge to water security.

Response to climate change in cities falls into two broad categories: mitigating emissions that drive climate change and adapting to effects that can't be stopped. Cities produce more than 70% of global greenhouse gas emissions, mainly from heating and cooling buildings and powering cars, trucks and other vehicles. Urbanisation also makes people more vulnerable to climate change impacts.

Bengaluru Urban district rainfall has increased from 836 mm in Period 1 to 943 mm in Period 2. The average temperature for Bengaluru Urban district has significantly increased at 0.1°C/year in the last 16 years, while the minimum temperature has risen at 0.19°C/year. Extreme weather events have caused the loss of human life, livestock, and critical infrastructure, private and public property. The Government has already taken several steps to mitigate the impact of climate change.

Writer : Dr. Manoj Rajan

Commissioner,

Karnataka, State Disaster Management Authority

Courtesy: The Hindu – dt:-23.11.2021

## 8. ಶಾಸನ ಸಭೆಗಳಿಗೆ ಆರ್ಥಿಕ ಸ್ವಾಯತ್ತತೆ

ಸಂಸದೀಯ ವ್ಯವಸ್ಥೆಯಲ್ಲಿ ಸಂಸತ್ತು ಮತ್ತು ಶಾಸನಸಭೆಗಳು ಮುಕ್ತವಾಗಿ ಕೆಲಸ ಮಾಡುತ್ತವೆ. ಸಂಸತ್ತು ಮತ್ತು ಶಾಸನ ಸಭೆಗಳು ಸಂಪೂರ್ಣವಾಗಿ ಆಯಾ ಸಭೆಗಳ ಅಧ್ಯಕ್ಷರ ಅಣತಿಯಂತೆ ನಡೆಯುತ್ತದೆ. ಅಲ್ಲಿ ನಡೆಯುವ ಕಲಾಪವನ್ನು ನ್ಯಾಯಾಲಯದಲ್ಲೂ ಪ್ರಶ್ನಿಸುವ ಹಾಗಿಲ್ಲ. ಸಂವಿಧಾನಕ್ಕೆ ವಿರುದ್ಧವಾಗಿ ನಡೆದಾಗ ಮಾತ್ರ ನ್ಯಾಯಾಲಯ ಸಲಹೆ ನೀಡಬಹುದು. ಆದೇಶ ನೀಡಲು ಬರುವುದಿಲ್ಲ. ಮೊದಲಿನಿಂದಲೂ ಸಂಸತ್ತು ಮತ್ತು ಶಾಸನಸಭೆಗಳು ಕೈಗೊಂಡ ನಿರ್ಣಯಗಳಿಗೆ ಗೌರವ ನೀಡುತ್ತ

